ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ರಾಜಕುಮಾರಿ ಅಮೃತ್ ಕೌರ್




ಪ್ರಕಟಣೆ :

ಲೋಕಸಭಾ ಸಚಿವಾಲಯ, ನವದೆಹಲಿ

ಕನ್ನಡ ಅನುವಾದ : ಕರ್ನಾಟಕ ವಿಧಾನ ಮಂಡಲ ಕಾರ್ಯಾಲಯ

ವಿಧಾನಸೌಧ, ಬೆಂಗಳೂರು - 560 001

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ರಾಜಕುಮಾರಿ ಅಮೃತ್ ಕೌರ್

ಭಾಷಾಂತರ :ಶ್ರೀಮತಿ ಕೆ. ಹೆಚ್. ಸಾವಿತ್ರಿ

ಮೂಲ ಕೃತಿ:

ಲೋಕಸಭಾ ಸಚಿವಾಲಯ, ನವದೆಹಲಿ.

ಪ್ರಕಟಣೆ

ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನ ಸೌಧ, ಬೆಂಗಳೂರು-560 001.

## ಪೀಠಿಕೆ

ದೇಶ ಸ್ವಾತಂತ್ರ್ಯ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸುಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಮಡಿದ ಹಾಗೂ ನವ ಭಾರತ ನಿರ್ಮಾಣಕ್ಕಾಗಿ ಶ್ರಮಿಸಿದ ಪ್ರತಿಭಾನ್ವಿತ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಸಂಸದೀಯ ಪಟುಗಳನ್ನು ನೆನೆಸಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿರುತ್ತದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಗಣ್ಯರ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರ ತಂದಿರುತ್ತಾರೆ. ಆದರೆ ನಮ್ಮ ಕರ್ನಾಟಕ ರಾಜ್ಯದ ಜನಪ್ರತಿನಿಧಿಗಳಿಗೆ ಹಾಗೂ ಜನತೆಗೆ ಈ ಪ್ರತಿಭಾವಂತರುಗಳ ಬದುಕು-ಬರಹ ಮತ್ತು ಸಾಧನೆಗಳನ್ನು ಪರಿಚಯಿಸುವ ದೃಷ್ಟಿಯಿಂದ ಈ ಕಿರು ಹೊತ್ತಿಗೆಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ಪ್ರಕಟಿಸುವ ಒಂದು ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕೆಂದು ವಿಧಾನ ಪರಿಷತ್ತಿನ ಸನ್ಮಾನ್ಯ ಸಭಾಪತಿಯವರಾದ ಶ್ರೀ ಡಿ.ಬಿ. ಕಲ್ಮಣ್‌ಕರ್ ಹಾಗೂ ವಿಧಾನ ಸಭೆಯ ಅಂದಿನ ಸನ್ಮಾನ್ಯ ಅಧ್ಯಕ್ಷರಾದ ಶ್ರೀ ರಮೇಶ್‌ಕುಮಾರ್ ಅವರುಗಳು ಅಪೇಕ್ಷಿಸಿದಂತೆ ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ವಹಿಸಲಾಗಿತ್ತು. ಈ ಉಪಸಮಿತಿಯು ಕಾರ್ಯಪ್ರವೃತ್ತವಾಗಿ ಭಾಷಾಂತರ ಕಾರ್ಯವನ್ನು ಕರ್ನಾಟಕ ರಾಜ್ಯದ ಭಾಷಾಂತರ ನಿರ್ದೇಶನಾಲಯದ ಸಹಯೋಗದೊಂದಿಗೆ ಹಾಗೂ ನುರಿತ ಭಾಷಾಂತರಕಾರರುಗಳ ಮೂಲಕ ತಯಾರಿಸಿರುವ ರಾಜಕುಮಾರಿ ಅಮೃತ್ ಕೌರ್ ಅವರ ಕೃತಿಯನ್ನು ತಮ್ಮ ಮುಂದಿಡುತ್ತಿದ್ದೇನೆ.

ಇದು ಲೋಕಸಭಾ ಸಚಿವಾಲಯದವರು " Eminent Parliamentarians Monograph Series "ಎಂಬ ಆಂಗ್ಲ ಭಾಷೆಯ ಕನ್ನಡಾನುವಾದವಾಗಿದ್ದು, ಸದರಿ ಗ್ರಂಥದ ಪ್ರಕಾಶಕರಾದ ಲೋಕಸಭಾ ಸಚಿವಾಲಯಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅನುವಾದವನ್ನು ನಿರ್ವಹಿಸಿಕೊಟ್ಟ ಶ್ರೀಮತಿ ಕೆ.ಹೆಚ್. ಸಾವಿತ್ರಿಯವರಿಗೆ ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಸಂಸದೀಯ ವಿಷಯಗಳಲ್ಲಿ ಅನುಕೂಲ ಹಾಗೂ ಅನುಭವ ನೀಡುತ್ತದೆಂದು ಭಾವಿಸುತ್ತೇನೆ.

ಯಾಕೂಬ್ ಷರೀಫ್,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,

ಬೆಂಗಳೂರು
ಡಿಸೆಂಬರ್, 1999

# ಮುನ್ನುಡಿ

ನಾಡಿನ ಘನತೆವೆತ್ತ ಸಂಸದೀಯ ಪಟುಗಳಿಗೆ ಶ್ರದ್ಧಾಂಜಲಿ ಸಲ್ಲಿಸಲು ಹಾಗೂ ರಾಷ್ಟ್ರಜೀವನ ಮತ್ತು ಸಂಸದೀಯ ಕ್ಷೇತ್ರಗಳಿಗೆ ಅವರು ಸಲ್ಲಿಸಿರುವ ಕೊಡುಗೆಯನ್ನು ದಾಖಲಿಸುವ ಉದ್ದೇಶದಿಂದ ಭಾರತೀಯ ಸಂಸದೀಯ ಮಂಡಳಿ ಈ ಮಹಾನುಭಾವರ ಹಾಗೂ ಧೀಮಂತ ಮಹಿಳೆಯರ ಜನ್ಮದಿನೋತ್ಸವಗಳನ್ನು ಆಚರಿಸಲು ನಿರ್ಧರಿಸಿತು. ಈ ನಿಟ್ಟಿನಲ್ಲಿ 1990 ರ ಮಾರ್ಚ್ ತಿಂಗಳಲ್ಲಿ ಮಹಾನ್ ಸಂಸದೀಯ ಪಟುಗಳನ್ನು ಕುರಿತ ನೂತನ ಕೃತಿ ಮಾಲಿಕೆಯೊಂದನ್ನು ಪ್ರಾರಂಭಿಸಲಾಯಿತು. ಈ ಶ್ರೇಣಿಯಲ್ಲಿ ಇದುವರೆಗೆ ಒಟ್ಟು ಹದಿನಾಲ್ಕು ಸಂಪುಟಗಳನ್ನು ಹೊರತರಲಾಗಿದೆ.

ಈಗ ಹೊರತರುತ್ತಿರುವ ಸಂಪುಟವು ರಾಷ್ಟ್ರದ ಅಪ್ರತಿಮ ಸಂಸದೀಯ ಪಟುಗಳಲ್ಲಿ ಓರ್ವರಾಗಿರುವ ರಾಜಕುಮಾರಿ ಕೌರ್ ಅವರು ರಾಷ್ಟ್ರಕ್ಕೆ ಸಲ್ಲಿಸಿರುವ ಮಹತ್ತರ ಸೇವೆ ಹಾಗೂ ಕೊಡುಗೆಯನ್ನು ಸಂಕ್ಷಿಪ್ತ ರೂಪದಲ್ಲಿ ಜನರ ಮುಂದೆ ಸಾದರಪಡಿಸಲಿದೆ.

ಈ ಸಂಪುಟವು ಮೂರು ಭಾಗಗಳನ್ನು ಒಳಗೊಂಡಿದೆ. ಒಂದನೇ ಭಾಗವು ರಾಜಕುಮಾರಿ ಅಮೃತ್ ಕೌರ್ ಅವರ ಸಂಕ್ಷಿಪ್ತ ವ್ಯಕ್ತಿ ಚಿತ್ರಣವನ್ನು ಒಳಗೊಂಡಿದ್ದು ಆಕೆಯ ವೈವಿಧ್ಯಮಯ ಬದುಕಿನ ಕೆಲವು ನೋಟಗಳನ್ನು ನೀಡಿದೆ. ಎರಡನೇ ಭಾಗವು ರಾಜಕುಮಾರಿ ಅವರನ್ನು ಹತ್ತಿರದಿಂದ ಕಂಡು ಅವರ ಬದುಕನ್ನು ಅಭ್ಯಸಿಸಿದ ಗಣ್ಯ ವ್ಯಕ್ತಿಗಳು, ವಿದ್ವಾಂಸರು ಮತ್ತು ತಜ್ಞರು ಬರೆದ ಲೇಖನಗಳಿಂದ ಕೂಡಿದೆ. ತಮ್ಮ ಅಮೂಲ್ಯ ಸಮಯವನ್ನು ಇದಕ್ಕಾಗಿ ಮೀಸಲಿಟ್ಟು ಉಪಕರಿಸಿದ ಮಹನೀಯರೆಲ್ಲರಿಗೆ ನಾವು ಚಿರಋಣಿಗಳಾಗಿದ್ದೇವೆ. ಮೂರನೇ ಭಾಗವು ಕೌರ್ ಅವರು ಲೋಕಸಭೆ ಮತ್ತು ರಾಜ್ಯಸಭೆಗಳಲ್ಲಿ ಮಾಡಿರುವ ಕೆಲವು ಪ್ರಮುಖ ಭಾಷಣಗಳನ್ನು ಒಳಗೊಂಡಿದೆ. ಸಂಸತ್ತಿನ ಉಭಯ ಸದನಗಳಲ್ಲಿನ ಚರ್ಚೆಗಳ ಕಾಲಕ್ಕೆ ಹಲವು ಪತ್ತು ವಿಷಯಗಳಿಗೆ ಸಂಬಂಧಿಸಿದಂತೆ ಮತ್ತು ರಾಷ್ಟ್ರದ ಹಲವಾರು ಸಮಸ್ಯೆಗಳನ್ನು ಕುರಿತಂತೆ ಅವರು ಹೊಂದಿದ್ದ ಧೋರಣೆ ಮತ್ತು ಅಭಿಪ್ರಾಯಗಳು ಇಲ್ಲಿವೆ. ಈ ಸಂಪುಟವು ಸಂಸತ್ ಸದಸ್ಯರಿಗೂ ಹಾಗೂ ನಮ್ಮ ದೇಶದ ಸಮಕಾಲೀನ ಇತಿಹಾಸದಲ್ಲಿ ಆಸಕ್ತಿ ಹೊಂದಿರುವ ಎಲ್ಲರಿಗೂ ಉಪಯುಕ್ತವಾದೀತು ಎಂಬುದು ನಮ್ಮ ಪ್ರಾಮಾಣಿಕ ಹಾರೈಕೆಯಾಗಿದೆ.

ಸಿ.ಕೆ. ಜೈನ್

ಮಹಾಕಾರ್ಯದರ್ಶಿ, ಲೋಕಸಭೆ.

ನವದೆಹಲಿ

ನವಂಬರ್ 1992.

# ವಿಷಯ ಸೂಚಿ

## ಭಾಗ -1



## ಭಾಗ-2

## ಭಾಗ-3

## ಸಾಮಾಜಿಕ ಮತ್ತು ಶೈಕ್ಷಣಿಕ ವಿಷಯಗಳು



## ನಗರ ಅಭಿವೃದ್ಧಿ

## ಆಹಾರ ನಿರ್ವಹಣೆ



## ಪ್ರಾಣಿಗಳ ಯೋಗಕ್ಷೇಮ

## ಭಾಗ-೧

# ರಾಜಕುಮಾರಿ ಅಮೃತ್ ಕೌರ್- ವ್ಯಕ್ತಿ ಚಿತ್ರ

### ಪರಿಚಯ

ನೈಜ ದೇಶಾಭಿಮಾನಿ, ಘನತೆವೆತ್ತ ಸಂಸದೀಯ ಪಟು, ಅಹಿಂಸೆಯ ಅಚಲ ಪ್ರತಿಪಾದಕಿ, ಮಹಿಳೆಯರ ವಿಮೋಚನೆಗಾಗಿ ಬದುಕನ್ನೇ ಮುಡಿಪಿಟ್ಟ ಸಮರ್ಪಣ ಮನೋಭಾವದ ಕಾರ್ಯಕರ್ತೆ. ಸಮಾಜದ ದುರ್ಬಲ ವರ್ಗಗಳ ನೇತಾರೆ. ರಾಷ್ಟ್ರೀಯ ಜೀವನ ಮತ್ತು ರಾಜಕಾರಣದಲ್ಲಿ ಅಳಿಸಲಾಗದ ಮುದ್ರೆಯನ್ನು ಒತ್ತಿದವರು ರಾಜಕುಮಾರಿ ಅಮೃತ ಕೌರ್. ಶ್ರೀಮಂತ ಮನೆತನದಿಂದ ಬಂದ ಧಾರ್ಮಿಕ ಮನೋಭಾವದ ಈ ಮಹಿಳೆ ಆಗಿನ ಭಾರತೀಯ ಸಮಾಜವನ್ನು ಕಾಡುತ್ತಿದ್ದ ಹಲವಾರು ಪಿಡುಗಗಳ ನಿರ್ಮೂಲನೆಗಾಗಿ ನಿರಂತರವಾಗಿ ಶ್ರಮಿಸಿದ ಮಹಾನ್ ಕಾರ್ಯಕರ್ತೆ. ಅಗಾಧ ಸಾಮರ್ಥ್ಯ ಮತ್ತು ಕರ್ತೃತ್ವ ಶೀಲತೆಯಿಂದ ಇತಿಹಾಸದಲ್ಲಿ ಚಿರಕಾಲ ಸ್ಥಾಯಿಯಾಗಿ ಉಳಿಯುವ ಮಹಿಳೆ. ರಾಷ್ಟ್ರೀಯತೆಯ ಧ್ಯೇಯಕ್ಕಾಗಿ ಮಾಡಿದ ತ್ಯಾಗ ಮತ್ತು ಬಲಿದಾನಗಳಿಂದ ಮುಂದಿನ ಪೀಳಿಗೆಗೆ ಸ್ಫೂರ್ತಿಕೇಂದ್ರವಾಗಿ ನಿಲ್ಲಬಲ್ಲ ಮಹಾನ್ ವ್ಯಕ್ತಿತ್ವ ಅವರದು.

### ಜನನ ಮತ್ತು ಆರಂಭದ ಜೀವನ

ರಾಜಕುಮಾರಿ ಅಮೃತ ಕೌರ್ ಅವರು ಪಂಜಾಬ್ ರಾಜ್ಯದ ಕಪುರ್ತಲಾ ಎಂಬಲ್ಲಿನ ರಾಜ ಹರ್ನಾಮ್‌ಸಿಂಗ್‌ರ ಏಕಮಾತ್ರ ಪುತ್ರಿ. ಅವರಿಗೆ ಏಳು ಮಂದಿ ಸಹೋದರರು. ಕೌರ್ ಜನಿಸಿದ್ದು ಲಕ್ನೋದಲ್ಲಿ 1889ರ ಫೆಬ್ರವರಿ 2 ರಂದು. ಅದು ಆಧುನಿಕ ಭಾರತದ ಶಿಲ್ಪಿ ಪಂಡಿತ್ ಜವಾಹರಲಾಲ್ ನೆಹರು ಹುಟ್ಟಿದ ವರ್ಷ. ಅನಂತರದ ದಿನಗಳಲ್ಲಿ ಸ್ವತಂತ್ರ ಭಾರತದ ಭವಿಷ್ಯಕ್ಕೆ ರೂಪಕೊಟ್ಟ ಈ ಮಹಾನ್ ಶಿಲ್ಪಿಗೆ ಸಹಾಯ ಹಸ್ತ ನೀಡಿದ ಹಿರಿಮೆ ಕೌರ್ ಅವರದು. ಈಕೆಯ ತಾಯಿ ರಾಣಿ ಬಂಗಾಳದ ಗೋಲಕನಾಥ ಚಟರ್ಜಿ ಅವರ ಮಗಳು. ತಮ್ಮ ತಂದೆಯಿಂದಾಗಿ ಕ್ರೈಸ್ತಧರ್ಮದ ಅನುಯಾಯಿಯಾಗಿದ್ದರೂ ಆಕೆಗೆ ಎಲ್ಲ ಧರ್ಮಗಳ ಬಗ್ಗೆ ಅಪಾರ ಗೌರವ, ಆದರ. ಆಗಿನ ಕಾಲದ ಎಲ್ಲ ಶ್ರೀಮಂತ ಮಕ್ಕಳಂತೆ ಅವರ ಪ್ರಾಥಮಿಕ ವಿದ್ಯಾಭ್ಯಾಸ ಬ್ರಿಟನ್ನಿನ ಡೋರ್‌ಸೆಟ್‌ಶೈರ್‌ನಲ್ಲಿನ ಶೆರ್‌ಬೋರ್ನ್ ಶಾಲೆಯಲ್ಲಿ ನಡೆಯಿತು. ತೀರಾ ಚಿಕ್ಕ ವಯಸ್ಸಿನಲ್ಲೇ ವಿದೇಶಿ ನೆಲದಲ್ಲಿ ಬೆಳೆಯಲಾರಂಭಿಸಿದ ಕೌರ್ ಪ್ರತಿಭಾನ್ವಿತ ವಿದ್ಯಾರ್ಥಿನಿ. ಪಠ್ಯ ವಿಷಯಗಳಲ್ಲೂ, ಪಠ್ಯೇತರ ಚಟುವಟಿಕೆಗಳಲ್ಲೂ ಸದಾ ಮುಂದು. ಅನಂತರ ಉನ್ನತ ಶಿಕ್ಷಣಕ್ಕಾಗಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯಕ್ಕೆ ಸೇರ್ಪಡೆಯಾದ ಕೌರ್ ಅಲ್ಲಿಯೂ ತಮ್ಮ ಪ್ರತಿಭೆಯನ್ನು ಮೆರೆದರು. ಕ್ರೀಡೆಗಳಲ್ಲಿ ಅದರಲ್ಲೂ ವಿಶೇಷವಾಗಿ ಹಾಕಿ, ಕ್ರಿಕೆಟ್ ಮತ್ತು ಟೆನ್ನಿಸ್ ಆಟಗಳಲ್ಲಿ ಆಸ್ಥೆ ಹೊಂದಿದ್ದ ಕೌರ್ ಅನೇಕ ಚಾಂಪಿಯನ್‌ಶಿಪ್‌ಗಳನ್ನು ತಮ್ಮದಾಗಿಸಿಕೊಂಡರು. ತಮ್ಮ 20 ನೇ ವಯಸ್ಸಿನಲ್ಲಿ ತಾಯ್ನಾಡಿಗೆ ಮರಳಿದರು. ಆದಾಗಲೇ ಇಟಾಲಿಯನ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ನಿರರ್ಗಳವಾಗಿ ಮಾತನಾಡಬಲ್ಲವರಾಗಿದ್ದರು. ಪಿಯಾನೋ ಮತ್ತು ವಯಲಿನ್ ವಾದನಗಳಲ್ಲೂ

ಪ್ರೌಢಿಮೆಗಳಿಸಿದ್ದರು. ಸಂಸ್ಕೃತಿ,ಕಲೆ ಮತ್ತಿತರ ವಿಭಾಗಗಳಲ್ಲಿ ವಿಶೇಷ ಪ್ರಾವೀಣ್ಯಗಳಿಸಿ, ಸಾಂಸ್ಕೃತಿಕ ರಾಯಭಾರಿ ಎಂಬ ಮನ್ನಣೆಗೂ ಪಾತ್ರರಾದರು.

## ಸ್ವಾತಂತ್ರ್ಯ ಚಳುವಳಿಯಲ್ಲಿ

ರಾಜಕುಮಾರಿ ಅಮೃತ ಕೌರ್ ಅವರಿಗೆ ರಾಷ್ಟ್ರಾಭಿಮಾನ ತಮ್ಮ ತಂದೆಯಿಂದ ಬಂದ ಬಳುವಳಿ. ತಮ್ಮ ಮನೆಗೆ ಸದಾ ಭೇಟಿ ನೀಡುತ್ತಿದ್ದ ಕಾಂಗ್ರೆಸ್ ಪಕ್ಷದ ಅನೇಕ ಗಣ್ಯರು ಅದರಲ್ಲೂ ವಿಶೇಷವಾಗಿ ಗೋಪಾಲ ಕೃಷ್ಣ ಗೋಖಲೆಯವರು ಆಕೆಯಲ್ಲಿ ರಾಜಕೀಯದಲ್ಲಿ ಆಸಕ್ತಿ ಮೂಡುವಂತೆ ಮಾಡಿದರು. ಗೋಪಾಲ ಕೃಷ್ಣ ಗೋಖಲೆಯವರು ರಾಜಕುಮಾರಿಯ ಎಳೆಯ ಮನಸ್ಸಿನ ಮೇಲೆ ಗಾಢವಾದ ಪ್ರಭಾವ ಬೀರಿದ್ದರು."ಭಾರತ ವಿದೇಶಿ ಅಧಿಪತ್ಯದಿಂದ ಬಿಡುಗಡೆ ಹೊಂದಬೇಕೆಂದು ಅದಮ್ಯ ಅಭಿಲಾಷೆ, ಹುಟ್ಟಿದ್ದು ಅವರಿಂದಾಗಿಯೇ"ಎಂದು ಆಕೆಯೇ ಒಂದು ಕಡೆ ಹೇಳಿದ್ದಾರೆ.

ರಾಜಕಾರಣವನ್ನು ಪ್ರವೇಶಿಸಿದ ಮೇಲೆ ಆಕೆ ಉಪ್ಪಿನ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಮುಂಬಯಿಯಲ್ಲಿ ಬಂಧನಕ್ಕೆ ಒಳಗಾದರು. ನೈಜ ದೇಶಪ್ರೇಮಿಯಾಗಿದ್ದ ಅವರು ತಮಗೆ 1932ರಲ್ಲಿ ಆಗಿನ ಇಂಗ್ಲೆಂಡಿನ ಪ್ರಧಾನಿ ರಾಮ್ಸೆ ಮೆಕ್‌ಡೊನಾಲ್ಡ್ ಕೂಡ ಮಾಡಿದ "ಸಮುದಾಯ ಪ್ರಶಸ್ತಿ"(ಕಮ್ಯೂನಲ್ ಅವಾರ್ಡ್) ಯನ್ನು ತಿರಸ್ಕರಿಸಿದರು. ಭಾರತದ ದೊಡ್ಡ ಮತ್ತು ಸಣ್ಣ ಸಮುದಾಯಗಳ ರಾಜಕೀಯ ಹಕ್ಕುಗಳಿಗಾಗಿ ನಡೆದ ಹೋರಾಟಕ್ಕೆ ಸಂಬಂಧಿಸಿದ ಪ್ರಶಸ್ತಿ ಇದು. ಈ ಪ್ರಶಸ್ತಿಯನ್ನು ವಿರೋಧಿಸಿದ ಕೌರ್, 1932ರ ಡಿಸೆಂಬರ್ 3 ರಂದು ನಡೆದ ಅಖಿಲ ಭಾರತ ಮಹಿಳಾ ಸಮ್ಮೇಳನದಲ್ಲಿ " ಭಾರತದ ಮಹಿಳಾ ಸಮುದಾಯದ ಮೇಲೆ ಪ್ರತಿಕೂಲ ಪರಿಣಾಮ ಬೀರುವ ಈ ಪ್ರಶಸ್ತಿಯನ್ನು ಸಮ್ಮೇಳನ ಒಕ್ಕೊರಲಿನಿಂದ ಖಂಡಿಸುತ್ತದೆ. ಜಂಟಿ ಮತದಾನದ ವ್ಯವಸ್ಥೆಯನ್ನು ರೂಪಿಸಿಸಬೇಕೆಂಬ ಬೇಡಿಕೆಯನ್ನು ಸಮ್ಮೇಳನ ಬೆಂಬಲಿಸುತ್ತದೆ" ಎಂಬ ಗೊತ್ತುವಳಿಯನ್ನು ಮಂಡಿಸಿದರು. ರಾಜದ್ರೋಹದ ಆರೋಪದ ಮೇಲೆ 1937ರ ಜುಲೈ 16 ರಂದು ಶಿಕ್ಷೆಗೆ ಗುರಿಯಾದ ಕೌರ್ ಕಾಂಗ್ರೆಸ್ ಪಕ್ಷದ ಪರವಾಗಿ ವಕಾಲತು ವಹಿಸಲು ವಾಯುವ್ಯ ಪ್ರಾಂತ್ಯದ 'ಬನ್ನು'ಎಂಬಲ್ಲಿಗೆ ತೆರಳಿದರು. 1942ರಲ್ಲಿ ನಡೆದ ಕ್ವಿಟ್ ಇಂಡಿಯಾ (ಭಾರತ ಬಿಟ್ಟು ತೊಲಗಿ) ಚಳುವಳಿಯ ದಿನಗಳಲ್ಲಿ ಅನೇಕ ಸಭೆ, ಮೆರವಣಿಗೆಗಳ ನೇತೃತ್ವ ವಹಿಸಿದ್ದರು. ಆ ಸಂದರ್ಭದಲ್ಲಿ ಶಿಮ್ಲಾದಲ್ಲಿ ನಡೆದ ಮೆರವಣಿಗೆಯಲ್ಲಿ ಪೊಲೀಸರ ನಿರ್ದಯ ಲಾಠಿ ಪ್ರಹಾರಕ್ಕೂ ಅವರು ತುತ್ತಾಗಿದ್ದರು. ಅದೇ ಸಂದರ್ಭದಲ್ಲಿ ಬಂಧಿತರಾಗಿ ಸೆರೆಮನೆಯನ್ನು ಸೇರಿದ್ದರು. ಎಳೆಯ ವಯಸ್ಸಿನ ಆ ಸೆರೆಮನೆವಾಸ ಅತ್ಯಂತ ಯಾತನಾಮಯವಾಗಿತ್ತು. ಈ ಕಾರಣಕ್ಕಾಗಿಯೇ ನಂತರ ಅವರನ್ನು ಶಿಮ್ಲಾದಲ್ಲಿ ಗೃಹ ಬಂಧನದಲ್ಲಿ ಇರಿಸಲಾಯಿತು.

## ಮಹಾತ್ಮಾ ಗಾಂಧಿಯವರ ಅನುಯಾಯಿ

ತೀರಾ ಎಳೆಯ ವಯಸ್ಸಿನಲ್ಲೇ ಮಹಾತ್ಮಾ ಗಾಂಧಿಯವರ ಪ್ರಭಾವಕ್ಕೆ ಒಳಗಾದ ರಾಜಕುಮಾರಿ ಅಮೃತ ಕೌರ್ ನಂತರದ ದಿನಗಳಲ್ಲಿ ಅವರ ಅತ್ಯಂತ ಆಪ್ತ ಅನುಯಾಯಿಗಳಲ್ಲಿ ಒಬ್ಬರಾದರು. ಅವರು ಮಹಾತ್ಮಾ ಗಾಂಧಿಯವರನ್ನು ಮೊಟ್ಟ ಮೊದಲಿಗೆ ನೋಡಿದ್ದು ಮುಂಬಯಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ. ಮಹಾತ್ಮಾ ಗಾಂಧಿಯವರ ಚುಂಬಕ

ವ್ಯಕ್ತಿತ್ವ, ಉನ್ನತ ಆದರ್ಶ ಮತ್ತು ಪ್ರಖರ ವಿಚಾರ ಧಾರೆಗಳಿಂದ ಕೌರ್ ಅತ್ಯಂತ ಪ್ರಭಾವಿತರಾದರು. "ಅವರಲ್ಲಿದ್ದ ಅಪಾರ ಸಾತ್ವಿಕ ಶಕ್ತಿ, ಶ್ರದ್ಧೆ ಮತ್ತು ನಮ್ರತೆ ನನ್ನ ಎಳೆಯ ಹೃದಯವನ್ನು ಗಾಢವಾಗಿ ತಟ್ಟಿತು. ಆ ಕ್ಷಣದಿಂದಲೇ ನಾನು ಅವರ ಬಗ್ಗೆ, ಅವರ ಧ್ಯೇಯ, ಆದರ್ಶಗಳ ಬಗ್ಗೆ ನಿಷ್ಠೆ ಬೆಳೆಸಿಕೊಂಡೆ "ಎಂದು ಅವರೇ ಹೇಳಿಕೊಂಡಿದ್ದಾರೆ. ಮಹಾತ್ಮಾಗಾಂಧಿಯವರೊಡನೆ ಅವರು ಅತ್ಯಂತ ಗಾಢವಾದ, ಆಪ್ತ, ಭಾವನಾತ್ಮಕ ಸಂಬಂಧ ಹೊಂದಿದ್ದರು. ಗಾಂಧೀಜಿಯವರಿಗೂ ಆಕೆಯ ಮೇಲೆ ಅದೇ ರೀತಿಯ ಪ್ರೇಮಾದರಗಳಿದ್ದವು. ಮಹಾತ್ಮಾಗಾಂಧಿಜಿಯವರು ರಾಜಕುಮಾರಿ ಕೌರ್‌ಗೆ ಬರೆದಿರುವ ಪತ್ರದಲ್ಲಿ ಅದನ್ನು ಗುರುತಿಸಬಹುದು: "ಮಹಿಳೆಯರು ತಮ್ಮ ಘನತೆಯನ್ನು ಕಾಯ್ದುಕೊಳ್ಳುವಂತೆ, ಗುರುತಿಸಿಕೊಳ್ಳುವಂತೆ ಮಾಡುವುದೇ ಚಿಕ್ಕಂದಿನಿಂದಲೂ ನನ್ನ ಮಹದಾಸೆಯಾಗಿತ್ತು. ನಾನು ಸಹ ಒಂದು ಕಾಲದಲ್ಲಿ ಮಹಿಳೆಯರಿಂದ ಗುಲಾಮಗಿರಿಯನ್ನೇ ಬಯಸಿದ್ದೆ.ಆದರೆ ಕಸ್ತೂರಿ ಬಾ ಮಾತ್ರ ಗುಲಾಮಳಾಗಿರಲು ಬಯಸದೆ ನನ್ನ ಕಣ್ಣು ತೆರೆಯಿಸಿದಳು. ನನ್ನನ್ನು ಧ್ಯೇಯ ಸಾಧನೆಯಲ್ಲಿ ತೊಡಗುವಂತೆ ಮಾಡಿದಳು. ಅವಳ ಕೆಲಸ ಪೂರ್ಣಗೊಂಡಿದೆ, ಈಗ ಅವಳ ಧ್ಯೇಯವನ್ನು ಕಾರ್ಯರೂಪಕ್ಕೆ ತರಬಲ್ಲ ಓರ್ವ ಮಹಿಳೆಯ ಹುಡುಕಾಟದಲ್ಲಿದ್ದೇನೆ. ನೀನು ಅಂತಹ ಮಹಿಳೆಯೆ?ಅಥವಾ ಅಂತಹವರಲ್ಲಿ ಒಬ್ಬಳಾಗಲು ಬಯಸುವೆಯಾ?" ಎಂದು ಬರೆದಿದ್ದರು.

ಇಂತಹ ಹಿನ್ನೆಲೆಯಲ್ಲಿ ಗಾಂಧೀಜಿಯವರ ಯುಗದಲ್ಲಿ ಅನೇಕ ಮಹಿಳಾ ಮುಖಂಡರು ಬೆಳಕಿಗೆ ಬಂದಿದ್ದರೆ, ಅದರಲ್ಲಿ ಯಾವ ಅಚ್ಚರಿಯೂ ಇಲ್ಲ. ರಾಜಕುಮಾರಿ ಅಮೃತ ಕೌರ್ ಅಂತಹ ಭ್ಯಾಗಶಾಲಿ ಮಹಿಳೆಯರಲ್ಲಿ ಒಬ್ಬರು. ಅನೇಕ ವರ್ಷಗಳ ಕಾಲ ಅವರು ಗಾಂಧೀಜಿಯವರ ನಿಕಟ ಸಾಮೀಪ್ಯ ಹೊಂದಿ ಅವರ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಎಂಥವರ ಮೇಲಾದರೂ ಪ್ರಭಾವ ಬೀರಬಲ್ಲವರು ಎಂದರೆ ಅದು ಗಾಂಧೀಜಿ ಮಾತ್ರ. ರಾಜಕುಮಾರಿ ಕೌರ್ ವಿಷಯದಲ್ಲಿ ಗಾಂಧೀಜಿಯವರ ಪ್ರಭಾವ ಒಂದು ಪವಾಡದಂತೆ ಕೆಲಸ ಮಾಡಿತು.

ಜಲಿಯನ್ ವಾಲಾ ಭಾಗ್ ದುರಂತದ ನಂತರ 1919ರ ಮಾರ್ಷಲ್ ಕಾಯ್ದೆ ಜಾರಿಗೆ ಬಂದ ಆತಂಕಕಾರಿ ದಿನಗಳಲ್ಲೇ ಕೌರ್ ಗಾಂಧೀಜಿಯವರ ಸಂಪರ್ಕಕ್ಕೆ ಬಂದರು. ಈ ವೇಳೆಗಾಗಲೆ ಕೌರ್ ತಮ್ಮ ರಾಜಕೀಯ ಬದ್ಧತೆಯ ಬಗ್ಗೆ ಖಚಿತ ನಿಲುವು ತಳೆದಿದ್ದರು. ಈ ಹಿನ್ನೆಲೆಯಲ್ಲೇ ಅವರು ಆಶ್ರಮಕ್ಕೆ ಸೇರಲು ಗಾಂಧೀಜಿಯವರ ಅನುಮತಿ ಕೋರಿದರು.ಆದರೆ ಕೌರ್ ಇನ್ನು ಸಹ ಶ್ರೀಮಂತ ಜೀವನ ಶೈಲಿ ಮತ್ತು ಅಭಿರುಚಿಗಳಿಗೆ ಅಂಟಿಕೊಂಡಿರುವುದರಿಂದ ಮತ್ತು ಅವರ ಪೋಷಕರು ಸಹ ಆಶ್ರಮ ಸೇರಲು ಅನುಮತಿ ನೀಡಲಾರರು ಎಂಬ ಕಾರಣದಿಂದ ಆಶ್ರಮ ಪ್ರವೇಶಕ್ಕೆ ಗಾಂಧೀಜಿ ಅನುಮತಿ ನಿರಾಕರಿಸಿದ್ದರು. ಬಾಪೂಜಿಯವರ ಈ ನಿರಾಕರಣೆಯೇ ಆಶ್ರಮ ಸೇರಬೇಕೆಂಬ ಅವರ ಸಂಕಲ್ಪ ಇನ್ನಷ್ಟು ಬಲಿಷ್ಟಗೊಳ್ಳಲು ಕಾರಣವಾಯಿತು. ಹಾಗಾಗಿಯೇ ಆಕೆ ಮಹಿಳಾ ವಿಮೋಚನಾ ಆಂದೋಲನಗಳಲ್ಲಿ ಅದರಲ್ಲೂ ವಿಶೇಷವಾಗಿ ಸಿಮ್ಲಾದ ಹರಿಜನ ಚಳುವಳಿಯಲ್ಲಿ ಧುಮುಕಲು ಪ್ರೇರಣೆಯಾಯಿತು. ಅತ್ಯುತ್ತಮ ಶ್ರೇಣಿಯ ವಾಗ್ಮಿಯಾಗಿದ್ದ ಕೌರ್ ವಿವಿಧ ವೇದಿಕೆಗಳಲ್ಲಿ ಗಾಂಧೀಜಿಯವರ ನೀತಿ ಸಿದ್ಧಾಂತಗಳನ್ನು ಎತ್ತಿ ಹಿಡಿದು ಅನೇಕ ರಾಜಕೀಯ ಉಪನ್ಯಾಸಗಳನ್ನು ನೀಡಿದರು. ಕೊನೆಗೂ 1934ರಲ್ಲಿ ಗಾಂಧೀಜಿಯವರ ಸೇವಾಗ್ರಾಮ ಆಶ್ರಮ ಸೇರುವಲ್ಲಿ ಯಶಸ್ವಿಯಾದರು. ಸುಮಾರು 16 ವರ್ಷಗಳ ಕಾಲ ಗಾಂಧೀಜಿಯವರ ಕಾರ್ಯದರ್ಶಿಯಾಗಿ

ಅವರು ಕಾರ್ಯ ನಿರ್ವಹಿಸಿದರು. ಈ ಅವಧಿಯಲ್ಲಿ ಅವರು ಹೆಚ್ಚು ಹೆಚ್ಚು ಬಾಲಕಿಯರ ಶಾಲೆಗಳನ್ನು ತೆರೆಯಲು ಹಾಗೂ ಬಾಲ್ಯ ವಿವಾಹ ಮತ್ತು ಬಹು ಪತ್ನಿತ್ವ ಪದ್ಧತಿಗಳ ನಿರ್ಮೂಲನೆಗಾಗಿ ಚಳುವಳಿ ನಡೆಸಿದರು.ಈ ಕಾರ್ಯಭಾರದಲ್ಲಿ ಮಹಾತ್ಮಾಗಾಂಧೀಜಿ ಅವರಿಗೆ ಸ್ಫೂರ್ತಿಯಾಗಿದ್ದರು. ಅಮೃತ ಕೌರ್ ಜನ ಸಮುದಾಯದೊಂದಿಗೆ ಹೆಚ್ಚು ಹೆಚ್ಚು ಬೆರೆಯಬೇಕು ಮತ್ತು ಭಾರತೀಯ ಸಮಾಜದಲ್ಲಿ ಹಾಸು ಹೊಕ್ಕಾಗಿರುವ ಅನಿಷ್ಠ ರೂಢಿ ಸಂಪ್ರದಾಯಗಳ ಬಗ್ಗೆ ಹೆಚ್ಚಿನ ಅರಿವು ಮೂಡಿಸಿಕೊಳ್ಳಬೇಕೆಂಬುದು ಗಾಂಧೀಜಿಯವರ ಬಯಕೆಯಾಗಿತ್ತು.

ಗಾಂಧೀಜಿಯುವರು ತಂಬಾ ಪ್ರೇಮಳ ಸ್ವಭಾವದ ಮತ್ತು ಆತ್ಮೀಯ ವ್ಯಕ್ತಿತ್ವ ಉಳ್ಳವರಾಗಿದ್ದರು. ಅವರ ಕಾರ್ಯಕ್ಷಮತೆ ಅಪಾರ;ಯಾವುದೇ ಕೆಲಸದಲ್ಲಿ ಪರಿಪೂರ್ಣತೆ ಸಾಧಿಸುವ ಕಲೆಯನ್ನು ರಾಜಕುಮಾರಿ ಅಮೃತ ಕೌರ್ ಗಾಂಧೀಜಿಯಿಂದಲೇ ಕಲಿತರು. ಮಹಾತ್ಮಾ ಅವರ ಪದತಳದಲ್ಲೇ ಕಠಿಣ ಪರಿಶ್ರಮ ಮತ್ತು ತನ್ನೆಲ್ಲ ಶಕ್ತಿ ಸಾಮರ್ಥ್ಯಗಳನ್ನು ಬಡವರ ಮತ್ತು ಅಸಹಾಯಕರ ಸೇವೆಗಾಗಿ ವಿನಿಯೋಗಿಸುವುದನ್ನು ಅವರು ರೂಢಿಸಿಕೊಂಡರು. ಖಾದಿ ಧಾರಣೆ ಮಾಡಿ ತಮ್ಮ ನೀಳ್ಗೂದಲನ್ನು ಕತ್ತರಿಸಿಕೊಂಡು ಸ್ವಾತಂತ್ರ್ಯ ಚಳುವಳಿ ಯಲ್ಲಿ ಧುಮುಕಿದರು. ಗಾಂಧೀಜಿಯವರ ಈ ಸರಳ ಸಾತ್ವಿಕ ಗುಣಗಳು ಆಕೆಯ ಬದುಕಿನುದ್ದಕ್ಕೂ ಆಧಾರವಾಗಿ ನಿಂತವು.

ಅವರು ಸರಳ ಖಾದಿ ಉಡುಗೆಯಲ್ಲಿದ್ದರೂ ಶ್ರೀಮಂತಿಕೆಯ ಛಾಪು ಅವರನ್ನು ಸಂಪೂರ್ಣವಾಗಿ ಬಿಟ್ಟು ಹೋಗಿರಲಿಲ್ಲ. ಆದರೆ ಸೇವಾಗ್ರಾಮದಲ್ಲಿನ ಅವರ ಸರಳಜೀವನ ಅವರ ಸಮಕಾಲೀನರಿಗೆ ಸ್ಫೂರ್ತಿಯಾಗಿ ಅವರು ಸಹ ಮಹಾತ್ಮಾ ಗಾಂಧೀಜಿಯವರ ಹರಿಜನೋದ್ಧಾರ ಕಾರ್ಯದಲ್ಲಿ ಕೈ ಜೋಡಿಸುವಂತೆ ಮಾಡಿತು. 1940ರ ಏಪ್ರಿಲ್ 11 ರಂದು ಸೇವಾಗ್ರಾಮದಿಂದ ಪಂಜಾಬಿನ ಶ್ರೀಮತಿ ರಾಲಿಯಾ ರಾಂ ರವರಿಗೆ ಬರೆದ ಪತ್ರದಲ್ಲಿ ಕೌರ್,

"ಪಂಜಾಬಿನಲ್ಲಿ ಖಾದಿಯನ್ನೇ ಧರಿಸುವ, ಬಳಸುವ, ಮಾರಾಟ ಮಾಡುವ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ತಾವೇ ಖಾದಿಯನ್ನು ನೇಯುವ ಖಾದಿ ಆಂದೋಲನದ ಕಾರ್ಯಭಾರವನ್ನು ತಾವು ಕೈಗೆತ್ತಿಕೊಳ್ಳುವಂತೆ ನಾನು ನಿಮ್ಮನ್ನು ವಿನಂತಿಸುತ್ತಿದ್ದೇನೆ. ಈ ಆಂದೋಲನದಲ್ಲಿ ಮಹಿಳೆಯರಾದ ನಾವು ಈ ರೀತಿಯಲ್ಲಿ ಗಾಂಧೀಜಿಯವರಿಗೆ ನೆರವಾಗಬಹುದು"ಎಂದಿದ್ದಾರೆ.

ರಾಜಕುಮಾರಿ ಅಮೃತ ಕೌರ್ ಅವರ ಮೇಲೆ ಗಾಂಧೀಜಿಯುವರ ಪ್ರಭಾವ ಪ್ರಗಾಢವಾಗಿತ್ತು. ಆಕೆಯ ಪಾಲಿಗೆ ರೂವಾರಿ, ಪೋಷಕ ಮತ್ತು ಸ್ನೇಹಿತರಾಗಿದ್ದ ಬಾಪೂ ಅವರ ಒಡನಾಟ 1948ರಲ್ಲಿ ಗಾಂಧೀಜಿಯವರ ಹತ್ಯೆ ಸಂಭವಿಸುವವರೆಗೂ ಮುಂದುವರಿದಿತ್ತು. ಒಟ್ಟಿನಲ್ಲಿ ಗಾಂಧೀಜಿಯವರ ಚಿಂತನೆ ಮತ್ತು ಜೀವನ ದರ್ಶನ ಆಕೆಯ ಬದುಕಿನ ಕೊನೆಯ ಕ್ಷಣದ ತನಕವೂ ಒಂದು ಅಮೂಲ್ಯ ನಿಧಿಯಾಗಿತ್ತು.

### ಕೇಂದ್ರ ಸಚಿವರಾಗಿ....

ಸ್ವತಂತ್ರ ಭಾರತದ ಪ್ರಥಮ ಪ್ರಧಾನ ಮಂತ್ರಿಯಾಗಿ ಪಂಡಿತ್ ಜವಾಹರಲಾಲ್ ನೆಹರೂ ಅವರು ಅಧಿಕಾರ ವಹಿಸಿಕೊಂಡೊಡನೆ ರಾಷ್ಟ್ರೀಯ ಜೀವನಕ್ಕೆ ಕೌರ್ ಅವರು ನೀಡಿದ ಕೊಡುಗೆಯನ್ನು ಗಮನದಲ್ಲಿಟ್ಟುಕೊಂಡು ತಮ್ಮ ಸಚಿವ ಸಂಪುಟ ಸೇರುವಂತೆ ಆಹ್ವಾನಿಸಿದರು. ಹೀಗೆ ಸ್ವತಂತ್ರ ಭಾರತದ ಕೇಂದ್ರ ಸಚಿವ ಸಂಪುಟದ ಪ್ರಥಮ ಮಹಿಳೆಯೆಂಬ ಹೆಗ್ಗಳಿಕೆಗೂ

ಪಾತ್ರರಾದರು. ಅವರು 1947 ಆಗಸ್ಟ್ 15 ರಿಂದ 1950ರ ಮೇ 6ರ ತನಕ, 1950ರ ಜೂನ್23 ರಿಂದ 1957ರ ಏಪ್ರಿಲ್ 17ರ ವರೆಗೆ ಹೀಗೆ ಎರಡು ಬಾರಿ ಅವರು ಆರೋಗ್ಯ ಖಾತೆಯ ಹೊಣೆ ಹೊತ್ತರು. ಆರೋಗ್ಯ ಸಚಿವರಾಗಿ ದೇಶದ ಜನತೆಯ ಆರೋಗ್ಯ ಸುಧಾರಣೆಗಾಗಿ ಅತ್ಯಂತ ಉತ್ಸಾಹ ಹಾಗೂ ಸಮರ್ಪಣಾಭಾವದಿಂದ ಪ್ರಾಮಾಣಿಕವಾಗಿ ಅವರು ಕಾರ್ಯ ನಿರ್ವಹಿಸಿದರು. ಅವರ ಈ ಪರಿಶ್ರಮದ ಫಲವಾಗಿಯೇ ಏಷ್ಯಾದಲ್ಲೇ ಅತ್ಯಂತ ಪ್ರತಿಷ್ಠಿತವಾದ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆ (All India institute of Medical Science, AIIMS) ಅಸ್ತಿತ್ವಕ್ಕೆ ಬಂದಿತು.1956ರ ಫೆಬ್ರವರಿ 18 ರಂದು ಲೋಕಸಭೆಯಲ್ಲಿ ಎಐಐಎಂಎಸ್ ಮಸೂದೆಯನ್ನು ಮಂಡಿಸುವಾಗ ಅವರು ಆಡಿದ ಮಾತುಗಳಿವು:

"ನಮ್ಮ ದೇಶದಲ್ಲಿ ಅತ್ಯುನ್ನತ ದರ್ಜೆಯ ವೈದ್ಯಕೀಯ ಶಿಕ್ಷಣಕ್ಕಾಗಿ ಸ್ನಾತಕೋತ್ತರ ಅಧ್ಯಯನ ಕೇಂದ್ರವೊಂದನ್ನು ಪ್ರಾರಂಭಿಸಬೇಕೆಂಬುದು ನನ್ನ ಬಹುಕಾಲದ ದೊಡ್ಡ ಕನಸಾಗಿತ್ತು, ನಮ್ಮ ದೇಶದ ಹಳ್ಳಿಗಳಲ್ಲಿ ವೈದ್ಯಕೀಯ ಸೇವೆಯನ್ನು ಸುಧಾರಿಸುವ ದಿಸೆಯಲ್ಲಿ ಅಗತ್ಯವಾಗಿರುವ ಅನುಭವವನ್ನು ಒದಗಿಸುವ, ಅದೇ ವೇಳೆಗೆ ವೈದ್ಯಕೀಯ ಶಿಕ್ಷಣಕ್ಕೆ ಕ್ಷೇತ್ರದ ವಿಭಿನ್ನ ವಲಯಗಳಲ್ಲಿ ಸಂಶೋಧನಾ ಕಾರ್ಯಕ್ಕೆ ಪ್ರೇರಕವಾಗುವ ರೀತಿಯ ಒಂದು ವೈದ್ಯಕೀಯ ಅಧ್ಯಯನ ಸಂಸ್ಥೆಯನ್ನು ಹೊಂದಿರಬೇಕು ಎಂಬುದು ನನ್ನ ಆಸೆಯಾಗಿತ್ತು. ನಮ್ಮ ದೇಶದ ಯುವಕ ಯುವತಿಯರಿಗೆ ಉನ್ನತ ಮಟ್ಟದ ವೈದ್ಯಕೀಯ ಶಿಕ್ಷಣ ದೊರಕುವಂತೆ ಮಾಡುವುದೇ ಇದರ ಹಿಂದಿರುವ ಪ್ರಾಮಾಣಿಕ ಆಶಯ."

ಸೂಕ್ತ ರೀತಿಯಲ್ಲಿ ರೋಗಗಳ ತಪಾಸಣೆ, ರೋಗ ನಿಯಂತ್ರಣ ಮತ್ತು ಆರೋಗ್ಯ ಸಂರಕ್ಷಣೆಯ ನಿಟ್ಟಿನಲ್ಲಿ ಆಧುನಿಕ ವೈದ್ಯ ಪದ್ಧತಿಗಳ ಪಾತ್ರವನ್ನು ವಿವರಿಸುತ್ತಾ ಕೌರ್ ಹೀಗೆ ಹೇಳಿದ್ದಾರೆ:

"ವೈದ್ಯಕೀಯ ಶಿಕ್ಷಣದ ಸಿದ್ಧಾಂತ ಮತ್ತು ಪ್ರಯೋಗಗಳು ಇತರ ಶಾರೀರಿಕ ಮತ್ತು ಜೀವ ವಿಜ್ಞಾನದ ಶಾಖೆಗಳನ್ನು, ಅವುಗಳ ಕೊಡುಗೆಗಳನ್ನು ಬಳಸಿಕೊಳ್ಳುವುದರ ಮೇಲೆ ಅವಲಂಬಿಸಿದೆ. ಈ ಎರಡೂ ಕ್ಷೇತ್ರಗಳಲ್ಲಿ ನಡೆಯುತ್ತಿರುವ ನಿರಂತರ ಪ್ರಗತಿಯಿಂದಾಗಿ ಆಧುನಿಕ ವೈದ್ಯ ಪದ್ಧತಿಯಲ್ಲಿನ ಕಾರ್ಯಕ್ಷಮತೆ ಅಗಾಧವಾಗಿ ಹೆಚ್ಚುತ್ತಿದೆ. ಇದರಿಂದಾಗಿ ರೋಗವನ್ನು ಪತ್ತೆ ಹಚ್ಚುವ, ಅವುಗಳಿಗೆ ಚಿಕಿತ್ಸೆ ನೀಡುವ ಮತ್ತು ಈ ರೋಗಗಳನ್ನು ತಡೆಗಟ್ಟುವ ಕ್ಷಮತೆ ಕೂಡ ಅಗಾಧವಾಗಿ ಹೆಚ್ಚಿದೆ."

ಆದರೆ ಅದೇ ವೇಳೆಗೆ ದೇಶೀಯ ವೈದ್ಯ ಪದ್ಧತಿಗಳನ್ನು ಅವರೆಂದೂ ವಿರೋಧಿಸಲಿಲ್ಲ. ಆಕೆ ವೈಜ್ಞಾನಿಕ ದೃಷ್ಟಿಯ ಮಹಿಳೆಯಾಗಿದ್ದರು. ಅವರ ಈ ಮನೋಭಾವ 1956ರ ಮೇ 3 ರಂದು ರಾಜ್ಯಸಭೆಯಲ್ಲಿ ಆಡಿದ ಮಾತುಗಳಿಂದ ವ್ಯಕ್ತವಾಗುತ್ತದೆ.

"ಭಾರತೀಯ ವೈದ್ಯ ಪದ್ಧತಿಗಳಿಗೆ ಅನುಗುಣವಾಗಿ ಔಷಧಗಳನ್ನು ತಯಾರಿಸುವ ಪ್ರಯೋಗ ಕ್ರಮ ಸಹಿತವಾದ ಮಾಹಿತಿ ಕೋಶವೊಂದನ್ನು ನಾವು ಹೊರತಂದಿದ್ದೇವೆ. ನಮ್ಮ ದೇಶದ ವೈದ್ಯರು ಮತ್ತು ಹಕೀಮರು ತಮ್ಮ ಔಷಧಗಳನ್ನು ವೈಜ್ಞಾನಿಕ ರೀತಿಯಲ್ಲಿ ತಯಾರಿಸಬೇಕು ಎಂಬುದು ನಮ್ಮ ಆಶಯವಾಗಿದೆ."

ಪೂರ್ಣ ಒಂದು ದಶಕದ ಕಾಲ(1947-1957) ಆರೋಗ್ಯ ಖಾತೆಯನ್ನು ಅವರು ನಿರ್ವಹಿಸಿದರು. ಈ ಅವಧಿಯಲ್ಲಿ ಅವರು ಮಕ್ಕಳ ಕಲ್ಯಾಣ, ದಾದಿಯರ ತರಬೇತಿಕೇಂದ್ರ, ಮಲೇರಿಯಾ, ಕುಷ್ಟ ರೋಗ ಇತರ ಗುಹ್ಯ ರೋಗಗಳ ನಿಯಂತ್ರಣದ ದಿಸೆಯಲ್ಲಿ ಅನೇಕ ಯೋಜನೆಗಳನ್ನು ಉಪಕ್ರಮಿಸಿದರು.

ಅಮೃತ ಕೌರ್ ದೇಶದಲ್ಲಿ ದಾದಿಯರು ಮತ್ತು ರೋಗಗಳ ಶುಶ್ರೂಷಾ ಸುಧಾರಣೆಯ ಬಗ್ಗೆ ಅತೀವ ಕಾಳಜಿ ಹೊಂದಿದ್ದರು. ದೇಶದಲ್ಲಿ ಶುಶ್ರೂಷಾ ಸೇವೆ, ದಾದಿಯರ ತರಬೇತಿಗೆ ಸಂಬಂಧಿಸಿದ ಎಲ್ಲಾ ಅಂಶಗಳ ಅಧ್ಯಯನಕ್ಕೆ 1954ರಲ್ಲಿ ಸಮಿತಿಯೊಂದನ್ನು ರಚಿಸಿದರು. ಅಸ್ವಸ್ಥರು ಮತ್ತು ರೋಗಿಗಳಿಗೆ ಶುಶ್ರೂಷೆ ಮಾಡುವ ಮಹಾನ್ ಕಾರ್ಯದಲ್ಲಿ ನಿರತರಾಗಬೇಕಾದ ದಾದಿಯರಿಂದ ಅತ್ಯುಚ್ಚಮಟ್ಟದ ಆದರ್ಶ ಮತ್ತು ಸೇವಾ ಮನೋಭಾವವನ್ನು ನಿರೀಕ್ಷಿಸಿದ್ದರು. 1957ರ ನವೆಂಬರ್ 18 ರಂದು ರಾಜ್ಯಸಭೆಯಲ್ಲಿ ಭಾರತೀಯ ನರ್ಸಿಂಗ್ ಮಂಡಳಿ ತಿದ್ದುಪಡಿ ಕಾಯ್ದೆ ಮಂಡಿಸಿದ ಸಂದರ್ಭದಲ್ಲಿ ಮಾಡಿದ ಭಾಷಣದಲ್ಲಿ ಈ ವೃತ್ತಿಯನ್ನು ಸುಧಾರಿಸುವ ಬಗ್ಗೆ ಅವರು ಎಷ್ಟೊಂದು ಕಾಳಜಿ ಹೊಂದಿದ್ದರು ಎಂಬುದನ್ನು ತಿಳಿಯಬಹುದಾಗಿದೆ.

"ನರ್ಸಿಂಗ್ ವೃತ್ತಿಯ ಸ್ಥಾನಮಾನದ ಪ್ರಶ್ನೆ ಮತ್ತು ದಾದಿಯರಿಗೆ ರಾಜ್ಯದಲ್ಲಿ ಉನ್ನತ ಸ್ಥಾನಮಾನ ಕಲ್ಪಿಸಿಕೊಡುವ ಬಗ್ಗೆ ನಾನು ಮೊದಲಿನಿಂದಲೂ ಬಹಳಷ್ಟು ಶ್ರಮಿಸಿದ್ದೇನೆ.ದಾದಿಯರಲ್ಲಿ ಶುಶ್ರೂಷ ಸೇವೆಯಲ್ಲಿ ಉನ್ನತ ಮೌಲ್ಯಗಳನ್ನು ಕಾಯ್ದುಕೊಳ್ಳುವುದು ಅಷ್ಟೇ ಅವಶ್ಯಕವಾಗಿದೆ."

ಮಾನವ ಕಲ್ಯಾಣವೇ ಕೌರ್ ಅವರ ಬದುಕಿನ ಬಹುದೊಡ್ಡ ಧ್ಯೇಯವಾಗಿತ್ತು. ಆರೋಗ್ಯ ಸಚಿವೆಯಾಗಿ ಅವರು ವಿಶೇಷವಾಗಿ ಮಹಿಳೆಯರು, ಮಕ್ಕಳು ಮತ್ತು ಬಡವರ ಉನ್ನತಿಗಾಗಿ ಶ್ರಮಿಸಿದರು.

"ನನ್ನ ದೃಷ್ಟಿಯಲ್ಲಿ ಸುಖ ಎಂದರೆ ಅದು ಎಲ್ಲರಿಗೂ ಒಳಿತನ್ನೇ ಮಾಡುವುದರಲ್ಲೇ ಇದೆ. ನಮಗೆ ಕೆಡುಕನ್ನು ಉಂಟು ಮಾಡುವ ವೈರಿಗಳಾದರೂ ಸಹ. ಅದು ನಮ್ಮ ನೆರೆಹೊರೆಯವರನ್ನು ಪ್ರೀತಿಸುವುದರಲ್ಲಿ ಮತ್ತು ಎಲ್ಲರಿಗೂ ಒಳಿತನ್ನು ಬಯಸುವುದರಲ್ಲೇ ಇದೆ. ಸುಖ ಎಂಬುದು ನಮ್ಮ ಮೃದುವಾದ ನಡವಳಿಕೆ, ನಮ್ಮ ದಯಾಪರತೆ, ನಮ್ಮ ಕ್ಷಮಾ ಗುಣದಲ್ಲಿ ಮತ್ತು ಎಂದೂ ಜಂಬ ತಾಳದ, ಪ್ರತಿಯೊಂದು ವಿಷಯದಲ್ಲೂ ಸಾಧ್ಯವಾದಷ್ಟು ಒಳ್ಳೆಯದನ್ನೇ ಮಾಡುವುದರಲ್ಲಿ ಇದೆ."

ಕೇಂದ್ರ ಆರೋಗ್ಯ ಸಚಿವರಾಗಿದ್ದ ಹತ್ತು ವರ್ಷಗಳ ಅಧಿಕಾರವಧಿಯಲ್ಲಿ (1947-1957) ಅವರು ಅನೇಕ ಪ್ರಮುಖ ವಿಷಯಗಳಲ್ಲಿ, ಶಾಸನಾತ್ಮಕ ಕ್ರಮಗಳನ್ನು ತರಲು ವಿಶೇಷ ಆಸಕ್ತಿ ವಹಿಸಿದರು.

ಬಿಸಿಜಿ, ಡಾಕು ಹಾಕುವ ಚಳುವಳಿ, ಕಾಮಾಲೆ ಪ್ರಕರಣಗಳ ತನಿಖಾ ಸಮಿತಿ ವರದಿ, ಆಹಾರ ಪರಿಸ್ಥಿತಿ, 1957ರ ಡಫರಿನ್ ನಿಧಿ ಮಸೂದೆ, ಉದ್ಯೋಗಿಗಳ ರಾಜ್ಯ ವಿಮಾ ನಿಗಮದ ವಾರ್ಷಿಕ ವರದಿ ಮತ್ತಿತ್ತರ ಹಲವು ವಿಷಯಗಳಲ್ಲಿ ಅವರು ಮುತುವರ್ಜಿ ತೋರಿಸಿದರು. ಈ ಸಂಬಂಧದಲ್ಲಿ ಆಕೆ ನೀಡಿದ ಸಲಹೆಗಳು ಮತ್ತು ಸೂಚಿಸಿದ ಪರಿಹಾರಗಳನ್ನು ಸದನವು ಅತ್ಯಂತ ಗೌರವಯುತವಾಗಿ ಅಂಗೀಕರಿಸಿತು. ಈ ಅವಧಿಯಲ್ಲಿ ಆಕೆಯ ಖಾತೆಗೆ ಸಂಬಂಧಿಸಿದ ಅನೇಕ

ಪ್ರಮುಖ ಮಸೂದೆಗಳು ಭಾರತೀಯ ವೈದ್ಯಕೀಯ ಮಸೂದೆ, ಭಾರತೀಯ ರೆಡ್‌ಕ್ರಾಸ್ ತಿದ್ದುಪಡಿ ಮಸೂದೆ, ಸರ್ಕಾರಿ ವಸತಿಗಳ (ತೆರವು) ತಿದ್ದುಪಡಿ ಮಸೂದೆ, ಆಹಾರ ಕಲಬೆರಕೆ ನಿಯಂತ್ರಣ ಮಸೂದೆ 1954, 1955ರ ದೆಹಲಿ ಮಸೂದೆ (ಕಟ್ಟಡ ಕಾಮಗಾರಿ ನಿಯಂತ್ರಣ), ದೆಹಲಿ ಮಹಾನಗರಸಭೆ ಮಸೂದೆ 1957, 1959ರ ಅನಾಥಾಲಯಗಳು ಮತ್ತು ಇತರ ದತ್ತಿ ಸಂಸ್ಥೆಗಳ ಮಸೂದೆ, 1959ರ ಮಕ್ಕಳ ಮಸೂದೆ, 1959ರ ಲೇಡಿಹಾರ್ಡಿಂಗ್ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ ಮಸೂದೆ, 1960ರ ಜಿನೀವಾ ಸಮ್ಮೇಳನ ಮಸೂದೆ, 1961ರ ಔಷಧ(ತಿದ್ದುಪಡಿ) ಮಸೂದೆಗಳು ಸಂಸತ್ತಿನಲ್ಲಿ ಸುದೀರ್ಘ ಚರ್ಚೆಗೆ ಒಳಪಟ್ಟು ಅಂಗೀಕಾರ ಪಡೆದವು.

## ಸಂಸದೀಯ ಪಟುವಾಗಿ

ರಾಜಕುಮಾರಿ ಅಮೃತ ಕೌರ್ ಅವರು ಭಾರತದ ರಾಜ್ಯಾಂಗ ಸಭೆಯ (1946-50), ತಾತ್ಕಾಲಿಕ ಸಂಸತ್ತು (1950-52) ಲೋಕಸಭೆ(1952-57) ಹಾಗೂ ರಾಜ್ಯಸಭೆಗಳ (1957-62) ಸದಸ್ಯರಾಗಿ ಕಾರ್ಯ ನಿರ್ವಹಿಸಿದರು. ಸಮರ್ಪಣ ಮನೋಭಾವದ ಓರ್ವ ಸಂಸದೀಯ ಪಟುವಾಗಿ ರಾಜಕುಮಾರಿ ಕೌರ್ ಅವರು ಸದನದ ಕಲಾಪಗಳಲ್ಲಿ ಸಂಪೂರ್ಣ ಲೀನವಾಗುತ್ತಿದ್ದರು. ಸಂಸತ್ತಿನಲ್ಲಿ ನಡೆಯುವ ಚರ್ಚೆ ಹಾಗೂ ಕಲಾಪಗಳಲ್ಲಿ ಸಂಪೂರ್ಣ ಸಿದ್ಧತೆಯಿಂದ ಪಾಲ್ಗೊಳ್ಳುತ್ತಿದ್ದರು. ಸಂಸತ್ತಿನಲ್ಲಿ ಅವರು ಮಾಡಿದ ಭಾಷಣಗಳು ಭಾರತೀಯ ರಾಜಕಾರಣಕ್ಕೆ ಒಂದು ಹೊಸ ದಿಕ್ಕನ್ನು ತೋರಿಸಿ ಅದನ್ನು ಶ್ರೀಮಂತಗೊಳಿಸಿದ್ದು ಮಾತ್ರವಲ್ಲ ಸಾಕಷ್ಟು ಚಿಂತನೆಗೂ ಗ್ರಾಸ ಒದಗಿಸುತ್ತಿದ್ದವು. ಓರ್ವ ರಾಜನೀತಿಜ್ಞೆಯಾಗಿ ಅವರ ಉನ್ನತ ವ್ಯಕ್ತಿತ್ವ ಮತ್ತು ಕಾರ್ಯಪಟುತ್ವ, ಸಂಸದೀಯ ಕೌಶಲ್ಯ, ಪರಿಣತಿ ಹಾಗೂ ವಾಕ್ಚಾತುರ್ಯ,ದೇಶದ ಸಮಸ್ಯೆಗಳ ಬಗೆಗಿನ ಗಾಢವಾದ ಗ್ರಹಿಕೆ ಮತ್ತು ಅವುಗಳ ಬಗೆಗೆ ಹೊಂದಿದ್ದ ರಚನಾತ್ಮಕ ನಿಲುವು ಈಕೆಯ ಮಹಾನ್ ಸಂಸದೀಯ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದ್ದವು.

ಸರಿ ಎನಿಸಿದ್ದನ್ನು ಹಾಗೂ ನ್ಯಾಯ ಸಮ್ಮತ ಎಂದು ಕಂಡದ್ದನ್ನು ಅವರು ಯಾವಾಗಲೂ ಬೆಂಬಲಿಸುತ್ತಿದ್ದರು. ಜನಸಾಮಾನ್ಯರ ಆಸಕ್ತಿ, ಅಭಿಲಾಷೆಗಳು, ಅವರ ಕೆಲಸ ಕಾರ್ಯಗಳು, ಆಸೆ ಆಕಾಂಕ್ಷೆಗಳು, ಆಶೋತ್ತರಗಳು ಅಷ್ಟೇ ಅಲ್ಲ ಇನ್ನೂ ಕೆಲವು ಸಂದರ್ಭಗಳಲ್ಲಿ ಅವರ ಹತಾಶೆ, ನೋವುಗಳೂ ಸಹ ಅವರಿಗೆ ಮಿಕ್ಕೆಲ್ಲ ವಿಷಯಗಳಿಗಿಂತ ಮಿಗಿಲಾಗಿದ್ದವು. ಕಲಬೆರಕೆ ಕುರಿತು ರಾಜ್ಯಸಭೆಯಲ್ಲಿ ಅವರು ಮಾಡಿದ ಭಾಷಣ ಇದಕ್ಕೆ ಸ್ಪಷ್ಟ ನಿದರ್ಶನವಾಗಿದೆ:

“ಪ್ರತಿಯೊಬ್ಬರು, ಉಳ್ಳವರಿರಲಿ, ಇಲ್ಲದವರಿರಲಿ-ಉಳ್ಳವರು ಇರುವುದೇ ಕಡಿಮೆ- ದೇಶಕ್ಕಾಗಿ ತಮ್ಮ ಹೊಟ್ಟೆಯನ್ನು ಕಟ್ಟಿಕೊಳ್ಳಲು ಸಿದ್ಧರಾಗಿಯೇ ಇರುತ್ತಾರೆ. ಇಂತಹ ಮನೋಭಾವದಿಂದ ಮಾತ್ರ ದೇಶದ ಪ್ರಗತಿಗೆ ಹೆಚ್ಚಿನ ವೇಗ ಬರಲು ಸಾಧ್ಯ. ಇಲ್ಲಿ ಆತಂಕಕಾರಿ ಅಂಶ ಎಂದರೆ ಜನಸಾಮಾನ್ಯರು ಮಾರುಕಟ್ಟೆಯಲ್ಲಿ ಕೊಳ್ಳುವ ಆಹಾರ ಪದಾರ್ಥಗಳು ದುಬಾರಿ ಎಂಬುದಲ್ಲ. ಅವು ಕಲಬೆರಕೆಯಾಗಿರುತ್ತದೆಂಬುದೇ ನನಗೆ ನೋವುಂಟು ಮಾಡುವ ಸಂಗತಿ. ಹಾಗಾಗಿ ಜನರ ಕಠಿಣ ಪರಿಶ್ರಮದಿಂದ ಸಂಪಾದಿಸಿದ ಹಣಕ್ಕೆ ತಕ್ಕಂತೆ ಆಹಾರ ಪದಾರ್ಥಗಳು ದೊರೆಯುವಂತೆ ಮಾಡಲು ಏನನ್ನಾದರೂ ಮಾಡಲೇ ಬೇಕು;ಮಾಡಲೇ ಬೇಕಾಗಿದೆ. ಖಂಡಿತವಾಗಿಯೂ ಇದು ಅಂತಹ ಪ್ರಯತ್ನಕ್ಕೆ ಸೂಕ್ತವಾದ ಸಮಯ. ಸಂಬಂಧಪಟ್ಟ ಸಚಿವರು

ಈ ನಿಟ್ಟಿನಲ್ಲಿ ಕೂಡಲೇ ಕಾರ್ಯ ಪ್ರವೃತ್ತರಾಗಬೇಕು. ಮನೆ, ಆಹಾರ ಮತ್ತು ಆರೋಗ್ಯಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಸಂಬಂಧಿಸಿದ ಸಚಿವರು ಒಟ್ಟಾಗಿ ಕಾರ್ಯ ನಿರ್ವಹಿಸಲು, ಬಿಗಿಯಾದ ಪ್ರತಿಬಂಧಕ ಕ್ರಮಗಳನ್ನು ಕೈಗೊಳ್ಳಲು ಮುಂದಾಗಬೇಕು. ಆಹಾರ ಪದಾರ್ಥಗಳ ಕಲಬೆರಕೆ, ಅದರ ಸರಬರಾಜಿನ ಮೂಲದಲ್ಲೇ ನಡೆಯುತ್ತದೆ ಎಂಬುದು ಸ್ಪಷ್ಟ. ಹಾಗಾಗಿ ಸರ್ಕಾರಕ್ಕೆ ಇದನ್ನು ನಿಯಂತ್ರಿಸಲು ಕಷ್ಟವೇನೂ ಆಗಲಾರದು. ಪ್ರತಿಯೊಂದು ಕ್ಷೇತ್ರದಲ್ಲೂ ಪ್ರಾಮಾಣಿಕತೆಗೆ ಹೆಚ್ಚಿನ ಗಮನ ನೀಡಬೇಕು ಎಂಬುದು ನನ್ನ ವಿನಂತಿ. ನೈತಿಕ ಮತ್ತು ಬೌದ್ಧಿಕ ಪ್ರಾಮಾಣಿಕತೆ ಇಲ್ಲದೆ ಹೋದರೆ ದೇಶದಲ್ಲಿ ಯಾವುದೇ ಪ್ರಗತಿ ನಿರೀಕ್ಷಿಸಲು ಸಾಧ್ಯವಿಲ್ಲ."

ದೇಶದ ಪ್ರಗತಿಗೆ ಅಡ್ಡಿಯಾಗಿ ನಿಂತ ಅನೇಕ ವಿಷಯಗಳ ಬಗ್ಗೆ ಅವರ ವಿಚಾರಗಳು ಹೆಚ್ಚು ಕರಾರುವಕ್ಕಾಗಿದ್ದವು. ವರದಕ್ಷಿಣೆ ನಿಷೇಧ ಮಸೂದೆ ಕುರಿತಂತೆ ಮಾತನಾಡುತ್ತ ಅವರು ಹೀಗೆ ಹೇಳಿದರು:

"ವರದಕ್ಷಿಣೆ ವಿಷಯದಲ್ಲಿ ಭಾರತದಲ್ಲಿನ ಪರಿಸ್ಥಿತಿ ಎಷ್ಟೊಂದು ಭಯಾನಕವಾಗಿದೆ. ಯಾರನ್ನೊ ಮದುವೆ ಮಾಡಿಕೊಳ್ಳಬೇಕೆಂಬ ಬಲವಂತಕ್ಕೆ ಒಳಗಾಗುವ ಹುಡುಗಿಯರು ಮತ್ತು ವರದಕ್ಷಿಣೆ ನೀಡುವ ಬಲವಂತಕ್ಕೆ ಕಟ್ಟುಬಿದ್ದ ಪೋಷಕರು ಯಾವುದೇ ಕಾರಣಕ್ಕೂ ಆತ್ಮಹತ್ಯೆ ಮಾಡಿಕೊಳ್ಳಬಾರದು. ಬದಲಾಗಿ ಅಂತಹ ಸಂದರ್ಭ ಎದುರಾದಾಗ ಹೆಣ್ಣು ಮಕ್ಕಳು ಎದ್ದು ನಿಂತು 'ನಾವು ಮದುವೆಯಾಗುವವರಲ್ಲ' ಎಂದು ತಿರುಗಿ ನಿಲ್ಲಬೇಕು. ಇದು ನನ್ನ ಆಸೆಯಾಗಿದೆ."

ಅವರು ಜನಸಾಮಾನ್ಯರಿಗೆ ಆರೋಗ್ಯಯುತ ಜೀವನ ಪರಿಸ್ಥಿತಿಗಳನ್ನು ಮತ್ತು ವಾತಾವರಣವನ್ನು ಒದಗಿಸಿಕೊಡುವ ವಿಚಾರವನ್ನೇ ಸದಾ ಯೋಚಿಸುತ್ತಿದ್ದರು.'ರೋಗವನ್ನು ಗುಣಪಡಿಸುವುದಕ್ಕಿಂತ ರೋಗ ಬರದಂತೆ ನಿಯಂತ್ರಣ ಮಾಡುವುದೇ ಮೇಲು' ಎಂಬ ತತ್ವದಲ್ಲಿ ಅವರು ನಂಬಿಕೆ ಉಳ್ಳವರಾಗಿದ್ದರು. ಜನಸಾಮಾನ್ಯರ ಅಭ್ಯುದಯ ಸಾಧನೆಯ ವಿಷಯದಲ್ಲೂ ಅವರು ಇದೇ ಸೂತ್ರ ಅನ್ವಯಿಸಿದರು. 1956-57ರ ಮುಂಗಡಪತ್ರದ ಮೇಲೆ ಅವರು ಮಾಡಿದ ಭಾಷಣದಲ್ಲಿ ಈ ಅಂಶ ವ್ಯಕ್ತವಾಗಿದೆ.

"ದೇಶದಲ್ಲಿ ಶುದ್ಧ ಕುಡಿಯುವ ನೀರಿನ ಪೂರೈಕೆಗಾಗಿ ನಾನು ರಾಷ್ಟ್ರವ್ಯಾಪಿ ಕಾರ್ಯಕ್ರಮವೊಂದನ್ನು ಕಾರ್ಯರೂಪಕ್ಕೆ ತರಲು ಮುಂದಾಗಿದ್ದೇನೆ. ಏಕೆಂದರೆ ಶುದ್ಧವಾದ ಕುಡಿಯುವ ನೀರಿನ ವ್ಯವಸ್ಥೆಯಾದರೆ, ವಾಸಿಸಲು ಪ್ರಶಸ್ತವಾದ ಮನೆಗಳು ಒದಗಿದರೆ, ಶುದ್ಧವಾದ ಗಾಳಿ ಮತ್ತು ಬೆಳಕು ಅಲ್ಲಿ ನಿಮಗೆ ದೊರೆತರೆ ಜನರಲ್ಲಿ ಸಂಭವಿಸುವ ರೋಗಗಳ ಪ್ರಮಾಣ ತಾನಾಗಿಯೇ ಕಡಿಮೆಯಾಗುತ್ತದೆ. ಆಸ್ಪತ್ರೆಗಳಲ್ಲಿ ಹಾಸಿಗೆಗಳ ಸಂಖ್ಯೆಯನ್ನು ಏರಿಸುವುದರಿಂದ ಈ ಸಮಸ್ಯೆಯನ್ನು ಪರಿಹರಿಸಲು ಬರುವುದಿಲ್ಲ. ಜನಸಂಖ್ಯೆಗೆ ಅನುಗುಣವಾಗಿ ರೋಗಗಳು ಹೆಚ್ಚುತ್ತಿವೆ. ಸರ್ಕಾರ ಇದಕ್ಕೆ ಪೂರಕವಾಗಿ ಆಸ್ಪತ್ರೆಗಳಲ್ಲಿ ಹಾಸಿಗೆಗಳ ಸಂಖ್ಯೆಯನ್ನು ಏರಿಸಲೇ ಬೇಕಾಗುತ್ತದೆ. ಏಕೆಂದರೆ ಪ್ರತಿಯೊಂದು ಕೆಲಸವು ಏಕಕಾಲದಲ್ಲಿ ಮತ್ತು ಸರಿಸಮಾನವಾಗಿ ನಡೆಯಬೇಕಾಗಿದೆ. ಆದರೆ ನನ್ನ ಸರ್ಕಾರ ರೋಗ ನಿಯಂತ್ರಣಕ್ಕೆ ಹೆಚ್ಚು ಒತ್ತು ನೀಡಿದೆ."

ವಿಶಾಲ [illegible] ಪಟಿಕೆಗಳು ಮತ್ತು ಕಾಳಜಿಯೊಂದಿಗೆ ಬಹುಮುಖ ವ್ಯಕ್ತಿತ್ವ ರೂಪಿಸಿಕೊಂಡ ಕೌರ್ ಸಂಸತ್ತಿನ ಕಲಾಪ ಮತ್ತು ಚರ್ಚೆಗಳಿಗೆ ಹೆಚ್ಚಿನ ತಿರುಳು ತುಂಬಿದರು.

ಅದರ ಗುಣಮಟ್ಟವನ್ನು ಹೆಚ್ಚಿಸಿದರು. ಈ ಮೂಲಕ ಸಂಸತ್ತಿನ ಓರ್ವ ಅಸಾಧಾರಣ ವಾಗ್ಮಿಯಾಗಿ ತಮ್ಮ ಗಾಢಮುದ್ರೆ ಒತ್ತಿ ಪ್ರತಿಯೊಬ್ಬರ ಪ್ರಶಂಸೆಗೆ ಪಾತ್ರರಾದರು.

**ಸಮಾಜ ಸುಧಾರಕಿಯಾಗಿ**

ರಾಜಕೀಯ ಒಂದೇ ಅಲ್ಲದೆ ಸಮಾಜ ಸುಧಾರಣೆ ಮತ್ತು ಸಮಾಜ ಕಲ್ಯಾಣ ಚಟುವಟಿಕೆಗಳಲ್ಲೂ ಅವರು ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಅದರಲ್ಲೂ ಮಹಿಳೆಯರ ಉನ್ನತಿ ಹಾಗೂ ಸಾಧನೆ ಅವರ ಜೀವನದ ಪರಮೋಚ್ಚ ಧ್ಯೇಯವಾಗಿತ್ತು.

ಅಖಿಲ ಭಾರತ ಮಹಿಳಾ ಸಮ್ಮೇಳನದ (ಎಐಡಬ್ಲ್ಯುಸಿ) ಸಂಸ್ಥಾಪಕ ಸದಸ್ಯೆ. 1930ರಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನದ ಕಾರ್ಯದರ್ಶಿಯಾಗಿದ್ದ ಅವರು 1931-33ರಲ್ಲಿ ಅದರ ಅಧ್ಯಕ್ಷೆಯಾಗಿ ಕಾರ್ಯ ನಿರ್ವಹಿಸಿದರು. ಈ ಸಂಘಟನೆಯನ್ನು ಕಟ್ಟುವಲ್ಲಿ ಸಹಕರಿಸಿದ್ದು ಮಾತ್ರವಲ್ಲ, ಇದರ ಕಾರ್ಯವ್ಯಾಪ್ತಿಯನ್ನು ದೇಶದ ಮೂಲೆ ಮೂಲೆಗೂ ಮುಟ್ಟುವಂತೆ ಅದನ್ನು ವಿಸ್ತರಿಸಿದರು. ಅನೇಕ ಸಂದರ್ಭಗಳಲ್ಲಿ ವಿದೇಶಗಳಲ್ಲಿಯೂ ಸಂಘಟನೆಯನ್ನು ಪ್ರತಿನಿಧಿಸಿದರು. 'ಸಂಘಟನೆಯೇ ಕೌರ್ -ಕೌರ್ ಎಂದರೇ ಸಂಘಟನೆ' ಎಂಬಷ್ಟರ ಮಟ್ಟಿಗೆ ಅವರು ಅದರ ಅವಿಭಾಜ್ಯ ಅಂಗವಾಗಿದ್ದರು. ಕೌರ್ ಅವರು ಈ ಸಂಘಟನೆಯನ್ನು ಶಾಂತಿ ಮತ್ತು ಕೋಮು ಸಾಮರಸ್ಯ ಪ್ರಸರಣದ ವೇದಿಕೆಯನ್ನಾಗಿ ಪರಿವರ್ತಿಸಿದರು. ಅಬೇತಾಬಾದ್‌ನಲ್ಲಿ ನಡೆದ ಸಂಘಟನೆಯ ಸಮ್ಮೇಳನದಲ್ಲಿ ಭಾರತವನ್ನು ವಿಭಜಿಸಬೇಕೆಂಬ ಕೆಲವರ ಸಂಚಿಗೆ ಹಿಂದೂ- ಮುಸ್ಲಿಂ ಸಹೋದರಿಯರ ಸ್ನೇಹ ಹಾಗೂ ಆತ್ಮೀಯ ಸಂಬಂಧಗಳು ಅಡ್ಡಿಯಾಗಿವೆ ಎಂದಿದ್ದರು. ಮಹಿಳಾ ಹಕ್ಕುಗಳ ಪ್ರತಿಪಾದಕಿಯಾಗಿದ್ದ ಅವರು ಓರ್ವ ಕಟ್ಟಾ ವಾಸ್ತವವಾದಿಯಾಗಿದ್ದರು.

ಮಹಿಳೆಯರ ಕಲ್ಯಾಣ ಸಾಧನೆಯಲ್ಲಿ ಓರ್ವ ಅವಿಶ್ರಾಂತ ಹೋರಾಟಗಾರ್ತಿಯಾಗಿದ್ದ ಕೌರ್ ಸಾರ್ವತ್ರಿಕ ಶಿಕ್ಷಣದ ಕಟ್ಟಾ ಪ್ರತಿಪಾದಕಿಯಾಗಿದ್ದರು. ಹಿಂದೂಸ್ತಾನಿ ತಾಲಿಮಿ ಸಂಘ ಮತ್ತು ನಾನ್‌ಕಾನ್ ಸಾಹೇಬ್ ಶಿಕ್ಷಣ ಮಂಡಳಿಯ ಧರ್ಮದರ್ಶಿಯಾಗಿದ್ದರು. ದೆಹಲಿಯ ಲೇಡಿ ಇರ್ವಿನ್ ಕಾಲೇಜಿನ ಸಂಸ್ಥಾಪಕ ಸದಸ್ಯೆ. ಮಹಿಳಾ ಶಿಕ್ಷಣದ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ಕೌರ್ ಮಹಿಳೆಯರ ಹಕ್ಕು ಮತ್ತು ಶಿಕ್ಷಣದ ಬಗೆಗಿನ ಅನೇಕ ಶಾಸನಗಳ ಹಿಂದಿನ ಚಾಲಕ ಶಕ್ತಿಯಾಗಿದ್ದರು. ಮಹಿಳಾ ಹಕ್ಕುಗಳು ಮತ್ತು ಶಿಕ್ಷಣಕ್ಕೆ ಸಂಬಂಧಿಸಿದ ಮಸೂದೆಗಳು ಸಂಸತ್ತಿನಲ್ಲಿ ಮಂಡನೆಗೊಂಡು ಅಂಗೀಕಾರ ಪಡೆಯುವಲ್ಲಿ ಅವರ ಪಾತ್ರ ಹಿರಿದು. ಮಹಿಳೆಯರ ಪ್ರಗತಿಗೆ ಅಡ್ಡಿಯಾಗಿ ನಿಂತ ಅನೇಕ ಸಂಪ್ರದಾಯಗಳು ಮತ್ತು ಕಂದಾಚಾರಗಳನ್ನು ತ್ಯಜಿಸುವಂತೆ ಮಹಿಳೆಯರಿಗೆ ಹೆಚ್ಚಿನ ಒತ್ತಾಸೆ ನೀಡಿದ್ದರು.ದೆಹಲಿಯ ಲೇಡಿ ಇರ್ವಿನ್ ಕಾಲೇಜಿನ ಘಟಿಕೋತ್ಸವ ಭಾಷಣದಲ್ಲಿ ಅವರು ಹೀಗೆ ಹೇಳಿದ್ದಾರೆ;

"ಮಹಿಳೆಯರು ಧರ್ಮಕ್ಕೆ ಸರಿಯಾಗಿ ನಡೆದುಕೊಳ್ಳಬೇಕು ಎಂಬುದನ್ನು ನಿಮಗೆ ಹೇಳಲು ಇಚ್ಛಿಸುತ್ತೇನೆ. ಆದರೆ ಈ ಧರ್ಮ ಜಡಸಂಪ್ರದಾಯದ ಅಂಧ ಶ್ರದ್ಧೆಯಾಗಬಾರದು. ಧರ್ಮ ಎಂಬುದು ಹೃದಯದಲ್ಲಿ ಪ್ರೀತಿ, ಕರುಣೆಗಳನ್ನು ಹುಟ್ಟಿಹಾಕಬೇಕು ಶ್ರದ್ಧೆಯನ್ನು ಮೂಡಿಸಬೇಕು ಮತ್ತು ನ್ಯಾಯ ಪರವಾಗಿರಬೇಕು".

ಪುರುಷ-ಮಹಿಳೆಯರಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕೆಂದು ಪ್ರತಿಪಾದಿಸಿದ ಕೌರ್ ಅವರು ಮಹಿಳೆಯರನ್ನು ಈ ಸೌಲಭ್ಯದಿಂದ ಬಹಳ ದಿನ ವಂಚಿತರನ್ನಾಗಿ ಮಾಡಲು ಸಾಧ್ಯವಿಲ್ಲ ಎಂದು ನಂಬಿದ್ದರು. ಈ ವ್ಯವಸ್ಥೆಯಲ್ಲಿ ತಾವು ತರಬಯಸಿದ್ದ ಸುಧಾರಣೆಗಳ ಬಗ್ಗೆ ಅವರು ಈ ರೀತಿ ಹೇಳಿದ್ದಾರೆ:

"ಶೈಕ್ಷಣಿಕ ಸುಧಾರಣೆಗಳ ವ್ಯಾಪ್ತಿಯಲ್ಲಿ ನಾವು ಮೊದಲಿನಂದಲೂ ಮುಕ್ತ ಮತ್ತು ಕಡ್ಡಾಯ ಶಿಕ್ಷಣವನ್ನು ಒದಗಿಸಬೇಕಾದ ಅಗತ್ಯವನ್ನು ಪ್ರತಿಪಾದಿಸುತ್ತಾ ಬಂದಿದ್ದೇವೆ. ಮಹಿಳೆಯರಿಗೆ ಶಿಕ್ಷಣ ನೀಡಲು ಸೂಕ್ತ ಸೌಕರ್ಯಗಳನ್ನುಕಲ್ಪಿಸಿಕೊಡುವ ನಿಟ್ಟಿನಲ್ಲಿ ನಾವು ಈಗ ಕಾರ್ಯತತ್ಪರರಾಗಬೇಕಾಗಿದೆ. ಸಾರ್ವತ್ರಿಕ, ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ, ಶಿಶು ಮತ್ತು ಬಾಲಕಿಯರ ಶಾಲೆಗಳಿಗೆ ಸೂಕ್ತ ಶೈಕ್ಷಣಿಕ ಸಲಕರಣೆಗಳ ಸರಬರಾಜು ಹಾಗು ತರಬೇತಿ ಹೊಂದಿದ್ದ ಶಿಕ್ಷಕಿಯರ ನೇಮಕ ಇವುಗಳ ಕಡೆಗೆ ಗಮನ ಹರಿಸಬೇಕು. ಈಗ ಅಸ್ತಿತ್ವದಲ್ಲಿರುವ ಸಂಸ್ಥೆಗಳ ಶಿಕ್ಷಣ ಪದ್ಧತಿಯನ್ನು ಬದಲಾಯಿಸುವ ನಿಟ್ಟಿನಲ್ಲೂ ನಾವು ಈ ಪ್ರಯತ್ನಗಳನ್ನು ಮುಂದುವರಿಸಬೇಕಾಗಿದೆ."

1942ರಲ್ಲೇ ತಾವು ಬರೆದಿದ್ದ ಲೇಖನವೊಂದರಲ್ಲಿ ಮಹಿಳೆಯರ ಅಭ್ಯುದಯ ಸಾಧನೆಯ ನಿಟ್ಟಿನಲ್ಲಿ ಇನ್ನೂ ಭ್ರೂಣಾವಸ್ಥೆಯಲ್ಲಿದ್ದ ತಮ್ಮ ವಿಚಾರಗಳನ್ನು ಅವರು ಈ ರೀತಿ ಮುಂದಿಟ್ಟಿದ್ದಾರೆ:

"ದೇಶ ಇಂದು ಎಂತಹ ಚಿಂತಾಜನಕ ಸ್ಥಿತಿಯಲ್ಲಿದೆ ಎಂಬುದನ್ನು ಮತ್ತು ದೇಶವನ್ನು ವಿಮುಕ್ತಿಗೊಳಿಸುವಲ್ಲಿ ಅವರು ಎಂತಹ ಪಾತ್ರ ವಹಿಸಬೇಕೆಂಬುದನ್ನು ನಾವು ಮಹಿಳೆಯರಿಗೆ ಮನವರಿಕೆ ಮಾಡಿಕೊಡಬೇಕಾಗಿದೆ. ಅವರಲ್ಲಿ ನಿಹಿತವಾಗಿರುವ ಅಗಾಧ ಸಾಮರ್ಥ್ಯದ ಬಗ್ಗೆ ಅರಿವು ಮೂಡಿಸಬೇಕಾಗಿದೆ. ದೈಹಿಕ ಬಲದ ಎಲ್ಲ ರೀತಿಯ ದಾಳಿಗಳನ್ನು, ಆಕ್ರಮಣಗಳನ್ನು ನೈತಿಕ ಸಾಮರ್ಥ್ಯದಿಂದ ಎದುರಿಸುವುದು ಸಾಧ್ಯ ಎಂಬ ನಂಬಿಕೆಯನ್ನು ನಾವು ನಮ್ಮೊಳಗೆ ರೂಢಿಸಿಕೊಳ್ಳದ ಹೊರತು ನಮ್ಮ ಕೀಳರಿಮೆಯನ್ನು ನಾವು ತೊಡೆದು ಹಾಕಲು ಸಮರ್ಥರಾಗಲಾರೆವು ಎಂಬುದು ನನ್ನ ಅಚಲ ನಂಬಿಕೆಯಾಗಿದೆ. ಲಕ್ಷಾಂತರ ವರ್ಷಗಳಿಂದ ಪುರುಷ ಪ್ರಾಬಲ್ಯದಲ್ಲಿ ಬೆಳೆದುಬಂದಿರುವ ಪರಿಣಾಮ ಅದು. ಬಲಿಷ್ಠವೇ ಸರಿ ಎಂಬ ಸೂತ್ರವನ್ನು ನಿರಾಕರಿಸಲು ಸಮರ್ಥರಾಗದ ಹೊರತು ಹೊಸ ಜಗತ್ತೊಂದನ್ನು ಸ್ಥಾಪಿಸುವುದು ಸಾಧ್ಯವಿಲ್ಲದ ಮಾತು."

ಕೌರ್ ಅವರ ಪ್ರಯತ್ನಗಳು ಯಾವುದೇ ಒಂದು ನಿರ್ದಿಷ್ಟ ಕ್ಷೇತ್ರಕ್ಕೆ ಸೀಮಿತವಾಗಿರಲಿಲ್ಲ; ತಮ್ಮ ಸುಧಾರಣೆಯ ಮನೋಭಾವವನ್ನು ಎಲ್ಲ ದಿಕ್ಕುಗಳಿಗೂ ಅವರು ವಿಸ್ತರಿಸಿದರು. ಆರೋಗ್ಯ ಮತ್ತು ವೈದ್ಯಕೀಯ ಕ್ಷೇತ್ರದಲ್ಲಿನ ಅವರ ಆಸಕ್ತಿ 1934 ರಲ್ಲೇ ಜಲಂಧರ್ ಕ್ಷಯರೋಗ ನಿರೋಧಕ ಕೇಂದ್ರ ಮತ್ತು ಶಿಶು ಕಲ್ಯಾಣ ಕೇಂದ್ರಗಳ ಸ್ಥಾಪನೆಯಲ್ಲಿ ಕಾಣಬಹುದು. ಅದಲ್ಲದೆ ಭಾರತೀ ರೆಡ್ ಕ್ರಾಸ್ ಸೊಸೈಟಿಯ ಜೊತೆಗೂ ಅವರು ನಿಕಟ ಸಂಪರ್ಕ ಇರಿಸಿಕೊಂಡಿದ್ದರು. 1950ರ ದಶಕದಲ್ಲಿ ಅದರ ಸಂಸ್ಥಾಪಕ ಸದಸ್ಯ ಹಾಗೂ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿದ್ದರು. 1957ರಲ್ಲಿ ಬರ್ನಾಡಾಟ್ ಚಿನ್ನದ ಪದಕ ದೊರೆಯಿತು. ಇದು ಯೂರೋಪ್, ಏಷ್ಯಾ, ಅಮೆರಿಕದ ಹದಿನಾಲ್ಕು ರಾಷ್ಟ್ರಗಳ ಪ್ರಾತಿನಿಧ್ಯದ ಲೀಗ್ ಆಫ್ ರೆಡ್‌ಕ್ರಾಸ್‌ಸೊಸೈಟಿ ನೀಡಿದ ಪ್ರಶಸ್ತಿ. ಜಾಗತಿಕ ಆರೋಗ್ಯ ಸಮ್ಮೇಳನ ಮತ್ತು ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ಅವರು ಭಾರತವನ್ನು

ಪ್ರತಿನಿಧಿಸಿದ್ದರು. ಭಾರತೀಯ ಶಿಶು ಕಲ್ಯಾಣ ಮಂಡಳಿ ಸ್ಥಾಪನೆಗೆ ಕಾರಣಕರ್ತರಾದ ಅವರು 1948-58ರವರೆಗೆ ಅದರ ಸ್ಥಾಪಕ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಈ ದಿನಗಳಲ್ಲಿ ದೇಶದಲ್ಲಿ ಶಿಶು ಕಲ್ಯಾಣ ಕಾರ್ಯಕ್ರಮಗಳ ಸಮನ್ವಯ ಮತ್ತು ಸಂಯೋಜನೆಗೆ ಅವರು ಸಹಾಯ ನೀಡಿದರು. ಶಿಶು ಕಲ್ಯಾಣದ ಬಗ್ಗೆ ಬಾಯಿ ಮಾತಿನ ಉಪಚಾರಕ್ಕೆ ಬದಲಾಗಿ ರಚನಾತ್ಮಕ ಹೆಜ್ಜೆಗಳನ್ನು ಇರಿಸಬೇಕಾದ ಪ್ರಾಮುಖ್ಯವನ್ನು ಒತ್ತಿಹೇಳಿದರು.1955ರ ನವೆಂಬರ್ 14 ರಂದು ಆಕಾಶವಾಣಿಯಲ್ಲಿ ಮಾಡಿದ ಭಾಷಣದಲ್ಲಿ ಹೀಗೆಂದಿದ್ದಾರೆ;

"ಮಕ್ಕಳಿಗೆ ಜಾತಿ, ಧರ್ಮ, ಭಾಷೆಗಳ ಸೀಮೆಗಳಿಲ್ಲ. ಬಡತನ-ಸಿರಿವಂತಿಕೆ ಎಂಬ ಪಂಭೇದವೂ ಅವರಿಗಿಲ್ಲ. ಇಂತಹ ಗುಣಗಳನ್ನು ನಮ್ಮಲ್ಲಿಯೂ ನಾವು ಬೆಳೆಸಿಕೊಳ್ಳುವ ಅಗತ್ಯವಿದೆ. ಆಗ ಮಾತ್ರವೇ ಅವರಿಗೆ ಬೇಕಾಗಿರುವ ದೈಹಿಕ, ಮಾನಸಿಕ ಮತ್ತು ನೈತಿಕ ಪೋಷಣೆ ನೀಡುವ ಅರ್ಹತೆ ನಮಗೆ ಬರುತ್ತದೆ."

### ಕ್ರೀಡಾ ಪ್ರೇಮಿಯಾಗಿ

ರಾಜಕುಮಾರಿ ಅಮೃತ ಕೌರ್ ಅಸಾಧಾರಣಾ ಕ್ರೀಡಾಪ್ರೇಮಿಯಾಗಿದ್ದರು. ಕ್ರಿಕೆಟ್, ಹಾಕಿ ಮತ್ತು ಟೆನ್ನಿಸ್ ಆಟಗಳನ್ನು ಚೆನ್ನಾಗಿ ಆಡಬಲ್ಲವರಾಗಿದ್ದರು. ಕ್ರೀಡೆ ಅವರ ದೃಷ್ಟಿಯಲ್ಲಿ ಅಧ್ಯಯನದಷ್ಟೇ ಪ್ರಮುಖವಾಗಿತ್ತು. ಅವರು ಒಂದು ಕಡೆ ಹೀಗೆ ಬರೆದಿದ್ದಾರೆ:

"ಕ್ರೀಡೆ ಮತ್ತು ಆಟೋಟಗಳಿಗೆ ಸೂಕ್ತ ಮೈದಾನಗಳಿಲ್ಲದ ಹೊರತುಯಾವುದೇ ಶಾಲಾ ಕಾಲೇಜುಗಳಿಗೆ ರಾಜ್ಯ ಸರ್ಕಾರಗಳು ಮನ್ನಣೆ ನೀಡಬಾರದು. ಕ್ರೀಡಾ ಸೌಕರ್ಯಗಳಿಗೆ ಭಾರಿ ವೆಚ್ಚವೇನು ತಗಲುವುದಿಲ್ಲವಾದ್ದರಿಂದ ಗ್ರಾಮೀಣ ಪ್ರದೇಶಗಳು ಒಳಗೊಂಡಂತೆ ಎಲ್ಲೇ ಆದರೂ ಅವುಗಳನ್ನು ಸುಲಭವಾಗಿ ಒದಗಿಸಬಹುದು. ಇನ್ನು ಹುಡುಗಿಯರು ಕ್ರೀಡೆಗಳಲ್ಲಿ ಭಾಗವಹಿಸುವಂತೆ ಉತ್ತೇಜನ ನೀಡಲು ಅವರಿಗೆ ಹೆಚ್ಚಿನ ಸಹಾಯ ಮತ್ತು ಈ ನಿಟ್ಟಿನಲ್ಲಿ ಹೆಚ್ಚಿನ ಗಮನ ಹರಿಸಬೇಕೆಂದು ನಾನು ಬಲವಾಗಿ ಪ್ರತಿಪಾದಿಸುತ್ತೇನೆ. ನಮ್ಮ ಯುವಕರು ಕ್ರೀಡೆ ಮತ್ತು ಆಟೋಟಗಳನ್ನು ಒಂದು ವೃತ್ತಿಯಾಗಿ ಅಂಗೀಕರಿಸುವಂತೆ ಹೆಚ್ಚಿನ ಪ್ರೋತ್ಸಾಹ ಮತ್ತು ಉತ್ತೇಜನ ನೀಡಬೇಕು. ಇದೆಲ್ಲವನ್ನು ಕಾರ್ಯರೂಪಕ್ಕೆ ತಂದರೆ ಕ್ರೀಡೆಗಳು ಮತ್ತು ಆಟೋಟಗಳು ತಾವಾಗಿಯೇ ಜೀವನದ ಅವಿಭಾಜ್ಯ ಅಂಗವಾಗಿ ಪರಿಣಮಿಸುವುವು."

ಭಾರತ ನ್ಯಾಷನಲ್ ಸ್ಪೋರ್ಟ್ಸ್ ಕ್ಲಬ್‌ನ ಸ್ಥಾಪಕ ಅಧ್ಯಕ್ಷೆಯಾಗಿ (1949-59) ಕ್ರೀಡಾ ಚಟುವಟಿಕೆಗಳ ವಿಸ್ತರಣೆಯಲ್ಲಿ ಅವರು ಪ್ರಧಾನ ಪಾತ್ರ ವಹಿಸಿದರು. ಅದೇ ವೇಳೆಗೆ ರಾಷ್ಟ್ರೀಯ ಕ್ರೀಡಾ ಸಂಸ್ಥೆಯ ಅಧ್ಯಕ್ಷೆರಾಗಿದ್ದರು. 1953-1961ರವರೆಗೆ ರಾಜಕುಮಾರಿ ಕ್ರೀಡಾ ತರಬೇತಿ ಯೋಜನೆಯ ಅಧ್ಯಕ್ಷೆಯಾಗಿದ್ದರು. ಅದೇ ರೀತಿ ಅಖಿಲ ಬಾರತ ಹಸಿರು ಹಾಸಿನ(ಲಾನ್) ಟೆನ್ನಿಸ್ ಒಕ್ಕೂಟದ ಅಧ್ಯಕ್ಷೆಯಾಗಿ, ಭಾರತದ ಟೇಬಲ್ ಟೆನ್ನಿಸ್ ಅಸೋಸಿಯೇಷನ್ ಅಧ್ಯಕ್ಷೆಯಾಗಿ ಕಾರ್ಯ ನಿರ್ವಹಿಸಿದರು. ಆಕೆಯ ಕ್ರೀಡಾ ಪ್ರೇಮ ಎಷ್ಟರಮಟ್ಟಿಗೆ ಇತ್ತೆಂದರೆ ಒಂದು ಬಾರಿ ಅವರು ಅಚ್ಚ ಬಿಳಿಯ ಪೋಷಾಕು ಧರಿಸಿ ಕೈಯಲ್ಲಿ ಕಿಟ್ ಮತ್ತು ಟೆನಿಸ್ ರಾಕೆಟ್ ಹಿಡಿದು ದೆಹಲಿಯಲ್ಲಿ ನಡೆದ ಸಾರ್ವಜನಿಕ ಸಭೆಯೊಂದಕ್ಕೆ ಬಂದು ಬಿಟ್ಟರು.

## ನಿರ್ಭಯ ಹೋರಾಟಗಾರ್ತಿ,ನೈಜ ಮಾನವತಾವಾದಿ

ಸರಳತೆ ಮತ್ತು ದೇಶವಾಸಿಗಳ ಬಗೆಗಿನ ಅಮಿತ ಪ್ರೇಮ ಹೊಂದಿದ್ದ ರಾಜಕುಮಾರಿ ಅಮೃತ ಕೌರ್ ಅವರು ಹಿರಿಮೆ, ಜಾತಿ, ಕುಲ, ಲಿಂಗ, ಪಂಥ ಮತ್ತು ಸಾಮಾಜಿಕ ಸ್ಥಾನಮಾನಗಳ ಪರಿವೇ ಇಲ್ಲದೆ ಎಲ್ಲ ಜನರ ಬಗೆಗೂ ಸಮಾನವಾದ ಕಾಳಜಿ ಹೊಂದಿದ್ದರು. ಪ್ರೇಮ, ವಿನಯ, ಸಹಾನುಭೂತಿ, ಕರುಣೆ ಮತ್ತು ನ್ಯಾಯಪರತೆ ಈ ಎಲ್ಲಾ ವಿಶೇಷ ಗುಣಗಳ ಮೂರ್ತಿವೆತ್ತಂತೆ ಇದ್ದವರು ಕೌರ್. ನೂರಕ್ಕೆ ನೂರರಷ್ಟು ಮಾನವತಾವಾದಿಯಾಗಿದ್ದ ಅವರ ಹೃದಯ ಸದಾ ಬಡವರು ಮತ್ತು ಅಸಹಾಯಕರಿಗಾಗಿ ತುಡಿಯುತ್ತಿತ್ತು. ತಮ್ಮ ಜೀವನದ ಬಹುತೇಕ ಭಾಗವನ್ನು ಮಹಿಳೆಯರ ಉನ್ನತಿ ಸಾಧನೆ ಮತ್ತು ಸಾಮಾಜಿಕ ಅನಿಷ್ಟಗಳ ನಿರ್ಮೂಲನೆಗಾಗಿ ವ್ಯಯಿಸಿದರು.

ಗಾಂಧೀಜಿಯವರ ಪ್ರಭಾವದಿಂದಾಗಿ ಅಸ್ಪೃಶ್ಯರ ಕುರಿತಾಗಿಯೂ ರಾಜಕುಮಾರಿ ಅಮೃತ ಕೌರ್ ಅವರಿಗೆ ವಿಶೇಷ ಕಾಳಜಿ ಇತ್ತು. ಶತ ಶತಮಾನಗಳ ಕಾಲ ಜೀವನ ಮತ್ತು ಶಿಕ್ಷಣದ ಮೂಲಭೂತ ಸೌಕರ್ಯಗಳಿಂದ ವಂಚಿತರಾದ ಅಸ್ಪೃಶ್ಯರ ಬಗೆಗೆ ಮರುಗಿ ಅವರು ಹೀಗೆ ಬರೆದಿದ್ದಾರೆ:

"ಜಾತಿಯ ಕಾರಣಕ್ಕಾಗಿಯೇ ಸಮಾಜದಲ್ಲಿ ದಮನಕ್ಕೆ ಒಳಗಾದವರ ಬಗ್ಗೆ ಸಹಜವಾಗಿ ನಮ್ಮ ಸಹಾನುಬೂತಿ ಇದೆ. ನಮ್ಮ ಕಲ್ಯಾಣಕ್ಕಾಗಿಯೇ ಶ್ರಮಿಸುತ್ತಿರುವ ಮತ್ತು ಯಾರ ಸೇವೆ ಇಲ್ಲದೆ ನಾವು ಬದುಕನ್ನು ಸಾಗಿಸಲು ಸಾಧ್ಯವಿಲ್ಲವೋ ಅಂತಹ ಮಂದಿ ಅತ್ಯಂತ ಅಸಹ್ಯಕರ ಸ್ಥಿತಿಯಲ್ಲಿ ಬದುಕುತ್ತಿರುವುದು ತೀರಾ ಅಪಮಾನಕಾರಿ. ಅವರ ವಾಸದ ಗುಡಿಸಲುಗಳನ್ನು ಜೋಪಡಿಗಳೆಂದಾದರೂ ಕರೆಯಬಹುದೇ? ಅವಮಾನ, ಕೀಳರಿಮೆಯ ಮನೋಸ್ಥಿತಿಯಿಂದ ಈ ವರ್ಗದವರನ್ನು ವಿಮುಕ್ತಗೊಳಿಸಲು ಸೂಕ್ತವಾದ ಶಿಕ್ಷಣ ನೀಡುವುದೊಂದೇ ನಿಶ್ಚಿತವಾದ ಏಕೈಕ ಮಾರ್ಗವಾಗಿದೆ."

ಅಂದಿನ ಭಾರತೀಯ ಸಮಾಜದಲ್ಲಿ ಚಾಲ್ತಿಯಲ್ಲಿದ್ದ ಪರ್ದಾ ಮತ್ತು ಬಾಲ್ಯವಿವಾಹ ಪದ್ಧತಿಯಂತಹ ಸಾಮಾಜಿಕ ಅನಿಷ್ಟಗಳನ್ನು ರಾಜಕುಮಾರಿ ಉಗ್ರವಾಗಿ ವಿರೋಧಿಸಿದರು."ಬಾಲ್ಯ ವಿವಾಹ ಎಂಬುದು ಭಾರತದ ರಾಷ್ಟ್ರೀಯ ಜೀವನದ ತಿರುಳನ್ನೇ ತಿಂದುಹಾಕುವ ಗೆದ್ದಲು ಹುಳು." ಎಂದು ವರ್ಣಿಸಿದ್ದರು. ಪರ್ದಾ ಬಗ್ಗೆ ಅವರು ಹೀಗೆ ಬರೆದರು:

"ನಾನು ಸರ್ವಾಧಿಕಾರಿ ವ್ಯವಸ್ಥೆಯಲ್ಲಿ ನಂಬಿಕೆ ಉಳ್ಳವಳಾಗಿದ್ದರೆ ನಾನು ಮಾಡುವ ಮೊಟ್ಟಮೊದಲು ಕೆಲಸವೆಂದರೆ ಪರ್ದಾ ಪದ್ಧತಿಯನ್ನು ನಿಷೇಧಿಸುವುದು. ಈ ಪದ್ದತಿಯನ್ನು ಮುಂದುವರಿಸುವ ವಿಚಾರವನ್ನು ಪ್ರತಿಪಾದಿಸುವ ಪುರುಷರು ಈ ವಿಚಾರದಲ್ಲಿ ತುಸು ಯೋಚಿಸಬೇಕು. ಅದೇ ವೇಳೆಗೆ ಇದರ ವ್ಯಾಪ್ತಿಗೆ ಒಳಪಡುವ ಪ್ರತಿಯೊಬ್ಬ ಮಹಿಳೆ ಇದನ್ನು ಪ್ರತಿಭಟಿಸಬೇಕು."

ಅವರು ಮುಂದುವರಿದು:"ಬಾಲ್ಯವಿವಾಹ ಮತ್ತು ಪರ್ದಾ ಪದ್ಧತಿಯ ನಿರ್ಮೂಲನೆ ಲಕ್ಷಾಂತರ ಮಂದಿ ಮಹಿಳೆಯರ ಆರೋಗ್ಯವನ್ನು ಸುಧಾರಿಸುವುದಷ್ಟೇ ಅಲ್ಲ ಮಹಿಳಾ ಶಿಕ್ಷಣದ ಪ್ರಕ್ರಿಯೆಗೆ ಇರುವ ಈ ಎರಡು ಪ್ರಧಾನ ತೊಡಕುಗಳನ್ನು ನಿವಾರಿಸಿದಂತಾಗುವುದು."

ಸುಶಿಕ್ಷಿತ ಮತ್ತು ಶ್ರೀಮಂತ ಮಹಿಳೆಯರು ತಮ್ಮ ನಡುವೆ ಇರುವ ಬಡ ಮಹಿಳೆಯರ ಏಳಿಗೆಗಾಗಿ ಹೆಚ್ಚಿನ ಪ್ರಯತ್ನ ನಡೆಸಬೇಕೆಂದು ಅವರು ಅಗ್ರಹ ಪಡಿಸುತ್ತಿದ್ದರು. ಅವರು ಒಂದು ಕಡೆ"ಸುಶಿಕ್ಷಿತ ಮಹಿಳೆಯರು ತಮ್ಮ ಬಿಡುವಿನ ಪ್ರತಿಯೊಂದು ಕ್ಷಣವನ್ನೂ ಬಡ ಮಹಿಳೆಯರಿಗೆ ಮೀಸಲಿಡಬೇಕು. ಅವರಿಗೆ ಅಗತ್ಯವಿರುವ ಭರವಸೆ ಮತ್ತು ಉತ್ಸಾಹವನ್ನು ತುಂಬಿಸಬೇಕು ಎಂಬುದೇ ನನ್ನ ಸಹೋದರಿಯರಿಗೆ ನನ್ನ ಕಳಕಳಿಯ ಮನವಿ."ಎಂದು ಬರೆದಿದ್ದಾರೆ.

ರಾಜ ಮನೆತನದಲ್ಲಿ ಹುಟ್ಟಿದವರಾಗಿದ್ದರೂ ರಾಜಕುಮಾರಿ ಅಮೃತ ಕೌರ್ ಅವರು ಯಾವುದೇ ರೀತಿಯ ಆಡಂಬರವಿಲ್ಲದ ಸರಳ ಮತ್ತು ಸಾತ್ವಿಕ ಬದುಕು ಸಾಗಿಸಿದವರು. ದೇಶದ ಅರ್ಥ ವ್ಯವಸ್ಥೆಯನ್ನು ಪುನರ್ ಸಂಘಟಿಸಲು ಮತ್ತು ಎಲ್ಲ ಪ್ರಜೆಗಳಿಗೆ ಕನಿಷ್ಠ ಎರಡು ಹೊತ್ತಿನ ಊಟವನ್ನಾದರೂ ಒದಗಿಸಲು ಹೋರಾಡುತ್ತಿರುವ ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ವೈಭವೋಪೇತ ಜೀವನ ಸರಿಯಲ್ಲ ಎಂಬುದು ಅವರ ನಿಲುವಾಗಿತ್ತು. ದುಂದುವೆಚ್ಚ ಮಾಡುತ್ತಿದ್ದವರನ್ನು ಅವರು ಸಹಿಸುತ್ತಿರಲಿಲ್ಲ.

"ದೇಶದ ಬಹುತೇಕ ಜನರಿಗೆ ಒಂದು ಹೊತ್ತಿನ ಊಟಕ್ಕೂ ತತ್ವಾರವಾಗಿರುವಾಗ, ತಮ್ಮ ಮಕ್ಕಳಿಗೆ ಕುಡಿಯಲು ಹಾಲು,ತೊಟ್ಟುಕೊಳ್ಳಲು ಬಟ್ಟೆ ಮತ್ತು ತಲೆಗೊಂದು ಸೂರು ಕೊಡಲು ಅಸಮರ್ಥರಾಗಿರುವಾಗ ಪಾರ್ಟಿಗಳ ಹೆಸರಿನಲ್ಲಿ ಆಹಾರ ಪದಾರ್ಥ, ಬಟ್ಟೆಬರೆ, ಚಿನ್ನಾಭರಣ ಹಾಗೂ ವಿಲಾಸಿ ವಸ್ತುಗಳಿಗಾಗಿ ದುಂದುವೆಚ್ಚ ಮಾಡುವುದು ಮಾನವೀಯತೆಯಲ್ಲ."ಎಂದು ಅವರು ಒಂದು ಕಡೆ ಹೇಳಿದ್ದಾರೆ.

ಆಕೆ ಸದಾ ಸ್ವದೇಶಿ ವಸ್ತುಗಳ ಬಳಕೆಯ ಪರವಾಗಿದ್ದರು. ಮತ್ತು ಅದರ ಮಹತ್ವವನ್ನು ಜನರು ಮನಗಾಣಬೇಕು ಎಂದು ಆಕೆ ಬಯಸಿದ್ದರು. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರು ಖಾದಿಯ ಪ್ರಚಾರ ನಡೆಸಿದರು. ಹರಿದು ಹಂಚಿ ಹೋಗಿದ್ದ ರಾಷ್ಟ್ರ ಜೀವನದ ಎಳೆಗಳನ್ನು ಜೋಡಿಸಿ ಮತ್ತೆ ಒಂದುಗೂಡಿಸಲು ಅದು ಪೂರಕ ಪಾತ್ರ ವಹಿಸುತ್ತದೆ. ಭಾರತೀಯರು ಕಣ್ಣು ಮುಚ್ಚಿ ವಿದೇಶಿಯರನ್ನು ಅನುಸರಿಸುವುದನ್ನು ಅವರು ಒಪ್ಪುತ್ತಿರಲಿಲ್ಲ. ಬದಲಾಗಿ ಪ್ರತಿಯೊಬ್ಬ ಭಾರತೀಯನೂ ರಾಷ್ಟ್ರಾಭಿಮಾನದ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕೆಂಬುದು ಅವರ ಚಿಂತನೆಯಾಗಿತ್ತು. ಸ್ವದೇಶಿ ಉಡುಪುಗಳನ್ನು ತೊಡಬೇಕು, ನಮ್ಮದೇ ಆದ ಭಾಷೆಯನ್ನು ಮಾತನಾಡಬೇಕು. ಒಟ್ಟಿನಲ್ಲಿ ತನ್ನ ಮಣ್ಣಿನಲ್ಲೇ ಹುಟ್ಟಿದ ನೈತಿಕ, ಅಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ಒಳಗೊಂಡ ನೂತನ ಭಾರತವನ್ನು ರೂಪಿಸಬೇಕೆಂಬುದೇ ಅವರ ಕನಸಾಗಿತ್ತು. 1956ರ ಜೂನ್ 12 ರಂದು ನಾನು ಸಭಾಂಗಣದಲ್ಲಿ ನಡೆದ 209ನೇ ಡಾಕ್ಟರೇಟ್ ಪ್ರಧಾನ ಸಮಾರಂಭದಲ್ಲಿ ನೀಡಿದ ಪ್ರಶಸ್ತಿ ಪತ್ರದಲ್ಲಿ ರಾಜಕುಮಾರಿ ಕೌರ್ ಅವರ ನೈಜ ಮಾನವೀಯ ವ್ಯಕ್ತಿತ್ವ ಪ್ರತಿಬಿಂಬಿತವಾಗಿದೆ:

"ಇವರು ದೇಶದ ಸಾಮಾಜಿಕ ಅಭ್ಯುದಯ ಸಾಧನೆಯಲ್ಲಿ ವಿಶಿಷ್ಟ ಸೇವೆಯನ್ನು ಸಲ್ಲಿಸಿದವರು. ಬಡವರು ಮತ್ತು ಅಶಕ್ತರ ನಡುವೆ, ಮಕ್ಕಳು ಮತ್ತು ತಾಯಂದಿರ ಮಧ್ಯೆ ರೋಗಿಗಳು ಮತ್ತು ಹಸಿದವರ ನಡುವೆ ಓಡಾಡಿದರು. ಬರಿಯ ಭರವಸೆ, ಸಂದೇಶಗಳನ್ನು ಮಾತ್ರ ಕೊಟ್ಟವರಲ್ಲ. ಅವರಿಗಾಗಿ ಅತ್ಯಂತ ಪರಿಣಾಮಕಾರಿ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಹದಿನೆಂಟು

ವರ್ಷಗಳ ಕಾಲ ಮಹಾತ್ಮಾ ಗಾಂಧೀಯವರ ಅನುಯಾಯಿಯಾಗಿ, ಕಾರ್ಯದರ್ಶಿಯಾಗಿ ಭಾರತವನ್ನು ರಾಜಕೀಯವಾಗಿ ವಿಮುಕ್ತಿಗೊಳಿಸುವ ಕಾರ್ಯಭಾರದಲ್ಲಿ ಪಾಲ್ಗೊಂಡವರು. ಇದೀಗ ಅವರು ತಮ್ಮ ದೇಶದ ಜನತೆಯ ಆರೋಗ್ಯ ಮತ್ತು ಯೋಗಕ್ಷೇಮದ ಮಟ್ಟವನ್ನು ಎತ್ತರಿಸುವ ಕಾರ್ಯಭಾರದಲ್ಲಿ ನಿರತರಾಗಿದ್ದಾರೆ. ಅವರು ಸಂತ ಪೌಲ್ ಅವರಂತೆ ಶ್ರದ್ಧೆ, ಭರವಸೆ ಮತ್ತು ಮಾನವ ಪ್ರೇಮದ ಸಾಕಾರ ಮೂರ್ತಿಯಾಗಿದ್ದಾರೆ."

### ವಿಶ್ವ ಕುಟುಂಬ ಸಿದ್ಧಾಂತದ ಪ್ರತಿಪಾದಕಿ

ಓರ್ವ ನೈಜ ವಿಶ್ವ ಕುಟುಂಬಿಯಾದ ರಾಜಕುಮಾರಿ ಅಮೃತ ಕೌರ್ ಅವರು ಜಗತ್ತಿನ ಎಲ್ಲ ಮಾನವರು ವಿಶ್ವಕುಟುಂಬದ ಪ್ರಜೆಗಳೆಂದು ನಂಬಿದವರು. ಆಕೆಯ ಮಾತುಗಳಲ್ಲಿ:

"ಜಗತ್ತು ಎಷ್ಟೇ ಜಾತಿ-ಜನಾಂಗಗಳಿಂದ ಕೂಡಿದ್ದರೂ ಅದು ಒಂದೇ ಮಾನವ ಕುಟುಂಬ. ಜಗತ್ತಿನಲ್ಲಿ ಶಾಂತಿ ನೆಲಸಬೇಕಾದರೆ ನಾವು ಸೌಹಾರ್ದತೆ ತುಂಬಿದ ಜಗತ್ತನ್ನು ರೂಪಿಸಲು ಶ್ರಮಿಸಬೇಕು. ಭೌತಿಕ ಲಾಭಕ್ಕಿಂತ ಮಾನವೀಯ ಮೌಲ್ಯಗಳಿಗೆ ಹೆಚ್ಚಿನ ಸ್ಥಾನವನ್ನು ಕೊಟ್ಟಲ್ಲಿ ಮಾತ್ರವೇ ವರ್ಣಭೇದ ಮತ್ತು ಇತರರ ಮೇಲೆ ಯಜಮಾನಿಕೆ ಪ್ರದರ್ಶಿಸುವ ಹುಚ್ಚು ಪ್ರವೃತ್ತಿ ತಾನಾಗಿಯೇ ಹೋಗುತ್ತದೆ."

ಭಾರತೀಯ ನಿಯೋಗದ ಉಪನಾಯಕಿಯಾಗಿ ಲಂಡನ್‌ನಲ್ಲಿ ನಡೆದ ಯುನೆಸ್ಕೊ ಸಮ್ಮೇಳನದಲ್ಲಿ ಪಾಲ್ಗೊಂಡು ಮಾತನಾಡಿದ ಅವರು:

"ನೈತಿಕ ಮತ್ತು ಅಧ್ಯಾತ್ಮಿಕ ಮೌಲ್ಯಗಳು ಬಲವಾಗಿ ಬೇರೂರದಿದ್ದಲ್ಲಿ ಯಾವುದೇ ಸಮಾಜದ ವ್ಯವಸ್ಥೆ ಸ್ಥಿರವಾಗಿರಲು ಸಾಧ್ಯವಿಲ್ಲ. ನಮ್ಮ ಮಕ್ಕಳಿಗೆ ಶಾಶ್ವತ ಮೌಲ್ಯಗಳು ಯಾವುವು ಎಂಬ ಅರಿವನ್ನು ಮೂಡಿಸುವುದು ಮುಖ್ಯ. ನಾವು ಭೌಗೋಳಿಕ ಗಡಿಗಳನ್ನು ಗೆದ್ದುಕೊಂಡಿರಬಹುದು. ಆದರೆ ದ್ವೇಷ ಮತ್ತು ತಪ್ಪು ಗ್ರಹಿಕೆಗಳು ನಮ್ಮ ನಡುವಣ ಅಂತರವನ್ನು ಅಗಾಧವಾಗಿ ಹೆಚ್ಚಿಸಿವೆ. ಶಿಕ್ಷಣ ಇಲ್ಲಿ ಮಹತ್ತರ ಪಾತ್ರ ವಹಿಸುವುದಾದರೆ ಅದು ಜಗತ್ತಿಗೆ ಹೊಸದೊಂದು ರೂಪ ಕೊಡಬೇಕು. ಅಂದರೆ ಇಲ್ಲಿ ಶಿಕ್ಷಣ ಕೂಡ ಹೊಸ ರೂಪ ತಳೆಯಬೇಕು."

ಅವರ ವಿಚಾರದಲ್ಲಿನ ಖಚಿತತೆ,ಸ್ಪಷ್ಟತೆ ಮತ್ತು ಅದರ ತರ್ಕಬದ್ಧ ವಾದಸರಣಿ ಶ್ರೋತೃಗಳ ಮೆಚ್ಚುಗೆ ಗಳಿಸಿತು. ಈ ಭಾಷಣ ಎಷ್ಟೊಂದು ಪ್ರಭಾವಶಾಲಿಯಾಗಿತ್ತೆಂದರೆ ಮುಂದಿನ ಎಲ್ಲ ಭಾಷಣಗಳಿಗೂ ಮೇಲ್ಪಂಕ್ತಿಯೊಂದನ್ನು ಹಾಕಿಕೊಟ್ಟಿತು. ಹೊಸ ಹೊಸ ವಿಚಾರಗಳಿಗೂ ಪ್ರೇರಣೆ ನೀಡಿತು ಎಂದು ಅನಂತರ ಶ್ರೋತೃಗಳಲ್ಲಿ ಒಬ್ಬರು ಮಹಾತ್ಮಾ ಗಾಂದೀಜಿಯವರಿಗೆ ಬರೆದ ಪತ್ರದಲ್ಲಿ ತಿಳಿಸಿದ್ದರು.

1948,1949,1950, 1951 ಮತ್ತು 1953ರಲ್ಲಿ ನಡೆದ ವಿಶ್ವ ಆರೋಗ್ಯ ಸಂಸ್ಥೆಯ ಸಮ್ಮೇಳನಕ್ಕೆ (ಡಬ್ಲ್ಯು.ಹೆಚ್.ಓ) ತೆರಳಿದ ಭಾರತೀಯ ನಿಯೋಗದ ನೇತೃತ್ವವನ್ನು ರಾಜಕುಮಾರಿ ಅಮೃತ ಕೌರ್ ವಹಿಸಿದರು. 1950ರ ಮೇನಲ್ಲಿ ವಿಶ್ವ ಆರೋಗ್ಯ ಮಹಾ ಮಂಡಳಿಯ ಅಧ್ಯಕ್ಷೆಯಾಗಿ ಆಯ್ಕೆಯಾದರು. 1951ರ ಮೇ 7 ರಂದು ವಿಶ್ವ ಆರೋಗ್ಯ ಮಂಡಳಿಯ ಮಹಾ ಅಧಿವೇಶನ ಉದ್ದೇಶಿಸಿ ಮಾಡಿದ ಭಾಷಣದಲ್ಲಿ ಅವರು ಅಂತರಾಷ್ಟ್ರೀಯ ಸರ್ಕಾರದ ಮೌಲ್ಯಗಳನ್ನು

ಪ್ರತಿಪಾದಿಸಿದರು. ಅದರಲ್ಲೂ ಮುಖ್ಯರಾಗಿ ರೋಗಗಳು ಮತ್ತು ಇತರ ವ್ಯಾಧಿಗಳ ವಿರುದ್ಧದ ಹೋರಾಟದಲ್ಲಿ ಅಂತರಾಷ್ಟ್ರೀಯ ಸಹಕಾರ ಇರಬೇಕು. ಪ್ರೇಮ ಎಲ್ಲರನ್ನು ಗೆಲ್ಲುತ್ತದೆ ಎಂಬುದು ಆಕೆಯ ನಂಬಿಕೆಯಾಗಿತ್ತು. 1956ರ ಜೂನ್ 26 ರಂದು ವಿಶ್ವ ಸಂಸ್ಥೆಯ ದೆಹಲಿಯ ಶಾಖೆಯ ಪ್ರಾರಂಭದ ವೇಳೆ ಮಾಡಿದ ಉದ್ಘಾಟನಾ ಭಾಷಣದಲ್ಲಿ ಅವರು ಈ ಮಾತುಗಳನ್ನು ಹೇಳಿದ್ದಾರೆ:

"ಶಾಂತಿ ಅಖಂಡವಾದು ಭದ್ರತೆ. ಪ್ರತಿಯೊಂದು ರಾಷ್ಟ್ರದ ಭದ್ರತೆ ಮತ್ತು ಕಲ್ಯಾಣ ಸಂಪೂರ್ಣವಾಗಿ ಜಾಗತಿಕ ಮತ್ತು ಕಲ್ಯಾಣದ ಮೇಲೆ ಅವಲಂಬಿತವಾಗಿದೆ. ಸಹಕಾರವು ಸಾರ್ವತ್ರಿಕವಾಗಿರಬೇಕು. ಹಾಗಲ್ಲ ಎಂದಾದರೆ ಅದು ಸಹಕಾರವೇ ಅಲ್ಲ. ವಿಶ್ವ ಸಂಸ್ಥೆ ಇಂತಹ ಉನ್ನತ ಧ್ಯೇಯ ಸಾಧನೆಯ ಸಂಕೇತ. ಅದು ಎಲ್ಲರಿಗೂ ಸರಿಯಾದ ದಾರಿಯಲ್ಲಿ ನಡೆಯುವಂತೆ ಮಾರ್ಗದರ್ಶನ ಮಾಡುತ್ತದೆ. ಮನುಕುಲದ ಇತಿಹಾಸದಲ್ಲಿ ರಾಷ್ಟ್ರಗಳು ತಮ್ಮ ಭವಿಷ್ಯವನ್ನು ತಾವೇ ನಿರ್ಣಯಿಸುವ ದಿನ ಬಂದೇ ಬರುತ್ತದೆ. ಮತ್ತು ತಮಗೆ ಬೇಕಾದ ಆಯ್ಕೆಯನ್ನು ಮಾಡಿಕೊಳ್ಳುವ ಅವಕಾಶವು ಲಭಿಸಿಯೇ ಲಭಿಸುತ್ತದೆ."

ಅಂತಾರಾಷ್ಟ್ರೀಯ ಶೈಕ್ಷಣಿಕ ಒಕ್ಕೂಟವು ಅವರಿಗೆ ಸೇವಾ ಪದಕವನ್ನು ನೀಡಿ ಗೌರವಿಸಿತು. ದೆಹಲಿಯ ಪ್ರಿನ್ಸ್‌ಟನ್ ವಿಶ್ವ ವಿದ್ಯಾಲಯ, ಅಮೆರಿಕದ ಸ್ಮಿತ್ ಕಾಲೇಜು, ವೆಸ್ಟರ್ನ್ ಕಾಲೇಜು, ಮ್ಯಾಕ್‌ಮುರಿ ಕಾಲೇಜು ಗೌರವ ಡಾಕ್ಟರೇಟ್ ನೀಡಿ ಅವರನ್ನು ಪುರಸ್ಕರಿಸಿದವು. ಅವರು ಅಮೆರಿಕನ್ ಪಬ್ಲಿಕ್ ಹೆಲ್ತ್ ಅಸೋಸಿಯೇಷನ್ ಗೌರವ ಸದಸ್ಯರಾಗಿದ್ದರು. ಅವರ ಸೇವೆಯನ್ನು ಗುರುತಿಸಿ ಅಮೆರಿಕದ ವಿಸ್‌ಕೊನ್‌ಸಿನ್ ವಿಶ್ವ ವಿದ್ಯಾಲಯವು ಅರ್ಹತಾ ಪತ್ರವನ್ನು ನೀಡಿ ಗೌರವಿಸಿತು. ಪ್ರಿನ್ಸಟನ್ ವಿಶ್ವ ವಿದ್ಯಾಲಯವೂ ಅವರಿಗೆ ಡಾಕ್ಟರೇಟ್ ನೀಡಿತು.

### ಗೌರವ ಸಮರ್ಪಣೆ ಮತ್ತು ಶ್ರದ್ಧಾಂಜಲಿ

ರಾಜಕುಮಾರಿ ಅವರ ಬಗ್ಗೆ ಯೋಚಿಸಿದರೆ ಬೈಬಲ್‌ನಲ್ಲಿ ಹೇಳಿದ ಮಾತುಗಳು ಥಟ್ಟನೆ ನೆನಪಿಗೆ ಬರುತ್ತದೆ:

ಕೌರ್ ಅವರು ತಮ್ಮ ಮೃದುವಾದ ನಡವಳಿಕೆ, ನಂಯ, ವಿನಯ, ಹಾಗೂ ವಸ್ತುನಿಷ್ಠ ರಚನಾತ್ಮಕ ದೃಷ್ಟಿಕೋನಗಳಿಗೆ ಹೆಸರಾಗಿದ್ದರು. 1964ರ ಫೆಬ್ರವರಿ 6 ರಂದು ಅವರು ಕಣ್ಮರೆಯಾದಾಗ ರಾಷ್ಟ್ರವು ಓರ್ವ ಮಹಾನ್ ರಾಜಕಾರಣಿಯನ್ನು, ಮಹಾನ್ ಸಾಮಾಜಿಕ ಕಾರ್ಯಕರ್ತೆಯನ್ನು ಕಳೆದುಕೊಂಡಿತು. ಶಾಂತಚಿತ್ತ ಮತ್ತು ಸಮಭಾವ ಹೊಂದಿದ್ದ ಸ್ಥಿತ- ಪ್ರಜ್ಞೆಯಾಗಿದ್ದರು. ಅವರು ಭಾರತೀಯ ಸಮುದಾಯದ ಓರ್ವ ಶ್ರೇಷ್ಠ ಪ್ರತಿನಿಧಿಯಾಗಿದ್ದರು. 1964ರ ಫೆಬ್ರವರಿ 10 ರಂದು ಸಂಸತ್ತಿನ ಉಭಯ ಸದನಗಳು ಅವರ ನಿಧನಕ್ಕೆ ಶೋಕಾಚರಣೆ ಮಾಡಿದವು. ರಾಜ್ಯಸಭೆಯಲ್ಲಿ ಸದನದ ಉಪಾಧ್ಯಕ್ಷೆ ಶ್ರೀಮತಿ ವೈಲೆಟ್ ಆಳ್ವ ಅವರು ರಾಜಕುಮಾರಿ ಕೌರ್ ಅವರನ್ನು ಈ ರೀತಿ ಬಣ್ಣಿಸಿದರು:

"......ಆಕೆ ಓರ್ವ ಮಹಾನ್ ಪ್ರತಿಭಾನ್ವಿತ ಮಹಿಳೆಯಾಗಿದ್ದರು. ಸೂಕ್ಷ್ಮ ಸಂವೇದಾನಾಶೀಲ ವ್ಯಕ್ತಿತ್ವದವರಾಗಿದ್ದರು. ಸುಸಂಸ್ಕೃತ ನಡೆ ನುಡಿಯವರಾಗಿದ್ದರು. ಇದಕ್ಕೂ ಮಿಗಿಲಾಗಿ ನಿರ್ಭಿಡ ಮನೋಭಾವದ ದಿಟ್ಟ ವ್ಯಕ್ತಿತ್ವದವರಾಗಿದ್ದರು. ಆಕೆಯಲ್ಲಿದ್ದ ಧ್ಯೇಯ, ಶೌರ್ಯ ಮತ್ತು ಇದ್ದದ್ದನ್ನು ಇದ್ದಂತೆ ಹೇಳುವ ಖಂಡಿತವಾದಿ ಗುಣ ಅವರ ವೈಶಿಷ್ಟವಾಗಿದ್ದವು.

ಬಹುಮುಖ ಪ್ರತಿಭಾ ಸಂಪನ್ನರಾದ ಕೌರ್ ಅವರು ತಮ್ಮ ತ್ಯಾಗ ಮನೋಭಾವದಿಂದಾಗಿ ತಮ್ಮ ಇಡೀ ಜೀವನವನ್ನು ಭಾರತದ ಜನರ ಏಳಿಗೆಗಾಗಿ ಮುಡುಪಾಗಿಟ್ಟರು.

ಅದೇ ದಿನ ಲೋಕಸಭೆಯು ಅವರ ನಿಧನಕ್ಕೆ ತೀವ್ರ ಶೋಕ ಆಚರಿಸಿ ರಾಷ್ಟ್ರದ ಜೀವನಕ್ಕೆ ಅವರು ಕೊಟ್ಟ ಅಗಾಧ ಕೊಡುಗೆಯನ್ನು ದಾಖಲಿಸಿತು.

ರಾಜಕುಮಾರಿ ಅಮೃತ ಕೌರ್ ಅವರು ಭಾರತದ ವೈ.ಡಬ್ಲ್ಯು.ಸಿ.ಎ ಜೊತೆ ಅತ್ಯಂತ ನಿಕಟವಾಗಿ ಸಂಬಂಧ ಇಟ್ಟುಕೊಂಡು ಕೆಲಸ ಮಾಡಿದರು. ನಿಜ ಹೇಳಬೇಕೆಂದರೆ ಅವರು ಈ ಸಂಸ್ಥೆಗೆ ಅಗಾಧ ಸೇವೆ ಸಲ್ಲಿಸಿದರು. ಈ ಸಂಸ್ಥೆಯ ಧ್ಯೇಯ ಉದ್ದೇಶಗಳಿಗಾಗಿ ಅವರು ಸಲ್ಲಿಸಿದ ಸೇವೆಯನ್ನು ವೈ.ಡಬ್ಲ್ಯು.ಸಿ.ಎ(ಭಾರತ) ಪ್ರಧಾನ ಕಾರ್ಯದರ್ಶಿ ಶ್ರೀಮತಿಇವಿಖಾನ್ ಈ ರೀತಿ ಬಣ್ಣಿಸಿದ್ದಾರೆ:

"ರಾಜಕುಮಾರಿ ಅಮೃತ ಕೌರ್ ಅವರು ಜನ ಸಮುದಾಯದ ನೈಜ ಪ್ರತಿನಿಧಿಯಾಗಿದ್ದರು. ಜನರ ಆಸೆ, ಆಕಾಂಕ್ಷೆ, ನೋವು, ಬವಣೆಗಳನ್ನು ತಮ್ಮದೆಂದೇ ತಿಳಿದ ಅವರು ಅವುಗಳ ಪರಿಹಾರಕ್ಕೆ ಶ್ರಮಿಸಿದರು. ಅವರ ನಿಧನದಿಂದ ರಾಷ್ಟ್ರವು ಓರ್ವ ಮಹಾನ್ ನಾಯಕಿಯನ್ನು, ಜಗತ್ತು ಓರ್ವ ಮಹಾನ್ ಮಹಿಳೆಯನ್ನು ಕಳೆದುಕೊಂಡಿದೆ. ನಾವು ಯಾರನ್ನು ಬಹುವಾಗಿ ಪ್ರೀತಿಸುತ್ತಿದ್ದೇವೋ, ಯಾವುದೇ ಸಮಸ್ಯೆಯ ಪರಿಹಾರಕ್ಕಾಗಿ ಯಾರನ್ನು ಎದುರು ನೋಡುತ್ತಿದ್ದೆವೋ ಅದಕ್ಕಾಗಿ ಯಾವ ಬುದ್ಧಿಮತ್ತೆಯನ್ನು ಸಂಪೂರ್ಣವಾಗಿ ಅವಲಂಬಿಸಿದ್ದೆವೋ ಅಂತಹ ಮಹಾನ್ ಮಹಿಳೆ ನಮ್ಮ ಬದುಕಿನಿಂದ ದೂರವಾಗಿದ್ದಾರೆ. ಇಲ್ಲ ಅವರು ಸತ್ತಿಲ್ಲ. ಬದುಕಿನಿಂದ ಅವರು ದೂರ ಸರಿದಿದ್ದಾರೆ."

ಪ್ರಖ್ಯಾತ ಸಾಮಾಜಿಕ ಕಾರ್ಯಕರ್ತೆ ಶ್ರೀಮತಿ ಬಿ. ತಾರಾಬಾಯಿ ಕೌರ್ ಅವರೊಂದಿಗಿನ ಒಡನಾಟವನ್ನು ಸ್ಮರಿಸುತ್ತಾ ಹೀಗೆ ಹೇಳಿದರು:

"ರಾಜಕುಮಾರಿ ಕೌರ್ ಅವರಲ್ಲಿ ನನ್ನ ಮನಸೆಳೆದ ಅಂಶಗಳೆಂದರೆ ಅವರ ಸೌಜನ್ಯಶೀಲ ವ್ಯಕ್ತಿತ್ವ, ದಿಟ್ಟ ಮತ್ತು ನೇರ ನಡವಳಿಕೆ, ಅವರೆಲ್ಲಿದ್ದ ಮಾನವೀಯತೆ ಅವರು ಸೌಜನ್ಯ ಮತ್ತು ಸ್ನೇಹಶೀಲತೆಯ ಸಾಕಾರ ಮೂರ್ತಿಯಾಗಿದ್ದರು."

ರಾಜಕುಮಾರಿ ಅಮೃತ ಕೌರ್ ಅವರ ಅಸಾಧಾರಣ ವ್ಯಕ್ತಿತ್ವ ಮತ್ತು ಗುಣಗಳಿಂದ ಪ್ರಭಾವಿತರಾಗಿದ್ದ ಪಂಡಿತ್ ಜವಾಹರಲಾಲ್ ನೆಹರು ಅವರು ಒಂದೆಡೆ ಹೀಗೆ ಬರೆದಿದ್ದಾರೆ:

"ಅವರು ಏನನ್ನೇ ಹೇಳಲಿ, ಬರೆಯಲಿ ಸದಾ ವಿಶಿಷ್ಟತೆಯ ಸ್ಪರ್ಶ ಅಲ್ಲಿರುತ್ತದೆ. ಬದುಕಿನ ನಾನಾ ಸಮಸ್ಯೆಗಳ ವಿರುದ್ಧ ಹೋರಾಡಿದ ಅತ್ಯಂತ ಸ್ಪಂದನಶೀಲ ವ್ಯಕ್ತಿಯೊಬ್ಬರ ನಡೆಜಾಡಿನ ಗುರುತನ್ನು ಅಲ್ಲಿ ಕಾಣಬಹುದು. ಮಹಿಳೆಯರ ವಿಮೋಚನೆ, ಪ್ರಗತಿ ಸಾಧನೆಯ ಅತಿ ವಿಶಾಲವಾದ ಕ್ಷೇತ್ರವನ್ನೇ ಅವು ತಮಗೆ ಮೀಸಲಾದ ಕ್ಷೇತ್ರವೆಂಬಂತೆ ಆಯ್ದುಕೊಂಡರು."

ವಾಸ್ತವವಾಗಿ ಹೇಳುವುದಾದರೆ ಭಾರತದಲ್ಲಿ ಮಹಿಳಾ ಚಳವಳಿಯನ್ನು ಕಟ್ಟಿದವರಲ್ಲಿ ಅವರೂ ಒಬ್ಬರು. ಇದರ ಮೂಲಕವೇ ಭಾರತದ ಸ್ವಾತಂತ್ರ್ಯದ ಆಂದೋಲನದ ಇನ್ನೂ ವಿಶಾಲವಾದ ಕ್ಷೇತ್ರಕ್ಕೂ ಅಡಿ ಇಟ್ಟರು. ರಾಷ್ಟ್ರ ಸ್ವಾತಂತ್ರ್ಯವನ್ನು ಗಳಿಸದ ಹೊರತು ಪುರುಷರ ಅಥವಾ ಮಹಿಳೆಯರ ವಿಮೋಚನೆ ಸಾಧ್ಯವಿಲ್ಲ ಎಂಬುದು ಅವರ ದೃಢ ನಂಬಿಕೆಯಾಗಿತ್ತು."

ಅವರ ನಿಧನದಿಂದ ಭಾರತಮಾತೆ, ಬುದ್ಧಿಮತ್ತೆ ಹಾಗೂ ಹೃದಯವಂತಿಕೆಯಂತಹ ಅಸಾಧಾರಣ ಗುಣಗಳಿಂದ ಕೂಡಿದ ಸಮರ್ಪಣಾ ಮನೋಭಾವದ ಮಹಾನ್ ಪುತ್ರಿಯೊಬ್ಬರನ್ನು ಕಳೆದುಕೊಂಡಳು. ಆಕೆಯ ಆದರ್ಶ ತತ್ವಗಳನ್ನು ಮೈಗೂಡಿಸಿಕೊಂಡು, ಆಕೆಯ ಆದರ್ಶಗಳಲ್ಲಿ ನಂಬಿಕೆ ಇರಿಸಿದ್ದ ಮತ್ತು ಅವರೊಂದಿಗೆ ನಾನಾ ಕ್ಷೇತ್ರಗಳಲ್ಲಿ ದುಡಿಯುವ ಅವಕಾಶ ಗಳಿಸಿದ ಅವರ ಅಸಂಖ್ಯ ಒಡನಾಡಿಗಳ ಪಾಲಿಗೆ ಇಂದಿಗೂ ಕೌರ್ ಅಮರರಾಗಿದ್ದಾರೆ. ಮಾನವ ಸಮುದಾಯದ ಸೇವೆಯಲ್ಲಿ ಆಕೆ ತೋರಿದ ಅದಮ್ಯ ಉತ್ಸಾಹ ಹಾಗೂ ಸಮರ್ಪಣಾ ಮನೋಭಾವ ಮುಂದಿನ ಪೀಳಿಗೆಯವರಿಗೂ ಒಂದು ಸ್ಫೂರ್ತಿಯಾಗಿ ನಿಲ್ಲಲಿದೆ.

ಜಗತ್ಪ್ರಸಿದ್ಧ ವಯಲಿನ್ ವಾದಕ ಹಾಗೂ ನೆಹರೂ ಪ್ರಶಸ್ತಿ ವಿಜೇತ ಯಹೂದಿ ಮೆನುಹಿನ್ ಅವರು ಅದನ್ನು ಸೂಕ್ತವಾಗಿ ಚಿತ್ರಿಸಿದ್ದಾರೆ:

"ಭಾರತ ವಿಶ್ವಮಾನ್ಯ ಹಾಗೂ ಅಮೂಲ್ಯ ವ್ಯಕ್ತಿಗಳಿಗೆ ಹೀಗೆಯೇ ಜನ್ಮನೀಡುತ್ತಲಿರಲಿ. ನಮ್ಮೆಲ್ಲರಿಗೂ ಅತ್ಯಂತ ಪ್ರೀತಿ ಪಾತ್ರರಾದ ಅಪರೂಪದ ವ್ಯಕ್ತಿತ್ವವುಳ್ಳ ರಾಜಕುಮಾರಿ ಅಮೃತ ಕೌರ್ ಅವರು ಚಿರಕಾಲ ನಮ್ಮ ನೆನಪಿನಲ್ಲಿ ನೆಲೆ ನಿಲ್ಲುವಂತಾಗಲಿ".

## ಬಳಸಿಕೊಂಡ ಆಕರಗಳು


ಪುಸ್ತಕಗಳು:

| | |
|---|---|
| ಇಂಡಿಯನ್ ವುಮೆನ್ ಫ್ರೀಡಂ ಫೈಟರ್ಸ್ (1904-1947) ಮನೋಹರ ಪಬ್ಲಿಕೇಷನ್ಸ್, ನವದೆಹಲಿ, 1986. | ಉಷಾಬಾಲ |
| ಸ್ಪೀಚಸ್ ಅಂಡ್ ರೈಟಿಂಗ್ಸ್ ಆಫ್ 'ರಾಜಕುಮಾರಿ ಅಮೃತ ಕೌರ್' ಆರ್ಚರ್ ಪಬ್ಲಿಕೇಷನ್ಸ್, ನವದೆಹಲಿ. | ಜಿ.ಬೋರ್ಕರ್ |
| ವುಮೆನ್ ಇನ್ ಇಂಡಿಯನ್ ಫ್ರೀಡಂ ಸ್ಟ್ರಗಲ್, ಸ್ಟರ್ಲಿಂಗ್ ಪಬ್ಲಿಷರ್ಸ್ ಪ್ರೈವೇಟ್ ಲಿಮಿಟೆಡ್, ನವದೆಹಲಿ, 1985 | ಮನಮೋಹನ್ ಕೌರ್ |
| ಡಿಕ್ಷನರಿ ಆಫ್ ನ್ಯಾಷನಲ್ ಬಯೋಗ್ರಫೀಸ್ ವಾಲ್ಯುಂ1 ಕಲ್ಕತ್ತಾ, ಇನ್‌ಸ್ಟಿಟ್ಯೂಟ್ ಆಫ್ ಹಿಸ್ಟಾರಿಕಲ್ ಸ್ಟಡೀಸ್, 1973 | ಎಸ್.ಪಿ. ಸೇನ್(ಎಜುಕೇಷನ್) |
| ವುಮೆನ್ ವಿತ್ ಎ ಮಿಷನ್ ರಾಜಕುಮಾರಿ ಅಮೃತ ಕೌರ್, ಆಲ್ ಇಂಡಿಯಾ ವುಮೆನ್ಸ್ ಕಾನ್‌ಫರೆನ್ಸ್, ನವದೆಹಲಿ. | ಎ ಕಾಂಟೆಂಪರರಿ ವಾಲ್ಯೂಂ ಎಐಡಬ್ಲ್ಯೂಸಿ ಪಬ್ಲಿಕೇಷನ್ |
| ವೈಎಂಸಿಎ ಟ್ರಿಬ್ಯೂಟ್ ಟು'ರಾಜಕುಮಾರಿ ಅಮೃತ್' | " |
| ಗಾಂಧೀ ಮಾರ್ಗ್ ವಾಲ್ಯೂಂ 5-1964 | " |
| ಕಲೆಕ್ಟೆಡ್ ವರ್ಕ್ಸ್ ಆಫ್ ಮಹಾತ್ಮ ಗಾಂಧಿ | " |


## ಪಾರ್ಲಿಮೆಂಟರಿ ಪಬ್ಲಿಕೇಷನ್ಸ್


ಡಿಬೇಟ್ಸ್

| | |
|---|---|
| ಲೋಕಸಭಾ ಡಿಬೇಟ್ಸ್ | 18 ಫೆಬ್ರವರಿ, 1956 |
| ಲೋಕಸಭಾ ಡಿಬೇಟ್ಸ್ | 4 ಏಪ್ರಿಲ್, 1956 |
| ರಾಜ್ಯಸಭಾ ಡಿಬೇಟ್ಸ್ | 3 ಮೇ, 1956 |
| ರಾಜ್ಯಸಭಾ ಡಿಬೇಟ್ಸ್ | 9 ಮಾರ್ಚ್, 1956 |

| | |
|---|---|
| ರಾಜ್ಯಸಭಾ ಡಿಬೇಟ್ಸ್ | 31 ಮೇ, 1959 |
| ಪ್ರಾವಿಷನಲ್ ಪಾರ್ಲಿಮೆಂಟ್ ಆಫ್ ಇಂಡಿಯಾ | ಹೂಯಿಸ್ ಹೂ, 1950,ನವದೆಹಲಿ, ಪುಟ-5 |
| ಲೋಕಸಭಾ | ಹೂಯಿಸ್ ಹೂ, 1952, ನವದೆಹಲಿ, ಲೋಕಸಭಾ, ಸೆಕ್ರೆಟರಿಯೇಟ್ ಪುಟ-13-14 |
| ರಾಜ್ಯ ಸಭಾ | ಹೂಯಿಸ್ ಹೂ, 1962 ನವದೆಹಲಿ ರಾಜ್ಯ ಸಭಾ ಸೆಕ್ರೆಟರಿಯೇಟ್ ಪುಟ-11-14 |
| ಲೋಕಸಭಾ ಸೆಕ್ರೆಟರಿಯೇಟ್ | ಕೌನ್ಸಿಲ್ ಆಫ್ ಮಿನಿಸ್ಟರ್ಸ್ (1947-89), ನವದೆಹಲಿ ಲೋಕಸಭಾ, ಸೆಕ್ರೆಟರಿಯೇಟ್ 1990, ಪುಟ-9. |

## ಭಾಗ-2

# ಮಹಾತ್ಮಾ ಗಾಂಧೀಜಿಯವರ ಕರ್ಮಯೋಗಿ ಶಿಷ್ಯೆ

-ಬಿ.ಎನ್. ಪಾಂಡೆ

ರಾಜಕುಮಾರಿ ಅಮೃತ ಕೌರ್ ಅವರು ಪಂಜಾಬ್ ರಾಜ್ಯದ ಕಪುರ್ತಲಾದ ಅತ್ಯಂತ ಸುಸಂಸತ ರಾಜಮನೆತನಕ್ಕೆ ಸೇರಿದವರು. ಅವರ ತಂದೆ ರಾಜಾ ಸರ್ ಹರ್ನಾಮ್ ಸಿಂಗ್ ಪಂಜಾಬ್ ರಾಜ್ಯದ ಸುಪ್ರಸಿದ್ಧ ಸಮಾಜ ಸುಧಾರಕ ಹಾಗೂ ಗಣ್ಯ ರಾಜಕೀಯ ಧುರೀಣರಾಗಿದ್ದರು. ಅಮೃತ ಕೌರ್ ಅವರು 1889ರ ಫೆಬ್ರವರಿ 2 ರಂದು ಲಕ್ನೋದಲ್ಲಿ ಜನಿಸಿದರು. ಆಕೆಯ ತಂದೆ ಅವರನ್ನು ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಕಳುಹಿಸಿದರು. ಅಲ್ಲಿ ಅವರು ಶೆರ್‌ಬೋರ್ನ್ ಬಾಲಕಿಯರ ಶಾಲೆಗೆ ದಾಖಲಾದರು. ಅನಂತರ ಲಂಡನ್‌ನಲ್ಲಿ ಕಾಲೇಜಿಗೆ ಸೇರಿದರು. ವ್ಯಾಸಂಗ ಮುಗಿದ ನಂತರ ಅವರು ತಾಯ್ನಾಡಿಗೆ ಮರಳಿದರು. ನಂತರ ಅವರು ಜನೋಪಕಾರಿ ಚಟುವಟಿಕೆಗಳಲ್ಲಿ ಹಾಗೂ ಮಹಿಳಾ ವಿಮೋಚನಾ ಕಾರ್ಯಕ್ಕಾಗಿ ತಮ್ಮ ಬದುಕನ್ನು ಮೀಸಲಿಟ್ಟರು.

ಹಿರಿಯ ನೇತಾರ ಗೋಪಾಲ ಕೃಷ್ಣ ಗೋಖಲೆಯವರು ಅವರ ತಂದೆ ಹರ್ನಾಮ್ ಸಿಂಗ್ ಅವರ ಆಪ್ತ ಸ್ನೇಹಿತರಾಗಿದ್ದು,ಆಗಾಗ ಅವರ ಮನೆಗೆ ಭೇಟಿ ಕೊಡುತ್ತಿದ್ದರು. ಗೋಖಲೆಯವರು ಅಮೃತ ಕೌರ್‌ಳೊಂದಿಗೆ ಮಾತನಾಡುವಾಗಲೆಲ್ಲ ಗಾಂಧೀಜಿಯವರನ್ನು "ಅಗಾಧ ಸಾಮರ್ಥ್ಯವುಳ್ಳ ಮಹಾನ್ ವ್ಯಕ್ತಿ" ಎಂದು ಬಣ್ಣಿಸುತ್ತಿದ್ದರು. ಮತ್ತು "ಮುಂದೊಂದು ದಿನ ಅವರು ರಾಷ್ಟ್ರಕ್ಕಾಗಿ ಮಹಾನ್ ಸಾಧನೆ ಮಾಡಿ ತೋರಿಸುವುದನ್ನು ನೀವು ಕಾಣಲಿದ್ದೀರಿ". ಗಾಂಧೀಜಿಯವರ ಬಗ್ಗೆ ಇಂತಹ ಅಭಿಪ್ರಾಯಗಳನ್ನು ಕೇಳುತ್ತಿದ್ದ ಕೌರ್ ಅವರನ್ನು ನೋಡಬಯಸಿದರು.1915ರಲ್ಲಿ ಮುಂಬಯಿಯಲ್ಲಿ ನಡೆದ ಪ್ರಥಮ ಕಾಂಗ್ರೆಸ್ ಅಧಿವೇಶನದಲ್ಲಿ ಗಾಂಧೀಜಿಯವರನ್ನು ಮೊಟ್ಟಮೊದಲ ಬಾರಿಗೆ ಸಮೀಪದಿಂದ ನೋಡುವ ಸುಯೋಗ ಅವರಿಗೆ ಲಭಿಸಿತು. ಅಧಿವೇಶನದಲ್ಲಿ ಆಗ ತಾನೇ ಅಂಡಮಾನ್‌ನಿಂದ ಹಿಂತಿರುಗಿದ ಬಾಲ ಗಂಗಾಧರ ತಿಲಕ್ ಅವರನ್ನು ಹರ್ಷೋದ್ಗಾರಗಳಿಂದ ಸ್ವಾಗತಿಸಿದರು. ಗಾಂಧೀಜಿಯವರು ದಕ್ಷಿಣ ಆಫ್ರಿಕಾದಲ್ಲಿರುವ ಭಾರತೀಯರ ಬಗ್ಗೆ ಕೆಲವು ಮಾತುಗಳನ್ನು ಆಡಿದರು. ಆಗಿನ ಕಾಲದಲ್ಲಿ ಧ್ವನಿ ವರ್ಧಕಗಳು ಇಲ್ಲದೆ ಇದ್ದದ್ದರಿಂದ ವೇದಿಕೆಯ ಮೇಲಿದ್ದ ಕೆಲವರು ಹಾಗೂ ಅಧಿವೇಶನದ ಮುಂದಿನ ಸಾಲಿನಲ್ಲಿ ಕುಳಿತ ಶ್ರೋತೃಗಳನ್ನು ಹೊರತು ಪಡಿಸಿ ಉಳಿದವರಾರಿಗೂ ಅದು ಕೇಳಿಸುತ್ತಿರಲಿಲ್ಲ. ಆದರೆ ಆ ಮಾತುಗಳಲ್ಲಿದ್ದ ಅವ್ಯಕ್ತ ಶಕ್ತಿ, ಕಳಕಳಿ ಹಾಗೂ ನಮ್ರತೆ ಅಮೃತ ಕೌರ್ ಅವರ ಎಳೆಯ ಹೃದಯವನ್ನು ತಟ್ಟಿತು. ಅಂದಿನಿಂದಲೇ ಗಾಂಧೀಜಿ ಹಾಗೂ ಅವರ ಜೀವನ ಶೈಲಿಯ ಬಗ್ಗೆ ಅವರಲ್ಲಿ ನಿಷ್ಠೆ ಮೊಳೆಯಿತಾದರೂ ಮುಂದೆ ಹಲವು ವರ್ಷಗಳವರೆಗೆ ಗಾಂಧೀಜಿಯವರನ್ನು ಕೂಡಿಕೊಳ್ಳಲು ಅವರಿಗೆ ಪರಿಸ್ಥಿತಿ ಅನುವು ಮಾಡಿಕೊಡಲಿಲ್ಲ.

ಜಲಿಯನ್ ವಾಲಾಬಾಗ್ ಹತ್ಯಾಕಾಂಡದ ನಂತರ ಗಾಂಧೀಜಿಯವರು ಜಲಂಧರ್‌ಗೆ ಬಂದರು. ಅಷ್ಟರವೇಳೆಗೆ ಅವರು ಜನತೆಯ ಆರಾಧ್ಯ ಮೂರ್ತಿಯಾಗಿದ್ದರು. ಉದ್ರಿಕ್ತ ಜನರು

-ಶ್ರೀ. ಬಿ.ಎನ್. ಪಾಂಡೆ, ರಾಜ್ಯಸಭಾ ಸದಸ್ಯರು.

ಗಾಂಧೀಜಿಯವರನ್ನು ಮುತ್ತಿಕೊಂಡರು. ಸಂಜೆ 6 ಗಂಟೆಯ ವೇಳೆಗೆ ತೀವ್ರವಾಗಿ ಆಯಾಸಗೊಂಡಿದ್ದ ಗಾಂಧೀಜಿಯವರು ಜ್ವರದಿಂದ ಬಳಲತೊಡಗಿದರು. ಕಾಲುಗಳಲ್ಲಿ ಬೊಕ್ಕೆಗಳು ಎದ್ದಿದ್ದವು. ಅಲ್ಲಿ ಸಿವಿಲ್ ಸರ್ಜನ್‌ರಾಗಿದ್ದ ಅಮೃತ್ ಕೌರ್ ಅವರ ಸಹೋದರ 24 ಗಂಟೆಗಳ ಕಾಲ ಪ್ರವಾಸವನ್ನು ಮುಂದೂಡುವಂತೆ ಗಾಂಧೀಜಿಯವರನ್ನು ವಿನಂತಿಸಿದರು. "ಬೇರೆ ಬೇರೆ ಕಡೆಗಳಲ್ಲಿ ನನಗಾಗಿ ಕಾದಿರುವ ಸಾವಿರಾರು ಮಂದಿಯ ವಿಶ್ವಾಸವನ್ನು ನಾನು ಹೇಗೆ ಹುಸಿಗೊಳಿಸಲಿ?-ಎಂದು ಗಾಂಧೀಜಿ ಥಟ್ಟನೆ ಕೇಳಿದರು. "ನನ್ನ ರೈಲು ಹೊರಡುವ ವೇಳೆಗೆ ಅಂದರೆ ರಾತ್ರಿ ಹತ್ತು ಗಂಟೆಯ ವೇಳೆಗೆ ನಾನು ಜ್ವರದಿಂದ ಗುಣಮುಖನಾಗಿರುತ್ತೇನೆ."ಎಂಬ ಭರವಸೆ ಕೊಡುತ್ತೇನೆ. ಅಮೃತ ಕೌರ್ ಗಾಂಧೀಜಿಯವರಿಗೆ ಬಿಸಿ ನೀರು ತುಂಬಿದ ಶೀಸೆಯೊಂದನ್ನು ನೀಡಿ ಪ್ರವಾಸದಲ್ಲಿ ಅದನ್ನು ಒಯ್ಯುವಂತೆ ಕೇಳಿಕೊಂಡರು. ಮಾರನೆಯ ದಿನ ಬೆಳಿಗ್ಗೆ ಕೃತಜ್ಞತೆ ಸೂಚಿಸುವ ಒಂದು ಚಿಕ್ಕ ಚೀಟಿಯೊಂದಿಗೆ ಶೀಸೆ ಮರಳಿ ಬಂದಿತು. ಅದರಲ್ಲಿ ಗಾಂಧೀಜಿ ಅವರ ಕಾರ್ಯದರ್ಶಿ ಮಹಾದೇವ ದೇಸಾಯಿ ಅವರು ಹೀಗೆ ಬರೆದಿದ್ದರು. "ನಿಮಗೆ ಅಚ್ಚರಿ ಎನಿಸಬಹುದು. ಅವರು ಜಲಂಧರ್ ಬಿಡುವ ಮುನ್ನವೇ ಜ್ವರ ಬಿಟ್ಟಿತ್ತು. ಹೀಗಾಗಿ ಅವರಿಗೆ ಬಿಸಿ ನೀರಿನ ಶೀಸೆಯ ಅಗತ್ಯವೇ ಬೀಳಲಿಲ್ಲ."

ಅದೇ ವರ್ಷ ಎರಡನೇ ಬಾರಿ ಜಲಂಧರ್‌ಗೆ ಬಂದಗಾಂಧೀಜಿಯವರು ಅಸ್ವಸ್ಥರಾಗಿದ್ದ ಅಮೃತ ಕೌರ್ ಅವರನ್ನು ಅವರ ಮನೆಯಲ್ಲಿ ಭೇಟಿ ಮಾಡಿದರು. 'ವಿದೇಶಿ ಶೃಂಗಾರ ಸಾಮಗ್ರಿ, ಗಳನ್ನು ಸುಟ್ಟು ಹಾಕಿ ಖಾದಿ ಧರಿಸುವಂತೆ ಗಾಂಧೀಜಿ ಕೌರ್ ಅವರನ್ನು ಕೇಳಿಕೊಂಡರು. ವಿದೇಶಿ ಸಾಮಗ್ರಿಗಳನ್ನು ಸುಡುವುದು ಸರಿಯಲ್ಲ ಎಂದು ಆಕೆ ವಾದಿಸಿದರು. ಅದಕ್ಕೆ ಗಾಂಧೀಜಿಯವರ ಪ್ರತ್ಯುತ್ತರ ಸಿದ್ಧವಾಗಿತ್ತು."ಈ ಶೃಂಗಾರ ಸಾಧನೆಗಳು ನಮ್ಮ ಗುಲಾಮಗಿರಿಯ ಸಂಕೋಲೆಗಳಾಗರುವಾಗಲೂ ನೀನು ಅದನ್ನು ಬಿಡಲು ಸಿದ್ಧಳಿಲ್ಲವೇ ? ನಿನಗೆ ಅವುಗಳನ್ನು ಸುಡಲು ಇಷ್ಟವಿಲ್ಲದಿದ್ದರೆ ಕನಿಷ್ಠ ಅವುಗಳನ್ನು ನನಗೆ ಕೊಟ್ಟು ಬಿಡು. ನಾನು ಅವುಗಳನ್ನು ದಕ್ಷಿಣ ಆಫ್ರಿಕಾರಲ್ಲಿರುವ ಬಡ ಭಾರತೀಯರಿಗೆ ಕೊಟ್ಟು ಕಳುಹಿಸುತ್ತೇನೆ. ನೀನು ಖಾದಿಯನ್ನು ನೇಯಲು ಹಾಗೂ ಧರಿಸಲು ಪ್ರಾರಂಭಿಸು" ಅಹಾ ಎಂತಹ ಮಾತುಗಳು, ಆದರೆ ಆ ಮಾತಿನ ಅರ್ಥ ನನಗೆ ಸಂಪೂರ್ಣವಾಗಿ ಆಗಲಿಲ್ಲ. ನಾನು ಖಾದಿ ಧರಿಸಲು ಪ್ರಯತ್ನಿಸಿದೆ. ಆದರೆ, ನನ್ನ ಅಭಿರುಚಿಗೆ ಅವು ಸರಿ ಎನಿಸಲಿಲ್ಲ. ಆಂಧ್ರ ಮತ್ತು ಬಿಹಾರ ಮುಸ್ಲಿಮರು ನೇಯುತ್ತಿದ್ದ ಉತ್ತಮ ದರ್ಜೆಯ ಬಟ್ಟೆಗಳು ಆಗ ಇರಲಿಲ್ಲ. ಆದರೆ ಅವರ ಮಾತುಗಳಲ್ಲಿ ಎಂತಹ ಶಕ್ತಿ ಇತ್ತೆಂದರೆ ನಾನು ಖಾದಿ ನೂಲು ತೆಗೆಯುವುದನ್ನು, ನೇಯುವುದನ್ನು ಕಲಿತೆ. ನಾನು ನೇಯ್ದು ಬಟ್ಟೆಗಳನ್ನು ಬಡ ಮಕ್ಕಳಿಗೆ ನೀಡಿದೆ. ನಾನು ಮನೆಯಲ್ಲಿನ ದಿನಬಳಕೆಗೆ ಬಳಸುವ ಟವಲ್, ಒರೆಸುವ ಬಟ್ಟೆ ಮುಂತಾದವುಗಳಿಗೆ ಖಾದಿಯನ್ನೇ ಖರೀದಿಸಲಾರಂಬಿಸಿದೆ" ಹೀಗೆ ಕೌರ್ ಗಾಂಧೀಜಿಯವರ ಕಟ್ಟಾ ಅಭಿಮಾನಿಯಾದರು. ಅಗಾಧ ಪ್ರಭಾವಕ್ಕೆ ಒಳಗಾದರು.

ಗಾಂಧೀಜಿ ಸೇವಾಗ್ರಾಮಕ್ಕೆ ಹೋದಾಗ ಆಕೆ ಅವರ ನಿಕಟ ಸಂಗಾತಿಯಾಗಿ, ಶಿಷ್ಯೆಯಾದರು. ಹದಿನಾರು ವರ್ಷಗಳ ಕಾಲ ಅವರು ಗಾಂಧೀಜೀಯವರ ಆಪ್ತ ಕಾರ್ಯದರ್ಶಿಯಾಗಿ ಸಾರ್ವಜನಿಕ ಸಂಪರ್ಕ ಅಧಿಕಾರಿಯಾಗಿ ಕಾರ್ಯ ನಿರ್ವಹಿಸಿದರು. ಕಾರ್ಯದರ್ಶಿಯಾಗಿ ಅವರ ಕಾರ್ಯ ಸಾಮರ್ಥ್ಯ ಯಾವ ರೀತಿ ಇತ್ತು ಎಂಬುದಕ್ಕೆ ಗಾಂಧೀಜಿಯವರೇ ಬರೆದ ಪತ್ರವೊಂದು ಸಾಕ್ಷಿಯಾಗಿದೆ:

ಚಿ.ಅಮೃತ, ಆದರ್ಶ ಕಾರ್ಯದರ್ಶಿ ಎಂದರೆ ತನ್ನ ಮುಖ್ಯಸ್ಥ ಹಾದಿ ತಪ್ಪಿದಾಗ ಅವನನ್ನು ಸರಿದಾರಿಗೆ ತರುವವಳು. ತನ್ನ ಮುಖ್ಯಸ್ಥನ ನೆರಳಿನಂತೆ ಓಡಾಡಿ ಅವನ ಎಲ್ಲಾ ಚಲನವಲನಗಳ ಮೇಲೆ ಗಮನವಿಟ್ಟು ಅವನು ಹರಿದು ಎಸೆದ ಮುಖ್ಯ ದಾಖಲೆಗಳನ್ನು ಜೋಡಿಸಿಟ್ಟುಕೊಳ್ಳುವವಳು. ಪ್ರತಿಯೊಂದು ಸಣ್ಣ ಸಣ್ಣ ಸಂಗತಿಗೂ ವಿಶೇಷ ಗಮನ ಕೊಡುವವಳು. ನಿನ್ನೆ ನೀನು ತಪ್ಪು ಮಾಡಿದಾಗ ನಾನು ಅದನ್ನು ಸರಿಪಡಿಸಿದ್ದು ಸರಿಯಾದ ಕ್ರಮ. ಆದರೆ ನಿನ್ನ ವರ್ತನೆ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದ್ದು, ಸಿಟ್ಟಿಗೆದ್ದಿದ್ದು ಸರಿಯಾದ ಕ್ರಮವಲ್ಲ. ತಪ್ಪನ್ನು ಮರೆತುಬಿಡು. ಸರಿಯಾದದ್ದನ್ನು ನೆನಪಿನಲ್ಲಿಡು. ನಾನು ನಿನಗೆ ಏನು ಹೇಳಿದ್ದೇನೋ ಅದು ಕೇವಲ ಸೂಚನೆ ಮಾತ್ರ. ಈ ಟಿಪ್ಪಣಿಯ ಹಿಂದಿರುವ ಆಶಯವನ್ನು ಅನುಸರಿಸು. ಆಗ ನೀನು ನಿಜವಾಗಲೂ ಆದರ್ಶ ಕಾರ್ಯದರ್ಶಿಯಾಗುವೆ." "ಇದು ನನ್ನ ಹುಟ್ಟಿಹಬ್ಬದ ಕೊಡುಗೆ. ಇದರಲ್ಲಿ ಸದಾಶಯಗಳು ತುಂಬಿವೆ. ನಿನ್ನ ಪ್ರೀತಿಯ ಬಾಪೂ."

"ಇದಕ್ಕಿಂತ ಹೆಚ್ಚು ವಿಶಿಷ್ಟವಾದ ಮತ್ತು ಅಮೂಲ್ಯವಾದ ಜನ್ಮದಿನದ ಉಡುಗೊರೆ ಇದ್ದೀತೆಂದು ನಾನು ಭಾವಿಸಲಾರೆ."ಎಂದು ಅಮೃತ್ ಕೌರ್ ಈ ಪತ್ರದ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.

ಮಹಾತ್ಮಾಗಾಂಧೀಜಿಯವರು ಹುತಾತ್ಮರಾದ ನಂತರ ಜವಹರಲಾಲ್ ನೆಹರು ಅವರು ಕೌರ್ ಅವರನ್ನು ಸಂಪುಟಕ್ಕೆ ಸೇರಿಸಿಕೊಂಡು ಅವರ ಕಾರ್ಯ ಸಾಮರ್ಥ್ಯವನ್ನು ರಾಷ್ಟ್ರ ರಾಜಕಾರಣಕ್ಕೆ ಬಳಸಿಕೊಂಡರು. ಹೀಗೆ ಸಚಿವ ಸಂಪುಟದ ಪ್ರಥಮ ಮಹಿಳಾ ಸದಸ್ಯರಾಗಿ 1947-1957ರವರೆಗೆ ಆರೋಗ್ಯ ಖಾತೆಯ ಹೊಣೆ ಹೊತ್ತರು, 1952-1957ರ ಅವಧಿಗೆ ಹಿಮಾಚಲ ಪ್ರದೇಶದ ಮಂಡಿ ಮಹಾಸು ಕ್ಷೇತ್ರದಿಂದ ಪ್ರಥಮ ಲೋಕಸಭೆಯ ಸದಸ್ಯರಾಗಿ ಅವರು ಚುನಾಯಿತರಾದರು. ನಂತರ ಅವರು ರಾಜ್ಯಸಭಾ ಸದಸ್ಯರಾಗಿಯೂ (1957-1962ರ ವರಗೆ) ಆಯ್ಕೆಯಾದರು.

ಕೇಂದ್ರ ಆರೋಗ್ಯ ಸಚಿವೆಯಾಗಿದ್ದ ಅವಧಿಯಲ್ಲಿ ಅವರು ದೇಶದ ವೈದ್ಯಕೀಯ ಅಧ್ಯಾಯವನ್ನು ವಿಸ್ತರಿಸಿದರು. ಸಾರ್ವಜನಿಕ ಆರೋಗ್ಯ ಸಂರಕ್ಷಣಾ ಕಾರ್ಯಕ್ರಮಗಳನ್ನು ದೇಶದ ಎಲ್ಲೆಡೆಗೂ ವಿಸ್ತರಿಸಿದರು. ಈ ಅವಧಿಯಲ್ಲಿ ಅನೇಕ ಹೊಸ ವೈದ್ಯಕೀಯ ಕಾಲೇಜುಗಳು ಸ್ಥಾಪಿತವಾದವು. ಅನೇಕ ಹೊಸ ಆಸ್ಪತ್ರೆಗಳು ನಿರ್ಮಿಸಲ್ಪಟ್ಟವು. ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. 1950ರಲ್ಲಿ ವಿಶ್ವ ಆರೋಗ್ಯ ಮಹಾ ಮಂಡಳಿಯ (ಡಬ್ಲ್ಯು.ಹೆಚ್.ಒ) ಅಧ್ಯಕ್ಷರಾಗಿಯೂ ಅವರು ಚುನಾಯಿತರಾದರು.1957ರಲ್ಲಿ ನವದೆಹಲ್ಲಿ ಅಂತರ ರಾಷ್ಟ್ರೀಯ ರೆಡ್‌ಕ್ರಾಸ್ ಸಮ್ಮೇಳನವನ್ನು ಅವರು ಸಂಘಟಿಸಿದರು. ಜೊತೆಯಲ್ಲೇ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ (ಐ.ಆರ್‌ಸಿ.ಎಸ್) ಸ್ಥಾಪಕ ಸದಸ್ಯರೂ ಹಾಗೂ ಕಾರ್ಯ ನಿರ್ವಾಹಕ ಮಂಡಳಿಯ ಅಧ್ಯಕ್ಷರೂ ಆಗಿ ಚುನಾಯಿತರಾದರು. ದೇಶದ ವಿವಿಧ ರಾಜ್ಯಗಳ ರಾಜಧಾನಿಗಳಲ್ಲಿ ರಕ್ತ ನಿಧಿಗಳ ಸ್ಥಾಪನೆಗೂ ಅವರು ಕಾರಣಕರ್ತರಾದರು. ಆರೋಗ್ಯ ಸಚಿವಾಲಯವು ಅವರ ನೇತೃತ್ವದಲ್ಲಿ ಚಟುವಟಿಕೆಗಳ ಆಗರವಾಯಿತು.

ಮುಂದಿನ ಪೀಳಿಗೆಯವರಿಗೆ ಸನ್ನಡತೆ, ಸ್ಥೈರ್ಯಮತ್ತು ಸಚ್ಚಾರಿತ್ರ್ಯದ ಪಥವನ್ನು ತೋರಿಸಿ, ಅದಕ್ಕೆ ಬೇಕಾದ ಸ್ಫೂರ್ತಿಯನ್ನು ಬಳುವಳಿಯಾಗಿ ನೀಡಿದ ಅಮೃತ ಕೌರ್ ಅವರು 1964ರ ಫೆಬ್ರವರಿ 6 ರಂದು ನಿಧನ ಹೊಂದಿದರು. ಹೀಗೆ ನಿಜವಾದ ಅರ್ಥದಲ್ಲಿ ಮಹಾತ್ಮಾಗಾಂಧೀಜಿ ಅವರ ಕರ್ಮಯೋಗಿ ಶಿಷ್ಯೆ ಎಂಬ ಗೌರವಕ್ಕೆ ಪಾತ್ರರಾದರು.

## ಭಾಗ-3

# ರಾಜಕುಮಾರಿ ಅಮೃತ ಕೌರ್

ಡಾ. ಸುಶೀಲಾ ನಯ್ಯರ್ *

ರಾಜಕುಮಾರಿ ಅಮೃತ ಕೌರ್ ಅವರು ಸ್ವತಂತ್ರ ಭಾರತದ ಕೇಂದ್ರ ಸರ್ಕಾರದ ಪ್ರಥಮ ಆರೋಗ್ಯ ಸಚಿವರಾಗಿದ್ದರು. ಮಹಾತ್ಮಾಗಾಂಧೀಜಿ ಅವರ ವಿಶ್ವಾಸಪಾತ್ರ ಸೇನಾನಿಯಾಗಿದ್ದರು. ಸಾಮಾಜಿಕ ಕಾರ್ಯಕರ್ತರಾಗಿದ್ದರು. ಸ್ವಾತಂತ್ರ್ಯ ಹೋರಾಟಗಾರ್ತಿಯರಲ್ಲಿ ಪ್ರಮುಖರಾಗಿದ್ದ ಅವರು ಕಪುರ್ತಲಾದ ಅಹ್ಲುವಾಲಿಯ ರಾಜ ಮನೆತನದ ರಾಜಾ ಸರ್ ಹರ್ನಾಮ್‌ಸಿಂಗ್ ಅವರ ಏಕಮಾತ್ರ ಪುತ್ರಿ. ರಾಜಮನೆತನದ ವೈಭವೋಪೇತ ಜೀವನಕ್ಕೆ, ಸುಖ ಭೋಗಗಳಿಗೆ ಆಕೆ ಎಳೆಯ ವಯಸ್ಸಿನಲ್ಲಿ ಬೆನ್ನು ಮಾಡಿ ಮಹಾತ್ಮಾಗಾಂಧೀಜಿಯವರ ಶಿಷ್ಯೆಯಾದರು, 1915ರಲ್ಲಿ ಮುಂಬಯಿಯಲ್ಲಿ ನಡೆದ ಕಾಂಗ್ರೆಸ್ ಸಮ್ಮೇಳನದಲ್ಲಿ ಅವರಿಗೆ ಮಹಾತ್ಮಾ ಗಾಂಧೀಜಿಯವರ ಪರಿಚಯವಾಗಿ 1934 ರಲ್ಲಿ ಗಾಂಧೀಜಿಯವರ ಸೇವಾಗ್ರಾಮ ಆಶ್ರಮ ಸೇರಿದರು.

ರಾಜಾ ಸರ್ ಹರ್ನಾಮ್‌ಸಿಂಗ್ ಅವರಿಗೆ ಏಳು ಮಂದಿ ಗಂಡು ಮಕ್ಕಳು, ಒಬ್ಬಳೇ ಮಗಳು ಅಮೃತ ಕೌರ್. ತಂದೆ ಕ್ರೈಸ್ತ ಮತವನ್ನು ಸ್ವೀಕರಿಸಿದ ಕಾರಣದಿಂದ ಕಪುರ್ತಲಾ ರಾಜ ಸಿಂಹಾಸನದ ಮೇಲಿನ ಅಧಿಕಾರವನ್ನು ಕಳೆದುಕೊಂಡರು. ಆದರೆ ಬ್ರಿಟಿಶ್ ಸರ್ಕಾರ ಅವರನ್ನು ಔದ್ ಎಸ್ಟೇಟಿನ ಮ್ಯಾನೇಜರ್ ಆಗಿ ನೇಮಕ ಮಾಡಿತು. ಇದರ ಆಸ್ತಿ ಪಾಸ್ತಿ ಕಪುರ್ತಲಾ ರಾಜಮನೆತನದ ಆಸ್ತಿಗಿಂತ ಬಹುಪಾಲು ಅಧಿಕವಾಗಿತ್ತು. ತಂದೆ ಹಾಗೂ ಸಹೋದರರಿಗೆ ಅಮೃತ ಕೌರ್ ಎಂದರೆ ಅಷ್ಟೊಂದು ಪ್ರೀತಿ.

ಅಮೃತ ಕೌರ್ ಅವರು 1989ರ ಫೆಬ್ರವರಿ 2 ರಂದು ಜನಿಸಿದರು. ಕ್ರೈಸ್ತ ಮತದಲ್ಲಿ ಮತದಲ್ಲಿ ಜನಿಸಿದವರಾದರೂ ಅವರಿಗೆ ಇತರ ಎಲ್ಲಾ ಧರ್ಮಗಳ ಬಗ್ಗೆ ಸಮಾನ ಗೌರವ ಇದ್ದಿತು. ಅವರ ಪ್ರಾರಂಭಿಕ ಶಿಕ್ಷಣ ಇಂಗ್ಲೆಂಡಿನ ಡಾರ್‌ನೆಟ್ಸ್‌ಶೈರ್‌ನ ಶೆರ್ನ್‌ಬೋರ್ನ್ ಬಾಲಕಿಯರ ಶಾಲೆಯಲ್ಲಿ ನಡೆಯಿತು. ಆಕೆಗೆ ಕ್ರೀಡೆಗಳೆಂದರೆ ಅಚ್ಚುಮೆಚ್ಚು .ಅದರಲ್ಲಿ ಟೆನಿಸ್ ಆಟದಲ್ಲಿ ಚತುರೆಯಾಗಿದ್ದರು. ಆಕೆ ಅನೇಕ ಚಾಂಪಿಯನ್‌ಶಿಪ್‌ಗಳನ್ನು ತಮ್ಮದಾಗಿಸಿಕೊಂಡಿದ್ದರು. 1947ರಲ್ಲಿ ಪಂಡಿತ್ ಜವಾಹರಲಾಲ್ ನೆಹರೂ ಅವರು ಆರೋಗ್ಯ ಮತ್ತು ಸ್ಥಳೀಯ ಸ್ವಯಂ ಆಡಳಿತ ಖಾತೆಯ ಜೊತೆಗೆ ಕ್ರೀಡಾ ಖಾತೆಯನ್ನು ವಹಿಸಿಕೊಟ್ಟಿದ್ದು ಈ ಹಿನ್ನಲೆಯಲ್ಲೇ. ಕೌರ್ ಅವರು ರಾಜಕುಮಾರಿ ಕ್ರೀಡಾ ತರಬೇತಿ ಯೋಜನೆಯ ಸ್ಥಾಪಕ ಅಧ್ಯಕ್ಷೆಯಾಗಿದ್ದರಲ್ಲದೆ ರಾಷ್ಟ್ರೀಯ ಕ್ರೀಡಾ ಸಂಸ್ಥೆಯ ಆಡಳಿತ ಮಂಡಳಿಯು ವರಿಷ್ಠರೂ ಆಗಿದ್ದರು.

ರಾಜಾ ಸರ್ ಹರ್ನಾಮ್‌ಸಿಂಗ್ ಆಸ್ತಿಕ ಮನೋಭಾವದ ಕ್ರೈಸ್ತ ಮತಾವಲಂಬಿ. ಮಹಾತ್ಮಾ ಗಾಂಧೀಜಿಯವರು ತಮ್ಮ ರಾಜಕೀಯ ಗುರು ಎಂದೇ ಪರಿಗಣಿಸಿದ್ದ ಗೋಪಾಲ ಕೃಷ್ಣ ಗೋಖಲೆಯವರು ಸೇರಿದಂತೆ ವಿವಿಧ ಧರ್ಮಗಳಿಗೆ ಸೇರಿದ ದೇಶಾಭಿಮಾನಿ ಧುರೀಣರನೇಕರು ಅವರ ಸ್ನೇಹಿತರಾಗಿದ್ದರು. ಗೋಪಾಲ ಕೃಷ್ಣ ಗೋಖಲೆಯವರು ಆಗಾಗ ಹರ್ನಾಮ್ ಸಿಂಗ್

* ಡಾ।। ಸುಶೀಲಾ ನಯ್ಯರ್ ಅವರು ಕೇಂದ್ರದ ಮಾಜಿ ಸಚಿವೆ.

ಅವರ ಮನೆಗೆ ಭೇಟಿ ನೀಡುತ್ತಿದ್ದರು. ಇದರಿಂದಾಗಿ ಅಮೃತ ಕೌರ್ ಅವರಲ್ಲಿ ಎಳವೆಯಲ್ಲೇ ರಾಷ್ಟ್ರೀಯ ವಿಚಾರಧಾರೆಗಳು ಹಾಗೂ ಆಶೋತ್ತರಗಳು ಮೂಡಿದವು. ತಂದೆಯವರು ತಮ್ಮ ಜೀವನದ ಮೇಲೆ ಬೀರಿದ ಪ್ರಭಾವವನ್ನು ಕುರಿತು ಬರೆಯುತ್ತಾ"ವಿದೇಶಿ ದಬ್ಬಾಳಿಕೆಯಿಂದ ಭಾರತವನ್ನು ಮುಕ್ತಗೊಳಿಸಬೇಕೆಂಬ ನನ್ನ ಅದಮ್ಯ ಅಭಿಲಾಷೆಗೆ ತಂದೆಯೇ ಉತ್ತೇಜನ ನೀಡಿದರು" ಎಂದಿದ್ದಾರೆ. ತಂದೆಯ ದೆಸೆಯಿಂದಲೇ ಅಷ್ಟರಮಟ್ಟಿಗೆ ಖ್ಯಾತಿ ಮತ್ತು ಸ್ಥಾನಮಾನಗಳು ಬಂದಿದ್ದವಾದರೂ ಅದಕ್ಕೆ ಸರಿದೊರೆಯಾಗಿ ಸ್ವಂತ ಸಾಮರ್ಥ್ಯ ಹಾಗೂ ಕಠಿಣ ಪರಿಶ್ರಮದಿಂದ ಅದನ್ನು ಇನ್ನಷ್ಟು ಹೆಚ್ಚಿಸಿಕೊಂಡರು.

ಕ್ರೈಸ್ತ ಧರ್ಮಾವಲಂಬಿಯಾಗಿದ್ದ ಕೌರ್ ಅವರಲ್ಲಿ ಮತಾಂಧತೆ ಎಳ್ಳಷ್ಟು ಇರಲಿಲ್ಲ. ಬದಲಾಗಿ'ಸರ್ವಧರ್ಮ ಸಮಾಹವ' (ಎಲ್ಲ ಮತಗಳನ್ನು ಸಮಭಾವದಿಂದ ನೋಡುವ ಮನೋಭಾವ) ಸಿದ್ಧಾಂತಕ್ಕೆ ನಿಷ್ಠೆಯಿಂದ ಇದ್ದರು. ಗಾಂಧೀಜಿಯವರ ಆಶ್ರಮದಲ್ಲಿ ನನ್ನಂತಹ ಅನೇಕರಿಗೆ ಅವರು ಕ್ರೈಸ್ತ ಧರ್ಮೀಯವರು ಎಂಬುದು ತಿಳಿದೇ ಇರಲಿಲ್ಲ. ಆಶ್ರಮದಲ್ಲಿ ನಿಯತವಾಗಿ ನಡೆಯುತ್ತಿದ್ದ ಪ್ರಾರ್ಥನೆಯಲ್ಲಿ ಆಕೆ ತಪ್ಪದೆ ಪಾಲ್ಗೊಳ್ಳುತ್ತಿದ್ದರು. ಈ ಪ್ರಾರ್ಥನೆಗಳಲ್ಲಿ ಸಂಸ್ಕೃತ ಸೂಕ್ತಿಗಳು ಮತ್ತು ಉಪನಿಷತ್ತುಗಳು ಹಾಗೂ ಭಗವದ್ಗೀತೆಯ ಶ್ಲೋಕಗಳಿಗೆ ಪ್ರಾಮುಖ್ಯತೆ ಇರುತ್ತಿದ್ದರೂ ಎಲ್ಲ ಧರ್ಮ ಗ್ರಂಥಗಳ ಆಯ್ದ ಭಾಗಗಳನ್ನು ಅಲ್ಲಿ ಪಠಿಸಲಾಗುತ್ತಿತ್ತು.

ಸಾರ್ವಜನಿಕ ಜೀವನದಲ್ಲಿ ಅವರ ಆಸಕ್ತಿ ಸಮಾಜ ಸೇವೆಯ ಕಡೆಗಿತ್ತು. ಅದರಲ್ಲೂ ವಿಶೇಷವಾಗಿ ಮಹಿಳೆಯರು ಮತ್ತು ಮಕ್ಕಳ ಕಲ್ಯಾಣ ಅವರ ಆಸ್ಥೆಯ ವಿಷಯವಾಗಿತ್ತು. ಅನೇಕ ಸಲ ಅದು ಅವರ ರಾಜಕೀಯ ಆಸಕ್ತಿಯನ್ನು ಅವು ಮೀರಿ ನಿಲ್ಲುತ್ತಿತ್ತು. 1927 ಮತ್ತು 1930ರಲ್ಲಿ ನಡೆದ ಅಖಿಲ ಭಾರತ ಮಹಿಳಾ ಸಮ್ಮೇಳನದಲ್ಲಿ ಅವರು ಸಕ್ರಿಯವಾಗಿ ಪಾಲ್ಗೊಂಡಿದ್ದರು. ಎಐಡಬ್ಲ್ಯುಸಿಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದರು. 1938ರಲ್ಲಿ ಅಧ್ಯಕ್ಷರಾದರು. 1931 ರಿಂದ 1933 ರ ವರೆಗೆ ಅವರು ಭಾರತೀಯ ಮಹಿಳಾ ಶಿಕ್ಷಣ ನಿಧಿ ಸಂಘಟನೆಯ ಅಧ್ಯಕ್ಷರಾಗಿದ್ದರು. 1932ರಲ್ಲಿ ಲಾರ್ಡ್ ಲೋಥಿಯಾನ್ ಮತದಾನ ಹಕ್ಕು ಸಮಿತಿಯ ಮುಂದೆ ಮಹಿಳಾ ಸಂಘಟನೆಗಳ ಪರವಾಗಿ ಅವರು ಸಾಕ್ಷ್ಯ ಹೇಳಿದರು. 1933 ರಲ್ಲಿ ಭಾರತೀಯ ಸಾಂವಿಧಾನಿಕ ಸುಧಾರಣೆಗಳ ಕುರಿತು ಬ್ರಿಟಿಷ್ ಸಂಸತ್ತಿನ ಜಂಟಿ ಆಯ್ಕೆ ಸಮಿತಿಯ ಮುಂದೆ ಮಹಿಳಾ ಸಂಘಟನೆಗಳ ಒಕ್ಕೂಟದ ಸದಸ್ಯೆಯಾಗಿಯೂ ಪ್ರತಿನಿಧಿಸಿದರು.

ಭಾರತ ಸರ್ಕಾರದ ಶಿಕ್ಷಣ ಸಲಹಾ ಮಂಡಳಿಯ ಸದಸ್ಯರಾಗಿ ನೇಮಕಗೊಂಡು ಪ್ರಥಮ ಮಹಿಳೆಯೇ ಅಮೃತ ಕೌರ್ . 1942ರಲ್ಲಿ ಈ ಸ್ಥಾನಕ್ಕೆ ರಾಜೀನಾಮೆ ನೀಡುವ ತನಕವೂ ಹಲವು ವರ್ಷಗಳ ಕಾಲ ಅವರು ಈ ಮಂಡಳಿಯಲ್ಲಿ ಸೇವೆ ಸಲ್ಲಿಸಿದರು. ಅದಲ್ಲದೆ ಹಿಂದೂಸ್ತಾನಿ ತಾಲಿಮಿ ಸಂಘದ ಸದಸ್ಯರಾಗಿದ್ದರು.1945ರಲ್ಲಿ ಲಂಡನ್‌ನಲ್ಲಿ ನಡೆದ ಹಾಗೂ 1946ರಲ್ಲಿ ಪ್ಯಾರಿಸ್‌ನಲ್ಲಿ ನಡೆದ ಯುನೆಸ್ಕೊ ಸಮಾವೇಶಗಳಲ್ಲೂ ಅವರು ಭಾರತೀಯ ನಿಯೋಗದ ಸದಸ್ಯರಾಗಿ ಪಾಲ್ಗೊಂಡರು. ಮಹಿಳಾ ಶಿಕ್ಷಣದ ಬಗ್ಗೆ ಅವರು ಅತೀವ ಆಸ್ಥೆ ಹೊಂದಿದ್ದರು.

1930ರ ದಶಕದ ಆರಂಭದಲ್ಲೇ ಅವರು ಗಾಂಧೀಜಿಯವರ ಪ್ರಭಾವಕ್ಕೆ ಒಳಗಾದರು.

ನಾನು ದೆಹಲಿಯಲ್ಲಿ ವಿದ್ಯಾರ್ಥಿಯಾಗಿದ್ದಾಗ ಆಗಾಗ ಹಳೆ ದೆಹಲಿಯ ಕಿಂಗ್ಸ್ ವೇ ಕ್ಯಾಂಪ್‌ನಲ್ಲಿ ಹರಿಜನ ನೇಮಕ ಸಂಘಕ್ಕೆ ಗಾಂಧೀಜಿಯವರು ಬಂದಾಗಲೆಲ್ಲ ಪ್ರಧಾನ ಕಛೇರಿಯಲ್ಲಿ

ಸಂಜೆ ವೇಳೆಯಲ್ಲಿ ನಡೆಯುತ್ತಿದ್ದ ಪ್ರಾರ್ಥನಾ ಸಭೆಗಳಿಗೆ ಹೋಗುತ್ತಿದ್ದೆ. ಅಂತಹ ಸಂದರ್ಭಗಳಲ್ಲೆಲ್ಲಾ ಕೌರ್ ಅವರು ರೇಷ್ಮೆ ಉಡುಪು ಧರಿಸಿ ಕಿವಿಗಳಿಗೆ ಉದ್ದನೆಯ ಲೋಲಾಕು ಹಾಗೂ ಮತ್ತಿತರ ಸುಂದರ ಆಭರಣ ಧರಿಸಿ ಬಾಪೂ ಅವರ ಬಳಿ ಕುಳಿತಿರುವುದನ್ನು ನಾನು ನೋಡುತ್ತಿದ್ದೆ. ಆದರೆ ಆಶ್ರಮದಲ್ಲೇ ನೆಲಸಲು ಬಂದಾಗ ಇದೆಲ್ಲವೂ ಬದಲಾಗಿತ್ತು. ಆ ದಿನಗಳಲ್ಲಿ ನಾನೆಂದೂ ಆಕೆಯ ಜೊತೆ ಮಾತನಾಡಿದ್ದಿಲ್ಲ. ಏಕೆಂದರೆ ಆಕೆ ರಾಜಕುಮಾರಿಯಾಗಿದ್ದರು. ನನ್ನಂತಹ ಸಾಮಾನ್ಯ ವಿದ್ಯಾರ್ಥಿಗೆ ನಿಲುಕದವಾಗಿದ್ದರು.

ಗಾಂಧೀಜಿಯವರ ಪ್ರಭಾವದಿಂದಾಗಿ ರಾಜಕುಮಾರಿ ಅಮೃತ ಕೌರ್ ಖಾದಿ ಧರಿಸಿದರು. ಆಶ್ರಮದಲ್ಲಿ ನೆಲದ ಮೇಲೆ ಕುಳಿತು ಆಶ್ರಮ ವಾಸಿಗಳಿಗೆ ನೀಡುತ್ತಿದ್ದ ಸಾಮಾನ್ಯ ಆಹಾರವನ್ನೇ ಸೇವಿಸುತ್ತಿದ್ದರು. ಅನಂತರ ಅಖಿಲ ಭಾರತದ ನೇಕಾರರ ಸಂಘದ ಧರ್ಮದರ್ಶಿ ಮಂಡಳಿಯ ಸದಸ್ಯರಾಗಿ ನೇಮಕಗೊಂಡರು. ನೂಲುವುದನ್ನು ಕಲಿತರು. ಆಶ್ರಮದ ಸ್ವಚ್ಛತಾ ಕಾರ್ಯಗಳಲ್ಲೂ ತಮ್ಮನ್ನು ತೊಡಗಿಸಿಕೊಂಡರು.

ಅಮೃತ ಕೌರ್ ಅವರು ಗಾಂಧೀಜಿಯವರ ಸ್ಫೂರ್ತಿಯಿಂದ ಕಾಂಗ್ರೆಸ್ ಪಕ್ಷವನ್ನು ಸೇರಿದರು. ತಮ್ಮ ಜೀವನದ ಉದ್ದಕ್ಕೂ ಪಕ್ಷದ ಚಟುವಟಿಕೆಯಲ್ಲಿ ಸಕ್ರಿಯ ಪಾತ್ರ ವಹಿಸಿದರು. 1930ರಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ಮುಂಬಯಿಯಲ್ಲಿ ಬಂಧಿತರಾದರು. 1930ರಲ್ಲಿ ಎರಡನೇ ದುಂಡು ಮೇಜಿನ ಪರಿಷತ್ತಿನ ನಂತರ ಬ್ರಿಟಿಷ್ ಸರ್ಕಾರ ಕೊಡ ಮಾಡಿದ ಸಮುದಾಯ ಪ್ರಶಸ್ತಿಯನ್ನು ಅವರು ತಿರಸ್ಕರಿಸಿದರು. 1937ರಲ್ಲಿ ಅವರು ದೇಶದ ವಾಯವ್ಯ ಗಡಿ ಪ್ರಾಂತ್ಯದ ಬನ್ನುವಿಗೆ ತೆರಳಿ ಕಾಂಗ್ರೆಸ್ ಪಕ್ಷದ ಪರವಾಗಿ ಪ್ರಚಾರ ನಡೆಸಿದರು. ಆ ಸಂದರ್ಭದಲ್ಲಿ ರಾಜದ್ರೋಹದ ಆರೋಪಕ್ಕೆ ಒಳಗಾದ ಅವರು 1937ರ ಜುಲೈ 16 ರಂದು ಸೆರಮನೆ ವಾಸದ ಶಿಕ್ಷೆಗೆ ಗುರಿಯಾದರು. 1942ರಲ್ಲಿ ಭಾರತ ಬಿಟ್ಟು ತೊಲಗಿ ಚಳುವಳಿಯಲ್ಲಿ ಪಾಲ್ಗೊಂಡು ಅನೇಕ ಮೆರವಣಿಗೆಗಳ ನೇತೃತ್ವ ವಹಿಸಿದರು. ಅಂತಹ ಮೆರವಣಿಗೆಗಳ ಕಾಲದಲ್ಲಿ ಪೊಲೀಸರ ಲಾಠಿ ಪ್ರಹಾರಕ್ಕೂ ಗುರಿಯಾದರು. ಕಲ್ಕತ್ತದಲ್ಲಿ ಅವರನ್ನು ಬಂಧಿಸಿ ಎಂಟು ದಿನಗಳ ಕಾಲ ಕೊಳಕು ಕಾರಾಗೃಹದಲ್ಲಿ ಏಕಾಂತ ಶಿಕ್ಷೆಗೆ ಗುರಿಪಡಿಸಲಾಯಿತು. ಸೆರೆಮನೆಯಲ್ಲಿ ಅವರು 7.5 ಕೆ.ಜಿ. ತೂಕ ಕಳೆದುಕೊಂಡಾಗ, ಶಿಮ್ಲಾದಲ್ಲಿನ ಅವರ ಸ್ವಂತ ಮನೆಯಲ್ಲಿ ಅವರನ್ನು ಸ್ಥಾನ ಬದ್ಧತೆಯಲ್ಲಿ ಇರಿಸಲಾಯಿತು. ಸೆರೆಮನೆಯಲ್ಲಿ ಅವರನ್ನು ಎಷ್ಟು ಕೆಟ್ಟದಾಗಿ ನಡೆಸಿಕೊಳ್ಳಲಾಯಿತೆಂದರೆ ಇದನ್ನು ಪ್ರತಿಭಟಿಸಿದ ಇಂಗ್ಲಿಷ್ ಅಧಿಕಾರಿ ಪ್ಯಾಂಡರಲ್ ಮೂರ್ ಎಂಬುವರು ತಮ್ಮ ಕೆಲಸವನ್ನೇ ಕಳೆದುಕೊಳ್ಳಬೇಕಾಯಿತು.

1944ರ ಮೇ ತಿಂಗಳಲ್ಲಿ ಗಾಂಧೀಜಿ ಸೆರೆಮನೆಯಿಂದ ಬಿಡುಗಡೆ ಹೊಂದಿದ್ದರು. ಇದಾದ ನಂತರ ಅವರು 1946ರ ಮಧ್ಯಂತರ ಸರ್ಕಾರದ ರಚನೆ ಸಂಬಂಧದಲ್ಲಿ ಮೌಲಾನಾ ಅಜಾದ್, ಜವಹರಲಾಲ್ ನೆಹರೂ, ವಲ್ಲಭಬಾಯಿ ಪಟೇಲ್ ಮತ್ತಿತರ ಮುಖಂಡರೊಂದಿಗೆ ವೈಸರಾಯ್ ಅವರನ್ನು ಭೇಟಿಯಾದರು. ಆಗ ವೈಸರಾಯ್ ಮತ್ತು ಸರ್ಕಾರದ ಇತರ ಪ್ರತಿನಿಧಿಗಳೊಂದಿಗೆ ಸುದೀರ್ಘ ಮಾತುಕತೆ ನಡೆದು ಮಧ್ಯಂತರ ಸರ್ಕಾರ ರಚನೆ ಬಗ್ಗೆ ಒಪ್ಪಂದವೊಂದಕ್ಕೆ ಬರಲಾಯಿತು. ಜವಹರಲಾಲ್ ನೆಹರು ಅವರು ಈ ಸರ್ಕಾರದ ಉಪಾಧ್ಯಕ್ಷರಾಗಿ ಆಯ್ಕೆಯಾದರು. ಪ್ರಸ್ತುತಃ ಅದು ಪ್ರಧಾನ ಮಂತ್ರಿ ಹುದ್ದೆಯಾಗಿತ್ತು. ಆದರೆ ಕಾರ್ಯರೂಪಕ್ಕೆ ಬಂದಾಗ ವೈಸರಾಯ್

ಅವರೇ ಸರ್ಕಾರದ ವರಿಷ್ಠರಾಗಿ ಉಳಿದರು. ಪಂಡಿತ ಜವಹರಲಾಲ್ ನೆಹರು ಅವರ ಸಚಿವ ಸಂಪುಟಕ್ಕೆ ಆರೋಗ್ಯ ಸಚಿವೆಯಾಗಿ ಅಮೃತ ಕೌರ್ ಅವರ ಹೆಸರು ಸೂಚಿಸಲಾಯಿತು. ಆದರೆ ವೈಸರಾಯ್ ಅವರು ಈ ಸೂಚನೆಯನ್ನು ತಳ್ಳಿಹಾಕಿದರು.

ಒಂದು ಸಲ ಮಹಾತ್ಮಾಗಾಂಧೀಜಿಯವರು ಹಾಗೂ ಅವರ ಸಂಗಾತಿಗಳು ಶಿಮ್ಲಾದಲ್ಲಿ ಅಮೃತ ಕೌರ್ ಅವರ ಅತಿಥಿಗಳಾಗಿ ಸಮ್ಮರ್ ಹಿಲ್‌ನಲ್ಲಿದ್ದ ಅವರ ಸುಂದರ ಬಂಗಲೆಯಲ್ಲಿ ಉಳಿದುಕೊಳ್ಳುವ ಪ್ರಸಂಗ ಬಂದಿತು. ಕೌರ್ ಅಲ್ಲಿ ತಮ್ಮ ಸಹೋದರ ಶಮ್‌ಶರ್‌ಮತ್ತು ಅವರ ಕುಟುಂಬದವರೊಂದಿಗೆ ವಾಸವಾಗಿದ್ದರು."ಆಕೆ ನಿಜಕ್ಕೂ ಓರ್ವ ಉದಾರ ಮತ್ತು ಸೌಜನ್ಯಶೀಲ ಅತಿಥೇಯರಾಗಿದ್ದರು. ಅತಿಥಿಗಳ ಸಣ್ಣ ಸಣ್ಣ ಆದ್ಯತೆಗಳಿಗೂ ವಿಶೇಷ ಗಮನ ನೀಡಿ ಅವರನ್ನು ಉಪಚರಿಸುವ ಚಾಕಚಕ್ಯತೆ ಉಳ್ಳವರಾಗಿದ್ದರು."

1947ರಲ್ಲಿ ಭಾರತ ಸ್ವತಂತ್ರವಾಯಿತು ಮತ್ತು ಅಮೃತ ಕೌರ್ ಅವರು ದೇಶದ ಪ್ರಥಮ ಆರೋಗ್ಯ ಸಚಿವರಾದರು. ರಾಜ್ಯಾಂಗ ಸಭೆಯ ಸದಸ್ಯರಾಗಿದ್ದ ಅವರು ಮೂಲಭೂತ ಹಕ್ಕುಗಳು, ಅಲ್ಪಸಂಖ್ಯಾತರು, ಬುಡಕಟ್ಟು ಜನಾಂಗದವರು ಮತ್ತು ಪ್ರಾತಿನಿಧ್ಯ ಇಲ್ಲದ ಪ್ರದೇಶಗಳ ಅಭಿವೃದ್ಧಿ ಸಲಹಾ ಸಮಿತಿಯ ಸದಸ್ಯರಾಗಿಯೂ ಕೆಲಸ ಮಾಡಿದರು. 1952ರ ಪ್ರಥಮ ಸಾರ್ವತ್ರಿಕ ಚುನಾವಣೆ ನಡೆಯುವವರೆಗೂ ರಾಜ್ಯಾಂಗ ಸಭೆ ಸಂಸತ್ತಿನಂತೆ ಕಾರ್ಯ ನಿರ್ವಹಿಸಿತು. ಅಮೃತ ಕೌರ್ ಪ್ರತಿನಿದಿ ಸಭೆಯ ಚರ್ಚೆಗಳಲ್ಲಿ ಸಕ್ರಿಯ ಪಾತ್ರ ವಹಿಸುತ್ತೇಲೆ ಬಂದರು.

ಕೇಂದ್ರ ಆರೋಗ್ಯ ಸಚಿವರಾಗಿ ಕೌರ್ ಅವರು ಅಸಾಧಾರಣ ರೀತಿಯಲ್ಲಿ ಕಾರ್ಯ ನಿರ್ವಹಿಸಿದರು. ಸಾಮಾನ್ಯವಾಗಿ ವೈಸರಾಯ್ ಅವರನ್ನೇ ಅಧ್ಯಕ್ಷರಾಗಿ ಆಯ್ಕೆ ಮಾಡಿಕೊಳ್ಳುವುದು ರೆಡ್‌ಕ್ರಾಸ್ ಸಂಸ್ಥೆಯ ರೂಢಿಯಾಗಿತ್ತು. 1952ರ ಸಾರ್ವತ್ರಿಕ ಚುನಾವಣೆಯ ನಂತರ, ರಾಷ್ಟ್ರ ಪತಿಗಳು ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆಯ ಗೌರವ ಅಧ್ಯಕ್ಷರಾದರು ಮತ್ತು ಕೇಂದ್ರ ಆರೋಗ್ಯ ಸಚಿವೆ ಅಮೃತ ಕೌರ್ ಅದರ ಅಧ್ಯಕ್ಷೆಯಾದರು.ರೆಡ್‌ಕ್ರಾಸ್ ಮತ್ತು ಸೇಂಟ್ ಜಾನ್ಸ್ ಆಂಬ್ಯುಲೆನ್ಸ್ ದಳಗಳ ದೈನಂದಿನ ಕಾರ್ಯಚಟುವಟಿಕೆಗಳನ್ನು ನೋಡಿಕೊಳ್ಳುತ್ತಾ ಈ ಸಂಸ್ಥೆಯನ್ನು ಬಲಪಡಿಸಿದರು. ಈ ಎರಡೂ ಸಂಘಟನೆಗಳು ಅಮೃತ ಕೌರ್ ಮತ್ತು ಲೇಡಿ ಮೌಂಟ್ ಬ್ಯಾಟನ್ ಅವರ ಸ್ಫೂರ್ತಿಯಲ್ಲಿ ಅಸಾಧಾರಣ ಸೇವೆ ಸಲ್ಲಿಸಿದವು. 1947ರ ದೇಶ ವಿಭಜನೆ ಸಂದರ್ಭದಲ್ಲಿ ಅವು ಪಾಕಿಸ್ತಾನದಿಂದ ವಲಸೆ ಬಂದ ನಿರಾಶ್ರಿತರ ಪುನರ್ ವಸತಿಗಾಗಿ ಅಹರ್ನಿಶಿ ಸೇವೆ ಸಲ್ಲಿಸಿದವು.

ಕೌರ್ ಅವರು 1952ರ ಚುನಾವಣೆಗೆ ಮುನ್ನವೇ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಅಧ್ಯಕ್ಷರಾಗಿ ಆಯ್ಕೆಗೊಂಡಿದ್ದರು. ಮೌಂಟ್ ಬ್ಯಾಟನ್ ಅವರು ಇಂಗ್ಲೆಂಡಿನಿಂದ ವಾಪಾಸಾದ ಬೆನ್ನಿನಲ್ಲಿ, ರಾಜಾಜಿಯವರು ಗವರ್ನರ್ ಜನರಲ್ ಆಗಿ ಅಧಿಕಾರ ವಹಿಕೊಂಡ ಸಂದರ್ಭ ಅದಾಗಿತ್ತು. 1950 ರಿಂದ ರೆಡ್‌ಕ್ರಾಸ್ ಸೊಸೈಟಿಗಳ ಮಹಾ ಮಂಡಳಿಯ ಉಪಾಧ್ಯಕ್ಷೆಯಾಗಿ ಕೆಲಸ ಮಾಡಿದ ಅವರು 1957ರಲ್ಲಿ ಕೌಂಟ್ ಬೆರ್ನಡಾಟ್ ಚಿನ್ನದ ಪದಕ ಪಡೆದುಕೊಂಡರು. ಯುರೋಪ್, ಆಫ್ರಿಕಾ ಮತ್ತು ಏಷ್ಯಾ ಖಂಡಗಳ 14 ರಾಷ್ಟ್ರಗಳ ರಾಷ್ಟ್ರೀಯ ರೆಡ್‌ಕ್ರಾಸ್‌ಸೊಸೈಟಿಗಳಿಂದ ಚಿನ್ನದ ಪದಕಗಳನ್ನು ಪಡೆದು ಕೊಂಡರು. ಸೇಂಟ್ ಜಾನ್ಸ್ ಆಂಬ್ಯುಲೆನ್ಸ್ ಅಸೋಸಿಯೇಷನ್ ಕಾರ್ಯ ನಿರ್ವಾಹಕ ಸಮಿತಿಯ ಅಧ್ಯಕ್ಷರಾಗಿಯೂ ಅವರು ಸೇವೆ ಸಲ್ಲಿಸಿದರು. 1948 ರಿಂದ ಸೇಂಟ್ ಜಾರ್ನ್ ಆಂಬ್ಯುಲೆನ್ಸ್ ಬ್ರಿಗೇಡ್‌ನ ಪ್ರಮುಖ

ಆಯುಕ್ತರಾಗಿಯೂ ಸೇವೆ ಸಲ್ಲಿಸಿದರು. ಜಗತ್ತಿನಾದ್ಯಂತ ಅನೇಕ ಸಂಸ್ಥೆಗಳು ಅವರನ್ನು ಗೌರವಿಸಿದವು. ದೆಹಲಿ ವಿಶ್ವ ವಿದ್ಯಾಲಯ ಹಾಗೂ ಅಮೆರಿಕ ಪ್ರಿನ್ಸ್‌ಟನ್ ವಿಶ್ವವಿದ್ಯಾಲಯ, ಸ್ಮಿತ್ ಕಾಲೇಜ್, ವೆಸ್ಟರ್ನ್ ಕಾಲೇಜು, ಮ್ಯೂಕ್‌ಮುರ್ರೆ ಕಾಲೇಜು, ಜಾಕ್ಸನ್ ವಿಲೆ ಮತ್ತಿತ್ತರ ಸಂಸ್ಥೆಗಳಿಂದ ಗೌರವ ಡಾಕ್ಟರೇಟ್ ಪದವಿಗಳನ್ನು ಸ್ವೀಕರಿಸಿದರು. ಅದೇ ರೀತಿ ಅಮೆರಿಕ ಸಾರ್ವಜನಿಕ ಆರೋಗ್ಯ ಸಂಸ್ಥೆಯ ಗೌರವ ಸದಸ್ಯತ್ವದ ಮನ್ನಣೆ ಗಳಿಸಿದರು.

ಮಹಿಳೆಯರು ಮತ್ತು ಮಕ್ಕಳ ಕಲ್ಯಾಣದಲ್ಲಿ ಅಮೃತ ಕೌರ್ ಸದಾ ಅತೀವ ಆಸಕ್ತಿ ತೋರಿದರು ಹಾಗೂ ಪರಿಶ್ರಮ ವಹಿಸಿದರು. ಭಾರತೀಯ ಶಿಶು ಕಲ್ಯಾಣ ಮಂಡಳಿಯನ್ನು ಸ್ಥಾಪಿಸಿ, 1948ರಿಂದ 1958ರವರೆಗೆ ಅದರ ಸ್ಥಾಪಕ ಅಧ್ಯಕ್ಷರಾಗಿ ದೇಶದಲ್ಲಿನ ಶಿಶು ಯೋಗಕ್ಷೇಮ ಚಟುವಟಿಕೆಗಳ ಉಸ್ತುವಾರಿ ನೋಡಿಕೊಂಡರು.

ಬ್ರಿಟಿಷ್ ಎಂಪೈರ್ ಲೆಪ್ರಸಿ ರಿಲೀಫ್ ಅಸೋಸಿಯೇಷನ್ (ಬಿಇಎಲ್‌ಆರ್‌ಎ) ವೈಸ್‌ರಾಯ್ ಅವರ ನೇತೃತ್ವದಲ್ಲಿ ಕಾರ್ಯನಿರ್ವಹಿಸುತ್ತಿತ್ತು. ಸ್ವತಂತ್ರ ಭಾರತದಲ್ಲಿ ಇದಕ್ಕೆ ಹಿಂದ್ ಕುಷ್ಠ ರೋಗ ನಿವಾರಣ ಸಂಘ ಎಂದು ಪುನರ್ ನಾಮಕರಣ ಮಾಡಲಾಯಿತು. ರಾಷ್ಟ್ರಪತಿಗಳು ಅದರ ಗೌರವ ಅಧ್ಯಕ್ಷರಾಗಿದ್ದರು. ಅಮೃತ ಕೌರ್ ಇದರ ಕಾರ್ಯಾಧ್ಯಕ್ಷೆಯಾಗಿದ್ದರು. ಅದೇ ರೀತಿ 1949ರಲ್ಲಿ ಕ್ಷಯರೋಗ ನಿರ್ಮೂಲನಾ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಆಕೆ ಅದರ ಅಧ್ಯಕ್ಷೆಯಾದರು. ಎಲ್ಲಾ ವಿಧದಿಂದಲೂ ಅವರು ಈ ಸಂಸ್ಥೆಗಳಿಗೆ ಸದಾ ಉತ್ತೇಜನ ನೀಡಿದರು ಮತ್ತು ಅವುಗಳಿಗೆ ಸಹಾಯ ಹಸ್ತ ನೀಡಿದರು. ಅವರ ಸ್ಫೂರ್ತಿಯಿಂದಾಗಿ ಸಾರ್ವಜನಿಕರು ಸ್ವಯಂ ಸ್ಫೂರ್ತಿಯಿಂದ ಈ ಚಟುವಟಿಕೆಯಲ್ಲಿ ಭಾಗವಹಿಸಲು ಮುಂದಾದರು.

ಸ್ವತಂತ್ರ ಭಾರತದ ಪ್ರಥಮ ಲೋಕಸಭೆಯಲ್ಲಿ 1952 ರಿಂದ 1957ರವರೆಗೆ ಸಂಸತ್ ಸದಸ್ಯರಾಗಿ ಅವರು ಕಾರ್ಯ ನಿರ್ವಹಿಸಿದರು. ಮತ್ತು 1957ರಿಂದ 1962 ರವರೆಗೆ ರಾಜ್ಯ ಸಭಾ ಸದಸ್ಯರಾಗಿದ್ದರು. ವಿಶ್ವ ಆರೋಗ್ಯ ಸಮ್ಮೇಳನ ಮತ್ತು ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಅಧಿವೇಶನಗಳಲ್ಲೂ ಅವರು ಭಾರತವನ್ನು ಪ್ರತಿನಿಧಿಸಿದರು. ಭಾರತದಲ್ಲಿ ಕುಟುಂಬ ಯೋಜನೆಯ ಮತ್ತು ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮಗಳನ್ನು ಜಾರಿಗೆ ತರುವ ನಿಟ್ಟಿನಲ್ಲಿ ಉಪಕ್ರಮಿಸಿದ ಅವರು ಗಾಂಧೀಜಿಯವರು ಹೇಳುವ ಸ್ವಯಂ ಸಂಯಮದ ನಿಲುವನ್ನು ಅನುಸರಿಸಬೇಕೆಂದು ಕರೆ ಇತ್ತರು.

ಮಹಿಳಾ ಮತ್ತು ಮಕ್ಕಳ ಕಲ್ಯಾಣದ ದಿಸೆಯಲ್ಲಿ ಕಾನೂನು ಕಾಯ್ದೆ ಜಾರಿಗೊಳಿಸುವಲ್ಲಿ ಅಮೃತ ಕೌರ್ ಅತೀವ ಆಸ್ಥೆ ವಹಿಸಿದ್ದರು. ಬಾಲ್ಯ ವಿವಾಹ ಮತ್ತು ವರದಕ್ಷಿಣೆ ಪದ್ಧತಿಗಳ ಕಡು ವಿರೋಧಿಯಾಗಿದ್ದ ಅವರು ಮಹಿಳೆಯರಿಗೆ ವಂಶಪಾರಂಪರ್ಯದ ಆಸ್ತಿ ಹಕ್ಕನ್ನು ಕೊಡ ಮಾಡಿದ ಹಿಂದೂ ಕೋಡ್ ಮಸೂದೆಯನ್ನು ಬೆಂಬಲಿಸಿದರು. ವಿಧವೆಯರಿಗೆ ನ್ಯಾಯ ಒದಗಿಸಿಕೊಡುವ ನಿಟ್ಟಿನಲ್ಲಿ ಅವರು ಬಂಡೆಗಲ್ಲಿನಂತೆ ನಿಂತರು. ಹಾಗೂ ಮಹಿಳೆಯರು ಮತ್ತು ಮಕ್ಕಳಿಗೆ ರಕ್ಷಣೆ ನೀಡುವ ಎಲ್ಲ ಪ್ರಗತಿಶೀಲ ಕ್ರಮಗಳನ್ನು ಸಮರ್ಥಿಸಿದರು. ಆದರೆ ಕಾನೂನು ಕಾಯ್ದೆಗಳಿಗಿಂತ ಜನರಿಗೆ ಶಿಕ್ಷಣ ನೀಡುವುದೇ ಹೆಚ್ಚು ಪರಿಣಾಮಕಾರಿ ಕ್ರಮ ಎಂದು ನಂಬಿದ್ದರು. ಮಹಿಳಾ ಶಿಕ್ಷಣದ ಪ್ರಬಲ ಪ್ರತಿಪಾದಕರಾಗಿದ್ದ ಅವರು ಮೂಲಭೂತ ಶಿಕ್ಷಣ ಭಾರತದ ಅಗತ್ಯಗಳಿಗೆ ಹೇಳಿ ಮಾಡಿಸಿದ್ದಾಗಿದೆ ಎಂದು ಬಲವಾಗಿ ನಂಬಿದ್ದರು.

ಅವರು ಕೇಂದ್ರ ಆರೋಗ್ಯ ಸಚಿವರಾಗಿದ್ದ ಹತ್ತು ವರ್ಷಗಳ ಅವಧಿಯಲ್ಲಿ ವೈದ್ಯಕೀಯ ಶಿಕ್ಷಣಕ್ಕೆ ಭಾರೀ ಉತ್ತೇಜನ ದೊರೊಯಿತು ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿ ಬಲಗೊಂಡಿತು. ಅದೇ ಅವಧಿಯಲ್ಲಿ ಅಖಿಲ ಭಾರತೀಯ ವೈದ್ಯಕೀಯ ವಿಜ್ಞಾನ ಸಂಸ್ಥೆ ಸ್ಥಾಪಿತವಾಯಿತು. 1957ರ ಚುನಾವಣೆ ನಂತರದಲ್ಲಿ ಅವರು ಕೇಂದ್ರ ಆರೋಗ್ಯ ಸಚಿವೆ ಹುದ್ದೆಯಲ್ಲಿ ಮುಂದುವರಿಯದಿದ್ದರೂ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆ ಮತ್ತು ಭಾರತೀಯ ಕ್ಷಯ ರೋಗ ನಿವಾರಣಾ ಸಂಸ್ಥೆಗಳ ಅಧ್ಯಕ್ಷರಾಗಿ ಮುಂದುವರಿದರು.

ಕುಷ್ಠ ರೋಗ ನಿವಾರಣಾ ಸಂಘ, ಭಾರತೀಯ ರೆಡ್‌ಕ್ರಾಸ್ ಸಂಸ್ಥೆಗಳ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು.

1962ರಲ್ಲಿ ನಾನು ಕೇಂದ್ರ ಆರೋಗ್ಯ ಸಚಿವೆಯಾದೆ. ಶ್ರೀ.ಕರಮಕರ್ ಅವರಿಂದ ಅಧಿಕಾರ ವಹಿಸಿಕೊಳ್ಳುತ್ತಿದ್ದಂತೆ ಕೌರ್ ಅವರಿಂದ ಭೇಟಿಗಾಗಿ ಸಮಯ ಕೋರಿ ಸಂದೇಶ ಬಂದಿತು. ಗಾಂಧೀಜಿ ಆಶ್ರಮದಲ್ಲಿ ಹತ್ತಿರದಿಂದ ಕಂಡಿದ್ದ ನನಗೆ ಅವರ ಪರಿಚಯವಿತ್ತು. ಅವರು ನನಗೆ ತಾಯಿ ಅಥವಾ ಹಿರಿಯಕ್ಕನಂತಿದ್ದರು. ನಾನೇ ಸ್ವತಃ ಬರುವುದಾಗಿ ಹೇಳಿ ಕಳುಹಿಸಿದೆ. ಆಗ ಆಕೆ ರಾಷ್ಟ್ರಪತಿ ಭವನಕ್ಕೆ ಸೇರಿದ ಮನೆಯೊಂದರಲ್ಲಿ ವಾಸವಿದ್ದರು. ಅವರು ಮಧ್ಯಾಹ್ನದ ಊಟಕ್ಕೆ ನನ್ನನ್ನು ಅಲ್ಲಿಗೆ ಅಹ್ವಾನಿಸಿದರು.

ಅದು ಬೇಸಿಗೆಯ ಸಮಯ. ಕೌರ್ ಸಸ್ಯಹಾರಿ. ಅವರ ಸಹೋದರ ಸಿಮ್ಲಾದಲ್ಲಿದ್ದರು. ತಮ್ಮ ಸದಭಿರುಚಿಗೆ ತಕ್ಕಂತೆ ಮನೆಯನ್ನು ಕಲಾತ್ಮಕವಾಗಿ ಒಪ್ಪ ಓರಣವಾಗಿ ಸಿಂಗರಿಸಿದ್ದರು. ಅವರು ನನಗೆ ಸ್ವಾದಿಷ್ಟ ಭೋಜನ ಉಣ ಬಡಿಸಿದರು. ಊಟವಾದ ಮೇಲೆ ಮಾತಿಗೆ ಕುಳಿತೆವು. ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯ ಸಮಸ್ಯೆಗಳೂ ಸೇರಿದಂತೆ ಹಲವು ವಿಷಯಗಳನ್ನು ಕುರಿತು ಚರ್ಚಿಸಿದೆವು. ಅನಂತರದಲ್ಲಿ ನನ್ನ ಬಳಿ ಏನಾದರೂ ಚರ್ಚಿಸುವ, ಮಾತನಾಡುವ ವಿಷಯ ಇದ್ದರೆ ಆಕೆ ನನ್ನನ್ನು ತಪ್ಪದೇ ಊಟಕ್ಕೆ ಕರೆಯುತ್ತಿದ್ದರು. ಇಂತಹ ಸಂದರ್ಭದಲ್ಲಿ ಹೆಚ್ಚಾಗಿ ಅವರ ಸಹೋದರ ಅವರ ಜೊತೆಗಿರುತ್ತಿದ್ದರು. ಹೊತ್ತುಗೊತ್ತಿನ ಪರಿವೇ ಇಲ್ಲದೆ ಕೌರ್ ಸಾಮಾಜಿಕ ಚಟುವಟಿಕೆಯಲ್ಲಿ ತೊಡಗುತ್ತಿದ್ದರೆಂದು ಅವರ ಸಹೋದರ ಯಾವಾಗಲೂ ನನ್ನ ಬಳಿ ಗೊಣಗುತ್ತಿದ್ದರು. ಅವರಿಗೆ ವಿಶ್ರಾಂತಿಯ ಅಗತ್ಯವೇನೋ ಇತ್ತು. ಆದರೆ ಅವರಿಗೆ ಅದು ಎಂದೂ ಸಿಗುತ್ತಿರಲಿಲ್ಲ. ಆರೋಗ್ಯ ಮತ್ತು ನೈರ್ಮಲ್ಯ ಪಾಲನೆ, ಶಿಕ್ಷಣ, ಮಹಿಳೆಯರು ಮತ್ತು ಮಕ್ಕಳ ಯೋಗಕ್ಷೇಮದ ಚಟುವಟಿಕೆಗಳಲ್ಲಿ ಅವರಿಗಿದ್ದ ಆಸಕ್ತಿ ಸದಾ ಅವರನ್ನು ಅವಿಶ್ರಾಂತರನ್ನಾಗಿ ಮಾಡಿತ್ತು. ಕಠಿಣ ದುಡಿಮೆ ಮತ್ತು ತಮ್ಮೆಲ್ಲ ಸಮಯವನ್ನು ಅಸಹಾಯಕರಿಗೆ ವಿನಿಯೋಗಿಸುವ ಪರಿಪಾಠವನ್ನು ಗಾಂಧೀಜಿಯವರ ಸಹಚರ್ಯದಲ್ಲಿ ಅವರು ಮೈಗೂಡಿಸಿಕೊಂಡಿದ್ದರು.

ಅಸ್ಪೃಶ್ಯರು, ಬುಡಕಟ್ಟು ಜನಾಂಗ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ ಜೀವನ ಪರಿಸ್ಥಿತಿಯನ್ನು ಸುಧಾರಿಸುವ ದಿಸೆಯಲ್ಲಿ ವಿಶೇಷ ಆಸಕ್ತಿ ವಹಿಸಿದ್ದರು. ರಾಜಮನೆತನದಲ್ಲಿ ಹುಟ್ಟಿದವರಾದರೂ ಅವರದು ಸರಳ ಶೈಲಿಯ ಜೀವನ. ರಾಷ್ಟ್ರಾಭಿಮಾನಕ್ಕಿಂತ ದೊಡ್ಡದಾದ ಇನ್ನೊಂದು ಧ್ಯೇಯ ಅವರಿಗೆ ಇರಲಿಲ್ಲ. ಸಮಾಜವನ್ನು ಕಾಡುತ್ತಿದ್ದ ಅನೇಕ ಅನಿಷ್ಟಗಳನ್ನು ನಿರ್ಮೂಲನೆಗೊಳಿಸಿ ದೇಶವನ್ನು ಮುನ್ನಡೆಸುವ ನಿಟ್ಟಿನಲ್ಲಿ ಸದಾ ಅವರು ಕಾರ್ಯತತ್ಪರರು. ಪಂಡಿತ ಜವಾಹರಲಾಲ್ ನೆಹರೂ ಅವರ ನಿಧನಕ್ಕೆ ಕೆಲ ತಿಂಗಳ ಮುಂಚಿತವಾಗಿ 1964ರ ಫೆಬ್ರವರಿ 6 ರಂದು ಅವರು ಹೃದಯಾಘಾತದಿಂದ ನಿಧನ ಹೊಂದಿದರು. ಯಾವ ದೃಷ್ಟಿಯಿಂದ ನೋಡಿದರೂ ಅವರ ಜೀವನವು ಮುಂದಿನ ಪೀಳಿಗೆಯವರಿಗೆ ಸದಾ ಸ್ಫೂರ್ತಿದಾಯಿಯಾಗಿದೆ.

## ಅಧ್ಯಾಯ-4

## ಗಾಂಧೀಜಿಯವರ ಆದರ್ಶಗಳಿಗೆ ಬದುಕನ್ನೇ ಮುಡುಪಿಟ್ಟ ಮಹಿಳೆ

*ಅರುಣ ಅಸಫ್ ಅಲಿ

ರಾಜಕುಮಾರಿ ಅಮೃತ ಕೌರ್ ಅವರು ಸಮಾಜದ ಪಥ ಪ್ರದರ್ಶಕರ ತಲೆಮಾರಿಗೆ ಸೇರಿದರು. 1930ರಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಳ್ಳುವಂತೆ ಗಾಂಧೀಜಿಯವರು ನೀಡಿದ ಕರೆಗೆ ಓಗೊಟ್ಟು ಬಂದ ಈ ತಲೆಮಾರಿನವರು ಶ್ರೀಮಂತ ಮನೆತನಗಳಿಗೆ ಸೇರಿದವರು. ಅವರೆಲ್ಲರೂಗ ಗಾಂಧೀಜಿಯವರ ಆದರ್ಶಗಳಿಗೆ ಮಾರು ಹೋಗಿ ತಮ್ಮ ಸುಖಗಳೆಲ್ಲವನ್ನು ತ್ಯಜಿಸಿ ಬಂದವರು. ಇಂತಹ ಸಂದರ್ಭದಲ್ಲಿ ಉಪ್ಪಿನ ಸತ್ಯಾಗ್ರಹ ಒಂದು ಸಾಂಕೇತಿಕ ಹೋರಾಟವಾಯಿತು. ಉಪ್ಪಿನ ಮೇಲೆ ಬ್ರಿಟಿಷ್ ಸರ್ಕಾರ ಹೇರಿದ ಕರ ಮತ್ತು ತೆರಿಗೆಗಳ ವಿರುದ್ಧ ಪ್ರತಿಭಟಿಸುವಂತೆ ಗಾಂಧೀಜಿಯವರು ನೀಡಿದ ಕರೆ ಮಹಿಳೆಯರು ಈ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಿತು. ಉಪ್ಪು ಜನಸಾಮಾನ್ಯರ ಮೂಲಭೂತ ಅಗತ್ಯ ವಸ್ತುಗಳಲ್ಲಿ ಒಂದಾಗಿರುವುದರಿಂದ ಅದರ ಮೇಲೆ ಯಾವುದೇ ತೆರಿಗೆ ವಿಧಿಸಬಾರದೆಂದು ಗಾಂಧೀಜಿ ಘೋಷಿಸಿದ್ದರು. ಅವರ ದಂಡಿಯಾತ್ರೆ ಸಾವಿರಾರು ಮಹಿಳೆಯರಿಗೆ ಸ್ಫೂರ್ತಿಯಾಗಿ ದೇಶದ ನಾನಾ ಭಾಗಗಳಲ್ಲಿ ಉಪ್ಪಿನ ಕರ ಪಾವತಿಯನ್ನು ಉಲ್ಲಂಘಿಸಿ ಪ್ರತಿಭಟನಾ ಮೆರವಣಿಗೆಗಳನ್ನು ಕೈಗೊಳ್ಳುವಂತೆ ಮಾಡಿತು.

ಇದಾದ ನಂತರ ಭಾರತೀಯ ಮಹಿಳೆಯರು ಹಿಂತಿರುಗಿ ನೋಡುವ ಪ್ರಶ್ನೆಯೇ ಬರಲಿಲ್ಲ. 1942ರ ಆಗಸ್ಟ್ ನಲ್ಲಿ ಪ್ರಾರಂಭವಾದ ಭಾರತ ಬಿಟ್ಟು ತೊಲಗಿ ಆಂದೋಲನದ ತನಕವೂ ಸತತವಾಗಿ ಎಲ್ಲಾ ತರದ ಸತ್ಯಾಗ್ರಹದಲ್ಲಿ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಂಡರು. ರಾಜಕುಮಾರಿ ಕೌರ್ ಅವರು ಅಂದಿನ ಶ್ರೀಮಂತ ಪಾಳೇಗಾರಿಕೆ ವ್ಯವಸ್ಥೆಗೆ ಸೇರಿದವರಾದರೂ ಗಾಂಧೀಜಿಯವರ ಶಿಷ್ಯತ್ವ ಸ್ವೀಕರಿಸಿ ಅವರ ಆಶ್ರಮದಲ್ಲಿ ಸರಳ ಸಾತ್ವಿಕ ಜೀವನ ನಡೆಸಲು ನಿರ್ಧರಿಸಿದರು.

ರಾಜಕುಮಾರಿ ಅವರು ಚರಕ ಇಟ್ಟುಕೊಂಡು ನೂಲುತ್ತಿದ್ದರು ಮತ್ತು ಆಶ್ರಮವಾಸಿಗಳ ಜೊತೆಗೆ ಸರಳ ರೀತಿಯ ಆಹಾರವನ್ನು ಸೇವಿಸುತ್ತಿದ್ದದ್ದು ನನಗೆ ಈಗಲೂ ಜ್ಞಾಪಕವಿದೆ. ಮಹಾಶಿಸ್ತಿನ ಮನುಷ್ಯರಾಗಿದ್ದ ಗಾಂಧೀಜಿಯವರು ರಾಷ್ಟ್ರವನ್ನು ವಿಮೋಚನೆಗೊಳಿಸಬೇಕೆಂದು ಬಯಸುವವರೆಲ್ಲರೂ ಹಸಿದ ಜನ ಸಮುದಾಯದೊಂದಿಗೆ ತಮ್ಮನ್ನು ಗುರುತಿಸಿಕೊಂಡು ಅವರಂತೆಯೇ ಬದುಕಬೇಕು, ಬಟ್ಟೆ ಧರಿಸಬೇಕು ಹಾಗೂ ಆಹಾರ ಸೇವಿಸಬೇಕೆಂದು ಪ್ರತಿಪಾದಿಸುತ್ತಿದ್ದರು.

---

*ಅರುಣ್ ಅಸಿಫ್ ಅಲಿ ಅವರು ಖ್ಯಾತ ಸ್ವಾತಂತ್ರ್ಯ ಹೋರಾಟಗಾರರು ಹಾಗೂ ಸುಪ್ರಸಿದ್ಧ ಸಾಮಾಜಿಕ ಕಾರ್ಯಕರ್ತರು.

ಸಾರ್ವಜನಿಕ ಜೀವನದಲ್ಲಿ ಮಹಿಳೆಯರಿಗೆ ಸರಿ ಸಮಾನ ಪಾತ್ರ ಇರಬೇಕೆಂದು ಬಲವಾಗಿ ನಂಬಿದ್ದರು ರಾಜಕುಮಾರಿ ಕೌರ್. ಈ ವಿಷಯದಲ್ಲಿ ಪಂಡಿತ್ ಜವಾಹರಲಾಲ್ ನೆಹರು ಅವರ ಧೋರಣೆಯನ್ನು ಖಂಡಿಸಲು ಸಹ ಅವರು ಹಿಂಜರಿಯುತ್ತಿರಲಿಲ್ಲ. ಜವಾಹರಲಾಲ್ ನೆಹರು ಅವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಅವರು ರಚಿಸಿದ ಕಾರ್ಯಕಾರಿ ಸಮಿತಿಯ 1936ರಲ್ಲಿ ದೊಡ್ಡ ವಿವಾದಕ್ಕೆ ದಾರಿ ಮಾಡಿಕೊಟ್ಟಿತು. ಈ ಸಮಿತಿಯಲ್ಲಿ ಅನೇಕ ಸಮಾಜವಾದಿಗಳಿದ್ದರೂ ಒಬ್ಬಳೇ ಒಬ್ಬ ಮಹಿಳೆಗೆ ಅಲ್ಲಿ ಪ್ರಾತಿನಿಧ್ಯ ಇರಲಿಲ್ಲ.

ಮಹಿಳಾ ಸಮಾನತೆಯ ವಿಷಯದಲ್ಲಿ ಜವಾಹರಲಾಲ್ ನೆಹರೂ ಅವರಿಗಿದ್ದ ಬದ್ಧತೆಯ ಹಿನ್ನೆಲೆಯನ್ನು ನೋಡಿದರೆ ಮಹಿಳೆಯರಿಗೆ ಪ್ರಾತಿನಿಧ್ಯ ಇಲ್ಲದಿದ್ದದ್ದು ಮತ್ತು ಈ ಸಂಬಂಧದಲ್ಲಿ ಎದ್ದ ಪ್ರತಿಭಟನೆ ಅಚ್ಚರಿ ಮೂಡಿಸುವಂತಹುದು. 1936ರ ಮೇ 30 ರಂದು ರಾಜಕುಮಾರಿ ಅಮೃತ ಕೌರ್ ಅವರ ಶಿಮ್ಲಾದಿಂದ ಬರೆದ ಪತ್ರವೊಂದರಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನದ ಪರವಾಗಿ ನೆಹರೂ ಅವರು ತಳೆದ ಧೋರಣೆ ಕುರಿತು ತೀವ್ರ ಆಕ್ಷೇಪ ವ್ಯಕ್ತಪಡಿಸಿದ್ದರು. 1936ರ ಮೇ 29 ರಂದು ಬೆಂಗಳೂರಿನಿಂದ ಗಾಂಧೀಜಿ ಅವರು ಬರೆದ ಪತ್ರವೊಂದರಲ್ಲಿ "ಕಾರ್ಯಕಾರಿ ಸಮಿತಿಯಲ್ಲಿ ಓರ್ವ ಮಹಿಳಾ ಸದಸ್ಯರಿರಬೇಕೆಂಬ ಸಂಪ್ರದಾಯವನ್ನು ಮುರಿಯುವ ಧೈರ್ಯವನ್ನು ತಾವೂ ಸೇರಿದಂತೆ ಯಾರೂ ಮಾಡಲು ಸಾಧ್ಯವಿಲ್ಲ."ಎಂದು ಅಭಿಪ್ರಾಯಪಟ್ಟಿದ್ದರು. ಅದೇ ವೇಳೆಗೆ ತಮ್ಮ ಪತ್ರದಲ್ಲಿ"ಆದರೆ ಯಾವಾಗಲೂ ಕಾರ್ಯಕಾರಿ ಸಮಿತಿಯಲ್ಲಿ ಓರ್ವ ಮಹಿಳೆ ಮತ್ತು ಸಚಿವ ಸಂಪುಟದಲ್ಲಿ ನಿರ್ದಿಷ್ಟ ಸಂಖ್ಯೆಯ ಮುಸಲ್ಮಾನರು ಇರಲೇಬೇಕೆಂಬ ಸಂಪ್ರದಾಯ ಅಥವಾ ಪರಿಪಾಠದಲ್ಲಿ ನಂಬಿಕೆ ಇಟ್ಟಿಲ್ಲ ಎಂದು ಹೇಳುವ ಮಟ್ಟಕ್ಕೂ ನೀವು ಹೋಗಿದ್ದೀರಿ" ಎಂದು ಬರೆದು ಅದಕ್ಕೆ ವಿವರಣೆಯನ್ನು ಕೊಟ್ಟಿದ್ದರು.

ವಿವಿಧ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಕುರಿತಂತೆ ಪರಿಶೀಲನೆ ನಡೆಸಲು ಮತ್ತು ಶಿಫಾರಸುಗಳನ್ನು ಮಾಡಲು ಜವಾಹರಲಾಲ್ ನೆಹರೂ ಅವರ ಅಧ್ಯಕ್ಷತೆಯಲ್ಲಿ ರಚಿತವಾಗಿದ್ದ ರಾಷ್ಟ್ರೀಯ ಯೋಜನಾ ಸಮಿತಿಯು 29 ಉಪ ಸಮಿತಿಗಳ ರಚನೆಯಲ್ಲಿ ಅನೇಕ ತಿದ್ದುಪಡಿಗಳನ್ನು ತರಲಾಯಿತು. 1939ರ ಜೂನ್ 16 ರಂದು ರಚಿತವಾದ ಯೋಜಿತ ಅರ್ಥ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರ ಕುರಿತು ರಚಿತವಾದ ಉಪ ಸಮಿತಿಯೇ ದೊಡ್ಡದು. ಈ ಸಮಿತಿಯಲ್ಲಿದ್ದ ಎಲ್ಲಾ 30 ಮಂದಿ ಸದಸ್ಯರು ಮಹಿಳೆಯರೇ. ಉಳಿದ ಉಪ ಸಮಿತಿಗಳಲ್ಲಿ ತಾಂತ್ರಿಕ ನಲೆಯಲ್ಲಿ ತಜ್ಞರೇ ಹೆಚ್ಚಿನ ಸಂಖ್ಯೆಯಲ್ಲಿದ್ದರೆ, ಮಹಿಳಾ ಉಪ ಸಮಿತಿಗಳಲ್ಲಿ ಮಹಿಳಾ ಚಳವಳಿಗಳಲ್ಲಿ ಸಕ್ರಿಯ ಪಾತ್ರ ವಹಿಸಿದ್ದ ಮಹಿಳೆಯರೇ ಹೆಚ್ಚಾಗಿದ್ದರು.

1937ರ ಏಪ್ರಿಲ್ 3 ರಂದು ರಾಜಕುಮಾರಿ ಅಮೃತ ಕೌರ್ ಅವರು ಜವಾಹರಲಾಲ್ ಹೆಸರು ಅವರಿಗೆ ಬರೆದ ಪತ್ರದಲ್ಲಿ:

"ಮುಸ್ಲಿಂ ಸಮುದಾಯಗಳಿಗಾಗಿ ನೀವು ರೂಪಿಸಿರುವ ಕಾರ್ಯಕ್ರಮಗಳನ್ನು ಕಂಡು ನನಗೆ ಅತೀವ ಸಂತಸವಾಗಿದೆ. ನೀವು ಸಾಧ್ಯವಿದ್ದಲೆಲ್ಲ ನಿಮ್ಮ ಪ್ರಾಂತೀಯ ಮತ್ತು ಸ್ಥಳೀಯ ಸಮಿತಿಗಳಲ್ಲಿ ಮಹಿಳಾ ಸದಸ್ಯರನ್ನೇ ನೇಮಕ ಮಾಡಿಕೊಳ್ಳಬೇಕು. ಏಕೆಂದರೆ ಮುಸ್ಲಿಂ ಮಹಿಳೆಯರು ಮುಸ್ಲಿಂ ಪುರುಷರಂತೆ ಕೋಮುಭಾವನೆಯಿಂದ ಕೂಡಿದವರಲ್ಲ. ಮಹಿಳೆಯರ ಮಧ್ಯೆ ಸುದೀರ್ಘ

ಕಾಲ ಕೆಲಸ ಮಾಡಿರುವ ನನಗೆ ಅವರಲ್ಲಿ ಕೋಮುಭಾವನೆಯ ವೈರಸ್ ಹರಡಿರುವುದು ಎಂದೂ ಕಂಡು ಬಂದಿಲ್ಲ. ಅವರಲ್ಲಿ ಅಲ್ಪಸ್ವಲ್ಪ ಪ್ರಮಾಣದಲ್ಲಿ ಅಂತಹ ಭಾವನೆ ಇರುವುದು ನಿಜವಾದರೂ, ಮುಂದಿನ ತಲೆಮಾರು ಅದರಿಂದ ವಿಮುಕ್ತವಾಗಿ ಆರೋಗ್ಯವಂತ ಸಮುದಾಯವೊಂದು ಅಸ್ತಿತ್ವಕ್ಕೆ ಬರುವಲ್ಲಿ ನನಗೆ ಯಾವ ಸಂದೇಹವೂ ಇಲ್ಲ"ಎಂದು ಹೇಳಿದ್ದಾರೆ.

ಅದೇನಿದ್ದರೂ ನಂತರದ ಘಟನೆಗಳು ಅಮೃತ ಕೌರ್ ಅವರ ನಂಬಿಕೆಯನ್ನು ಉಳಿಸಿಕೊಳ್ಳಲಿಲ್ಲ. ಅಶಿಕ್ಷಿತೆಯಾಗಿ, ಮನೆಯ ನಾಲ್ಕು ಗೋಡೆಗಳ ನಡುವೆ ಬಂದಿಯಂತೆ, ಇತರರಿಗೆ ಅಧೀನಳಾಗಿ ಒಬ್ಬಂಟಿಯಾಗಿ ಬದುಕುವ ಸಾಮಾನ್ಯ ಮುಸ್ಲಿಂ ಮಹಿಳೆಯೋರ್ವಳು ವಿಭಜನೆಯ ಬೇಗುದಿಯನ್ನು ತಾಳಿಕೊಳ್ಳುವ ಸಾಮರ್ಥ್ಯ ಹೊಂದಿರುತ್ತಾಳೆಂದು ನಿರೀಕ್ಷಿಸಲು ಸಾಧ್ಯವಿಲ್ಲದ ವಿಷಯ. ಮಹಿಳಾ ಚಳವಳಿಯು ತನ್ನ ಆರಂಭದ ಹಂತದಲ್ಲಿ ಕೋಮುವಾದದಿಂದ ಮುಕ್ತವಾಗಿದ್ದರೂ ಕೂಡ ಮುಂದೆ ರಾಜಕೀಯ ಕ್ಷೇತ್ರದಲ್ಲಿ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್‌ಗಳ ಮಧ್ಯೆ ಬೆಳೆದು ಬಂದ ಅಭಿಪ್ರಾಯ ಭೇದಗಳಿಂದಾಗಿ ಬಹಳ ಕಾಲ ಅದೇ ಸಾಮರಸ್ಯ ಉಳಿಯಲು ಸಾಧ್ಯವಾಗಲಿಲ್ಲ.

ಸ್ವಾತಂತ್ರ್ಯ ನಂತರ ರಾಜಕುಮಾರಿ ಕೌರ್ ಕೇಂದ್ರ ಸಚಿವ ಸಂಪುಟದ ಪ್ರಥಮ ಮಹಿಳಾ ಸದಸ್ಯರಾದರು. ಆ ಸಂದರ್ಭದಲ್ಲಿ ಅವರು ಅನೇಕ ದೇಶಗಳನ್ನು ಸುತ್ತಿ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಗೆ (ಎ.ಐ.ಐ.ಎಂ.ಎಸ್) ನಿಧಿ ಸಂಗ್ರಹಿಸಿದ್ದು, ನನಗಿನ್ನು ಚೆನ್ನಾಗಿ ನೆನಪಿದೆ. ಅದು ಏಷ್ಯಾದ ಸುಪ್ರಸಿದ್ಧ ವೈದ್ಯಕೀಯ ಸಂಶೋಧನಾ ಕೇಂದ್ರವಾಗಿ ಮನ್ನಣೆ ಗಳಿಸಿತ್ತು. ಈ ಸಂಸ್ಥೆಯು ನಮ್ಮ ರಾಷ್ಟ್ರದ ಸ್ವಾತಂತ್ರ್ಯೋತ್ತರ ಪ್ರಗತಿ ಸಾಧನೆಗೆ ರಾಜಕುಮಾರಿ ಕೌರ್ ಅವರು ನೀಡಿದ ಕೊಡುಗೆಗೆ ಸಾಕ್ಷಿಯಾಗಿರುವ ಒಂದು ಸ್ಥಾಯಿ ಸ್ಮಾರಕವಾಗಿದೆ.

## ಅಧ್ಯಾಯ-5

# ಸೌಜನ್ಯದ ಸಾಕಾರ ಮೂರ್ತಿ

*ಪ್ರೊ.ಎನ್.ಜಿ.ರಂಗ

ಭಾರತಕ್ಕೆ ಸ್ವರಾಜ್ಯ ದೊರೆತ ನಂತರದಲ್ಲಿ ರಾಜಕುಮಾರಿ ಅಮೃತ ಕೌರ್ ಅವರು ಸಂಸದೀಯ ರಂಗಕ್ಕೆ ಕಾಲಿಟ್ಟರು. ಆ ವೇಳೆಗೆ ಅವರು ಸುಮಾರು 16 ವರ್ಷಗಳ ಕಾಲ ಮಹಾತ್ಮಾ ಗಾಂಧೀಜಿಯವರ ಕಾರ್ಯದರ್ಶಿಗಳಲ್ಲಿ ಒಬ್ಬರಾಗಿ ಸೇವೆ ಸಲ್ಲಿಸಿದ್ದರು.

ಗಾಂಧೀವಾದದಲ್ಲಿ ಇರಿಸಿದ್ದ ಅಚಲ ವಿಶ್ವಾಸದಿಂದ ಅವರು ದೇಶಸೇವೆಯ ಕಾರ್ಯಕ್ಕೆ ತಮ್ಮನ್ನು ಸಮರ್ಪಿಸಿಕೊಂಡರು. ಮತ್ತು ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಆಕೆ ಕಪುರ್ತಲಾದ ರಾಜಮನೆತನದಲ್ಲಿ ಹುಟ್ಟಿದ್ದರು ಮತ್ತು ಸಂಪ್ರದಾಯ ನಿಷ್ಠ ಭಾರತೀಯ ರಾಜ ಕುಟುಂಬವೊಂದರ ಕಟ್ಟುಪಾಡುಗಳಿಗೆ ಬದ್ಧರಾಗಿ ಬದುಕಬೇಕಾಗಿದ್ದರೂ ಅವರು ಶ್ರೀಮಂತಿಕೆಯ ಎಲ್ಲ ಸಂದಿಗ್ಧತೆ ಮತ್ತು ಅಂಜಿಕೆಗಳಿಂದ ಮುಕ್ತರಾದರು. ಹಾಗೂ ಸಮಾಜ ಸೇವೆ ಮತ್ತು ಸಾರ್ವಜನಿಕ ಜೀವನದಲ್ಲಿ ಗಾಂಧೀವಾದವನ್ನು ಅಪ್ಪಿಕೊಂಡರು.

ಕೌರ್ ಅವರು ನಮ್ಮ ಸಂಸತ್ತಿಗೆ ಭಾರತೀಯ ಸಂಸ್ಕೃತಿ ಮತ್ತು ಸಭ್ಯತೆಗಳ ಕಳೆಯನ್ನು ತಂದುಕೊಟ್ಟರು. ಸಚಿವರಾಗಿ ನಮ್ಮ ಪ್ರಶ್ನೆಗಳಿಗೆ, ಟೀಕೆಗಳಿಗೆ ಮತ್ತು ಸಲಹೆ ಸೂಚನೆಗಳಿಗೆ ಸ್ವಾರಸ್ಯಕರವಾಗಿ ಪ್ರತಿಕ್ರಿಯಿಸಿ, ನಮ್ಮ ಸಂಸದೀಯ ಜೀವನಕ್ಕೆ ಹೆಚ್ಚಿನ ಮೆರಗು ತಂದುಕೊಟ್ಟರು. ಸ್ವತಂತ್ರ ಭಾರತದ ಪ್ರಥಮ ಸಚಿವ ಸಂಪುಟದ ಪ್ರಥಮ ಮಹಿಳಾ ಸದಸ್ಯೆಯಾಗಿ ತಮ್ಮ ವಿರುದ್ಧ ಬಂದ ಟೀಕೆಗಳಿಗೆ ಜವಾಬ್ದಾರಿಯುತ ಉತ್ತರಗಳನ್ನು ನೀಡಿ ಭಾರತೀಯ ಮಹಿಳಾ ಸಮುದಾಯಕ್ಕೆ ವಿಶೇಷ ಗೌರವ ತಂದುಕೊಟ್ಟರು.

1930ರಲ್ಲಿ ನಾನು ಕೇಂದ್ರಿಯ ಶಾಸಕ ಸಭೆಗೆ ಆಯ್ಕೆಗೊಂಡಾಗಿನಿಂದ ಆಕೆ ನನಗೆ ಪರಿಚಿತರು. ಕಪುರ್ತಲಾದ ರಾಜಕುಮಾರಿಯಾಗಿದ್ದ ಅವರಲ್ಲಿ ಬ್ರಿಟೀಷರ ನಡವಳಿಕೆ ಎದ್ದು ಕಾಣುತ್ತಿತ್ತು. ನಾನು ಭಾರತೀಯ ಪೋಷಾಕನ್ನು ಕೈ ಬಿಡಲು ನಿರಾಕರಿಸಿದ ಹಿನ್ನಲೆಯಲ್ಲಿ ಶಿಮ್ಲಾದ ಯಂಗ್ ಮೆನ್ಸ್ ಅಸೋಸಿಯೇಷನ್ ನನಗೆ ವಸತಿ ನೀಡಲು ನಿರಾಕರಿಸಿದ ಸಂದರ್ಭದಲ್ಲಿ ಆಕೆ ಮತ್ತು ನನ್ನ ಸ್ನೇಹ ಆರಂಭವಾಯಿತು. ಆಗ ಅವರು ಊಟಕ್ಕಾಗಿ ನನ್ನನ್ನು ಅವರ ಬಂಗಲೆಗೆ ಕರೆದರು ಮತ್ತು ತಮ್ಮ ಸಹಾನುಭೂತಿ ವ್ಯಕ್ತಪಡಿಸಿ ನನ್ನ ನಿಲುವಿನ ಬಗ್ಗೆ ಮೆಚ್ಚುಗೆ ಸೂಚಿಸಿದರು.

ಕಾಂಗ್ರೆಸಿಗರೊಂದಿಗೆ ಕೌರ್ ಅವರ ಸಂಪರ್ಕ ಹೀಗೆ ಮುಂದುವರಿದಿತ್ತು. ಗಾಂಧಿ ಟೋಪಿ ಧರಿಸಿ ವೈಸರಾಯ್ ಲಾರ್ಡ್ ಇರ್ವಿನ್ಸ್ ಅವರ ಔತಣ ಕೂಟದಲ್ಲಿ ಪಾಲ್ಗೊಳ್ಳುವ ನನ್ನ ಹಕ್ಕಿನ ಬಗ್ಗೆ ಪ್ರತಿಪಾದಿಸಿದಾಗ ಕೌರ್ ಅವರು ನನ್ನನ್ನು ಅಭಿನಂದಿಸಿದರು. ಇದರಿಂದಾಗಿ ಗಾಂಧೀ ಟೋಪಿ ಧರಿಸುವುದರ ಮೇಲೆ ಮದ್ರಾಸ್ ಸರ್ಕಾರ ವಿಧಿಸಿದ್ದ ನಿಷೇಧವನ್ನು ವೈಸರಾಯ್ ಅವರು ಹಿಂದಕ್ಕೆ ಪಡೆದುಕೊಂಡರು. ಬ್ರಿಟಿಷರ ಸಾಮ್ರಾಜ್ಯಶಾಹಿ ಮತ್ತು ಸರ್ವಾಧಿಕಾರಿ ಪ್ರವೃತ್ತಿ ಅವರನ್ನು ಕಾಂಗ್ರೆಸ್‌ನೆಡೆಗೆ ಹೆಚ್ಚು ಹೆಚ್ಚು ವಾಲುವಂತೆ ಮಾಡಿದವು. ರೆವರೆಂಡ್ ಸಿ. ಎಫ್. ಆಂಡ್ರ್ಯೂಸ್ ಅವರಂತಹ ಇವೆಂಜಿಲಿಕಲ್ ಕ್ರೈಸ್ತ ಸಂಘದ ಮಿಷನರಿಗಳು ಕೌರ್ ಅವರು ಗಾಂಧೀಜಿಯವರ ಸ್ನೇಹ ಬೆಳೆಸುವಲ್ಲಿ ಸಹಾಯ ಹಸ್ತ ನೀಡಿದರು. ರಾಜಕುಮಾರಿ ಕೌರ್

---

* ಪ್ರೊ. ಎನ್.ಜಿ.ರಂಗ, ಮಾಜಿ ಲೋಕಸಭಾ ಸದಸ್ಯರು

ಅವರನ್ನು ಸೇವಾಗ್ರಾಮದಲ್ಲಿ ನೋಡುವುದೇ ಚೇತೋಹಾರಿ ಅನುಭವವಾಗಿತ್ತು.

ಜವಹರಲಾಲ್ ನೆಹರೂ ನೇತೃತ್ವದ ಸಚಿವ ಸಂಪುಟದ ಪ್ರಥಮ ಆರೋಗ್ಯ ಸಚಿವೆಯಾಗಿ ಅವರು ಮಹಿಳೆಯರ ಕಲ್ಯಾಣ ಮತ್ತು ಪರಿಹಾರ ಕಾರ್ಯಕ್ರಮಗಳಲ್ಲಿ ನಮ್ಮ ಸಾಮಾಜಿಕ ಕಾರ್ಯಕರ್ತರಿಗೆ ಪ್ರೀತಿ ಮತ್ತು ಮೆಚ್ಚುಗೆಯ ಮಾತುಗಳೊಂದಿಗೆ ಎಲ್ಲಾ ರೀತಿಯ ಸಹಕಾರ ನೀಡುತ್ತಿದ್ದರು.

ಗಾಂಧೀವಾದಿಗಳಾದ ನಾವು ಸರ್ಕಾರಿ ಕಛೇರಿಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಸಾಮಾಜಿಕ ಕಾರ್ಯಕರ್ತರ ಬಗ್ಗೆ ಹೆಚ್ಚಿನ ಗೌರವ ತಾಳಲು ರಾಜಕುಮಾರಿ ಕೌರ್ ಅವರು ಆರೋಗ್ಯ ಸಚಿವರಾಗಿದ್ದದ್ದೇ ಕಾರಣವೆನ್ನಬೇಕು. ಅತ್ಯಂತ ಕ್ರಿಯಾಶೀಲ ಸತ್ಯಾಗ್ರಹಿ ಎಂದು ಹೆಸರಾಗಿದ್ದ ಶ್ರೀಮತಿ ದುರ್ಗಾ ಬಾಯಿಯವರು ಸಮಾಜ ಕಲ್ಯಾಣ ಮಂಡಳಿಯ ಅಧ್ಯಕ್ಷ ಸ್ಥಾನವನ್ನು ವಹಿಸಿಕೊಂಡಾಗ ಆಕೆ ಮತ್ತು ಆಕೆಯ ಮಂಡಳಿ ರಾಜಕುಮಾರಿ ಕೌರ್ ಅವರ ಕಳೆ ಮತ್ತು ಮಾಧುರ್ಯವನ್ನು ಸೂಸುತ್ತಿದ್ದಂತೆ ನಮಗೆ ಭಾಸವಾಯಿತು.

# ಅಧ್ಯಾಯ-6

## ನಾನು ಕಂಡಂತೆ ರಾಜಕುಮಾರಿ ಅಮೃತ ಕೌರ್

*ಎಸ್. ನಿಜಲಿಂಗಪ್ಪ

ರಾಜಕುಮಾರಿ ಕೌರ್ ಅವರು ಪಂಡಿತ್ ಜವಾಹರಲಾಲ್ ನೆಹರು ಅವರ ಪ್ರಥಮ ಸಂಪುಟದ ಪ್ರಥಮ ಆರೋಗ್ಯ ಸಚಿವೆಯಾಗಿದ್ದರು. ಅವರು ರಾಜ್ಯಾಂಗ ಸಭೆಯ ಪ್ರತಿಷ್ಠಿತ ಸದಸ್ಯರಾಗಿದ್ದರಲ್ಲದೆ ಹಂಗಾಮಿ ಸಂಸತ್ತಿನ ಸದಸ್ಯರಾಗಿದ್ದರು. ಆಗ ನಾನು ಅಲ್ಲಿದ್ದರೂ ಸಂವಿಧಾನ ಸಭೆಯಲ್ಲಾಗಲಿ ಹಂಗಾಮಿ ಸಂಸತ್ತಿನಲ್ಲಾಗಲಿ ನನಗೆ ಅವರ ಸಂಪರ್ಕ ಇರುತ್ತಿರಲಿಲ್ಲ. ಆದರೆ ಅವರ ಸಜ್ಜನಿಕೆ, ಕಾರುಣ್ಯ ಮತ್ತು ಅನುಕಂಪ ನನ್ನ ಮೇಲೆ ಗಾಢ ಪ್ರಭಾವ ಬೀರಿತ್ತು.

ಆಕೆ ಆರೋಗ್ಯ ಸಚಿವೆಯಾಗಿದ್ದ ಸಂದರ್ಭದಲ್ಲಿ ನಾನು ಅವರನ್ನು ಹಲವು ಬಾರಿ ಭೇಟಿಯಾಗುವ ಅವಕಾಶ ದೊರಕಿತ್ತು. ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಮಣಿಪಾಲದಲ್ಲಿ ಪ್ರಾರಂಭಿಸಲಿದ್ದ ಖಾಸಗಿ ವೈದ್ಯಕೀಯ ಕಾಲೇಜ್ ಒಂದಕ್ಕೆ ಮಂಜೂರಾತಿ ಪಡೆಯುವ ಸಂದರ್ಭದಲ್ಲಿ ನಾನು ಅವರನ್ನು ಹಲವಾರು ಬಾರಿ ಭೇಟಿ ಮಾಡಬೇಕಾಯಿತು. ಆಗಿನ ಅಗತ್ಯಕ್ಕೆ ತಕ್ಕಂತೆ ಆ ಪ್ರದೇಶದಲ್ಲಿ ಸಾಕಷ್ಟು ಸರ್ಕಾರಿ ವೈದ್ಯಕೀಯ ಕಾಲೇಜುಗಳು ಇಲ್ಲದ್ದರಿಂದ ಅಲ್ಲಿನ ಪ್ರತಿಭಾವಂತ ವೈದ್ಯರಾಗಿದ್ದ ಮಾಧವ ಪೈ ಅವರು ಖಾಸಗಿ ವೈದ್ಯಕೀಯ ಕಾಲೇಜು ಒಂದನ್ನು ಸ್ಥಾಪಿಸ ಬಯಸಿದ್ದರು. ಆದರೆ ರಾಜಕುಮಾರಿ ಕೌರ್ ಅವರು ಖಾಸಗಿ ವೈದ್ಯಕೀಯ ಕಾಲೇಜುಗಳಿಗೆ ಮಂಜೂರಾತಿ ನೀಡುವುದಕ್ಕೆ ಕಡು ವಿರೋಧ ಹೊಂದಿದ್ದರು. ಅಲ್ಲಿ ಪ್ರಾರಂಭಿಸಲು ಉದ್ದೇಶಿಸಿದ್ದ ಕಸ್ತೂರಬಾ ವೈದ್ಯಕೀಯ ಕಾಲೇಜು ಈ ಸಂಬಂಧದ ಎಲ್ಲಾ ನಿರ್ಬಂಧಗಳನ್ನು ಪಾಲಿಸುವುದೆಂದು ನಾನು ಪರಿಪರಿಯಾಗಿ ಕೇಳಿಕೊಂಡರೂ ಕೌರ್ ಅವರು ಅಷ್ಟೇ ಸೌಜನ್ಯದಿಂದ ನನ್ನ ಮನವಿಯನ್ನು ನಿರಾಕರಿಸಿದರು. ಇದೇ ಉದ್ದೇಶದೊಂದಿಗೆ ನಾನು ಮತ್ತೊಮ್ಮೆ ಅವರನ್ನು ಭೇಟಿಯಾದೆ. ಅದೇ ಸಂದರ್ಭಕ್ಕೆ ಸರಿಯಾಗಿ ಆಗ ತಾನೇ ಅಮದು ಮಾಡಿಕೊಂಡಿದ್ದ ಧ್ವನಿ ಮುದ್ರಣ ಯಂತ್ರವನ್ನು ಅಲ್ಲಿಗೆ ತಂದರು. ಆಗ ಅವರು ಏನನ್ನಾದರೂ ಮಾತನಾಡಿ ಎಂದು ಸೂಚಿಸಿದರು. ಆ ಸಂದರ್ಭವನ್ನೇ ನಾನು ಬಳಸಿಕೊಂಡು ಕೌರ್ ಅವರ ಬಗ್ಗೆ ಮೆಚ್ಚುಗೆಯ ಮಾತನಾಡಿದೆ. ಕೌರ್ ಅವರ ದಯಾಗುಣ, ಅವರ ಕಾರ್ಯ ಸಾಮರ್ಥ್ಯ, ಸಾರ್ವಜನಿಕ ಜೀವನದಲ್ಲಿ ಅವರು ತೋರುವ ಉತ್ಸಾಹ, ಅವರ ದೇಶ ಭಕ್ತಿ, ರಾಷ್ಟ್ರಕ್ಕೆ ಸಲ್ಲಿಸಿದ ಸೇವೆ, ಬಡವರ ಬಗೆಗೆ ಅವರಲ್ಲಿದ್ದ ಸಹಾನುಭೂತಿ ಮತ್ತು ಗಾಂಧೀಜಿಯವರ ತತ್ವಗಳಲ್ಲಿ ಅವರಿಗಿದ್ದ ವಿಶ್ವಾಸ ಮತ್ತು ಗಾಢ ಆಸಕ್ತಿಗಳನ್ನು ವಿವರಿಸಿದೆ. ಧ್ವನಿ ಮುದ್ರಿತ ಟೇಪನ್ನು ಅವರು ಮತ್ತೊಮ್ಮೆ ಕೇಳಿಸಿಕೊಂಡರು. ಅವರ ಮುಖ ಸಂತಸದಿಂದ ಅರಳಿತು. ಆದರೆ ಆ ದಿನ ನಾನು ಅವರಲ್ಲಿ ಯಾವ ವಿಷಯವನ್ನು ಪ್ರಸ್ತಾಪಿಸಲಿಲ್ಲ.

ಅದಾದ ಒಂದೆರಡು ವಾರಗಳ ಬಳಿಕ ನಾನು ಅವರನ್ನು ಮತ್ತೆ ಭೇಟಿಯಾದಾಗ ಮಣಿಪಾಲದ ಖಾಸಗಿ ವೈದ್ಯಕೀಯ ಕಾಲೇಜಿಗೆ ಮಂಜೂರಾತಿ ದೊರೆತಿದೆಯೇ ಎಂದು ಕೇಳಿದೆ.

---

*ಎಸ್ ನಿಜಲಿಂಗಪ್ಪ- ಮಹಾನ್ ಸ್ವಾತಂತ್ರ್ಯ ಹೋರಾಟಗಾರರು, ಕರ್ನಾಟಕದ ಮಾಜಿ ಮುಖ್ಯ ಮಂತ್ರಿ ಹಾಗೂ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾಗಿದ್ದರು.

ಒಂದು ವೇಳೆ ಮಂಜೂರಾತಿ ದೊರೆತರೆ ಅದು ಅತ್ಯುತ್ತಮ ವೈದ್ಯಕೀಯ ಸಂಸ್ಥೆಯಾಗುವುದೆಂದು ಹೇಳಿದೆ. ಆಗ ಅವರು ಅದಕ್ಕೆ ಯಾವ ವಿರೋಧವನ್ನು ವ್ಯಕ್ತ ಪಡಿಸಲಿಲ್ಲ. ಬದಲಾಗಿ ಅವರು ನಗು ನಗುತ್ತಾ ಈ ಮನವಿಯನ್ನು ಪರಿಶೀಲಿಸುವಾಗಿ ಹೇಳಿದರು. ಇದಾದ ಕೆಲವು ವಾರಗಳ ಬಳಿಕ ಈ ಯೋಜನೆಯ ಸಂಪೂರ್ಣ ವಿವರಗಳನ್ನು ಅವರಿಗೆ ಸಲ್ಲಿಸಲಾಯಿತು. ನಾನು ಹೇಳಿದುದೆಲ್ಲವನ್ನು ಗಮನದಲ್ಲಿಟ್ಟುಕೊಂಡು ಯೋಜನೆಗೆ ಸಂಬಂಧಿಸಿದಂತೆ ಸಲ್ಲಿಸಲಾದ ಎಲ್ಲಾ ವಿವರಗಳನ್ನು ಪರಿಶೀಲಿಸಿ ತಾವು ಮಣಿಪಾಲದ ಖಾಸಗಿ ವೈದ್ಯಕೀಯ ಕಾಲೇಜಿಗೆ ಅನುಮತಿ ನೀಡಿರುವುದಾಗಿ ತಿಳಿಸಿದರು.

ಮಣಿಪಾಲದ ಕಸ್ತೂರಬಾ ವೈದ್ಯಕೀಯ ವಿದ್ಯಾಲಯ ಇಂದು ದೇಶದ ಅತ್ಯುತ್ತಮ ವೈದ್ಯಕೀಯ ಸಂಸ್ಥೆಗಳಲ್ಲಿ ಒಂದಾಗಿದೆ. ಹೀಗೆ ಬಹುಶಃ ದೇಶದಲ್ಲೇ ಮೊದಲನೆಯದಾದ ಖಾಸಗಿ ವೈದ್ಯಕೀಯ ಕಾಲೇಜೊಂದನ್ನು ಮಣಿಪಾಲಕ್ಕೆ ಮಂಜೂರು ಮಾಡಿದ್ದಕ್ಕೆ ನಾವೆಲ್ಲರೂ ರಾಜಕುಮಾರಿ ಕೌರ್ ಅವರಿಗೆ ಕೃತಜ್ಞರಾಗಿರಬೇಕಾಗಿದೆ. ನಾನು ಭೇಟಿಯಾದಾಗಲೆಲ್ಲ ಅವರು ತೋರಿದ ಸೌಜನ್ಯ ಮತ್ತು ಹೃದಯವಂತಿಕೆಗಳನ್ನು ನಾನೆಂದಿಗೂ ಮರೆಯಲಾರೆ.

## ಅಧ್ಯಾಯ-7

# ರಾಜಕುಮಾರಿ ಅಮೃತ ಕೌರ್‌ಗೆ ಒಂದು ಶ್ರದ್ಧಾಂಜಲಿ

*ರಾಜಮಾತಾ ಗಾಯಿತ್ರಿ ದೇವಿ

ಭಾರತದ ಅಸಾಧಾರಣ ಶ್ರೇಣಿಯ ಧುರೀಣರಲ್ಲಿ ಒಬ್ಬರಾದ ರಾಜಕುಮಾರಿ ಅಮೃತ್ ಕೌರ್ ಅವರು ಇಪ್ಪತ್ತನೆ ಶತಮಾನದ ಆರಂಭದಿಂದ 1960ರ ದಶಕದವರೆಗೂ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದರು. ಕಪುರ್ತಲಾದ ರಾಜಮನೆತನದ ಹರ್ನಾಮ್ ಸಿಂಗ್ ಆಕೆಯ ತಂದೆ. ತಾಯಿ ಬಂಗಾಳದ ಗೋಲಕ್‌ನಾಥ್ ಚಟರ್ಜಿಯವರ ಪುತ್ರಿ.

ರಾಜಕುಮಾರಿ ಕೌರ್ ಲಕ್ನೋದ ಕಪುರ್ತಲಾ ಅರಮನೆಯ ಬಹುದೊಡ್ಡ ಕುಟುಂಬದಲ್ಲಿ ಬೆಳೆದರು. ಸ್ವಲ್ಪ ಕಾಲ ಜಲಂಧರ್‌ನಲ್ಲೂ ನೆಲಸಿದ್ದರು. ಆ ಅರಮನೆ ಈಗ ಲಕ್ನೋ ವಿಶ್ವ ವಿದ್ಯಾಲಯವಾಗಿ ಮಾರ್ಪಟ್ಟಿದೆ. ಅವರಿಗೆ ಇಬ್ಬರು ಸಹೋದರಿಯರಿದ್ದರು. ಆದರೆ ಎಳವೆಯಲ್ಲೇ ಮೃತ ಪಟ್ಟರು. ಹೀಗಾಗಿ ಏಳು ಮಂದಿ ಸಹೋದರರೊಂದಿಗೆ ಆಕೆ ಒಬ್ಬಳೇ ಹೆಣ್ಣು ಮಗಳಾಗಿದ್ದಳು. ತಮ್ಮ ಹೆಂಡತಿಯ ಕುಟುಂಬದವರ ಪ್ರಭಾವಕ್ಕೆ ಒಳಗಾಗಿ ರಾಜ ಹರ್ನಾಮ್ ಸಿಂಗ್ ಕ್ರೈಸ್ತ ಧರ್ಮವನ್ನು ಅಂಗೀಕರಿಸಿದರು. ಹೀಗಾಗಿ ಅವರು ಕ್ರೈಸ್ತ ಮತಾನುಯಾಯಿಗಳಾದರು.

ಎಂಟು ವರ್ಷದವರಿರುವಾಗಲೇ ಕೌರ್ ಅವರನ್ನು ಇಂಗ್ಲೆಂಡಿನ ಶೆರ್‌ಬೋರ್ನ್ ಶಾಲೆಗೆ ಸೇರಿಸಲಾಯಿತು. ಅಲ್ಲಿ ಅವರು ಹತ್ತು ವರ್ಷಗಳ ಕಾಲ ಇದ್ದು, ಪಠ್ಯ ಹಾಗೂ ಕ್ರೀಡೆಗಳಲ್ಲಿ ಎಲ್ಲರನ್ನು ಮೀರಿಸಿದರು. ಅವರು ಟೆನಿಸ್ ಆಟವನ್ನು ತುಂಬಾ ಚೆನ್ನಾಗಿ ಆಡುತ್ತಿದ್ದರು. ಅನಂತರ ಅವರು ಅಖಿಲ ಭಾರತ ಟೆನಿಸ್ ಅಸೋಸಿಯೇಷನ್ ಅಧ್ಯಕ್ಷರಾದರು. ಭಾರತಕ್ಕೆ ಮರಳಿದ ಅವರು ಲಕ್ನೋ, ಜಲಂಧರ್ ಮತ್ತು ಶಿಮ್ಲಾದಲ್ಲಿ ವಾಸವಾಗಿದ್ದರು. ಅದು ಪುರುಷರ ಪ್ರಾಬಲ್ಯದ ಕುಟುಂಬವಾಗಿದ್ದರೂ ಮನೆ ಮಂದಿ ತುಂಬಾ ತಿಳುವಳಿಕೆ ಹೊಂದಿದ್ದವರು ಮತ್ತು ಸುಸಂಸ್ಕೃತರಾಗಿದ್ದರು. ಆಕೆಯ ಸಹೋದರರೆಲ್ಲರೂ ಸಾರ್ವಜನಿಕ ಜೀವನದಲ್ಲಿ ಹೆಸರು ಮಾಡಿದವರೇ ಆಗಿದ್ದರು. ಆಕೆಯ ಹಿರಿಯ ಅಣ್ಣ ರಾಜಾ ಮಹಾರಾಜ್ ಸಿಂಗ್ ಮಹಾರಾಷ್ಟ್ರ ದ ರಾಜ್ಯಪಾಲರಾಗಿದ್ದರು. ಅವರು ದಕ್ಷಿಣ ಆಫ್ರಿಕಾದಲ್ಲಿ ಭಾರತದ ಪ್ರಥಮ ಹೈ ಕಮೀಷನರ್ ಆಗಿದ್ದರು. ದಕ್ಷಿಣ ಆಫ್ರಿಕಾದ ಮತ್ತು ವಿಶ್ವ ಸಂಸ್ಥೆಯ ಭಾರತೀಯ ನಿಯೋಗಗಳ ನೇತೃತ್ವವನ್ನು ವಹಿಸಿದವರು. ಇನ್ನೋರ್ವ ಸಹೋದರ ಕನ್ವರ್ ದಲೀಪ್ ಸಿಂಗ್ ಅವರು ಹೇಗ್‌ನಲ್ಲಿರುವ ಅಂತಾರಾಷ್ಟ್ರೀಯ ನ್ಯಾಯಾಲಯದ ಅಧ್ಯಕ್ಷರಾಗಿದ್ದರು ಮತ್ತು ಪಂಜಾಬಿನ ನ್ಯಾಯಾಲಯದ ನ್ಯಾಯಾಧೀಶರಾಗಿದ್ದರು. ಇನ್ನೋರ್ವ ಸಹೋದರ ಕನ್ವರ್ ಜಸ್ಬೀರ್ ಸಿಂಗ್ ಭಾರತದ ಪ್ರಥಮ ಡೆಪ್ಯುಟಿ ಕಮೀಶನರ್ ಆಗಿ ಲಕ್ನೋದಲ್ಲಿ ಕಾರ್ಯ ನಿರ್ವಹಿಸಿದ್ದರು. ಸಂಯುಕ್ತ ಪ್ರಾಂತ್ಯಗಳ ಮುಖ್ಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಬೇಕಾಗಿದ್ದ ಅವರು ಅಕಾಲಿಕ ನಿಧನಕ್ಕೆ ತುತ್ತಾದರು. ರಾಜಾ ಹರ್ನಾಮ್‌ಸಿಂಗ್ ಅವರ ರತ್ನಪ್ರಾಯರಾಗಿದ್ದ ಮಕ್ಕಳಲ್ಲಿ ರಾಜಕುಮಾರಿ ಕೌರ್ ಅವರು ಅತ್ಯುನ್ನತ ಸ್ಥಾನಕ್ಕೆ ಏರಿ ಆ ಕುಟುಂಬಕ್ಕೆ ಮುಕುಟ ಪ್ರಾಯರಾದರು. ಕೌರ್ ಅವರ ಹೆಸರು

---

*ರಾಜಮಾತಾ ಗಾಯಿತ್ರಿ ದೇವಿ ಮಾಜಿ ಸಂಸತ್ ಸದಸ್ಯರು.

ದೇಶದುದ್ದಕ್ಕೂ ಮನೆ ಮಾತಾಗಿತ್ತು. ಎಲ್ಲಾ ರೀತಿಯ ಸುಖ ಸವಲತ್ತುಗಳ ಶ್ರೀಮಂತ ಹಿನ್ನೆಲೆ ಮತ್ತು ಪಾಶ್ಚಾತ್ಯ ರೀತಿಯಲ್ಲಿ ಬೆಳೆದು ಬಂದ ಅವರು ರಾಜ ವೈಭೋಗಗಳನ್ನು ಪರಿತ್ಯಜಿಸಿ, ಸಂಪ್ರದಾಯದ ಸಂಕೋಲೆಗಳನ್ನು ಕಳಚಿಕೊಂಡು ಸಬರಮತಿ ಮತ್ತು ವಾರ್ಧಾದ ಆಶ್ರಮಗಳಲ್ಲಿ ವಾಸವಾಗಿದ್ದರು ಎಂಬುದೇ ನಂಬಲಾಗದ ಸಂಗತಿ. ಅಲ್ಲಿ ಅವರು ಮಹಾತ್ಮಾಗಾಂಧೀಜಿಯವರ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುವುದಲ್ಲದೆ ಆಶ್ರಮದ ಎಲ್ಲ ದೈನಂದಿನ ಕೆಲಸ ಕಾರ್ಯಗಳಲ್ಲೂ ಭಾಗಿಯಾಗುತ್ತಿದ್ದರು. ರಾಜಕುಮಾರಿ ಅಮೃತ ಕೌರ್ ಮಹಾತ್ಮಾಗಾಂಧೀಜಿಯವರ ಕಟ್ಟಾ ಅನುಯಾಯಿಯಾಗಿ, ನೆಚ್ಚಿನ ಶಿಷ್ಯೆಯಾಗಿ ದೇಶದ ಸ್ವಾತಂತ್ರ್ಯಕ್ಕಾಗಿ ಅವಿರತವಾಗಿ ಕಾರ್ಯ ನಿರ್ವಹಿಸಿದರು. ರಾಷ್ಟ್ರಪಿತ ಗಾಂಧೀಜಿಯವರಿಗೆ ಅವರು ಹಲವಾರು ವರ್ಷಗಳ ಕಾಲ ಕಾರ್ಯದರ್ಶಿಯಾಗಿದ್ದರು.

ಸಾರ್ವಜನಿಕ ರಂಗದಲ್ಲಿ, ಸಮಾಜ ಕಲ್ಯಾಣ, ಅದರಲ್ಲೂ ಕುರಿತಾಗಿ ಭಾರತೀಯ ಮಹಿಳೆಯರ ಏಳಿಗೆಗಾಗಿ ತಮ್ಮ ಜೀವನವನ್ನೇ ಮೀಸಲಿಟ್ಟರು. ಅಖಿಲ ಭಾರತ ಮಹಿಳಾ ಸಮ್ಮೇಳನದ ಅಧ್ಯಕ್ಷೆಯಾಗಿ ಅವರು ಬಾಲ್ಯವಿವಾಹ, ಪರ್ದಾ, ಬಹು ಪತ್ನಿತ್ವ, ನಿರಕ್ಷತೆಯಂತಹ ಪಿಡುಗುಗಳ ನಿರ್ಮೂಲನೆಗಾಗಿ ಮಕ್ಕಳು ಮತ್ತು ಮಹಿಳೆಯರ ಆರೋಗ್ಯ ಸಂರಕ್ಷಣೆಗಾಗಿ ಅವಿಶ್ರಾಂತವಾಗಿ ಶ್ರಮಿಸಿದರು. ಅಖಿಲ ಭಾರತ ಮಹಿಳೆಯರ ಸಮ್ಮೇಳನದಲ್ಲಿ ರಾಜಸ್ಥಾನದ ಪ್ರತಿನಿಧಿಯಾಗಿ ಅವರೊಂದಿಗೆ ಸೇವೆ ಸಲ್ಲಿಸುವ ಅವಕಾಶ ನನಗೆ ದೊರಕಿತ್ತು. ರಾಜಕುಮಾರಿ ಅಮೃತ ಕೌರ್ ಅವರ ಕ್ರಿಯಾಶೀಲ ಹಾಗೂ ವ್ಯಾವಹಾರಿಕ ದೃಷ್ಟಿಯ ನಾಯಕತ್ವ, ಆಕೆಯ ಪ್ರಾಮಾಣಿಕತೆ ಮತ್ತು ಭಾರತೀಯ ಮಹಿಳೆಯರ ಸ್ಥಾನಮಾನಗಳಲ್ಲಿ ಸುಧಾರಣೆ ತರುವ ಅವರ ನೈಜ ಕಳಕಳಿ ಅವರ ಕಾರ್ಯದಲ್ಲಿ ಕಠಿಣ ಪರಿಶ್ರಮ, ದುಡಿಮೆಯಲ್ಲಿ ಮತ್ತು ಭಾರತೀಯ ಸಮಾಜದಲ್ಲಿನ ಸಂಪ್ರದಾಯವಾದಿಗಳು ಮತ್ತು ಅಶಿಕ್ಷಿತ ಜನ ಸಮುದಾಯಕ್ಕೆ ಈ ಅಂಶವನ್ನು ಮನವರಿಕೆ ಮಾಡಿಕೊಡುವ ಪ್ರಯತ್ನಗಳಲ್ಲಿ ಕಾಣಬಹುದು. ಒಟ್ಟಿನಲ್ಲಿ ಭಾರತೀಯ ಸಮಾಜ ವ್ಯವಸ್ಥೆಯಲ್ಲಿ ಆಮೂಲಾಗ್ರ ಬದಲಾವಣೆಗಳನ್ನು ತರಬೇಕೆಬುಂದು ಅವರ ಆಶಯವಾಗಿತ್ತು. ಆಗಿನ ಕಾಲದಲ್ಲಿ ಶತಮಾನಗಳಷ್ಟು ಹಳೆಯದಾದ ಸಂಪ್ರದಾಯಗಳನ್ನು ಅವು ಎಷ್ಟೇ ಅಪ್ರಸ್ತುತವಾಗಿದ್ದರೂ, ಅವ್ಯವಹಾರಿಕವಾಗಿದ್ದೂ ಮತ್ತು ಅರ್ಥ ಶೂನ್ಯವಾಗಿದ್ದರೂ ಅವುಗಳನ್ನು ಮುರಿಯುವುದು ಅಷ್ಟು ಸುಲಭವಾಗಿರಲಿಲ್ಲ. ಆದರೆ ರಾಜಕುಮಾರಿ ಕೌರ್ ಅವರು ಎಂದೂ ಈ ವಿಷಯದಲ್ಲಿ ಅಂಜಿದವರಲ್ಲ  ಅಳುಕಿದವರಲ್ಲ. ಅವರು ಅಂತಹ ಎಲ್ಲ ಪ್ರಯತ್ನಗಳನ್ನು ಮಾಡಿದರು. ಬಹುಮಟ್ಟಿಗೆ ಯಶಸ್ವಿಯೂ ಆದರು.

ಭಾರತ ಸ್ವಾತಂತ್ರ್ಯಗೊಂಡ ಮೇಲೆ ರಾಜಕುಮಾರಿ ಅಮೃತ ಕೌರ್ ಅವರು ಪ್ರಥಮ ಆರೋಗ್ಯ ಸಚಿವರಾದರು. ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಗಾಗಿ ಅವರು ಸ್ವತಃ ನಿಧಿ ಸಂಗ್ರಹ ಕಾರ್ಯ ಕೈಗೊಂಡರು. ಅದು ಏಷ್ಯಾದ ಅತ್ಯುತ್ತಮ ಆಸ್ಪತ್ರೆಯಾಗಿ ಬೆಳೆಯುವುದೆಂದು ಅವರು ಪೂರ್ಣಭರವಸೆ ಇಟ್ಟುಕೊಂಡಿದ್ದರು. ಆರೋಗ್ಯ ಸಚಿವೆಯಾಗಿ ರಾಜಕುಮಾರಿ ಕೌರ್ ಅವರು ಅವಿರತವಾಗಿ ಶ್ರಮಿಸಿದರು. ಆಕೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಮನ್ನಣೆ ಪಡೆದ ರೆಡ್ ಕ್ರಾಸ್ ಸಂಸ್ಥೆಯ ಉನ್ನತ ಹುದ್ದೆಯನ್ನು ಪಡೆದುಕೊಂಡರು. ರೆಡ್‌ಕ್ರಾಸ್ ಸಂಘಟನೆಯಲ್ಲಿ ಮತ್ತು ವಿಶ್ವ  ಆರೋಗ್ಯ ಸಂಸ್ಥೆಯಲ್ಲಿ (ಡಬ್ಲ್ಯು.ಹೆಚ್.ಓ) ಅವರು ಅತ್ಯಂತ ಗೌರವಾನ್ವಿತ ಸ್ಥಾನ ಹೊಂದಿದ್ದರು.

ತಮ್ಮ ಅಚ್ಚುಮೆಚ್ಚಿನ ಟೆನಿಸ್ ಕ್ರೀಡೆಗೆ ಮಾತ್ರವಲ್ಲ ಇತರ ಕ್ರೀಡೆಗಳಿಗೂ ಅಷ್ಟೇ ಗಮನ ನೀಡಿದ್ದರು. ಅಂತೋಣಿ ಡಿಮೆಲೋ ಜೊತೆಗೂಡಿ ಭಾರತ ರಾಷ್ಟ್ರೀಯ ಕ್ರೀಡಾ ಕ್ಲಬ್ (ನ್ಯಾಷನಲ್ ಸ್ಪೋರ್ಟ್ಸ್ ಕ್ಲಬ್ )ಪ್ರಾರಂಭಿಸಿದ ಅವರು 1949-59 ರವರೆಗೆ ಅದರ ಸಂಸ್ಥಾಪಕ ಅಧ್ಯಕ್ಷರಾಗಿದ್ದರು. ಅವರ ಅಧಿಕಾರಾವಧಿಯಲ್ಲಿ ದೆಹಲಿಯಲ್ಲಿ ರಾಷ್ಟ್ರೀಯ ಕ್ರೀಡಾಂಗಣ ನಿರ್ಮಾಣ ಗೊಂಡಿತು. ಕೌರ್ ಅವರು ಅಖಿಲ ಭಾರತೀಯ ಕ್ರೀಡಾ ಮಂಡಳಿಯ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ರಾಜಕುಮಾರಿ ಕೋಚಿಂಗ್ ಯೋಜನೆ ಅವರದೇ ಆದ ಯೋಜನೆ. ಅವರ ಆದರ್ಶಗಳು ಮತ್ತು ಅವರ ವಿಚಾರಗಳು ಅದೇ ಸ್ಫೂರ್ತಿಯಲ್ಲಿ ಅಲ್ಲಿ ಅನುಷ್ಠಾನಕ್ಕೆ ಬಂದವು. ಅಖಿಲ ಭಾರತ ಟೆನಿಸ್ ಸಂಘಟನೆಯ ಅಧ್ಯಕ್ಷರಾಗಿ ಅವರು ಕ್ರೀಡೆಗಳ ಸಂವರ್ಧನೆಗಾಗಿ ಮತ್ತು ಆಟಗಾರರಿಗೆ ಉತ್ತೇಜನ ನೀಡುವ ನಿಟ್ಟಿನಲ್ಲಿ ಎಡೆಬಿಡದೆ ಶ್ರಮಿಸಿದರು. ಅವರ ಅಧ್ಯಕ್ಷ ಅವಧಿಯಲ್ಲಿ ಟೆನಿಸ್ ಕ್ರೀಡೆಗೆ ಭಾರಿ ಉತ್ತೇಜನ ದೊರೆಯಿತು.

ತಾವು ಹೊಂದಿದ್ದ ಸಾರ್ವಜನಿಕ ಕ್ಷೇತ್ರದ ಹುದ್ದೆಗಳಲ್ಲಿ ವಿಶಿಷ್ಟ ರೀತಿಯ ಸೇವೆ ಸಲ್ಲಿಸಿದ್ದುದರಿಂದಲೇ ಅಮೃತ ಕೌರ್ ಅವರ ಮೇಲೆ ಇತ್ತಿಲ್ಲ ಗೌರವಾದರಗಳಿಗೆ ಕಾರಣವಾಗಿರಲಿಲ್ಲ. ಬದಲಾಗಿ ಆಕೆಯ ವ್ಯಕ್ತಿತ್ವವೇ ಅವರ ಜೊತೆ ಕೆಲಸ ಮಾಡಿದವರಿಗೆ ಹಾಗೂ ಅವರನ್ನು ಅರಿತವರಿಗೆ ಅಪ್ಯಾಯಮಾನವಾಗಿತ್ತು. ಶ್ರೀಮಂತ ಮತ್ತು ಕುಲೀನ ಮನೆತನದಿಂದ ಬಂದ ಅವರ ನಡವಳಿಕೆಯಲ್ಲಿ ಸಹಾನುಭೂತಿ, ತಾಳ್ಮೆ ಮತ್ತು ಗ್ರಹಿಕೆಯ ಗುಣಗಳು ಅವರ ಕೆಲಸ ಕಾರ್ಯಗಳಲ್ಲಿ ಎದ್ದು ಕಾಣುತ್ತಿದ್ದವು. ಹೀಗೆ ಭಾರತೀಯ ಮಹಿಳೆಯರಿಗೆ ಅವರು ಆದರ್ಶ ಪ್ರಾಯರಾಗಿದ್ದಾರೆ.

ನಾನು ಮೆಚ್ಚಿದ, ಚೆನ್ನಾಗಿ ಅರಿತಿರುವ ಹಾಗೂ ಗೌರವಿಸುವ ಒಬ್ಬರ ಬಗೆಗೆ ಇಂತಹ ಒಂದು ಶ್ರದ್ಧಾಂಜಲಿಯನ್ನು ಬರೆಯುವ ಅವಕಾಶ ದೊರಕಿರುವುದು ನನ್ನಲ್ಲಿ ಧನ್ಯತೆ ಮೂಡಿಸಿದೆ.

# ಅಧ್ಯಾಯ-8

## ಭಾರತದ ಪ್ರಥಮ ಕೇಂದ್ರ ಸಂಪುಟ ಸಚಿವೆ

*ರೇಣುಕಾ ರಾಯ್

ಕಪುರ್ತಲಾ ರಾಜಮನೆತನದಲ್ಲಿ ಜನಿಸಿ ಇಂಗ್ಲೆಂಡಿನಲ್ಲಿ ಬೆಳೆದ ಖ್ಯಾತ ಟೆನಿಸ್ ಆಟಗಾರ್ತಿಯೂ ಆಗಿದ್ದ ರಾಜಕುಮಾರಿ ಕೌರ್ ನಮ್ಮ ರಾಷ್ಟ್ರದ ಮಹಾನ್ ಧುರೀಣೆಯರಲ್ಲಿ ಒಬ್ಬರು. ರಾಜ ಕುಟುಂಬವು ಕ್ರೈಸ್ತ ಮತವನ್ನು ಅವಲಂಬಿಸಿದ ಕಾರಣದಿಂದ ಕಪುರ್ತಲಾ ಅರಸೊತ್ತಿಗೆಯಿಂದ ವಂಚಿತವಾಯಿತಾದರೂ ಸಾಮಾಜಿಕ ಸ್ಥಾನಮಾನ ಮತ್ತು ಘನತೆಯನ್ನು ಅದು ಉಳಿಸಿಕೊಂಡಿತ್ತು. 1932ರಲ್ಲಿ ಮದ್ರಾಸಿನಲ್ಲಿ ನಡೆದ ಅಖಿಲ ಭಾರತ ಮಹಿಳಾ ಸಮ್ಮೇಳನದಲ್ಲಿ ನಾನು ರಾಜಕುಮಾರಿ ಅವರನ್ನು ಮೊಟ್ಟ ಮೊದಲ ಬಾರಿ ಭೇಟಿಯಾದೆ. ಆಗ ನನ್ನ ಅಜ್ಜಿ ಶ್ರೀಮತಿ.ಸರಳಾ ಅವರು ಸಮ್ಮೇಳನದ ಅಧ್ಯಕ್ಷರಾಗಿದ್ದರು. ರಾಜಕುಮಾರಿ ಅವರು ಪ್ರತಿಯೊಬ್ಬರಿಗೂ ಆಕರ್ಷಣೆಯ ಕೇಂದ್ರವಾಗಿದ್ದರು ಮತ್ತು ಈ ಸಮ್ಮೇಳನ ನಾವೆಲ್ಲರೂ ಅವರ ಬಗ್ಗೆ ಹೆಚ್ಚಾಗಿ ತಿಳಿದುಕೊಳ್ಳಲು ಅವಕಾಶ ಕಲ್ಪಿಸಿತು. ಯಾರೇ ಆದರೂ ಬೆರಗುಗೊಳ್ಳುವ ವ್ಯಕ್ತಿತ್ವ ಅವರದು. ಆಗ ಅವರು ಸಮ್ಮೇಳನದ ಸ್ಥಾಯಿ ಸಮಿತಿಯ ಅಧ್ಯಕ್ಷೆಯೂ ಆಗಿದ್ದರು. ತಮಗಿಂತ ಕಿರಿಯ ಸದಸ್ಯರ ಜೊತೆ ಅವರು ದಯಾಪರವಾಗಿ ವರ್ತಿಸುತ್ತಿದ್ದರು. ಆ ದಿನಗಳಲ್ಲಿ ನಡೆದ ಘಟನೆಯೊಂದು ನನ್ನ ಮನಸ್ಸಿನಲ್ಲಿ ಇನ್ನೂ ಅಚ್ಚಳಿಯದೆ ಉಳಿದಿದೆ. ಅಖಿಲ ಭಾರತ ಮಹಿಳಾ ಸಮ್ಮೇಳನದ ಸದಸ್ಯರು ಸ್ವದೇಶಿ ಉಡುಪು ಧರಿಸಬೇಕೆಂದು ಆದೇಶ ನೀಡುವ ಗೊತ್ತುವಳಿಯೊಂದನ್ನು ನಾನು ಮತ್ತು ಲಕ್ಷ್ಮಿ ಮೆನನ್ ಅವರು ಸೇರಿ ಮಂಡಿಸಿದ್ದೆವು. ಇದನ್ನು ಕೇಳಿದ ತಕ್ಷಣವೇ ರಾಜಕುಮಾರಿ ಕೌರ್ ಅವರು "ಇದರಲ್ಲಿ ರಾಜಕೀಯದ ಛಾಯೆ ಇದೆ. ಅಖಿಲ ಭಾರತ ಮಹಿಳಾ ಸಮ್ಮೇಳನವು ರಾಜಕೀಯ ವ್ಯಾಪ್ತಿಯಿಂದ ಹೊರಗಿರಬೇಕು" ಎಂದು ಪ್ರತಿಕ್ರಿಯಿಸಿದರು. ಹೀಗಾಗಿ ಸ್ವದೇಶಿ ಕುರಿತು ಗೊತ್ತುವಳಿಯನ್ನು ತುಂಬಾ ಜಾಗರೂಕತೆಯಿಂದ ಅಂಗೀಕರಿಸಲಾಯಿತು. ಕೌರ್ ಅವರು ಸ್ವತಃ ಖಾದಿಧಾರಿಯಾಗಿದ್ದರೂ ಅವರ ಈ ನಡವಳಿಕೆ ವಿರೋಧಾಭಾಸದಿಂದ ಕೂಡಿತ್ತು. ಅದರೆ ಇದಾದ ಕೆಲವೇ ವರ್ಷಗಳಲ್ಲಿ ಅವರು ಗಾಂಧೀಜಿಯವರ ನಿಷ್ಠೆ ಅನುಯಾಯಿಯಾದದ್ದು ಮಾತ್ರವಲ್ಲ ಅವರ ಸರಳ ಮತ್ತು ಮಿತವ್ಯಯದ ಜೀವನ ಸೂತ್ರವನ್ನು ಅಂಗೀಕರಿಸಿದರು.

ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಎತ್ತರಿಸುವ ದಿಸೆಯಲ್ಲಿ ರಾಜಕುಮಾರಿ ಅಮೃತ ಕೌರ್ ಕಾರ್ಯ ಪ್ರವೃತ್ತರಾಗಿದ್ದ ದಿನಗಳಲ್ಲಿ ನನಗೆ ಅವರ ಬಗ್ಗೆ ತಿಳಿದಿತ್ತು. ಮಹಿಳೆಯರ ಸಾಮಾಜಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತೆ ಮತ್ತು ಮಹಿಳೆಯರ ಅಭ್ಯುದಯ ಸಾಧನೆಯ ದಿಸೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಜನರನ್ನು ಪ್ರಚೋದಿಸುವ ನಿಟ್ಟಿನಲ್ಲಿ ಅವರು ನಿಸ್ಸಂಶಯವಾಗಿಯೂ ಅತ್ಯಂತ ಪ್ರಮುಖ ಪಾತ್ರ ವಹಿಸಿದ್ದರು. ವಾರ್ಧಾ ಆಶ್ರಮದಲ್ಲಿ ಬಾಪೂಜಿ ಅವರನ್ನು ಕೂಡಿಕೊಂಡಾಗಿನಿಂದಲೇ ಸ್ವಾತಂತ್ರ್ಯ ಹೋರಾಟದ ಒಂದು ಅವಿಭಾಜ್ಯ ಅಂಗವೆಂಬಂತೆ ಅವರು ಕಾರ್ಯವನ್ನು ಮುಂದುವರಿಸಿದರು. ಅಲ್ಪಕಾಲದಲ್ಲೇ ಅವರು ಅನೇಕ ರೀತಿಯಲ್ಲಿ ಗಾಂಧೀಜಿಯವರ

---

*ರೇಣುಕಾ ರಾಯ್ ಮಾಜಿ ಸಂಸತ್ ಸದಸ್ಯೆ.

ಬಲಗೈ ಬಂಟರೆಂದು ಕರೆಯಿಸಿಕೊಂಡದ್ದು ಮಾತ್ರವಲ್ಲ ಅವರ ಕಾರ್ಯದರ್ಶಿಗಳಲ್ಲಿ ಒಬ್ಬರಾಗಿಯೂ ಕಾರ್ಯ ನಿರ್ವಹಿಸಿದರು. ಸ್ವಾತಂತ್ರ್ಯ ಹೋರಾಟದ ಅನೇಕ ಸಂದರ್ಭಗಳಲ್ಲಿ ಅವರ ಸೆರೆಮನೆ ವಾಸದ ಅತ್ಯಂತ ದುರ್ಬರ ಸನ್ನಿವೇಶಗಳು ಮತ್ತು ಕಠಿಣತೆಗಳನ್ನು ಅನುಭವಿಸ ಬೇಕಾಯಿತಾದರೂ ಅವರು ಯಾವ ವಿಷಯದಲ್ಲಿಯೂ ರಾಜಿ ಮಾಡಿಕೊಳ್ಳದೆ ಸ್ಥಿರವಾಗಿ ನಿಂತರು.

ದೇಶಕ್ಕೆ ಸ್ವಾತಂತ್ರ್ಯ ದೊರೆತ ನಂತರದಲ್ಲಿ ಕೌರ್ ಅವರು ಹಂಸಮೆಹ್ತಾ ಅವರೊಂದಿಗೆ ಡಾ.ಅಂಬೇಡ್ಕರ್ ನೇತೃತ್ವದ ರಾಜ್ಯಾಂಗ ಸಭೆಯ ಕರಡು ರಚನಾ ಸಮಿತಿಯ ಪ್ರಮುಖ ಸದಸ್ಯರಾದರು. ಆ ದಿನಗಳಲ್ಲಿ ನಾನು ಸೇರಿದಂತೆ ರಾಜ್ಯಾಂಗ ಸಭೆಯ 14 ಮಂದಿ ಮಹಿಳಾ ಸದಸ್ಯರು ಆಗಾಗ ಸಭೆ ಸೇರುತ್ತಿದ್ದೆವು. ಮಹಿಳೆಯರ ಹಕ್ಕುಗಳ ಬಗ್ಗೆ ಒಮ್ಮತದ ಹಾಗೂ ಅತ್ಯಂತ ಸುಸ್ಪಷ್ಟ ನಿಲುವು ತಳೆಯುವುದು ಅವರ ಮಾರ್ಗದರ್ಶನದಿಂದಲೇ ನಮಗೆ ಸಾಧ್ಯವಾಯಿತು ಏಕರೂಪದ ನಾಗರಿಕ ಸಂಹಿತೆಯನ್ನು ಸರ್ಕಾರದ ನೀತಿ ನಿರ್ದೇಶಕ ತತ್ವಗಳ ನಾಲ್ಕನೇ ಪರಿಚ್ಛೇದದಲ್ಲಿ ಸೇರಿಸಬೇಕೆಂಬ ನಿರ್ಧಾರಕ್ಕೆ ಬಂದಾಗ ಅಂಬೇಡ್ಕರ್ ಅವರೂ ಸೇರಿದಂತೆ ಮಹಿಳೆಯರಿಗೆ ಎಷ್ಟೊಂದು ನಿರಾಶೆಯಾಯಿತೆಂಬುದು ಇನ್ನು ನನ್ನ ಮನಸ್ಸಿನಲ್ಲಿ ಇದೆ. ಅಪರಾಧ ದಂಡ ಸಂಹಿತೆ (ಕ್ರಿಮಿನಲ್ ಪ್ರೊಸಿಜರ್ ಕೋಡ್)ಯನ್ನು ಬ್ರಿಟೀಷರ ಆಡಳಿತಾಧಿಕಾರದ ಅವಧಿಯಲ್ಲೇ ವಿವರವಾಗಿ ಹೆಚ್ಚಿಸಲಾಗಿತ್ತು. ಈಗ ದೇಶದ ಎಲ್ಲಾ ಪೌರರಿಗೂ ಅನ್ವಯಿಸುವಂತೆ ನಾಗರಿಕ ಸಂಹಿತೆಯನ್ನು ಸಿದ್ಧಗೊಳಿಸಬೇಕಾಯಿತು. ಇದನ್ನು ಸಂವಿಧಾನದಲ್ಲಿ ಅಳವಡಿಸಲು ಸುಮಾರು ಒಂದು ವರ್ಷ ಕಾಲ ಬೇಕಾಗುವುದೆಂದು ಸ್ವತಃ ಅಂಬೇಡ್ಕರ್‌ರರೇ ಹೇಳಿದ್ದರು. ದಿ. ಪಂಡಿತ್ ಜವಾಹರಲಾಲ್ ನೆಹರು ಅವರು ಸಂವಿಧಾನದ ರಚನೆ ಕಾರ್ಯ ಎರಡು ವರ್ಷಗಳ ದಾಖಲೆ ಅವಧಿಯಲ್ಲಿ ಸಂಪೂರ್ಣಗೊಳ್ಳಬೇಕೆಂದು ಕಾತರರಾಗಿದ್ದರು. ಅಂತಿಮವಾಗಿ 1949ರ ನವೆಂಬರ್ 26 ರಂದು ದೇಶದ ಸಂವಿಧಾನವನ್ನು ಅಂಗೀಕರಿಸಲಾಯಿತು. ಆದರೆ ಹಿಂದಿ ಮಾತನಾಡುವ ಪ್ರದೇಶದ ಭಾಷಾಂತಕಾರರ ಮಧ್ಯೆ ಅಭಿಪ್ರಾಯ ಭೇದಗಳು ತಲೆಎತ್ತಿದಾಗ ಮತ್ತೆ ಅವಧಿ ಮೂರು ತಿಂಗಳೂಗಳ ಕಾಲ ಮುಂದೂಡಿತು. ದಿವಂಗತ ಪಂಡಿತ್ ಜವಾಹರಲಾಲ್ ನೆಹರು ಅವರಿಗೆ ಇದರಿಂದ ನಿರಾಸೆಯಾಯಿತಾದರೂ ತಮಗೆ ತಾವೇ ಸಮಾಧಾನ ಮಾಡಿಕೊಂಡು 1950ರ ಜನವರಿ 26 ರಂದು ಅದನ್ನು ಘೋಷಿಸುವುದೆಂದೂ ಆ ದಿನವನ್ನು ಗಣರಾಜ್ಯೋತ್ಸವದ ದಿನವೆಂದು ಕರೆಯುವುದು ಉಚಿತವೆಂದೂ ಅಭಿಪ್ರಾಯಪಟ್ಟರು. ಅದೇ ದಿನ ಕಾಂಗ್ರೆಸ್ ಸಂಪೂರ್ಣ ಸ್ವಾತಂತ್ರ್ಯದ ಗೊತ್ತುವಳಿಯನ್ನು ಅಂಗೀಕರಿಸಿತು.

ಸಮಾನ ನಾಗರಿಕ ಸಂಹಿತೆ ಜೊತೆಗೆ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ, ಸಮಾನ ನ್ಯಾಯ, ಉಚಿತ ಕಾನೂನು ನೆರವು ಒದಗಿಸುವಂತಹ ಅತ್ಯಂತ ಗಂಭೀರ ಮತ್ತು ಇತರೇ ಪ್ರಮುಖ ವಿಷಯಗಳನ್ನು ಕೂಡ ಸರ್ಕಾರದ ನೀತಿ ನಿರ್ದೇಶಕ ಸೂತ್ರಗಳ ವ್ಯಾಪ್ತಿಗೆ ಸೇರಿಸಲಾಯಿತು. ಇನ್ನು 6-8 ತಿಂಗಳುಗಳ ಕಾಲ ಕಾದಿದ್ದರೆ ಪರಿಸ್ಥಿತಿ ತೀರಾ ವಿಭಿನ್ನವಾಗಿರುತ್ತಿತ್ತು. ಏಕೆಂದರೆ ಸ್ವಾತಂತ್ರ್ಯ ದೊರೆತ 44 ವರ್ಷಗಳ ಬಳಿಕವೂ ಸರ್ಕಾರದ ನೀತಿ ನಿರ್ದೇಶಕ ಸೂತ್ರಗಳು ಇನ್ನು ಕಾರ್ಯರೂಪಕ್ಕೆ ಬಂದಿಲ್ಲ.

ಆ ದಿನಗಳಲ್ಲಿ ರಾಜಕುಮಾರಿ ಅಮೃತ ಕೌರ್, ಹಂಸ್ ಮೆಹ್ತಾ ಮತ್ತು ರಾಜ್ಯಾಂಗ ಸಭೆಯ ಸದಸ್ಯರಾಗಿದ್ದ ಎಲ್ಲಾ ಮಹಿಳೆಯರು ಅನೇಕ ಪ್ರಮುಖ ವಿಷಯಗಳು ಮೂಲಭೂತ ಹಕ್ಕುಗಳ ವ್ಯಾಪ್ತಿಯಿಂದ ಹೊರಗೆ ಉಳಿದುಕೊಂಡಿವೆ ಎಂದು ತೀರಾ ನಿರಾಶರಾಗಿದ್ದರು. ಶಾಸನ ಸಭೆಯಲ್ಲಿ ಮೂರನೇ ಬಾರಿ ಮಸೂದೆಯನ್ನು ಮಂಡಿಸಿದಾಗ ಶ್ರೀ.ಟಿ.ಟಿ.ಕೃಷ್ಣಾಮಾಚಾರಿಯವರು ಸರ್ಕಾರದ ನೀತಿ ನಿರ್ದೇಶಕ ತತ್ವಗಳು " ನಿಷ್ಪ್ರಯೋಜಕವಾಗಿವೆ" ಎಂದು ಪ್ರತಿಕ್ರಿಯಿಸಿದ್ದರು. ಅದು ಎಷ್ಟು ನಿಜ ಎಂಬುದು ನಮಗೀಗ ಅರ್ಥವಾಗುತ್ತಿದೆ. 1947ರ ಆಗಸ್ಟ್ 15 ರಂದು ಅವರು ಸ್ವತಂತ್ರ ಭಾರತದ ಪ್ರಥಮ ಕೇಂದ್ರ ಸಚಿವ ಸಂಪುಟ ಸದಸ್ಯೆಯಾದರು. ಅವರಿಗೆ ಆರೋಗ್ಯ ಖಾತೆ ವಹಿಸಿಕೊಡಲಾಗಿತ್ತು. ಅವರ ವಿನಂತಿಯ ಮೇರೆಗೆ ಸುಪ್ರಸಿದ್ಧ ವೈದ್ಯರಾಗಿದ್ದ ಡಾ।। ಜೀವರಾಜ ಮೆಹ್ತಾ ಅವರು ಆರೋಗ್ಯ ಸಚಿವ ಖಾತೆಯ ಕಾರ್ಯದರ್ಶಿಯ ಹುದ್ದೆಯನ್ನು ವಹಿಸಿಕೊಂಡರು. ಅವರು ಹಂಸ ಮೆಹ್ತಾ ಅವರ ಪತಿ, ರಾಜಕುಮಾರಿ ಅವರನ್ನು ಚೆನ್ನಾಗಿ ಬಲ್ಲವರಾಗಿದ್ದರು. ಮತ್ತು ಅವರಲ್ಲಿ ಭಾರೀ ವಿಶ್ವಾಸ, ನಂಬಿಕೆಗಳನ್ನು ಇಟ್ಟುಕೊಂಡವರಾಗಿದ್ದರು. ಡಾ.ಮೆಹ್ತಾ ಅವರ ನೆರವಿನೊಂದಿಗೆ ತಾವು ಕೈಗೊಂಡ ಎಲ್ಲಾ ಕಾರ್ಯಭಾರಗಳನ್ನು ಅತ್ಯಂತ ಮುತುವರ್ಜಿಯಿಂದ ನಿರ್ವಹಿಸಿದರು. ಅಂದಿನ ದಿನಗಳಲ್ಲಿ ಆರೋಗ್ಯ ಖಾತೆಯು ಅಷ್ಟೊಂದು ವಿಸ್ತೃತ ಚಟುವಟಿಕೆಗಳನ್ನು ಹೊಂದಿರಲಿಲ್ಲ ಎಂಬುದನ್ನು ಇಲ್ಲಿ ಹೇಳಲೇಬೇಕಾಗಿದೆ. ಡಾ।। ಮೆಹ್ತಾ ಮತ್ತು ಇತರ ಸಹೋದ್ಯೋಗಿಗಳ ಸಹಾಯದೊಂದಿಗೆ ರಾಜಕುಮಾರಿ ಕೌರ್ ಅವರು ಆರೋಗ್ಯ ಸಚಿವ ಶಾಖೆಯ ಕಾರ್ಯವನ್ನು ವಿಸ್ತರಿಸುವ ಅಗಾಧ ಕಾರ್ಯಭಾರವನ್ನು ಸುಸೂತ್ರವಾಗಿ ನಿರ್ವಹಿಸಿದರು. ಅದೇ ರೀತಿ ರಾಜ್ಯ ಸರ್ಕಾರದ ಆರೋಗ್ಯ ಇಲಾಖೆಯ ವಿಸ್ತರಣೆಗೂ ಸಹಾಯ ಮಾಡಿದರು. ಅತ್ಯಂತ ಕಟ್ಟುನಿಟ್ಟಿನ ನಿಯಮಗಳು ಮತ್ತು ಪರಿಸ್ಥಿತಿಗಳಲ್ಲಿ ಅಂತಹ ಕಾರ್ಯ ನಿರ್ವಹಿಸುವುದು ಅತ್ಯಂತ ಕಠಿಣ ಮತ್ತು ಸಂಕೀರ್ಣವಾಗಿತ್ತು. ಈ ದಿಸೆಯ ಅಡೆತಡೆಗಳ ವಿರುದ್ಧ ಕಾರ್ಯ ನಿರ್ವಹಿಸುವುದು ಸುಲುಭದ ಮಾತೇನಾಗಿರಲಿಲ್ಲ. ರಾಜಕುಮಾರಿಯವರು ಈ ನಿಟ್ಟಿನಲ್ಲಿ ದೃಢ ಮನಸ್ಸಿನಿಂದ ಪ್ರಯತ್ನಗಳನ್ನು ಮುಂದುವರಿಸಿದರು. ಆದರೆ ತಮ್ಮ ಅಧೀನ ಸಿಬ್ಬಂದಿಯನ್ನು ಚುರುಕುಗೊಳಿಸುವ ಕಾರ್ಯತಂತ್ರ ಅತ್ಯಂತ ಕಠಿಣವಾಗಿತ್ತು. ಆದರೆ ಗಾಂಧೀಜಿಯವರ ಕಾರ್ಯದರ್ಶಿ ಇಷ್ಟಕ್ಕೆ ತೃಪ್ತಿ ಪಟ್ಟುಕೊಳ್ಳುವವರಲ್ಲ. ಹೇಗೋ ಪ್ರಯತ್ನಪಟ್ಟು ಅವರ ದೃಷ್ಟಿಕೋನದಲ್ಲೇ ಬದಲಾವಣೆ ತಂದರು. ಅದಕ್ಕಾಗಿ ಅವರು ಭಾರೀ ಬೆಲೆಯನ್ನು ತೆರಬೇಕಾಗಿ ಬಂದಿತು. ತಮ್ಮ ಖಾತೆಯಲ್ಲಿ ಹೆಚ್ಚೇನು ಪರಿಶ್ರಮ ಪಡದೆ ಹಾಯಾಗಿದ್ದ ಕೆಲವರೊಂದಿಗಿನ ಸ್ನೇಹವನ್ನು ಅವರು ಕಳೆದುಕೊಳ್ಳಬೇಕಾಯಿತು. ತಮ್ಮ ಸಚಿವ ಖಾತೆಯಲ್ಲಿ ಕೆಲಸ ಭಾರಿ ಒತ್ತಡ ಇದ್ದಾಗ್ಯೂ ಅವರು ನಮ್ಮ ಜೊತೆಗೆ ಬಾಂಧವ್ಯ ಇಟ್ಟುಕೊಂಡಿದ್ದರು ಮತ್ತು ನಮ್ಮನ್ನು ಆಗಾಗ ಅವರ ಬಳಿಗೆ ಕರೆಯುತ್ತಿದ್ದರು. ನನ್ನೊಂದಿಗೆ ತಿಂಡಿ ತಿನ್ನುತ್ತಿದ್ದರು. ಊಟ ಮಾಡುತ್ತಿದ್ದರು. ಅವರ ಸಹೋದರ ಮಹಾರಾಜ ಸಿಂಗ್ ಮತ್ತಿತರರೂ ನಮ್ಮೊಂದಿಗೆ ಇರುತ್ತಿದ್ದ ಕೌರ್ ತಮ್ಮ ಆರೋಗ್ಯವನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲ ಎಂದು ದೂರುತ್ತಿದ್ದರು. ಆಕೆಗೆ ಸುಂದರವಾದ, ಸುಸಜ್ಜಿತವಾದ ಮನೆ ಇತ್ತು. ಆದರೆ ಅಲ್ಲೆಂದು ದುಂದುಗಾರಿಕೆಗೆ ಬಯಲಾಡಂಬರಕ್ಕೆ ಆಸ್ಪದವೇ ಇರಲಿಲ್ಲ. ಅಖಿಲ ಭಾರತ ಮಹಿಳಾ ಸಮ್ಮೇಳನದಲ್ಲಿ ಬೆಳೆದ ಸ್ನೇಹ ಸಂಬಂಧದಿಂದಾಗಿ ನನ್ನ ಮತ್ತು ಇತರರ ಬಗ್ಗೆ ಅವರು ವಿಶೇಷ ಕಾಳಜಿ ವಹಿಸುತ್ತಿದ್ದರು. ದಿವಂಗತ ಪಂಡಿತ ಜವಾಹರಲಾಲ್ ನೆಹರು ಅವರು ಅನೇಕ ವಿಷಯಗಳಲ್ಲಿ ರಾಜಕುಮಾರಿ ಅವರ ಸಹಾಯವನ್ನು ಅಪೇಕ್ಷಿಸುತ್ತಿದ್ದರು.

ರಾಜಕುಮಾರಿ ಅವರು ಅಷ್ಟೇ ಅಚಲವಾದ ಬೆಂಬಲವನ್ನು ನೀಡುತ್ತಿದ್ದರು. ಪಂಡಿತ್‌ಜಿ ಅವರ ಆಗ್ರಹಪೂರ್ವಕ ಕೋರಿಕೆಯ ಮೇರೆಗೆ ರಾಜಕುಮಾರಿ ಕೌರ್ ಅವರನ್ನು ಭಾರತದ ಪ್ರತಿನಿಧಿಯಾಗಿ ಯುನೆಸ್ಕೋಗೆ (ವಿಶ್ವ ಸಂಸ್ಥೆಯ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂಸ್ಥೆ) ಕಳುಹಿಸಿಕೊಡಲಾಯಿತು. ಅಂದಿನ ದಿನಗಳಲ್ಲಿ ಸಚಿವರಾಗಲಿ ಅಥವಾ ಪ್ರಧಾನ ಮಂತ್ರಿಯವರೇ ಆಗಲಿ ಅಂತಾರಾಷ್ಟ್ರೀಯ ನಿಯೋಗಗಳ ನೇತೃತ್ವ ವಹಿಸಿ ವಿದೇಶಗಳಿಗೆ ತೆರಳುವುದು ಅಪರೂಪದ ಸಂಗತಿಯಾಗಿತ್ತು. ಯುನೆಸ್ಕೋಗೆ ಪ್ರತಿನಿಧಿಯಾಗಿ ತೆರಳಲು ಅಮೃತ ಕೌರ್ ಅತ್ಯಂತ ಸೂಕ್ತ ವ್ಯಕ್ತಿ ಎಂದು ಪಂಡಿತ್‌ಜಿ ಭಾವಿಸಿದ್ದರು. ಅದು ನೂರಕ್ಕೆ ನೂರು ನಿಜವಾಯಿತು. ಇದರಿಂದಾಗಿ ಅವರು ಭಾರೀ ಜನಪ್ರಿಯರಾದರು. ಅಷ್ಟು ಮಾತ್ರವಲ್ಲ ಯುನೆಸ್ಕೋ ಸಮ್ಮೇಳನದಲ್ಲಿ ಅವರು ಮಾಡಿದ ಭಾಷಣಗಳು ಒಟ್ಟಿನಲ್ಲಿ ಭಾರತದ ಪ್ರತಿಷ್ಠೆಯನ್ನು ಮತ್ತು ಭಾರತೀಯ ಮಹಿಳಾ ಸಮುದಾಯದ ಘನತೆಯನ್ನು ಹೆಚ್ಚಿಸಿದವು. ವಿದೇಶಗಳಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನ ಕುರಿತು ಮಾತನಾಡುವ ಅವಕಾಶ ದೊರೆತಾಗಲೆಲ್ಲಾ ಅವರು ಅದನ್ನು ತಪ್ಪದೇ ಸಮರ್ಥವಾಗಿ ಬಳಸಿಕೊಂಡರು. ಅವರಷ್ಟೇ ಬಿಡುವಿಲ್ಲದ ಕೆಲಸದಲ್ಲಿ ತೊಡಗಿರಲಿ ಅಖಿಲ ಭಾರತ ಮಹಿಳಾ ಸಮ್ಮೇಳನದೊಂದಿಗೆ ಅತ್ಯಂತ ನಿಕಟ ಸಂಬಂಧವನ್ನು ಕಾಯ್ದುಕೊಂಡಿದ್ದರು. "ರಾಜಕುಮಾರಿ ಕೌರ್ ಅವರೇ ಅಖಿಲ ಭಾರತ ಮಹಿಳಾ ಸಮ್ಮೇಳನ ಅಥವಾ ಅಖಿಲ ಭಾರತ ಮಹಿಳಾ ಸಮ್ಮೇಳನ ಎಂದರೆ ರಾಜಕುಮಾರಿ ಅಮೃತ ಕೌರ್" ಎನ್ನುವಷ್ಟರ ಮಟ್ಟಿಗೆ ಅವರ ಪ್ರತೀತಿ ಬೆಳೆಯಿತು. ಅಮೆರಿಕ ಒಂದನ್ನು ಹೊರತುಪಡಿಸಿ ಅನೇಕ ರಾಷ್ಟ್ರಗಳಲ್ಲಿ ಅನೇಕ ಗಣ್ಯರು ಈ ಮಾತನ್ನು ಅನುಮೋದಿಸಿದ್ದರು. ಈ ಮಾತನ್ನು ನಾನು ಬೇರೆ ಕಡೆಯಲ್ಲೂ ಹೇಳಿದ್ದೇನೆ. ಈಗಲೂ ಹೇಳುತ್ತಿದ್ದೇನೆ. ಕೌರ್ ಅವರು ಎಐಡಬ್ಲ್ಯುಸಿಯ ಪದಾಧಿಕಾರಿಯಾಗಿದ್ದ ಅವಧಿಯಲ್ಲೇ ಈ ಸಂಸ್ಥೆಗೆ ವಿಶ್ವ ಸಂಸ್ಥೆಯ ಸಹಯೋಗ ಹೊಂದಿರುವ ಅಂತಾರಾಷ್ಟ್ರೀಯ ಸಂಸ್ಥೆ ಎಂಬ ಮಾನ್ಯತೆ ದೊರಕಿಸಿಕೊಟ್ಟರು.

ಸಂಸತ್ತಿಗೆ ರಾಜಕುಮಾರಿ ಕೌರ್ ಅವರ ಕೊಡುಗೆ ಏನು? ಎಂದು ಯಾರಾದರೂ ಪ್ರಶ್ನಿಸಬಹುದು. ರಾಜ್ಯಾಂಗ ಸಭೆಗೆ ಅವರು ನೀಡಿದ ಕೊಡುಗೆ ಕುರಿತು ಮತ್ತು ಕೇಂದ್ರ ಸಂಪುಟದ ಕ್ಯಾಬಿನೆಟ್ ದರ್ಜೆ ಸಚಿವರಾಗಿ ಅವರು ನಿರ್ವಹಿಸಿದ ಕೆಲಸ ಕಾರ್ಯಗಳ ಬಗ್ಗೆ ನಾನು ಈಗಾಗಲೇ ಹೇಳಿದ್ದೇನೆ. ಅದಲ್ಲದೆ ಇನ್ನೂ ಹಲವಾರು ಕ್ಷೇತ್ರಗಳಲ್ಲಿ ಅವರು ಬಹಳಷ್ಟು ಕೆಲಸ ಮಾಡಿದ್ದರು. ಸಂಸ್ತಿತನಲ್ಲಿ ಅವರು ಮಾಡಿದ ಭಾಷಣಗಳಂತೂ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದ್ದವು. ಅನೇಕ ಸಂದರ್ಭಗಳಲ್ಲಿ ಇದು ಪ್ರತಿಪಕ್ಷಗಳವರ ಅಸೂಯೆಗೂ ದಾರಿ ಮಾಡಿಕೊಟ್ಟಿತ್ತು. ಪ್ರತಿಪಕ್ಷದ ಧುರೀಣರಲ್ಲಿ ಅನೇಕರು ತಮ್ಮ ಪಕ್ಷದ ಮಹಿಳಾ ಸದಸ್ಯರ ಭಾಷಣಕ್ಕಿಂತ ಆಕೆಯ ಭಾಷಣ ಕೇಳಲು ಕಾತರರಾಗಿತ್ತಿದ್ದರು.

ನಾನು ಅನೇಕ ಸಂದರ್ಭಗಳಲ್ಲಿ ರಾಜಕುಮಾರಿ ಕೌರ್ ಅವರ ಕುರಿತು ಬರೆದಿದ್ದೇನೆ. ರಾಜಕುಮಾರಿ ಅಮೃತ ಕೌರ್ ಅವರು ಎಂತಹ ಮೌಲ್ಯಗಳಲ್ಲಿ ನಂಬಿಕೆ ಇರಿಸಿದ್ದರು ಎಂಬುದನ್ನು ಮುಂದಿನ ಪೀಳಿಗೆಗೆ ಮನವರಿಕೆ ಮಾಡಿಕೊಡುವುದು ಅವರ ವ್ಯಕ್ತಿತ್ವವನ್ನು ಅರ್ಥಮಾಡಿಕೊಂಡಿರುವ ನಮ್ಮ ಕರ್ತವ್ಯ. ತಾನು ಮಾಡುತ್ತಿರುವುದು ತ್ಯಾಗ ಎಂಬ ಭಾವನೆ ಇಲ್ಲದೆಯೇ ತಮ್ಮ ಜೀವನ ಶೈಲಿಯಲ್ಲಿ ತಂದುಕೊಂಡ ಗಮನಾರ್ಹ ಬದಲಾವಣೆಗಳು ಹಾಗೂ ಮಹಾತ್ಮಾ ಗಾಂಧೀಜಿಯವರೊಂದಿಗೆ ನಿಕಟವಾಗಿ ಕಾರ್ಯನಿರ್ವಹಿಸಿದ್ದು ಅವರಿಗೆ ಆಂತರಿಕ ತೃಪ್ತಿ ನೀಡುತ್ತಿತ್ತು.

"ಮಣ್ಣಿನ ಮುದ್ದೆಗಳನ್ನು ಕೂಡಾ ನಾಯಕರನ್ನಾಗಿ ಸೃಷ್ಟಿಸಬಲ್ಲರು" ಎಂಬುದು ಗಾಂಧೀಜಿಯವರ ಬಗ್ಗೆ ಇರುವ ಪ್ರತೀತಿ. ಕೌರ್ ಅವರು ಇದಕ್ಕೊಂದು ಅಪವಾದವಾಗಿದ್ದರು. ಆದರೂ ಅವರನ್ನು ಸೃಷ್ಟಿಸಿದ ಕೀರ್ತಿಯೂ ಗಾಂಧೀಜಿ ಅವರದ್ದೇ.

ಅಮೃತ ಕೌರ್ ಅವರು ಶ್ರೀಮಂತ ರಾಜವಂಶಕ್ಕೆ ಸೇರಿದವರು. ವೈಭವೋಪೇತ ಜೀವನವನ್ನು ಅನುಭವಿಸಿದವರು. ಮೇಲಾಗಿ ಅರಸೊತ್ತಿಗೆಯ ವಾರಸುದಾರಿಕೆ ಹೊಂದಿದ ರಾಜಕುಮಾರಿ. ಇಷ್ಟಾದರೂ ಕಣ್ಣಿನ ಎವೆ ಮುಚ್ಚುವುದರೊಳಗಾಗಿ ತನ್ನದೆಂಬುದೆಲ್ಲವನ್ನು ತ್ಯಜಿಸಿ ಅವರು ಮಹಾತ್ಮಾ ಗಾಂಧೀಜಿಯವರ ಓರ್ವ ನೈಜ ಮತ್ತು ನಿಷ್ಠಾವಂತ ಅನುಯಾಯಿಯಾಗಿ ಬಿಟ್ಟರು. ಸಮಾಜ ಸೇವಾ ಕಾರ್ಯದಲ್ಲಿ ಅವರು ಅತ್ಯಂತ ಕರುಣಾಮಯಿಯಾಗಿ ಸಹಾನುಭೂತಿಯುಳ್ಳವರಾಗಿ ತಮ್ಮ ಇತಿಮಿತಿಗಳನ್ನು ಮೀರಿ ತೊಡಗಿಸಿಕೊಂಡರು. ಕೌರ್ ಅವರು ಯಾರೂ ಊಹಿಸಲು ಕೂಡಾ ಸಾಧ್ಯವಿಲ್ಲದಷ್ಟು ನೇರ ನಡೆ ನುಡಿಯುಳ್ಳವರು. ಅದೇ ರೀತಿ ಮುಖಸ್ತುತಿಗೆ ಎಂದೂ ಮರುಳಾಗದವರು. ನಿಸರ್ಗ ಪ್ರೇಮಿ ಹೊಗಳೆಂದರೆ ಬಹಳ ಇಷ್ಟ. ನಾನು ವಾರ್ಧಾಗೆ ಹೋದಾಗಲೆಲ್ಲಾ ಕೌರ್ ಅವರ ಮನೆಯಲ್ಲೇ ಉಳಿದುಕೊಳ್ಳುತ್ತಿದ್ದೆ. ಒಂದು ಸಂದರ್ಭದಲ್ಲಿ ನಾನು ಶಾಂತಿನಿಕೇತನದಿಂದ ವಾರ್ಧಾಕ್ಕೆ ಬಂದಿದ್ದಾಗ ಗಾಂಧೀಜಿಯವರು" "ನೀವಿಗ ಗುರುದೇವ ಅವರ ಶಾಂತಿನಿಕೇತನದಿಂದ ಕರ್ಮ ಸಮಿತಿಯ ಸಭೆಯಿಂದ ನೇರವಾಗಿ ಇಲ್ಲಿಗೆ ಬಂದಿದ್ದೀರಿ. ಈಗ ಹೇಳಿ ಅಲ್ಲಿ ಧಾರಾಳವಾಗಿದ್ದು ಇಲ್ಲಿ ಇಲ್ಲದಿರುವುದು ಏನು ?"ಎಂದು ಕೇಳಿದರು. "ರಾಜಕುಮಾರಿ ಅವರ ಕೊಠಡಿಯಲ್ಲಿ ಹೂವಿನ ಕುಂಡಗಳಿವೆ ಹೊರಗೆ ಒಂದು ಮರವಿದೆ ಇದೇ ವಾತಾವರಣ ಇಡೀ ಆಶ್ರಮವನ್ನು ವ್ಯಾಪಿಸಿದರೆ ಪ್ರಕೃತಿ ನಮ್ಮನ್ನು ಸುತ್ತುವರಿದಿದ್ದಾಳೆ ಎಂಬ ಭಾವನೆ ನಮ್ಮನ್ನು ಉಲ್ಲಸಿತರನ್ನಾಗಿ ಮಾಡುತ್ತದೆ" ಎಂದು ಸಂಕೋಚದಿಂದ ಉತ್ತರಿಸಿದೆ. ಅದೇ ದಿನ ಸಂಜೆ ಊಟದ ವೇಳೆಗೆ ಅಲ್ಲಿಗೆ ಬಂದ ಗಾಂಧೀಜಿಯವರು "ವಾರ್ಧಾ ಆಶ್ರಮದಲ್ಲೂ ಹೂ ಗಿಡಗಳನ್ನು ನೆಟ್ಟರೆ ಅದು ಗುರುದೇವರ ಶಾಂತಿನಿಕೇತನದ ಮಾದರಿಯಲ್ಲಿ ಕಾಣುತ್ತದೆ ಎಂದು ನಮ್ಮ ರೇಣುಕಾ ಹೇಳುತ್ತಾಳೆ" ಎಂದರು. ಇದನ್ನೂ ಕೇಳಿ ನನಗೆ ಆಶ್ಚರ್ಯವೂ ಆಯಿತು, ಮುಜುಗರವೂ ಆಯಿತು. ಆಗ ಗಾಂಧೀಜಿಯವರು ನನ್ನ ಬಳಿಗೆ ಬಂದು ನನ್ನ ಭುಜಗಳನ್ನು ತಟ್ಟಿ"ನೀನೇನೂ ಮುಜುಗರ ಪಟ್ಟುಕೊಳ್ಳಬೇಡ"ಎಂದು ಸಂತೈಸಿದರು.

ರಾಜಕುಮಾರಿ ಕೌರ್ ಅವರಿಗೆ ನಿಸರ್ಗದ ಬಗ್ಗೆ ಇದ್ದ ಪ್ರೇಮ ನಮ್ಮಲ್ಲಿ ಕೆಲವರಿಗಾದರೂ ಆದರ್ಶವಾಗಬೇಕು ಎಂದು ನಾನು ಭಾವಿಸುತ್ತೇನೆ. ಈ ನಿಟ್ಟಿನಲ್ಲಿ ರಾಜಕುಮಾರಿ ಕೌರ್ ಅವರು ನಿಶ್ಚಿತವಾಗಿಯೂ ಒಂದು ಮೇಲ್ಪಂಕ್ತಿ ಹಾಕಿಕೊಟ್ಟಿದ್ದಾರೆ. ನಿಸರ್ಗ ಮತ್ತು ಪರಿಸರ ಸಂರಕ್ಷಣೆ ಕ್ಷೇತ್ರದಲ್ಲಿನ ಸಮಸ್ಯೆಗಳನ್ನು ಹೇಗೆ ಬಗೆಹರಿಸಿಕೊಳ್ಳಬೇಕು ಎಂಬುದಕ್ಕೆ ಕೌರ್ ಅವರಂತಹ ಕರ್ತೃತ್ವಶಾಲಿ ವ್ಯಕ್ತಿಗಳು ನಮಗೆ ಶ್ರೇಷ್ಠ ನಿದರ್ಶನವಾಗಿ ನಿಲ್ಲುತ್ತಾರೆ. ಈ ನಿಟ್ಟಿನಲ್ಲಿ ಅವರು ಮುಂದಿನ ಪೀಳಿಗೆಯವರಿಗೆ ಆದರ್ಶ ಪ್ರಾಯರಾಗಿದ್ದಾರೆ.

## ಅಧ್ಯಾಯ-9

# ರಾಜಕುಮಾರಿ ಅಮೃತ್ ಕೌರ್

*ಮೇಜರ್ ಜನರಲ್ ರಾಜೇಂದರ್ ಸಿಂಗ್ ಸಪ್ರು

ಮಹಾತ್ಮಾ ಗಾಂಧೀಜಿಯವರು ಅಪಾರ ಶ್ರಮ ವಹಿಸಿ ನಿರ್ಮಿಸಿ ಕೊಟ್ಟ ಶಾಂತಿಯ ಮಾರ್ಗವನ್ನು ಅತ್ಯಂತ ಶ್ರದ್ಧೆಯಿಂದ ಅನುಸರಿಸಿದ ಅವರ ಅನುಯಾಯಿಗಳಲ್ಲಿ ರಾಜಕುಮಾರಿ ಕೌರ್ ಒಂದು ಉಜ್ವಲ ನಿದರ್ಶನವಾಗಿದ್ದರು. ಅಹಿಂಸೆಯ ತತ್ವವನ್ನು ಪ್ರಚುರಪಡಿಸುವ ಮಾನವ ಸಮುದಾಯದಲ್ಲಿ ಸಮಾನತೆಯನ್ನು ಸಾಧಿಸುವ ಮತ್ತು ದೀನದಲಿತರನ್ನು ಉದ್ಧರಿಸುವ ನಿಟ್ಟಿನ ಕಳಕಳಿ ಮತ್ತು ಸ್ಫೂರ್ತಿ ಅವರಿಗೆ ಗಾಂಧೀಜಿಯವರಿಂದಲೇ ಬಳುವಳಿಯಾಗಿ ಬಂದದ್ದು. ಬ್ರಿಟಿಷರ ಕಪಿಮುಷ್ಟಿಯಿಂದ ಭಾರತ ಮಾತೆಯನ್ನು ವಿಮುಕ್ತಗೊಳಿಸಲು ಸರ್ವ ಸಮರ್ಪಣಾ ಭಾವದಿಂದ ದುಡಿಯಬೇಕೆಂಬ ಅತೀವವಾದ ಒತ್ತಾಸೆ ಅವರಲ್ಲಿದ್ದಿತು.

ರಾಜಕುಮಾರಿ ಕೌರ್ ಪಂಜಾಬ್ ರಾಜ್ಯದ ಕಪೂರ್ತಲಾದ ಅಹ್ಲುವಾಲಿಯಾದ ರಾಜ ಕುಟುಂಬಕ್ಕೆ ಸೇರಿದವರು. ರಾಜಾ ಹರ್ನಾಮ್ ಸಿಂಗ್ ಅವರ ಏಕ ಮಾತ್ರ ಪುತ್ರಿಯಾಗಿ 1889ರ ಫೆಬ್ರವರಿ 2 ರಂದು ಜನಿಸಿದರು. ತಂದೆಯಿಂದಾಗಿ ಅವರು ಕ್ರೈಸ್ತಧರ್ಮವನ್ನು ಅನುಸರಿಸಿದರು. ಅವರ ಪ್ರಾಥಮಿಕ ವಿದ್ಯಾಭ್ಯಾಸ ಇಂಗ್ಲೆಂಡಿನ ಡೋರ್‌ಸ್‌ಶೈರ್‌ನ ಶೆರ್‌ಬೋರ್ನ್ ಬಾಲಕಿಯರ ಶಾಲೆಯಲ್ಲಿ ನಡೆಯಿತು. ನಂತರ ಲಂಡನ್ನಿನಲ್ಲಿ ಕಾಲೇಜು ವ್ಯಾಸಂಗ ನಡೆಸಿದರು. ಅವರು ತಮ್ಮ ಸಮಯದ ಬಹು ಭಾಗವನ್ನು ಕ್ರೀಡೆಗಳಿಗೆ ಮೀಸಲಿಟ್ಟಿದ್ದರು. ಅತ್ಯುತ್ತಮ ಟೆನಿಸ್ ಆಟಗಾರ್ತಿಯಾಗಿದ್ದ ಅವರು ಅನೇಕ ಚಾಂಪಿಯನ್ ಶಿಪ್‌ಗಳನ್ನು ಗೆದ್ದುಕೊಂಡಿದ್ದರು. ಜೀವನದ ಉದ್ದಕ್ಕೂ ಆಕೆ ಅವಿವಾಹಿತರಾಗಿಯೇ ಉಳಿದರು.

ರಾಜಕುಮಾರಿ ಅಮೃತ್ ಕೌರ್ ಅವರು ರಾಷ್ಟ್ರಾಭಿಮಾನವನ್ನು ತಂದೆಯಿಂದಲೇ ಬಳುವಳಿಯಾಗಿ ಪಡೆದುಕೊಂಡಿದ್ದರು. ಗೋಪಾಲ ಕೃಷ್ಣ ಗೋಖಲೆಯವರು ರಾಜ ಹರ್ನಾಮ್ ಸಿಂಗ್ ಅವರ ಆತ್ಮೀಯ ಸ್ನೇಹಿತರಾಗಿದ್ದರು."ವಿದೇಶಿ ಅಧಿಪತ್ಯದಿಂದ ಭಾರತವನ್ನು ಸ್ವತಂತ್ರಗೊಳಿಸಬೇಕೆಂಬ ನನ್ನ ಆದಮ್ಯ ಅಭಿಲಾಷೆಗೆ ತಂದೆಯೇ ನನ್ನ ಪ್ರೇರಕ ಶಕ್ತಿಯಾಗಿದ್ದರು" ಎಂದು ಅಮೃತ್ ಕೌರ್ ಹೇಳಿಕೊಂಡಿದ್ದಾರೆ. ಆ ನಂತರ ಮಹಾತ್ಮಾ ಗಾಂಧೀಜಿಯವರ ಸ್ಫೂರ್ತಿ ಮತ್ತು ಪ್ರಭಾವಗಳಿಗೆ ಒಳಗಾಗಿ ಅವರ ನಿಕಟ ಅನುಯಾಯಿ ಹಾಗೂ ಜೀವನ ಪೂರ್ತಿ ಅವರ ಶಿಷ್ಯೆಯಾಗಿಯೇ ಉಳಿದರು.

ಸಾರ್ವಜನಿಕ ಜೀವನದಲ್ಲಿ ರಾಜಕುಮಾರಿ ಅಮೃತ್ ಕೌರ್ ಅವರು ತಮ್ಮನ್ನು ಸಮಾಜ ಕಲ್ಯಾಣ ಚಟುವಟಿಕೆಗಳಲ್ಲಿ ಅದರಲ್ಲೂ ವಿಶೇಷವಾಗಿ ಮಹಿಳೆಯರ ಉನ್ನತಿ ಸಾಧನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. 1930ರಲ್ಲಿ ಅವರು ಅಖಿಲ ಭಾರತ ಮಹಿಳಾ ಸಮ್ಮೇಳನದ (ಎಐಡಬ್ಲ್ಯುಸಿ) ಕಾರ್ಯದರ್ಶಿಯಾಗಿ, 1931-33ರವರೆಗೆ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು.

---

*ಮೇಜರ್ ಜನರಲ್ ರಾಜೇಂದರ್ ಸಿಂಗ್ ಸಪ್ರು ಅವರು ಮಾಜಿ ಲೋಕಸಭಾ ಸದಸ್ಯರು.

1932ರಲ್ಲಿ ಅವರು ಭಾರತೀಯರ ಮತದಾನ ಹಕ್ಕುಗಳ ಮೇಲಣ ಲೋಥಿಯಾನ ಸಮಿತಿಯ ಮುಂದೆ ಸಾಕ್ಷ್ಯ ನೀಡಿದರು. ಮುಂದೆ ಮಹಿಳಾ ಸಂಘಟನೆಯ ನಿಯೋಗದ ಸದಸ್ಯರಾಗಿ ಭಾರತೀಯ ಸಂವಿಧಾನ ಸುಧಾರಣೆಗೆ ಸಂಬಂಧಿಸಿದಂತೆ ಸಂಸತ್ತಿನ ಜಂಟಿ ಆಯ್ಕೆ ಸಮಿತಿಯ ಮುಂದೆ ಸಾಕ್ಷ್ಯ ನೀಡಿದರು. ಹದಿನಾರು ವರ್ಷಗಳ ದೀರ್ಘ ಕಾಲ ಅವರು ಮಹಾತ್ಮಾ ಗಾಂಧೀಜಿಯವರ ಕಾರ್ಯದರ್ಶಿಯಾಗಿದ್ದರು. ಶೈಕ್ಷಣಿಕ ಸಲಹಾ ಮಂಡಳಿಯ ಪ್ರಥಮ ಮಹಿಳಾ ಸದಸ್ಯರಾಗಿ ನೇಮಕಗೊಂಡಿದ್ದ ಅವರು 1942ರ ಆಗಸ್ಟ್‌ನಲ್ಲಿ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಅವರು ಹಿಂದೂಸ್ತಾನಿ ತಾಲ್ಮಿ ಸಂಘದ ಸದಸ್ಯರಾಗಿಯೂ ಕಾರ್ಯ ನಿರ್ವಹಿಸಿದ್ದರು. 1945 ಮತ್ತು 1946ರಲ್ಲಿ ಭಾರತೀಯ ನಿಯೋಗದ ಸದಸ್ಯರಾಗಿ ಲಂಡನ್ ಮತ್ತು ಪ್ಯಾರಿಸ್‌ನಲ್ಲಿ ನಡೆದ ಯುನೆಸ್ಕೋ ಸಮ್ಮೇಳನದಲ್ಲೂ ಭಾಗವಹಿಸಿದ್ದರು. ಅಖಿಲ ಭಾರತ ನೂಲುವವರ ಸಂಘದ ಧರ್ಮದರ್ಶಿ ಮಂಡಳಿಯ ಸದಸ್ಯರಾಗಿದ್ದರು. ಭಾರತ ಸ್ವತಂತ್ರಗೊಂಡ ಮೇಲೆ ಮೊಟ್ಟ ಮೊದಲ ಕೇಂದ್ರ ಕ್ಯಾಬಿನೆಟ್ ದರ್ಜೆ ಸಚಿವರಾಗಿ ಆರೋಗ್ಯ ಖಾತೆಯ ಹೊಣೆ ಹೊತ್ತರು.

ಗಾಂಧೀಜಿಯವರಿಂದ ಸ್ಫೂರ್ತಿ ಪಡೆದ ರಾಜಕುಮಾರಿ ಅಮೃತ್ ಕೌರ್ ಅವರು ಕಾಂಗ್ರೆಸ್ ಪಕ್ಷವನ್ನು ಸೇರಿ ತಮ್ಮ ಜೀವನದುದ್ದಕ್ಕೂ ಅದರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡ ಅವರು ಮುಂಬಯಿಯಲ್ಲಿ ಬಂಧಿತರಾದರು. ನಂತರ ಅವರಿಗೆ ಸಮುದಾಯ ಪ್ರಶಸ್ತಿ ಘೋಷಿಸಿದಾಗ ಅವರು ಅದನ್ನು ತಿರಸ್ಕರಿಸಿದರು. ಕಾಂಗ್ರೆಸ್ ಪಕ್ಷದ ತತ್ವಗಳನ್ನು ಪ್ರಚುರ ಪಡಿಸಲು ಅವರು ವಾಯುವ್ಯ ಪ್ರಾಂತ್ಯದ ಬನ್ನು ಎಂಬಲ್ಲಿಗೆ ತೆರಳಿದರು. ರಾಜ ದ್ರೋಹದ ಆರೋಪದ ಮೇರೆಗೆ 1937ರ ಜುಲೈ 16 ರಂದು ಬಂಧಿಸಲ್ಪಟ್ಟು ಸೆರಮನೆ ವಾಸಕ್ಕೆ ಗುರಿಯಾದರು. 1942ರ ಭಾರತ ಬಿಟ್ಟು ತೊಲಗಿ ಆಂದೋಳನದ ನೇತೃತ್ವ ವಹಿಸಿ ಅನೇಕ ಮೆರವಣಿಗೆಗಳನ್ನು ನಡೆಸಿದರು. ಶಿಮ್ಲಾದಲ್ಲಿ ನಡೆದ ಮೆರವಣಿಗೆಯೊಂದರಲ್ಲಿ ಅವರು ತೀವ್ರ ಲಾಠಿ ಪ್ರಹಾರಕ್ಕೆ ತುತ್ತಾದರು. ಆನಂತರ ಅವರನ್ನು ಕಲ್ಕತ್ತದಲ್ಲಿ ಬಂಧಿಸಲಾಯಿತು.

ರಾಜಕುಮಾರಿ ಕೌರ್ ಅವರು ಸಾಮಾಜಿಕ ಕಾರ್ಯದಲ್ಲೂ ಹಾಗೂ ರಾಜಕೀಯದಲ್ಲೂ ಸಮಾನ ಆಸಕ್ತಿ ಹೊಂದಿದ್ದರು. ತಮ್ಮ ಜೀವನದ ಬಹುತೇಕ ಭಾಗವನ್ನು ಅವರು ಮಹಿಳೆಯರ ಏಳಿಗೆ ಹಾಗೂ ಸಾಮಾಜಿಕ ಪಿಡುಗುಗಳಾದ ಬಾಲ್ಯ ವಿವಾಹ, ಪರ್ದಾ ಪದ್ಧತಿ, ಅನಕ್ಷರತೆ ವಿರುದ್ಧ ಹೋರಾಟ ನಡೆಸುವುದರಲ್ಲಿ ಕಳೆದರು. ಬಾಲ್ಯ ವಿವಾಹ ಮತ್ತು ಪರ್ದಾ ಪದ್ಧತಿ ಕುರಿತು ಅವರು "ಬಾಲ್ಯ ವಿವಾಹ ಮತ್ತು ಪರ್ದಾ ಪದ್ಧತಿಯ ಮೇಲೆ ನಿಷೇಧ ವಿಧಿಸಿದರೆ ಅದು ಲಕ್ಷಾಂತರ ಮಂದಿ ಮಹಿಳೆಯರ ಆರೋಗ್ಯ ಸುಧಾರಿಸುವುದರ ಜೊತೆಗೆ ಮಹಿಳಾ ಶಿಕ್ಷಣ ವಿಸ್ತರಣೆಯ ದಾರಿಯಲ್ಲಿನ ಎರಡು ಪ್ರಮುಖ ಅಡ್ಡಿಗಳನ್ನು ನಿವಾರಿಸಿದಂತಾಗುತ್ತದೆ. ಅದೇ ರೀತಿ ಹಿಂದೂ ಕುಟುಂಬಗಳಲ್ಲಿನ ವಿಧವೆಯರ-ಸ್ಥಿತಿ-ಗತಿ, ಮದುವೆಗೆ ಸಂಬಂಧಪಟ್ಟ ಕಾಯ್ದೆಗಳು ಹಾಗೂ ಮಹಿಳೆಯರ ಪಿತ್ರಾರ್ಜಿತ ಆಸ್ತಿ ಹಕ್ಕಿಗೆ ಸಂಬಂಧಿಸಿದ ಕಾಯ್ದೆಗಳಲ್ಲೂ ಆಮೂಲಾಗ್ರ ಬದಲಾವಣೆಗಳು ಆಗಬೇಕು." ಎಂದಿದ್ದಾರೆ. ಅದೇ ರೀತಿ ಸಮಾಜದಲ್ಲಿ ಮಹಿಳೆಯರಿಗೆ ನ್ಯಾಯ ಬದ್ಧವಾದ ಸ್ಥಾನಮಾನ ದೊರಕಿಸುವಲ್ಲಿ ಬಾಲ್ಯ ವಿವಾಹವು ಒಂದು ಗಂಬೀರ ತೊಡಕಾಗಿದೆ ಎಂದು ಅವರು ಪರಿಗಣಿಸಿದ್ದರು. ಅವರ ಪ್ರಕಾರ "ಬಾಲ್ಯ ವಿವಾಹವು ರಾಷ್ಟ್ರ ಜೀವನದ ತಿರುಳನ್ನೇ ನುಂಗುವ ಗೆದ್ದಲು ಹುಳುವಿನಂತೆ. ಬಾಲ್ಯ ವಿವಾಹದಿಂದಾಗಿ ಆಡುವ ಮಕ್ಕಳು

ತಾಯಂದಿರಾಗುತ್ತಿದಾದರೆ. ಇಂತಹ ಮಕ್ಕಳು ರೋಗಗಳು ಮತ್ತು ವಿವಿಧ ವ್ಯಾಧಿಗಳಿಗೆ ಬಲಿಯಾಗುವುದು ಸಹಜ."

ಮಹಿಳೆಯರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಕೌರ್ ಅಜೇಯ ಹೋರಾಟಗಾರ್ತಿಯಾಗಿದ್ದರು. ಅದೇ ರೀತಿ ಮಹಿಳಾ ಶಿಕ್ಷಣದ ಕಟ್ಟಾ ಪ್ರತಿಪಾದಕಿಯಾಗಿದ್ದರು. ಮಹಿಳಾ ಸಮ್ಮೇಳನ ವೊಂದರಲ್ಲಿ ಮಾತನಾಡುತ್ತಾ ಅವರು, "ಶೈಕ್ಷಣಿಕ ಸುಧಾರಣೆಯ ಕ್ಷೇತ್ರದಲ್ಲಿ ನಾವು ಮೊದಲಿನಿಂದಲೂ ಎಲ್ಲರಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕೆಂದು ಆಗ್ರಹಿಸುತ್ತಾ ಬಂದಿದ್ದೇವೆ. ಇನ್ನು ಮಹಿಳಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸೂಕ್ತ ಸೌಕರ್ಯ ಕಲ್ಪಿಸುವ ವಿಷಯದಲ್ಲಿ ಸಾರ್ವತ್ರಿಕ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ ಹಾಗೂ ಅದಕ್ಕೆ ಸಂಬಂಧಪಟ್ಟ ಇತರ ಎಲ್ಲಾ ಸೌಕರ್ಯಗಳನ್ನು ಕಲ್ಪಿಸಿ ಕೊಡಬೇಕು. ಬಾಲಕಿಯರ ಶಾಲೆಗಳಿಗೆ ತರಬೇತಿ ಪಡೆದ ಶಿಕ್ಷಕಿಯರನ್ನು ನೇಮಿಸಬೇಕು. ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಪದ್ಧತಿಯನ್ನು ಬದಲಾಯಿಸಬೇಕು."ಎಂದಿದ್ದಾರೆ. ಅದೇ ರೀತಿ ಗಾಂಧೀಜಿಯವರು ಪ್ರತಿ ಪಾದಿಸಿದ ಮೂಲಭೂತ ಶಿಕ್ಷಣವು ಭಾರತ ಪರಿಸ್ಥಿತಿಗೆ ಹೇಳಿ ಮಾಡಿಸಿದಂತಿದೆ.

ರಾಜಕುಮಾರಿ ಕೌರ್ ಅವರು ಹರಿಜನರ ಸಮಸ್ಯೆಗಳ ಬಗ್ಗೆ ತೀವ್ರ ಕಾಳಜಿ ಹೊಂದಿದ್ದರು. ಅವರ ಶೋಚನೀಯ ಪರಿಸ್ಥಿತಿಯನ್ನು ಕಂಡು ಮರುಗಿದ ಅವರು "ನಮಗಾಗಿ ಎಲ್ಲಾ ರೀತಿಯ ಕೆಲಸಗಳನ್ನು ಮಾಡುವ ಈ ಮಂದಿ ಅತ್ಯಂತ ಅಸಹ್ಯಕರ ರೀತಿಯಲ್ಲಿ ಬದುಕು ಸಾಗಿಸುತ್ತಿರುವುದು ನಿಜವಾಗಿ ನಮಗೆ ನಾವೇ ಮಾಡಿಕೊಳ್ಳುವ ಅವಮಾನವಾಗಿದೆ. ಅವರು ವಾಸವಾಗಿರುವ ಝೋಪಡಿಗಳನ್ನು ಝೋಪಡಿಗಳೆಂದು ಕರೆಯುವುದು ಕೂಡಾ ಸಾಧ್ಯವಿಲ್ಲ" ಎಂದಿದ್ದಾರೆ.

ರಾಜ ಮನೆತನದ ರೂಢಿ, ಸಂಪ್ರದಾಯಗಳನ್ನು ಮೈಗೂಡಿಸಿಕೊಂಡಿದ್ದ ರಾಜಕುಮಾರಿ ಅಮೃತ್ ಕೌರ್ ಅವರು ಓರ್ವ ನೈಜ ದೇಶಾಭಿಮಾನಿ ಮಾತ್ರವಾಗಿರದೆ ಗಾಂಧೀಜಿಯವರ ಸತ್ಯ ಮತ್ತು ಅಹಿಂಸಾ ಸಿದ್ಧಾಂತದಲ್ಲಿ ಅಚಲ ನಂಬಿಕೆ ಇರಿಸಿದವರಾಗಿದ್ದರು. ನಮ್ಮ ಅನೇಕ ಸಾಮಾಜಿಕ ಅನಿಷ್ಟಗಳ ನಿರ್ಮೂಲನೆಯಲ್ಲೂ ಅವರು ಚಾಲಕ ಶಕ್ತಿಯಾಗಿದ್ದರು.

ಓರ್ವ ದೇಶಾಭಿಮಾನಿಯಾಗಿ ರಾಜಕುಮಾರಿ ಅಮೃತ ಕೌರ್ ಅವರು ಭಾರತದ ಜನ ಸಮುದಾಯದಲ್ಲಿ ಜಾನಪದ ಕತೆಯ ನಾಯಕಿಯಂತೆ ಮಿಂಚಿದರು. ಪ್ರತಿಯೊಂದು ಹಳ್ಳಿ, ಪಟ್ಟಣಗಳಲ್ಲಿ ರಾಜಕುಮಾರಿ ಅವರನ್ನು ಜನ ಝಾನ್ಸಿ ರಾಣಿ, ಫ್ಲಾರೆನ್ಸ್ ನೈಟಿಂಗೇಲ್ ಮತ್ತು ಅಂತಹ ಜಗತ್ಪ್ರಸಿದ್ಧ ಮಹಿಳೆಯರ ಜೊತೆ ಹೋಲಿಸುತ್ತಿದ್ದರು. ಎಲ್ಲಾ ಕಡೆಯೂ ಎಲ್ಲರಿಂದಲೂ ಆಕೆ ಅಂತಹ ಪ್ರಶಂಸೆಗೆ ಪಾತ್ರರಾದರು.

## ಅಧ್ಯಾಯ-10

# ಒಂದು ಸಾಹಸಗಾಥೆ

*ಪ್ರೊ.ಅನಿಮಾ ಬೋಸ್

"ಜೀವನದಲ್ಲಿ ಬಲಶಾಲಿಗಳಾಗಬೇಕಾದರೆ ಹೋರಾಟಗಳಿರಬೇಕು. ತತ್ವಗಳಿಗಾಗಿ ನಡೆಸುವ ಹೋರಾಟದಿಂದ ಮನೋಸ್ಥೈರ್ಯ ಬೆಳೆಯುತ್ತದೆ; ಅದೇ ರೀತಿ ಧ್ಯೇಯವನ್ನು ಸಾಧಿಸಲು ಮನುಷ್ಯನಿಗೆ ಸವಾಲುಗಳು ಸದಾ ಎದುರಾಗುತ್ತಿರಬೇಕು". ರಾಜಕುಮಾರಿ ಅಮೃತ ಕೌರ್ ಜೀವನನ್ನು ಕುರಿತು ಯೋಚಿಸಿದಾಗಲೆಲ್ಲಾ ವಾಲ್ಟ್ ವಿಟ್ಮನ್‌ನ ಈ ಮಾತುಗಳು ನನಗೆ ನೆನಪಿಗೆ ಬರುತ್ತದೆ:

ಅಂತಃಶಕ್ತಿ, ಉನ್ನತ ತತ್ವ ಆದರ್ಶಗಳಲ್ಲಿ ಸಂಪೂರ್ಣ ನಿಷ್ಠೆ, ತಮ್ಮ ರಾಷ್ಟ್ರ ಮತ್ತು ಮಾನವ ಸಮುದಾಯಕ್ಕೆ ಸೇವೆ ಸಲ್ಲಿಸಬೇಕೆಂಬ ಧ್ಯೇಯ ಏಕೋದ್ದೇಶ ಮತ್ತು ಧೈರ್ಯ ರಾಜಕುಮಾರಿ ಅಮೃತ ಕೌರ್ ಅವರ ಜೀವನವನ್ನು ಎಲ್ಲಾ ಕ್ಷೇತ್ರಗಳಿಗೂ ವಿಸ್ತರಿಸಿತು. ಇತರರಿಗಾಗಿ ತಮ್ಮ ಜೀವನವನ್ನೇ ಮುಡಿಪಿಟ್ಟು ತಮ್ಮ ಜೀವನದ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡರು. ಅವರ ಜೀವನ ಮತ್ತು ಕೆಲಸ ಕಾರ್ಯಗಳಲ್ಲಿ ಗೌಣ ವಿಷಯಗಳು ಎಂದೂ ಮೊದಲ ಆದ್ಯತೆ ಪಡೆಯಲಿಲ್ಲ. ಅದೇ ರೀತಿ ತೋರ್ಪಡಿಕೆಗಾಗಿ ಅವರು ಯಾವ ಕೆಲಸವನ್ನು ಮಾಡಲಿಲ್ಲ.

ಧೈರ್ಯ ಮತ್ತು ಅಚಲ ನಿಷ್ಠೆಯ ಪ್ರತೀಕದಂತಿದ್ದ ಅಮೃತ್ ಕೌರ್ ಅವರ ವ್ಯಕ್ತಿತ್ವದಲ್ಲಿ ಆಗಿನ ಭಾರತದ ಇತಿಹಾಸವನ್ನು ನಾವು ಕಂಡುಕೊಳ್ಳಬಹುದು. ಬಹುಮುಖಿ ಆಸಕ್ತಿಯ ವಿವಿಧ ಚಟುವಟಿಕೆಗಳಲ್ಲಿ ಅವರೊಂದಿಗೆ ಕೆಲಸ ಮಾಡುವ ಅವಕಾಶ ದೊರೆತವರ ಪಾಲಿಗೆ, ಸ್ನೇಹಿತರಿಗೆ ಮತ್ತು ಭಾರತದಲ್ಲೂ, ವಿದೇಶಗಳಲ್ಲೂ ಅವರ ಸಂಪರ್ಕ ಹೊಂದಿದವರಿಗೆ ಅವರ ಪ್ರಭಾವ ಗಾಢವಾಗಿ ತಟ್ಟಿತ್ತು. ಯಂಗ್ ವುಮೆನ್ಸ್ ಕ್ರಿಶ್ಚಿಯನ್ ಅಸೋಸಿಯೇಷನ್ (ವೈ.ಡಬ್ಲ್ಯು.ಸಿ.ಎ) ನಲ್ಲಿ ಅವರ ಜೊತೆ ಕೆಲಸ ಮಾಡಿದವರ ಮಾತುಗಳಲ್ಲಿ ಹೇಳುವುದಾದರೆ:

"ರಾಜಕುಮಾರಿ ಕೌರ್ ಅವರು ಓರ್ವ ಮಹಾನ್ ಮಹಿಳೆ ಮತ್ತು ಅದ್ವಿತೀಯ ದೇಶಾಭಿಮಾನಿ. ರೋಗಿಗಳು, ಕುಷ್ಠರೋಗಿಗಳು, ಕ್ಷಯ ರೋಗಿಗಳು, ಅಂಧರು, ಅಶಿಕ್ಷಿತರು ಮತ್ತು ಅಶಕ್ತರ ಬದುಕಿಗೆ ದೇವದೂತೆಯಂತೆ ಬೆಳಕು ತುಂಬಿದ ಮಹಾನುಭಾವರು. ಆಕೆಯನ್ನು ಆದರ್ಶವಾಗಿರಿಸಿಕೊಂಡು ಆಕೆ ನಡೆದ ಹೆಜ್ಜೆಗಳಲ್ಲೇ ಅಡಿ ಇಡಬೇಕೆಂದು ಪ್ರಯತ್ನಿಸುತ್ತಿರುವ ನಮ್ಮಂಥವರಿಗೆ ಆಕೆ ಚಿರಕಾಲ ಸ್ಫೂರ್ತಿದಾಯಿನಿಯಾಗಿ ನಿಲ್ಲಬಲ್ಲವರು."

1889ರ ಫೆಬ್ರವರಿ 2ರಂದು ಕಪುರ್ತಲಾದ ರಾಜ ಕುಟುಂಬದಲ್ಲಿ ಜನಿಸಿದ ಅಮೃತ್ ಕೌರ್ ತಮ್ಮ ಕಾಲದ ಜನಜೀವನ ಮತ್ತು ಕಾಲಘಟ್ಟದ ವಿದ್ಯಮಾನಗಳಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಅದಕ್ಕೆ ಬೇಕಾದ ಅಸಾಧಾರಣ ಬುದ್ಧಿಮತ್ತೆ, ಪ್ರಾಮಾಣಿಕತೆ, ಧೈರ್ಯ, ದಯಾಪರತೆ, ನಿಷ್ಠೆ ಮತ್ತು ಸಾಮಾಜಿಕ ಹೊಣೆಗಾರಿಕೆಯ ಅಗಾಧ ಪ್ರಜ್ಞೆ ಅವರಲ್ಲಿದ್ದಿತು.

---

*ಪ್ರೊ.ಅನಿಮಾ ಬೋಸ್ ಅವರು ನವದೆಹಲಿಯ ಸೆಂಟರ್ ಫಾರ್ ಪೀಸ್ ಎಜುಕೇಷನ್ ಸಂಸ್ಥೆಯ ನಿರ್ದೇಶಕರು.

ಗಂಭೀರ ಪರಿಸ್ಥಿತಿಗಳು ಮತ್ತು ಸವಾಲೊಡ್ಡುವ ಸಂದರ್ಭಗಳಲ್ಲಿ, ತಾವೇ ಆಯ್ದುಕೊಳ್ಳುತ್ತಿದ್ದ ಹೊಣೆಗಾರಿಕೆಗಳನ್ನು ನಿರ್ವಹಿಸುವಲ್ಲಿ ಅವರು ತೋರುತ್ತಿದ್ದ ಧೈರ್ಯ, ಸ್ಥೈರ್ಯಗಳು ಮತ್ತು ಶೌರ್ಯ ಅವರ ಕಾಲಮಾನದಲ್ಲಿ ಅವರನ್ನು ಶಕಪುರುಷರನ್ನಾಗಿ ಮಾಡಿತು. ನಿಷ್ಠೆ, ನೀತಿ ಹಾಗೂ ನೈತಿಕ ಮೌಲ್ಯಗಳ ವಿಚಾರದಲ್ಲಿ ಅವರೆಂದೂ ರಾಜಿ ಮಾಡಿಕೊಂಡವರಲ್ಲ. ಇದು ತಮ್ಮದು. ಇದು ಬೇರೆಯವರದು ಎಂಬ ಭೇದಭಾವ ಇಲ್ಲದೆ ತಾವು ಹಿಡಿದ ಕಾರ್ಯವನ್ನು ಪರಿಪೂರ್ಣ ನಿಷ್ಠೆಯಿಂದ ಪೂರ್ಣಗೊಳಿಸುವ ಮನೋಭಾವದವರು ಅವರು.

ರಾಜಕುಮಾರಿ ಅಮೃತ್ ಕೌರ್ ಅವರು ಲಂಡನ್‌ನ ಶೆರ್ನ್‌ಬೋರ್ನ್ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿದ್ದಾಗಲೇ ತಮ್ಮ ಪ್ರತಿಭೆ ಎಂತಹುದು ಎಂಬುದನ್ನು ತೋರಿಸಿಕೊಟ್ಟರು. ಅವರ ಕ್ರೀಡಾ ಪ್ರೇಮ ಬಳೆದದ್ದು ಆ ದಿನಗಳಲ್ಲೇ. ಹಾಕಿ, ಕ್ರಿಕೆಟ್ ಹಾಗೂ ಟೆನಿಸ್ ಕ್ರೀಡಾ ಮಂಡಳಿಗಳಿಗೆ ನಾಯಕಿಯಾಗಿ ತಮ್ಮ ಸಾಮರ್ಥ್ಯ ಪ್ರದರ್ಶಿಸಿದ್ದರು. ಭಾರತದ ರಾಷ್ಟ್ರೀಯ ಕ್ರೀಡಾಕ್ಲಬ್ ಮತ್ತು 1961ರಲ್ಲಿ ಪ್ರಾರಂಭಿಸಿದ ರಾಜಕುಮಾರಿ ಸ್ಪೋರ್ಟ್ಸ್ ಕೋಚಿಂಗ್ ಸ್ಕೀಮ್ ಯೋಜನೆಯಲ್ಲಿ ಅವರ ಕ್ರೀಡಾ ಪ್ರೇಮವನ್ನು ಕಾಣಬಹುದು. ಅವರು ಕೇಂದ್ರ ಶಿಕ್ಷಣ ಸಚಿವಾಲಯದ ಆಶ್ರಯದಲ್ಲಿ ಆರಂಭವಾದ ರಾಷ್ಟ್ರೀಯ ಕ್ರೀಡಾ ಸಂಸ್ಥೆಯ ಅಧ್ಯಕ್ಷೆಯಾಗಿದ್ದರು. ಶೆರ್ನ್‌ಬೋರ್ನ್ ಶಾಲೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಪೂರೈಸಿದ ಅವರು ಅನಂತರ ಲಂಡನ್ ಮತ್ತು ಆಕ್ಸ್‌ಫರ್ಡ್‌ಗಳಲ್ಲಿ ತಮ್ಮ ಅಧ್ಯಯನ ಮುಂದುವರಿಸಿದರು. ಅವರಿಗೆ ವೈದ್ಯ ಶಾಸ್ತ್ರದಲ್ಲಿ ಪದವಿ ಗಳಿಸಬೇಕೆಂಬ ಮಹದಾಸೆ ಇದ್ದರೂ ಅವರ ತಂದೆ ತಾಯಿ ಅವರಿಗ ಪ್ರೋತ್ಸಾಹ ನೀಡಲಿಲ್ಲ. ಆಕೆ ಎಂದೂ ಯಾವ ಪರೀಕ್ಷೆಗಳಿಗೂ ಕುಳಿತುಕೊಳ್ಳದಿದ್ದರೂ ಎಲ್ಲಾ ಉಪನ್ಯಾಸಗಳಿಗೆ ಹಾಜರಾಗುತ್ತಿದ್ದರಿಂದ ಅವರು ಸಾಕಷ್ಟು ವಿಷಯಗಳಲ್ಲಿ ಪರಿಣಿತಿ ಹೊಂದಿದ್ದರು. ಹೀಗಾಗಿ ಅವರ ಮುಂದಿನ ಜೀವನದಲ್ಲಿ ಆರೋಗ್ಯ ಅವರ ಪ್ರಮುಖ ಕಾಳಜಿ ವಿಷಯವಾಯಿತು. ಕ್ಷಯರೋಗ ನಿರೋಧಕ ಕೇಂದ್ರವನ್ನು ಅವರು ಸ್ಥಾಪಿಸಿದರು. 1934 ರಲ್ಲಿ ಜಲಂಧರ್ ನಗರಸಭೆ ವ್ಯಾಪ್ತಿಯಲ್ಲಿ ಶಿಶು ಸಂರಕ್ಷಣ ಕೇಂದ್ರವನ್ನು ಪ್ರಾರಂಭಿಸಿದ್ದರು. ಭಾರತೀಯ ಕುಷ್ಟರೋಗ ನಿಯಂತ್ರಣ ಸಂಸ್ಥೆಯ ಸದಸ್ಯರಾಗಿದ್ದರು. ಹಾಗೂ 1950ರಿಂದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಅಧ್ಯಕ್ಷೆಯಾಗಿದ್ದರು. ಭಾರತೀಯ ಶಿಶು ಕಲ್ಯಾಣ ಮಂಡಳಿಯ ಅಧ್ಯಕ್ಷೆಯಾಗಿದ್ದರು. ಆರೋಗ್ಯ ವಿಷಯದಲ್ಲಿ ಆಕೆ ತೋರುತ್ತಿದ್ದ ಅಪಾರ ಆಸಕ್ತಿ ಕಾಂಗ್ರೆಸ್ ಪಕ್ಷ ಸಲ್ಲಿಸಿದ ಮಧ್ಯಂತರ ಸರ್ಕಾರದ ಅಭ್ಯರ್ಥಿಗಳ ಯಾದಿಯಲ್ಲಿ ಅವರು ಹೆಸರು ಸೇರ್ಪಡೆಗೆ ದಾರಿ ಮಾಡಿಕೊಟ್ಟಿತು. 1946ರಲ್ಲಿ ಅವರು ಭಾರತದ ಪ್ರಥಮ ಆರೋಗ್ಯ ಸಚಿವೆಯಾದರು. ವಸತಿ, ಕ್ರೀಡೆ ಮತ್ತು ಸ್ಥಳೀಯ ಸ್ವಯಂ ಆಡಳಿತಗಳು ಅವರ ಖಾತೆಗೆ ಸೇರಿದ್ದವು. ಕೌರ್ ಅವರ ತಮ್ಮ ಜೀವನಪೂರ್ತಿ, ಅಂದರೆ1957ರಲ್ಲಿ ಆರೋಗ್ಯ ಖಾತೆಗೆ ರಾಜೀನಾಮೆ ನೀಡಿದ ನಂತರದಲ್ಲೂ ಕೂಡಾ ಆರೋಗ್ಯ ಸೇವೆಗಳ ಪ್ರಗತಿ ಸಾಧನೆಗಾಗಿ ಅವಿಶ್ರಾಂತವಾಗಿ ಶ್ರಮಿಸಿದರು. 1947-1957ರವರೆಗೆ ಲೋಕಸಭಾ ಸದಸ್ಯರಾಗಿ, 1957ರಿಂದ ರಾಜ್ಯಸಭಾ ಸದಸ್ಯರಾಗಿ ಅವರು ದೇಶಕ್ಕೆ ಸೇವೆ ಸಲ್ಲಿಸಿದರು. ಅಖಿಲ ಭಾರತ ವೈದ್ಯಕೀಯ ಅಧ್ಯಯನ ಸಂಸ್ಥೆಯ ಅಧ್ಯಕ್ಷೆಯಾಗಿದ್ದ ಅವರು ಅದರ ಸ್ಥಾಪನೆಗಾಗಿ ಮೂರು ಲಕ್ಷ ರೂಪಾಯಿಗಳ ನಿಧಿಯನ್ನು ಸಂಗ್ರಹಿಸಿದರು. ಇದು ನಿಜವಾಗಿಯೂ ಅವರ ಪಾಲಿಗೆ ವಿಶೇಷ ಹೆಮ್ಮೆಯ ಸಂಗತಿಯಾಗಿತ್ತು.

ರಾಜಕುಮಾರಿ ಅವರು ಹಲವು ಭಾಷೆಗಳನ್ನು ಬಲ್ಲವರಾಗಿದ್ದರು. ಮಾತೃಭಾಷೆ ಪಂಜಾಬಿ, ಇಂಗ್ಲಿಷ್ ಜೊತೆ ಫ್ರೆಂಚ್ ಮತ್ತು ಇಟಲಿಯನ್ ಭಾಷೆಗಳಲ್ಲೂ ಅವರು ನಿರರ್ಗಳವಾಗಿ ಮಾತನಾಡಬಲ್ಲವರಾಗಿದ್ದರು. ಪಿಯಾನೋ ಮತ್ತು ವೀಣಾ ವಾದನಗಳಲ್ಲೂ ಆಸಕ್ತಿಯಿತ್ತು. ವಯಲಿನ್ ವಾದಸದಲ್ಲಿ ಪ್ರೌಢಿಮೆ ಸಾಧಿಸಿದ್ದರು. ಅವರು ದೆಹಲಿಯ ಸಂಗೀತ ಸಭಾದೊಂದಿಗೆ ನಿಕಟ ಸಂಬಂಧ ಹೊಂದಿದ್ದರು. ಅದರ ಸದಸ್ಯರು ಇಂದಿಗೂ ಕೌರ್ ಅವರನ್ನು ಆದರದಿಂದ ನೆನೆಯುತ್ತಾರೆ. ಹೀಗೆ ಅವರು ಕಲೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ವಿಷಯಗಳ "ರಾಯಭಾರಿ" ಎಂಬ ಮನ್ನಣೆಗೆ ಪಾತ್ರರಾಗಿದ್ದರು.

ಅವರ ವೈವಿಧ್ಯಮಯ ಆಸಕ್ತಿಗಳು ಅವರ ವ್ಯಕ್ತಿತ್ವದ ಹಲವು ಮುಖಗಳನ್ನು ಬಿಂಬಿಸುತ್ತದೆ. ಅವರ ಸ್ನೇಹಿತರಿಗೆ ಮತ್ತು ಅವರ ಜತೆ ಕೆಲಸ ಮಾಡಿದವರ ಪಾಲಿಗೆ ಕೌರ್ ಸದಾ ಸ್ಫೂರ್ತಿ ಕೇಂದ್ರವಾಗಿದ್ದರು. ಆಕೆ ಸದಾ ತಮ್ಮೊಂದಿಗೇ ಇದ್ದಂತೆ ಅವರಿಗೆ ಅನಿಸುತ್ತಿತ್ತು.

ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆ ಅಥವಾ ರೆಡ್‌ಕ್ರಾಸ್ ಸಂಸ್ಥೆಗಳಲ್ಲಿ ಅವರೊಂದಿಗೆ ಕಾರ್ಯ ನಿರ್ವಹಿಸಿದ ವೈದ್ಯರು ಆಕೆಯನ್ನು ಯಾವಾಗಲೂ ನೆನಪಿಸಿಕೊಳ್ಳುತ್ತಾರೆ. ಅದೇ ರೀತಿ ಅವರ ಪ್ರೇರಣೆಯಿಂದಲೇ ಸ್ಥಾಪಿತವಾದ ಮ್ಯೂನಿಕ್ ಸೊಸೈಟಿಯಲ್ಲಿ ಹಾಗೂ ಕಾಂಗ್ರೆಸ್ ಪಕ್ಷದ ವಿವಿಧ ವೇದಿಕೆಗಳಲ್ಲಿ ಕೆಲಸ ಮಾಡಿದವರ ಪಾಲಿಗಂತೂ ಆಕೆ ಚಿರಸ್ಮರಣೀಯರಾಗಿದ್ದಾರೆ. ಸ್ವಾತಂತ್ರ್ಯ ಚಳವಳಿಗೆ ಅವರು ನೀಡಿದ ಕೊಡುಗೆಯನ್ನು ಸಂಘಟನೆಯ ಅಧ್ಯಕ್ಷರಾಗಿ ಬಹು ದೀರ್ಘಕಾಲ ಸಲ್ಲಿಸಿದ ಸೇವೆಯನ್ನು ಪ್ರತಿಯೊಬ್ಬರೂ ನೆನೆಯುತ್ತಾರೆ. ವೈಡಬ್ಲ್ಯುಸಿಎ ಅಧ್ಯಕ್ಷರಾಗಿ ಆಯ್ಕೆಯಾದ ಸಂದರ್ಭದಲ್ಲಿ ಅವರು "ಭಾರತದ ಇಂದಿನ ಸ್ಥಿತಿಗೆ ವೈಡಬ್ಲ್ಯುಸಿಎ ನಿರ್ದಿಷ್ಟ ಕೊಡುಗೆ ನೀಡಿದೆ ಎಂಬುದರಲ್ಲಿ ನನಗೆ ಯಾವುದೇ ಅನುಮಾನವಿಲ್ಲ. ಹಾಗಾಗಿಯೇ ನನ್ನ ಜೀವಿತದ ಈ ಘಟ್ಟದಲ್ಲಿ (1964) ಸಂಸ್ಥೆಯ ಅಧ್ಯಕ್ಷ ಸ್ಥಾನದ ಹೊಣೆಗಾರಿಕೆಯನ್ನು ವಹಿಸಿ ಕೊಳ್ಳುತ್ತಿದ್ದೇನೆ"ಎಂದು ಹೇಳಿದ್ದರು. ವೈಡಬ್ಲ್ಯುಸಿಎ ಜೊತೆಗಿನ ಅವರ ಸಂಬಂಧ ಬಹು ದೀರ್ಘವಾದದ್ದು. ಅವರ ತಾಯಿ ರಾಣಿ ಹರ್ನಾಮ್ ಸಿಂಗ್ ಅವರು ಈ ರಾಷ್ಟ್ರೀಯ ಸಂಘಟನೆಯ ಪ್ರಥಮ ಉಪಾಧ್ಯಕ್ಷರಲ್ಲಿ ಒಬ್ಬರಾಗಿದ್ದರು. ವೈಡಬ್ಲ್ಯುಸಿಎ ಧ್ಯೇಯ ಧೋರಣೆಗಳು ಮತ್ತು ಕಾರ್ಯಕ್ರಮಗಳ ಬಗ್ಗೆ ಅಮೃತ ಕೌರ್ ಅವರಿಗೆ ಸ್ಪಷ್ಟ ಪರಿಕಲ್ಪನೆಗಳಿದ್ದವು. ಇದರ ಮೂಲಭೂತ ಧ್ಯೇಯಗಳು ಮತ್ತು ತಪ್ಪುಗಳು ಈ ಕಾರ್ಯಕ್ರಮಗಳಲ್ಲಿ ಪ್ರತಿಬಿಂಬಿಸಿದ್ದವು. ಬಾಲಕಿಯರು ಮತ್ತು ಮಹಿಳೆಯರ ಆಧ್ಯಾತ್ಮಿಕ, ಶೈಕ್ಷಣಿಕ ಮತ್ತು ಮನೋರಂಜನೆಯ ಅಗತ್ಯಗಳನ್ನು ಪೂರೈಸುವುದು ಮತ್ತು ಅವರಲ್ಲಿ ಸಾಮಾಜಿಕ ಹೊಣೆಗಾರಿಕೆಯ ಪ್ರಜ್ಞೆಯನ್ನು ಬೆಳೆಸುವುದು, ಸಮಾಜದ ವಿವಿಧ ಗುಂಪುಗಳು, ಪಂಗಡಗಳು ಮತ್ತು ಜನಾಂಗಗಳ ನಡುವಣ ಅಡ್ಡಗೋಡೆಗಳನ್ನು ಕಿತ್ತುಹಾಕಿ ಅವರಲ್ಲಿ ಪರಸ್ಪರ ತಿಳುವಳಿಕೆಯನ್ನು ಮೂಡಿಸುವುದು ಅವುಗಳ ಧ್ಯೇಯವಾಗಿತ್ತು.ಈ ಧ್ಯೇಯಗಳ ಅಂತರಾರ್ಥವನ್ನು ಗ್ರಹಿಸಲು ನಾವು ಶಕ್ತರಾದವೆಂದಾದರೆ "ನಮ್ಮ ಅಂತಃ ಪ್ರೇರಣೆ ಉನ್ನತ ಮಟ್ಟದ್ದೆಂದು" ಹೇಳಿಕೊಳ್ಳಬಹುದು; ಇದು ಜಗತ್ತಿನ ಮೂಲ ಭೂತ ಅಗತ್ಯಗಳಲ್ಲಿ ಒಂದಾಗಿರುವ ಜಾಗತಿಕ ಸೋದರತ್ವ- ಅಂದರೆ ಯುವಕರಿಗೂ, ವೃದ್ಧರಿಗೂ ಸಮಾನವಾಗಿ ಅನ್ವಯವಾಗುವ ಕ್ರೈಸ್ತ ಸೋದರತ್ವ-ಪ್ರತಿಯೊಬ್ಬರಿಗೂ ಸೇವೆ ಮತ್ತು ನಾಯಕತ್ವ ಸಂಪೂರ್ಣ ಮತ್ತು ಮುಕ್ತ ಅವಕಾಶ ಕಲ್ಪಿಸುವುದು ಅವರ ಧ್ಯೇಯವಾಗಿದೆ. ಕೌರ್ ಅವರು ತಮ್ಮ ಬದುಕಿನಲ್ಲಿ

ಎಂದೂ ಸವಾಲುಗಳಿಗೆ ಅಂಜಲಿಲ್ಲ. ವೈಡಬ್ಲ್ಯೂಸಿಎ ಮುಂದೆ ಬಹು ಮುಖ್ಯ ಕಾರ್ಯಭಾರಗಳಿವೆ ಎಂಬುದನ್ನು ಅವರು ಮನಗಂಡಿದ್ದರು. ಅನಕ್ಷರತೆ ನಿವಾರಣೆ, ಮಕ್ಕಳ ಆರೋಗ್ಯ ಸಂರಕ್ಷಣೆ, ಉದ್ಯೋಗದ ಘನತೆಯನ್ನು ಎತ್ತಿ ಹಿಡಿಯುವುದು ಅವುಗಳಲ್ಲಿ ಮುಖ್ಯವಾದವು. ಯಾವ ಕೆಲಸವೂ ಸಣ್ಣದಲ್ಲ. ಕೊಳಗೇರಿಗಳಲ್ಲಿ ಕಸ, ಕಶ್ಮಲಗಳನ್ನು ಸಾಗಿಸುವ ಕೆಲಸವಿರಲಿ ಅಥವಾ ಹೊಲ ಗದ್ದೆಗಳಲ್ಲಿ ಮಾಡುವ ಕೆಲಸವಿರಲಿ, ಎಲ್ಲವೂ ಮುಖ್ಯವಾದುವೇ ಯಾವುದೇ ಕೆಲಸದಲ್ಲಿ ನಾವು ಏನನ್ನು ಸಂಪಾದಿಸಬಹುದು ಎನ್ನುವುದಕ್ಕಿಂತ ಹೆಚ್ಚಾಗಿ, ನಾವು ಏನನ್ನು ಕೊಡಬಹುದು ಎಂದು ನಮ್ಮನ್ನು ನಾವು ಪ್ರಶ್ನಿಸಿಕೊಳ್ಳಬೇಕು. ವೈಡಬ್ಲ್ಯೂಸಿಎ ಚಳವಳಿಯ ಹಿರಿಯ ಹಾಗೂ ಅನುಭವಿ ಸದಸ್ಯರು ಯುವಜನರನ್ನು ಆಕರ್ಷಿಸಿ ಅವರಲ್ಲಿ ಸೇವಾ ಭಾವನೆ ಮೂಡುವ ನಿಟ್ಟಿನಲ್ಲಿ ಸತತ ಪ್ರಯತ್ನ ನಡೆಸಬೇಕಾದ್ದು ಭಾರತದ ಅವಶ್ಯಕತೆಯಾಗಿದೆ ಎಂದು ಅಮೃತ್ ಕೌರ್ ನಂಬಿದ್ದರು. ಯುವಜನರ ವ್ಯಕ್ತಿಗತ ವಿಕಾಸಕ್ಕೆ ಹೆಚ್ಚಿನ ಅವಕಾಶಗಳನ್ನು ಕಲ್ಪಿಸಿದರೆ ಅವರು ನಮ್ಮತ್ತ ಹೆಚ್ಚು ಆಕರ್ಷಿತರಾಗುತ್ತಾರೆ. ಅದು ಸಮಾಜ ಹಿತಸಾಧನೆಗೆ ಹೆಚ್ಚು ಪೂರಕವಾಗುತ್ತದೆ ಎಂಬುದಕ್ಕೆ ಕೌರ್ ಹೆಚ್ಚಿನ ಒತ್ತು ನೀಡಿದ್ದರು. ಅವರ ಹೊಸ ಹೊಸ ವಿಚಾರಗಳು ಮತ್ತು ಪ್ರಯೋಗಗಳನ್ನು ನಾವು ಪ್ರೋತ್ಸಾಹಿಸಬೇಕು. ಮತ್ತು ಸೋಲಿನ ಅಂಜಿಕೆಯಿಂದ ಅವರನ್ನು ಪಾರು ಮಾಡಬೇಕು. ಬಹುತೇಕ ಸಂದರ್ಭಗಳಲ್ಲಿ ಹಳೆಯ ತಲೆಮಾರಿನವರು ಸಾಹಸ ಮನೋವೃತ್ತಿಗೆ ತಣ್ಣೀರು ಎರಚುವವರು ಎಂಬುದನ್ನು ಅವರು ಗ್ರಹಿಸಿಕೊಳ್ಳಬಲ್ಲವರಾಗಿದ್ದರು. ಅಂಥವರು ವಿಧಿ ವಿಧಾನಗಳ ಬಗ್ಗೆ ಪಟ್ಟು ಹಿಡಿದು ಕೆಲಸಕ್ಕೆ ಮುಂದಾಗುವಲ್ಲಿ ಹತಾಶೆಗೆ ಕಾರಣರಾಗುವವರೆಂಬ ಅಂಶವೂ ಅವರ ಗ್ರಹಿಕೆಯಲ್ಲಿತ್ತು. ವಾಸ್ತವವಾದಿಯಾಗಿದ್ದ ಮತ್ತು ರಚನಾತ್ಮಕ ದೃಷ್ಟಿಕೋನ ಹೊಂದಿದ್ದ ಅಮೃತ ಕೌರ್ ಅವರು ವೈಎಂಸಿಎಯಂತಹ ಸ್ವಯಂ ಸೇವಾ ಸಂಸ್ಥೆಗಳಲ್ಲಿ ವೃತ್ತಿಪರ ದಕ್ಷತೆಯಿಂದ ಕೆಲಸ ಮಾಡುವವರ ಬಗೆಗೂ ಅಷ್ಟೇ ಕಳಕಳಿ ಉಳ್ಳವರಾಗಿದ್ದರು. "ನಾವು ಅವರಿಗೆ ಹೆಚ್ಚಿನ ವೇತನ ನೀಡಬೇಕು ಮತ್ತು ಸೃಜನ ಶೀಲತೆಗೆ ಮುಕ್ತ ಅವಕಾಶ ನೀಡಬೇಕು" ಏಕೆಂದರೆ ಆರ್ಥಿಕ ಭದ್ರತೆ ಎಂದರೆ ಹೆಚ್ಚಿನ ಸ್ವಾವಲಂಬನೆ ಎಂದು ಅವರು ಆಗಾಗ ಹೇಳುತ್ತಿದ್ದರು.

"ವೈಡಬ್ಲ್ಯೂಸಿಎ ವಿಶೇಷ ಕೊಡುಗೆಯನ್ನು ನೀಡಬೇಕೆಂದಾದರೆ ಇತರರು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಕ್ಷೇತ್ರಗಳಲ್ಲಿ ನಮ್ಮ ಮಾನವ ಹಾಗೂ ಭೌತಿಕ ಸಂಪನ್ಮೂಲಗಳನ್ನು ವ್ಯರ್ಥಗೊಳಿಸಬಾರದು" ಎಂಬ ಸ್ಪಷ್ಟ ಗ್ರಹಿಕೆಯೂ ಕೌರ್ ಅವರಿಗೆ ಇದ್ದಿತು. ವೈಡಬ್ಲ್ಯೂಸಿಎ ರಾಷ್ಟ್ರೀಯ ಸಮ್ಮೇಳನದಲ್ಲಿ ಮಾಡಿದ ಸ್ವಾಗತ ಭಾಷಣವೊಂದರಲ್ಲಿ "ಬಾಲಕಿಯರ ಮತ್ತು ಮಹಿಳೆಯರ ತುರ್ತು ಅವಶ್ಯಕತೆಗಳನ್ನು ಈಡೇರಿಸುವ ನಿಟ್ಟಿನಲ್ಲಿ ಸುರಕ್ಷಿತ, ಕಡಿಮೆ ವೆಚ್ಚದ ಮತ್ತು ಆರಾಮದಾಯಕ ವಸತಿ, ಆರೋಗ್ಯಪೂರ್ಣ ಮನೋರಂಜನೆ ಮತ್ತು ಉದ್ಯೋಗವಕಾಶಗಳನ್ನು ಒದಗಿಸುವುದೇ ತುರ್ತು ಅಗತ್ಯವಾಗಿದೆ" ಎಂದು ಪ್ರತಿಪಾದಿಸಿದ್ದರು. 1963ರಲ್ಲೇ ಅವರು ಉದ್ಯೋಗಸ್ಥ ಮಹಿಳೆಯರ ವಸತಿ ನಿಲಯಗಳನ್ನು ಪ್ರಾರಂಭಿಸುವ ಅಗತ್ಯವನ್ನು ಒತ್ತಿ ಹೇಳಿದ್ದರು. ವೈಡಬ್ಲ್ಯೂಸಿಎದ ಅಂದಿನ ಪ್ರಧಾನ ಕಾರ್ಯದರ್ಶಿ ಶ್ರೀಮತಿ ಇವಿಖಾನ್ ಅವರಿಗೆ 1963ರ ಏಪ್ರಿಲ್ 4 ರಂದು ಬರೆದ ಪತ್ರದಲ್ಲಿ " ಈ ಕ್ಷೇತ್ರಕ್ಕೆ ಅಗತ್ಯವಾಗಿರುವ ವಿಶೇಷ ಗಮನವನ್ನು ನೀವಲ್ಲದೆ ಸದ್ಯ ಬೇರಾರೂ ನೀಡಲು ಸಾಧ್ಯವಿಲ್ಲ ಎಂದು ನಾನು ಭಾವಿಸಿದ್ದೇನೆ. ಈಗ ನಮಗೆ ಸೇವಾಭಾವ ತುಂಬಿರುವ ತರಬೇತಿ ಪಡೆದ ಕಾರ್ಯಕರ್ತರು ಮತ್ತು ಯುವತಿಯರು

ಬೇಕಾಗಿದ್ದಾರೆ. ದುಡಿಯುವ ಮಹಿಳೆಯರು ವಿಶ್ವವಿದ್ಯಾಲಯ ಅಥವಾ ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ವಸತಿ ನಿಲಯಗಳ ನಿರ್ಮಾಣಕ್ಕೆ ನಾವೀಗ ಆದ್ಯತೆ ನೀಡಬೇಕಾಗುತ್ತದೆ" ಎಂದು ಬರೆದಿದ್ದರು.

ಬಡವರ ಮಕ್ಕಳಿಗಾಗಿ ನರ್ಸರಿ ಶಾಲೆಗಳು ಮತ್ತು ದುಡಿಯುವ ಮಹಿಳೆಯರ ಹಸುಗೂಸುಗಳಿಗಾಗಿ ಶಿಶು ಸಂರಕ್ಷಣಾ ಕೇಂದ್ರಗಳನ್ನು ಪ್ರಾರಂಭಿಸುವ ತುರ್ತು ಅಗತ್ಯವನ್ನು ಅವರು ಮನಗಂಡಿದ್ದರು. ಅಶಿಕ್ಷಿತ ಮಹಿಳೆಯರಿಗೆ ವಯಸ್ಕ ಶಿಕ್ಷಣದ ಅವಕಾಶ ಕಲ್ಪಿಸಿಕೊಡುವ ಮೂಲಕ ಅವರು ಕಾಲದೂಷಿತ ಸಂಪ್ರದಾಯಗಳಾದ ಬಾಲ್ಯ ವಿವಾಹ, ವರದಕ್ಷಿಣೆ ಪದ್ಧತಿ ಮತ್ತು ಹೆಣ್ಣು ಮಗುವಿನ ಬಗ್ಗೆ ಅಲಕ್ಷ ತೋರುವ ಪ್ರವೃತ್ತಿಯನ್ನು ಕೈಬಿಟ್ಟು ಸಮಾಜ ಸುಧಾರಣೆಗಳನ್ನು ಒಪ್ಪಿಕೊಳ್ಳುವಂತೆ ಮಾಡಲು ಸಾಧ್ಯ ಎಂದು ಅವರು ಬಲವಾಗಿ ನಂಬಿದ್ದರು. ತೋರಿಕೆಗೆ ಚಿಕ್ಕದಾಗಿದ್ದರೂ ವಾಸ್ತವದಲ್ಲಿ ಅತ್ಯಂತ ಉಪಯುಕ್ತವಾಗಿರುವ ಮೇಲೆ ಹೇಳಿದ ಸೇವೆಗಳು "ರಾಷ್ಟ್ರೀಯ ಜೀವನ ಮತ್ತು ಪ್ರಗತಿಗೆ" ಅಗಾಧವಾದ ಕೊಡುಗೆಯನ್ನು ನೀಡಬಲ್ಲವು ಎಂದು ಅವರು ಈ ಸಮ್ಮೇಳನದಲ್ಲಿ ಮಾಡಿದ ಭಾಷಣದಲ್ಲಿ ಹೇಳಿದ್ದರು. ವಿಭಿನ್ನ ಅನುಭವಗಳು, ದೃಷ್ಟಿ ಕೋನಗಳನ್ನು ಹೊಂದಿದ್ದರೂ ಮಾನಸಿಕವಾಗಿ ನಾವೆಲ್ಲರೂ ಒಂದೇ. ನಾವು ಅಭಿಪ್ರಾಯ ಭೇದಗಳನ್ನು ವಿಸ್ತರಿಸದೆ ಒಬ್ಬರ ಅಹವಾಲನ್ನು ಇನ್ನೊಬ್ಬರು ಪ್ರೀತಿಯಿಂದ ಆಲಿಸಬೇಕು. ನಮ್ಮೊಳಗಿನ ಭಿನ್ನಾಬಿಪ್ರಾಯಗಳನ್ನು ನಾವು ಎಂದೂ ಮುಚ್ಚಿಹಾಕಬಾರದು. ಬದಲಾಗಿ ಪರಸ್ಪರರ ಅಹವಾಲುಗಳನ್ನು ಆಲಿಸಬೇಕು. ಕ್ರಿಶ್ಚಿಯನ್ ಎಂದು ಕರೆದುಕೊಳ್ಳುವ ನಮ್ಮ ಸಮುದಾಯದ ನೈಜ ಸಂಕೇತವಾಗಿರುವ ಏಕತೆಯ ಸ್ಫೂರ್ತಿಯನ್ನು ನಾವಿಂದು ಹೊಸದಾಗಿ ಕಂಡುಕೊಳ್ಳಬೇಕಾಗಿದೆ. 'ಕ್ರಿಶ್ಚಿಯನ್ ' ಎಂಬುದು ಒಂದು ನಿರ್ಧಿಷ್ಟ ಸಮುದಾಯದ ಸಾಂಸ್ಥಿಕ ಹೆಸರಾಗಿರುವುದಕ್ಕಿಂತ ಹೆಚ್ಚಾಗಿ ಅದು ಈ ಸಮುದಾಯ ಹೊಂದಿರುವ ಮೌಲ್ಯ ಮತ್ತು ಗುಣಧರ್ಮವಾಗಿದೆ ಎಂದು ಅಮೃತ ಕೌರ್ ಅವರು ಪರಿಗಣಿಸಿದ್ದರು.

ದೇಶದ ಬಗೆಗೆ, ಜನತೆಯ ಬಗ್ಗೆ ಹಾಗೂ 1915ರಲ್ಲಿ ದಕ್ಷಿಣ ಆಫ್ರಿಕಾದಿಂದ ಮರಳಿದ ನಂತರದಲ್ಲಿ ಮಹಾತ್ಮಾ ಗಾಂಧೀಜಿಯವರು ಹೂಡಿದ ಅಹಿಂಸಾ ಚಳವಳಿಯ ಬಗೆಗೆ ಅಮೃತ್ ಕೌರ್ ಅವರು ಬೆಳೆಯಿಸಿಕೊಂಡಿದ್ದ ಪ್ರೀತಿ ಹಾಗೂ ಕಾಳಜಿಯನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತ ಎಂದು ನಾನು ಭಾವಿಸುತ್ತೇನೆ."ಭಾರತ ವಿದೇಶಿ ಅಧಿಪತ್ಯದಿಂದ ಬಿಡುಗಡೆ ಹೊಂದುವುದನ್ನು ನೋಡುವ ನನ್ನ ಅದಮ್ಯ ಅಭಿಲಾಷೆಗೆ ಗೋಖಲೆಯವರೇ ಕಾರಣ" ಎಂದು ಅವರು ಒಂದು ಕಡೆ ಹೇಳಿಕೊಂಡಿದ್ದಾರೆ. ಗಾಂಧೀಜಿಯವರು ಭಾರತಕ್ಕೆ ಬಂದಾಗ ದೇಶದಲ್ಲಿ ಕ್ರಾಂತಿಕಾರಿ ಬದಲಾವಣೆಗಳು ಸಂಭವಿಸುವುವು ಎಂದು ಗೋಖಲೆಯವರು ಹೇಳಿದ್ದನ್ನು ಆಕೆ ಕೇಳಿದ್ದರು. ನನಗೆ ಇನ್ನು ಆ ಮಾತುಗಳು ನೆನಪಿವೆ. ಹಾಗೆ ಗಾಂಧೀಜಿಯವರು ಭಾರತಕ್ಕೆ ಬಂದಾಗ ಕೌರ್ ಅವರ ಸಂಪರ್ಕಕ್ಕೆ ತವಕಿಸಿದರು. ಮುಂಬಯಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಮೊತ್ತ ಮೊದಲ ಬಾರಿಗೆ ಅವರಿಗೆ ಗಾಂಧೀಜಿಯವರ ದರ್ಶನವಾಯಿತು. ಆ ಮೊದಲು ಭೇಟಿಯ ಬಗ್ಗೆ ನೆನಪಿಸಿಕೊಳ್ಳುತ್ತಾ:"ಅವರು ಅಗಾಧ ಶಕ್ತಿಯ ಪ್ರತೀಕದಂತಿದ್ದರು. ಸೌಜನ್ಯ ಹಾಗು ನಮ್ರತೆಯ ಸಾಕಾರ ಮೂರ್ತಿಯಂತಿದ್ದರು. ಅದು ನನ್ನ ಹೃದಯವನ್ನು ಗಾಢವಾಗಿ ತಟ್ಟಿತು. ಆ ಕ್ಷಣದಿಂದಲೇ ಗಾಂಧೀಜಿಯವರಲ್ಲೂ, ಅವರ ಧ್ಯೇಯಆದರ್ಶನಗಳಲ್ಲೂ ನನ್ನ ನಿಷ್ಠೆ ಆರಂಭವಾಯಿತು" ಎಂದಿದ್ದಾರೆ.

ಪರಿಸ್ಥಿತಿ ಹದಗೆಟ್ಟಿತು. ಹೆಚ್ಚಿನ ಶೈಕ್ಷಣಿಕ ಅವಕಾಶಗಳಿಗಾಗಿ, ಸಮಾನ ಪ್ರಾತಿನಿಧ್ಯಕ್ಕಾಗಿ, ಹೆಚ್ಚುವರಿ ವೈದ್ಯಕೀಯ ಕಾಲೇಜುಗಳಿಗಾಗಿ ಮಹಿಳೆಯರು ನಡೆಸುತ್ತಿದ್ದ ಹೋರಾಟ ಅದೇ ರೀತಿ ಆಗಿನ ಬ್ರಿಟಿಷ್ ಪ್ರಭುತ್ವದ ದುಂಡಾವೃತ್ತಿಯ ವಿರುದ್ಧ ಮತ್ತು ನ್ಯಾಯಬಾಹಿರ ಕ್ರಮಗಳ ವಿರುದ್ಧ, ನ್ಯಾಯ, ಸಮಾನತೆ ವ್ಯಕ್ತಿ ಘನತೆಯ ಸಲುವಾಗಿ ಗಾಂಧೀಜಿಯವರ ನೇತೃತ್ವದಲ್ಲಿ ಸಾಗಿದ್ದ ಹೋರಾಟ ವಿದೇಶಿ ಆಳ್ವಿಕೆ ವಿರುದ್ದ ಗಾಂಧೀಜಿ ಕೈಗೊಂಡ ಅಹಿಂಸಾ ಚಳವಳಿ ಸತ್ಯಾಗ್ರಹಗಳು ಎಲ್ಲವೂ- ಅಮೃತ್ ಕೌರ್ ಅವರನ್ನು ಗಾಢವಾಗಿ ಕಲ ಕಿದವು. 1919ರಲ್ಲಿ ಅವರು ಗಾಂಧೀಜಿಯವರನ್ನು ಖುದ್ದಾಗಿ ಭೇಟಿಯಾದರು. “ಮುಂದೊಂದು ದಿನ ಭಾರತದ ಭವಿಷ್ಯವನ್ನೇ ಬದಲಾಯಿಸಬಲ್ಲ ಮಹಾನುಭಾವರೊಬ್ಬರನ್ನು ಕಾಣಲಿರುವೆ” ಎಂದು ಗೋಪಾಲ ಕೃಷ್ಣ ಗೋಖಲೆಯವರು ಆಡಿದ ಮಾತುಗಳು ಆಗ ಅವರಿಗೆ ನೆನಪಿಗೆ ಬಂದವು. “ಭಾರತದ ಆ ಭಾಗ್ಯವಿಧಾತ ಮಹಾತ್ಮ ಗಾಂಧೀಜಿಯಲ್ಲದೆ ಬೇರಾರಾಗಿರಲು ಸಾಧ್ಯ?” ಮುಂದಿನ ದಿನಗಳಲ್ಲಿ ಆಕೆಯ ಜೀವನದಲ್ಲಿ ಹಲವು ತಿರುವುಗಳಿಗೆ ಅವರೇ ಕಾರಣಕರ್ತರಾದರು. ರೌಲಟ್ ಕಾಯಿದೆ ಚಳವಳಿಯ ಅವಧಿಯಲ್ಲಿ ಅಮೃತಸರದಲ್ಲಿದ್ದ ರಾಜಾ ಹರ್ನಾಮ್ ಸಿಂಗ್ ಅವರ ನಿವಾಸ ತೀವ್ರ ಹಾನಿಗೆ ಒಳಗಾಯಿತು. ಈ ಘಟನೆಯಿಂದ ಕೌರ್ ವಿಚಲಿತರಾಗಲಿಲ್ಲ. ಬದಲಿಗೆ ಗಾಂಧೀಜಿಯವರ ಬಗ್ಗೆ ಇದ್ದ ಗೌರವ, ಆದರಗಳು ಇಮ್ಮಡಿಸಿ ಅವರು ಗಾಂಧೀಜಿಯವರು ಕೈಗೊಂಡ ಕಾರ್ಯಗಳಲ್ಲಿ ಕೈ ಜೋಡಿಸಲು ನಿರ್ಧರಿಸಿದರು. ಆಗ ಅವರು ತಮ್ಮ ತಂದೆಯ ಮನೆಯಲ್ಲಿ ರಾಜಮನೆತನದ ಎಲ್ಲಾ ಭೋಗ ಭಾಗ್ಯಗಳ ಜೀವನವನ್ನು ನಡೆಸುತ್ತಿದ್ದರು. ಆದೇನಿದ್ದರೂ ಗಾಂಧೀಜಿಯವರೊಂದಿಗಿನ ಮೊದಲ ಭೇಟಿಯಲ್ಲಿ ತಮ್ಮ ಎಲ್ಲಾ ವಿದೇಶಿ ವಸ್ತುಗಳು ಮತ್ತು ಶೃಂಗಾರ ಸಾಧನಗಳನ್ನು ಸುಡುವುದರ ಔಚಿತ್ಯ ಮತ್ತು ಖಾದಿಯನ್ನು ಧರಿಸುವುದರ ಮಹತ್ವ ಸರಿಯಾಗಿ ಕೌರ್‌ಗೆ ಮನವರಿಕೆಯಾಗಿರಲಿಲ್ಲ. ಮೊದಮೊದಲಲ್ಲಿ ಅವರು ಗಾಂಧೀಜಿಯವರ ಚಳವಳಿಗೆ ದೇಣಿಗೆ ನೀಡಿ ಬೆಂಬಲ ನೀಡುವುದಲ್ಲೇ ತೃಪ್ತಿ ಪಡುತ್ತಿದ್ದರು. ಗಾಂಧೀಜಿಯವರ ಮಾತುಗಳಲ್ಲಿ ಎಂಥವರನ್ನು ಪರಿವರ್ತಿಸುವ ಅಗಾಧ ಶಕ್ತಿ ಇತ್ತು. ಕೌರ್ ಅವರು ಕೂಡಾ ಅದಕ್ಕೆ ಒಳಗಾಗದೇ ಇರಲಿಲ್ಲ. ಆಕೆ ಖಾದಿ ನೂಲುವುದನ್ನು ಆರಂಭಿಸಿದರು. ಆದರೆ ತಾನು ಖಾದಿ ಧರಿಸುತ್ತಿರಲಿಲ್ಲ. ಜಲಂಧರ್‌ನಲ್ಲಿ ಖಾದಿ ನೂಲುವವರ ಸಂಘವೊಂದನ್ನು ಅವರು ಪುನರ್ ಸಂಘಟಿಸಿದರು. ಜೊತೆಯಲ್ಲೇ ಶಿಮ್ಲಾದಲ್ಲಿ ಹರಿಜನೋದ್ಧಾರದ ಕಾರ್ಯವನ್ನು ಪ್ರಾರಂಭಿಸಿದರು. ಯೂರೋಪ್ ಸೇರಿದಂತೆ ವಿದೇಶಿ ಪ್ರವಾಸಗಳನ್ನು ಕೈಗೊಂಡರು. ಅಖಿಲ ಭಾರತ ಮಹಿಳೆಯರ ಸಮ್ಮೇಳನದ ಸ್ಥಾಪಕ ಸದಸ್ಯೆಯಾದರು. 1930ರಲ್ಲಿ ಆಕೆಯ ತಂದೆ ನಿಧನರಾದರು. ಈಗ ತಮ್ಮೆಲ್ಲ ಸಮಯವನ್ನು ಗಾಂಧೀಜಿಯವರ ಕೆಲಗಳಿಗಾಗಿ ಮತ್ತು ಸ್ವಾತಂತ್ರ್ಯ ಚಳವಳಿಗಾಗಿ ಗಾಂಧೀಜಿ ಪ್ರಾರಂಭಿಸಿದ ಹೋರಾಟಕ್ಕೆ ಮೀಸಲಿಡಲು ತೀರ್ಮಾನಿಸಿದರು. 1933ರಲ್ಲಿ ಅವರು ಅಖಿಲ ಭಾರತ ಮಹಿಳಾ ಸಮ್ಮೇಳನದ ಅಧ್ಯಕ್ಷೆಯಾದರು.

1934ರಲ್ಲಿ ಅಮೃತ್ ಕೌರ್ ಅವರು ಗಾಂಧೀಜಿಯವರ ಸಬರಮತಿ ಆಶ್ರಮವನ್ನು ಸೇರಿದರು ಮತ್ತು ತಮ್ಮನ್ನು ದೇಶ ಸೇವೆಗಾಗಿ ಸಮರ್ಪಿಸಿಕೊಂಡರು. ಗಾಂಧೀಜಿಯವರ ಚಳವಳಿಯಲ್ಲಿ ಮತ್ತು ಆಶ್ರಮದ ಕೆಲಸ- ಪರಿಪೂರ್ಣ ಸ್ವಸ್ಥ ಸಾಮಾಜಿಕ ಜೀವನ ವಿಧಾನದ ಒಂದು ಮಾದರಿಯಾಗಿದೆ ಎಂಬುದನ್ನು ಅವರು ಕಂಡುಕೊಂಡರು. ವಾರ್ಧಾ ಮತ್ತು ಸೇವಾಗ್ರಾಮ

ಆಶ್ರಮಗಳಲ್ಲಿ ಇದ್ದರು. ಅವರು ದೇಶದ ಗ್ರಾಮಾಂತರ ಪ್ರದೇಶಗಳಲ್ಲಿ ಸಂಚರಿಸಿ ರೈತರಿಗೆ ಆರೋಗ್ಯವಂತ ಜೀವನವನ್ನು ಹೀಗೆ ನಡೆಸಬೇಕೆಂಬ ಬಗ್ಗೆ ಅರಿವು ಮೂಡಿಸುವ ಕಾರ್ಯಭಾರವನ್ನು ಕೈಗೆತ್ತಿಕೊಂಡರು. ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಿಯರ ಶಾಲೆಗಳನ್ನು ತೆರೆಯುವ ಚಳವಳಿ ಕೈಗೊಂಡರು. ಬಾಲ್ಯವಿವಾಹ ಮತ್ತು ಬಹುಪತ್ನಿತ್ವ ನಿರ್ಮೂಲನೆಗಾಗಿ ಹೋರಾಡಿದರು. ಈ ಕಾರ್ಯದಲ್ಲೂ ಆಕೆಗೆ ಗಾಂಧೀಜಿಯವರೇ ಸ್ಫೂರ್ತಿಯಾಗಿದ್ದರು. ಕೌರ್ ಅವರು ದೇಶದ ಜನರ ಬಗ್ಗೆ ಮತ್ತು ದೇಶದ ಬಗ್ಗೆ ಹೆಚ್ಚೆಚ್ಚು ತಿಳಿದುಕೊಳ್ಳಬೇಕು ಎಂಬುದು ಗಾಂಧೀಜಿಯವರ ಇಂಗಿತವಾಗಿತ್ತು. ಈ ವಿಷಯದಲ್ಲಿ ನಾನು ಜನರೊಂದಿಗೆ ಮಾತನಾಡಿದ್ದೇನೆ. ಮತ್ತು ಜನರು ಅವರನ್ನು ಹೇಗೆ ಆದರಿಸುತ್ತಿದ್ದರು ಎಂಬುದನ್ನು ತಿಳಿದಿದ್ದೇನೆ. ಶಿಮ್ಲಾದ ಅರಮನೆಯಲ್ಲಿ ರಾಜಕುಮಾರಿಯಂತೆ ಬದುಕು ಸಾಗಿಸಿದ್ದ ಕೌರ್ ಆಶ್ರಮದಲ್ಲಿ ಎಲ್ಲ ಆಶ್ರಮವಾಸಿಗಳಂತಿದ್ದು ಎರಡು ಜೀವನ ಶೈಲಿಗಳನ್ನು ಸಮಚಿತ್ತದಿಂದ ಸ್ವೀಕರಿಸಿದರು. ಆಶ್ರಮದಲ್ಲಿ ಸರಳ ಜೀವನವನ್ನು ರೂಢಿಸಿಕೊಂಡಿದ್ದು ಮಾತ್ರವಲ್ಲ ಅಗತ್ಯ ಬಿದ್ದಾಗ ಎಲ್ಲರಂತೆ ಶುಚಿತ್ವ ಮತ್ತು ನೈರ್ಮಲ್ಯ ಪಾಲನೆಯ ಕೆಲಸವನ್ನು ಅದೇ ಶ್ರದ್ಧೆಯಿಂದ ಮಾಡಿದರು. ಸಂದರ್ಭ ಬಂದಾಗಲೆಲ್ಲಾ ಎಲ್ಲಾ ಆಶ್ರಮವಾಸಿಗಳಂತೆ ತಮ್ಮ ಪಾಲಿಗೆ ಬಂದ ಯಾವುದೇ ಕೆಲಸ ಮಾಡಲು ಅವರು ಹಿಂಜರಿಯಲಿಲ್ಲ. ಅಲ್ಲಿ ಖಾದಿ ಧರಿಸಲು ಆರಂಭಿಸಿದ ಅವರು ಮತ್ತೆಂದೂ ಅದನ್ನು ಬಿಡಲಿಲ್ಲ. ಜೀವನದ ಬಗೆಗೆ ಅವರಿಗಿದ್ದ ಸ್ಪಷ್ಟ ಪರಿಕಲ್ಪನೆ ಮತ್ತು ಔಚಿತ್ಯ ಪ್ರಜ್ಞೆಗಳು ಅವರ ಜೀವನ ಶೈಲಿಯಲ್ಲಿ ಈ ಸಾಮರಸ್ಯ ಸಾಧಿಸಲು ಅವರನ್ನು ಶಕ್ತರನ್ನಾಗಿ ಮಾಡಿದವು. ಅವರ ಮೇಲಾಗಿದ್ದ ಗಾಂಧೀಜಿಯವರ ಗಾಢ ಪ್ರಭಾವವು ಅದಕ್ಕೆ ಕಾರಣವಾಗಿತ್ತು. ಸಾಮಾಜಿಕ ಕಾರ್ಯಭಾರಗಳಲ್ಲಿ ಅವರು ಹೊಂದಿದ್ದ ಪರಿಕಲ್ಪನೆ ಮತ್ತು ಔಚಿತ್ಯ ಪ್ರಜ್ಞೆ ಅವರ ಕೆಲಸ ಕಾರ್ಯಗಳಲ್ಲಿ ಇದನ್ನು ನಾವು ಕಾಣಬಹುದು. ಜನರ ಆರೋಗ್ಯ ಸಂರಕ್ಷಣೆಯ ಕಾರ್ಯದಲ್ಲಿ, ಮಕ್ಕಳು ಮತ್ತು ಮಹಿಳಾ ಕಲ್ಯಾಣಕ್ಕೆ ಸಂಬಂಧಿಸಿದ ಅವರ ಕಾರ್ಯಕ್ರಮಗಳಲ್ಲಿ ಮತ್ತು ಮಹಿಳಾ ಚಳವಳಿಯಲ್ಲಿ, ವೈಡಬ್ಲ್ಯುಸಿಎ ಆಂದೋಳನದಲ್ಲಿ ನಾವು ಅದನ್ನು ಗುರುತಿಸಬಹುದು. ಎಲ್ಲಾ ಸಂದರ್ಭಗಳಲ್ಲೂ ಇತರರ ಸಮಸ್ಯೆಗಳಿಗೆ ಸ್ಪಂದಿಸುವ ಮತ್ತು ಮಾನವೀಯ ನೆಲೆಯಲ್ಲಿ ಅವರ ಸೇವೆಗೆ ಮುಂದಾಗುತ್ತಿದ್ದ ಗಾಂಧೀಜಿಯವರು ಅಮೃತ ಕೌರ್ ಅವರಲ್ಲಿ ಸಮೃದ್ಧವಾಗಿರುವ ಮಾನವೀಯ ಗುಣಗಳನ್ನು ಕಂಡುಕೊಂಡರು. ಹೀಗಾಗಿ ಗಾಂಧೀಜಿಯವರಿಗೆ ಬೇರೆಯವರೆಲ್ಲರಗಿಂತ ಕೌರ್ ಹೆಚ್ಚು ಆಪ್ತರಾದರು. ಅವರು ಗಾಂಧೀಜಿಯುವರ ಇಂಗ್ಲಿಷ್ ಭಾಷಾ ಕಾರ್ಯದರ್ಶಿಯಾದರು. ಅವರ ಇಂಗ್ಲಿಷ್ ಭಾಷೆ ಚೆನ್ನಾಗಿತ್ತು. ಅವರ ನಡವಳಿಕೆಯಲ್ಲಿ ಆತ್ಮೀಯತೆ ಮತ್ತು ಚಿಂತನೆಯಲ್ಲಿ ಗಾಢವಾದ ಸಾಮಾಜಿಕ ಪ್ರಜ್ಞೆ ಇತ್ತು. ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡುವುದರಲ್ಲಿ ಅವರಿಗಿದ್ದ ಆಸಕ್ತಿ ಗಾಂಧೀಜಿಯವರ ಸಂದೇಶಗಳನ್ನು ಹರಡುವುದರಲ್ಲಿ ಹೆಚ್ಚು ಸಹಕಾರಿಯಾಯಿತು. ಅವರಲ್ಲಿದ್ದ ಪ್ರಾಮಾಣಿಕತೆ ಮತ್ತು ಸತ್ಯಸಂಧತೆ ಅವರ ಧ್ಯೇಯ ಸಾಧನೆಗೆ ನೆರವಾಯಿತು. ಗಾಂಧೀಜಿಯವರ ಪತ್ರ ವ್ಯವಹಾರ ಮತ್ತು ಬರವಣಿಗೆ ಕೆಲಸ ಬೆಟ್ಟದಷ್ಟಿದ್ದರೂ ಅಮೃತ್ ಕೌರ್ ಅದನ್ನು ಲೀಲಾಜಾಲವಾಗಿ ನಿರ್ವಹಿಸುತ್ತಿದ್ದರು. ಕೌರ್ ಅವರ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ಗಾಂಧೀಜಿಯವರು ಆಗಾಗ ಶಿಮ್ಲಾಕ್ಕೆ ಹೋಗಿ ವಿಶ್ರಾಂತಿ ಪಡೆದು ಉಲ್ಲಸಿತರಾಗಿ ಮರಳಿ ಬರುವಂತೆ ಸಲಹೆ ಮಾಡುತ್ತಿದ್ದರು. ಗಾಂಧೀಜಿಯವರು ಎಷ್ಟು ಪ್ರೇಮಾರ್ದ್ರ ವ್ಯಕ್ತಿತ್ವದವರೋ ಅಷ್ಟೇ ಶಿಸ್ತಿನವರಾಗಿದ್ದರು. ಪರಿಶ್ರಮ ಪಡುತ್ತಿದ್ದವರನ್ನು ಬಹಳ ಮೆಚ್ಚಿಕೊಳ್ಳುತ್ತಿದರು. ತಮ್ಮ ಕೆಲಸ ಕಾರ್ಯಗಳಲ್ಲಿ ಶ್ರದ್ಧೆ ಮತ್ತು ಪರಿಪೂರ್ಣತೆಯನ್ನು ಗಾಂಧೀಜಿಯವರಿಂದಲೇ ಕಲಿತಿದ್ದರು

ಕೌರ್ ಓರ್ವ ಆದರ್ಶಪ್ರಾಯ ಕಾರ್ಯದರ್ಶಿಯಾಗಿ ಶಕ್ತಿಮೀರಿ ಶ್ರಮಿಸಿದರು. ಅದು ವಾಸ್ತವವಾಗಿ ಕೌರ್ ಅವರ ಪಾಲಿಗೆ ರಚನಾತ್ಮಕ ತರಬೇತಿಯಾಯಿತೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಮುಂದೆ ಅವರ ಆರೋಗ್ಯ ರಚಿವೆಯಾಗಿ ಸಮರ್ಪಕ ರೀತಿಯಲ್ಲಿ ಕಾರ್ಯ ನಿರ್ವಹಿಸಲೂ ಅದು ಅವರಿಗೆ ಸಹಕಾರಿಯಾಯಿತು. ಸಂಸತ್ತಿನ ಉಭಯ ಸದನಗಳಲ್ಲಿ ಸಮರ್ಥವಾಗಿ ಕಾರ್ಯ ನಿರ್ವಹಿಸಲು, ವಿವಿಧ ಸಂಘಟನೆಗಳ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವ ಸಂದರ್ಭಗಳಲ್ಲಿ ಅದು ಅವರಿಗೆ ನೆರವಾಯಿತು. ಗಾಂಧೀಜಿಯವರ ಆಶ್ರಮದಲ್ಲಿ ಅವರ ಕಲಿಕೆ ಮತ್ತು ಅನುಭವ ಅವರ ವ್ಯಕ್ತಿತ್ವಕ್ಕೆ ಮತ್ತು ಚಾರಿತ್ರ್ಯಕ್ಕೆ ಒಂದು ಹೊಸ ಆಯಾಮವನ್ನೇ ನೀಡಿತು. ಹೀಗೆ ಅವರು ಜಗತ್ತಿನಾದ್ಯಂತ ಎಲ್ಲ ಜನ ಸಮುದಾಯದವರಿಗೂ ಸೇರಿದವರಾದರು. ಜಗತ್ತಿನ ಯಾವುದೇ ಮೂಲೆಯಲ್ಲಿ ಜನ ಕಲ್ಯಾಣ ಮತ್ತು ಅಭ್ಯುದಯಕ್ಕೆ ಏನನ್ನೇ ಮಾಡಬೇಕೆಂದಾದರೂ ಅವರು ಅದೇ ತಮ್ಮ ಪರಮ ಧ್ಯೇಯವೆಂಬಂತೆ ಕಾರ್ಯಮಗ್ನರಾಗುತ್ತಿದ್ದರು. ಹೀಗೆ ಅವರು ಸಹ ಕಾರ್ಯಕರ್ತರು ಮತ್ತು ಒಡನಾಡಿಗಳ ಪಾಲಿಗೆ ಏಕಕಾಲಕ್ಕೆ ಸ್ಫೂರ್ತಿಯಾಗಿದ್ದರು. ಡಂಭಾಚಾರ ಹಾಗೂ ಆಷಾಡಭೂತಿತನವನ್ನು ಅವರು ಎಂದೂ ಸಹಿಸುತ್ತಿರಲಿಲ್ಲ. ಇದರೊಂದಿಗೆ ಸ್ವಯಂ ಪ್ರೇರಣೆಯಿಂದ ತ್ಯಾಗ ಮಾಡುವ ಪ್ರವೃತ್ತಿಯೂ ಅವರಲ್ಲಿ ಬೆಳೆಯಿತು. ಅದು ಅವರಿಗೆ ಅಗಾಧವಾದ ನೈತಿಕ ಬಲವನ್ನು ನೀಡಿತು. ಈ ಅಂಶ ಗಾಂಧೀಜಿಯವರ ಮೆಚ್ಚುಗೆ ಗಳಿಸಿತು. ಸೇವೆಯ ಎಲ್ಲಾ ಕ್ಷೇತ್ರಗಳಲ್ಲೂ ಅವರು ಬಾಪು ಜೊತೆಗೂಡಿ ಯಾವ ಅಂಜಿಕೆಯೂ ಇಲ್ಲದೆ ಕಾರ್ಯ ನಿರ್ವಹಿಸಿದರು.

1942ರಲ್ಲಿ ಕ್ವಿಟ್ ಇಂಡಿಯಾ ಚಳವಳಿ ತೀವ್ರವಾಗಿದ್ದ ದಿನಗಳಲ್ಲಿ ಅಮೃತ್ ಕೌರ್ ಬಂಧನಕ್ಕೆ ಒಳಗಾದರು. ಸೆರೆಮನೆಯಲ್ಲಿ ಊಹಿಸಲೂ ಅಸಾಧ್ಯವಾದ ಸಂಕಷ್ಟಗಳನ್ನು ಅವರು ಅನುಭವಿಸಿದರು. ಆನಂತರ ಗಾಬರಿಗೊಂಡ ಬ್ರಿಟಿಷ್ ಸರ್ಕಾರ ಅವರನ್ನು ಶಿಮ್ಲಾದಲ್ಲಿ ಮೂರು ವರ್ಷಗಳ ಕಾಲ ಗೃಹ ಬಂಧನದಲ್ಲಿ ಇರಿಸಿತು. ಈ ಹಿಂದೆಯೇ ಹೇಳಿರುವಂತೆ ಅಮೃತ್ ಕೌರ್ ಅವರು ಸ್ವತಂತ್ರ ಭಾರತದ ಮೊದಲು ಆರೋಗ್ಯ ಸಚಿವರಾದರು. ಇಂತಹ ಸಂದರ್ಭದಲ್ಲಿ ಗಾಂಧೀಜಿಯವರು ಅವರಿಗೆ ಪತ್ರವೊಂದನ್ನು ಬರೆದು"ಇಡೀ ಭಾರತೀಯ ಕುಟುಂಬ ಈಗ ನಿನ್ನ ಕೈಯಲ್ಲಿದೆ. ನೀನು ಏನು ಮಾಡುವೆ ಎಂಬುದನ್ನು ನೋಡಲು ನಾನು ಕಾಯುತ್ತಿದ್ದೇನೆ. ನೀನು ಏನು ಮಾಡುತ್ತಿದ್ದಿ ಎಂಬುದನ್ನು ಗಮನ ಇಟ್ಟು ನೊಡುತ್ತಿದ್ದೇನೆ. ನಿನಗಾಗಿ ಪ್ರಾರ್ಥಿಸುತ್ತಿದ್ದೇನೆ". 1948ರಲ್ಲಿ ಗಾಂಧೀಜಿಯವರು ಹಂತಕನ ಗುಂಡಿಗೆ ಬಲಿಯಾದಾಗ ಕೌರ್ ತಲ್ಲಣಗೊಂಡರು. ತಮ್ಮ ನೆಚ್ಚಿನ ನಾಯಕ ಮತ್ತು ನೆಚ್ಚಿನ ಸ್ನೇಹಿತನನ್ನು ಮಾತ್ರವೇ ಅಲ್ಲ, ತಮ್ಮ ಬದುಕಿನ ಆಧಾರವನ್ನೇ ಕಳೆದುಕೊಂಡರು.

ಗಾಂಧೀಜಿಯವರ ಬೋಧನೆಗಳನ್ನು ಕೌರ್ ಎಷ್ಟರಮಟ್ಟಿಗೆ ಅಂತರ್ಗತ ಮಾಡಿಕೊಂಡಿದ್ದರು ಎಂಬುದನ್ನು ಮತ್ತು ಮಾನವ ಸಮುದಾಯದ ಬಗ್ಗೆ ಅವರು ಎಂತಹ ಅಗಾಧ ಕಾಳಜಿಯನ್ನು ಹೊಂದಿದ್ದರು ಎಂಬುದನ್ನು ಇಲ್ಲಿ ಹೇಳದೆ ಹೋದರೆ ಅವರ ಕುರಿತು ವಿವರಣೆ ಪರಿಪೂರ್ಣವಾಗದು. ಜಾಗತಿಕ ಸ್ಥಿತಿಗತಿಗಳ ಬಗ್ಗೆ ಅವರಲ್ಲಿದ್ದ ಕಾಳಜಿ ರೆಡ್‌ಕ್ರಾಸ್, ವಿಶ್ವ ಆರೋಗ್ಯ ಸಂಸ್ಥೆ ಮತ್ತು ವೈಡಬ್ಲ್ಯುಸಿಎಯೊಂದಿಗಿನ ಅವರ ಕೆಲಸಕಾರ್ಯಗಳ ಮೂಲಕ ಮಾನವೀಯ ಅಂತಾರಾಷ್ಟ್ರೀಯ ಸೇವೆ ನೆಲೆಗೆ ಹೊಸ ಆಯಾಮ ಕೊಟ್ಟರು. ಪ್ರತಿಯೊಬ್ಬರನ್ನು ಸೋದರ ಭಾವದಿಂದ ಕಾಣುವುದೇ ಅಂತಾರಾಷ್ಟ್ರೀಯತೆಯ ತತ್ವ ಎಂಬುದನ್ನು ಅವರು ಗ್ರಹಿಸಿದ್ದರು.

ಸದಾ ಕಾರ್ಯಶೀಲರಾಗಿದ್ದ ಕೌರ್ ಅವರು ಭಾರತದ ಸ್ವಾತಂತ್ರ್ಯದವರೆಗಿನ ನೆನಪುಗಳನ್ನು ಬರೆದರಲ್ಲದೆ 1947ರಲ್ಲಿ ಆಗಸ್ಟ್‌ವರೆಗಿನ ತಮ್ಮ ಆತ್ಮಚರಿತ್ರೆಯನ್ನು ಬರೆದಿಟರು. ಇದಾದ ನಂತರ ದೆಹಲಿಯಲ್ಲಿ ಅವರಿಗೆ ಏನನ್ನು ಬರೆಯಲು ಸಮಯ ಸಿಗಲಿಲ್ಲ ಶಿಮ್ಲಾದಲ್ಲಿ ಕುಳಿತು ಎಂದಾದರೂ ಬರೆಯಬಹುದು ಎಂದು ಅವರು ಅಂದುಕೊಂಡಿದ್ದರು. ಆದರೆ ಹಾಗಾಗಲಿಲ್ಲ. 1964ರ ಫೆಬ್ರವರಿ 6 ರಂದು ಬೆಳಗಿನ ಜಾವ ಅವರು ಹೃದಯಘಾತದಿಂದ ನಿಧನ ಹೊಂದಿದರು. "ಬದುಕೇ ಅವರನ್ನು ಮುಕ್ತಗೊಳಿಸಿದಂತೆ ಅವರು ನಮ್ಮನ್ನು ಬಿಟ್ಟು ನಡೆದೇ ಹೋದರು" ಕೌರ್ ಅವರು ಹೊಂದಿದ್ದ ಅಗಾಧ ಜ್ಞಾನ ಮತ್ತು ಶ್ರೀಮಂತ ಅನುಭವಗಳ ಹಿನ್ನಲೆಯಲ್ಲಿ ಅವರು ಯಾವುದೇ ಪುಸ್ತಕ ಅಥವಾ ಪತ್ರಗಳನ್ನು ಬಿಟ್ಟು ಹೋಗಿದ್ದಾರೆಯೇ ಎಂದು ನಾನು ದೂರವಾಣಿ ಮೂಲಕ ಜಯ ತಂಡಾನಿ ಅವರನ್ನು ವಿಚಾರಿಸಿದೆ. ಆಗ ಆಕೆ (ನವದೆಹಲಿಯಲ್ಲಿ 1990, ಅಕ್ಟೋಬರ್ 17 ರಂದು) ರಾಜಕುಮಾರಿ ಅಮೃತ ಕೌರ್ ಅವರ ಸ್ಥಳೀಯ ಸರ್ಕಾರ ಕುರಿತು ಪ್ರಬಂಧ ಹಾಗೂ ಆರೋಗ್ಯ ಕುರಿತ ವಿವಿಧ ಕರಪತ್ರಗಳು ಇರುವುದಾಗಿ ಹೇಳಿದರು. ಅಪೂರ್ಣವಾಗಿರುವ ಅವರ ಕೆಲಸ ಕಾರ್ಯಗಳು ಹಾಗೂ ಅವರ ಆತ್ಮಚರಿತ್ರೆ ಪೂರ್ಣಗೊಳ್ಳುವುದೆಂಬ ಆಶಯವನ್ನು ಅವರು ಆಗ ವ್ಯಕ್ತಪಡಿಸಿದರು. ಅಂತಹ ಕೃತಿಯು ಮುಂಬರುವ ಪೀಳಿಗೆಯವರಿಗೆ ಅಗಾಧ ಮಹತ್ವದ ಒಂದು ದಾಖಲೆಯಾಗಿ ಉಳಿಯುವುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇದು ಸಮಕಾಲಿನ ಭಾರತೀಯ ತರುಣ ಜನಾಂಗದ ಜೀವನವನ್ನು ಶ್ರೀಮಂತಗೊಳಿಸುವುದಲ್ಲದೆ ಅವರ ಜೀವನ ಮತ್ತು ಸೇವಾಕ್ಷೇತ್ರವನ್ನು ವಿಸ್ತರಿಸುವಂತೆಯೂ ಮಾಡುತ್ತದೆ.

ರಾಜಕುಮಾರಿ ಕೌರ್ ರಿನೆಸ್ಯಾಂಡ್ ಪ್ರಶಸ್ತಿ ಪಡೆದವರಲ್ಲಿ ಒಬ್ಬರು. ಅದು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸೇವೆ ಸಲ್ಲಿಸಿದವರಿಗೆ ಅದರಲ್ಲೂ ವಿಶೇಷವಾಗಿ ಆರೋಗ್ಯ ಕ್ಷೇತ್ರದಲ್ಲಿ ಅಸಾಧಾರಣ ಸೇವೆ ಸಲ್ಲಿಸಿದವರಿಗೆ ಸಲ್ಲುವ ಪ್ರಶಸ್ತಿಯಾಗಿದೆ. ಅವರ ಸೇವೆಯನ್ನು ಗುರುತಿಸಿ ಬ್ರಿಟಿಷ್ ಸರ್ಕಾರ ಈ ಪ್ರಶಸ್ತಿಯನ್ನು ಪ್ರಕಟಿಸಿದಾಗ ರಾಜಕುಮಾರಿ ಅದನ್ನು ನಯವಾಗಿ ನಿರಾಕರಿಸಿದರು.

ರಾಜಕುಮಾರಿ ಅಮೃತ್ ಕೌರ್ 1962ರ ಏಪ್ರಿಲ್ 23 ರಂದು ಯೂನಿಸ್ ಅಂಚೇಸ್ ಅವರಿಗೆ ಬರೆದ ಪತ್ರವೊಂದನ್ನು ನಾನು ಇಲ್ಲಿ ಉದ್ಧರಿಸಲೇಬೇಕಾಗಿದೆ:-

"ನನ್ನ ಮನೆಯಲ್ಲಿ ದಾನಕ್ಕಾಗಿಯೇ ಒಂದು ಪೆಟ್ಟಿಗೆ ಇದೆ. ಪ್ರತಿ ವರ್ಷದ ಕೊನೆಯಲ್ಲಿ ನಾನು ಅದನ್ನು ತೆರೆಯುತ್ತೇನೆ. ಇದರ ದಾನಿಗಳು ಬಹುತೇಕ ನನ್ನ ಮನೆಯಲ್ಲಿ ಕೆಲಸ ಮಾಡುವ ಸಿಬ್ಬಂದಿಯವರೇ ಆಗಿದ್ದು, ಪ್ರತಿತಿಂಗಳು ಸಂಬಳದ ದಿನ ತಮ್ಮ ಪುಟ್ಟ ಕಾಣಿಕೆಯನ್ನು ಈ ಪೆಟ್ಟಿಗೆಯಲ್ಲಿ ಹಾಕುತ್ತಾರೆ. ಕಳೆದ 35 ವರ್ಷಗಳಿಂದ ನಾನು ಪಾಲಿಸಿಕೊಂಡು ಬಂದಿರುವ ಪರಿಪಾಠದಂತೆ ಪ್ರತಿ ಸಲ ಓರ್ವ ಬಿಕ್ಷುಕನನ್ನು ನೋಡಿದಾಗಲೆಲ್ಲ ತಲಾ 25 ಪೈಸೆಯಂತೆ ಈ ಪೆಟ್ಟಿಗೆಯಲ್ಲಿ ಹಾಕುತ್ತಾ ಬಂದಿದ್ದೇನೆ. ನಾನು ಗಾಂಧೀಜಿಯವರೊಂದಿಗೆ ಇದ್ದಾಗ ಕೈಗೊಂಡ ಪ್ರತಿಜ್ಞೆ ಇದು."ಯಾವ ಭಿಕ್ಷುಕನಿಗೂ ಬಿಕ್ಷೆ ಹಾಕಬೇಡ ಬದಲಿಗೆ ಅವರಿಗೆ ಕೊಡಲು ಯೋಚಿಸಿದ ಹಣವನ್ನು ಪೆಟ್ಟಿಗೆಯಲ್ಲಿ ಹಾಕಿಡು" ಈ ವರ್ಷ ನನ್ನ ಪೆಟ್ಟಿಗೆಯಲ್ಲಿ 70 ರೂಪಾಯಿ ಸಂಗ್ರಹವಾಗಿದ್ದವು. ಅವುಗಳಲ್ಲಿ 35 ರೂಪಾಯಿಗಳನ್ನು ರಾಷ್ಟ್ರೀಯ ಕಟ್ಟಡ ನಿಧಿಗೂ, ಉಳಿದ

35 ರೂಪಾಯಿಗಳನ್ನು ಇನ್ನೊಂದು ಕಟ್ಟಡದ ನಿಧಿಗೂ ನೀಡಿದೆ. ಈ ಕೊಡುಗೆ ಸಮುದ್ರದ ಒಂದು ಹನಿಯಾದರೂ ನನ್ನ ಹಾರ್ದಿಕ ಹಾರೈಕೆಯನ್ನು ಒಳಗೊಂಡಿದೆ."

ಈ ಪತ್ರವು ಬಹಳ ಅರ್ಥಪೂರ್ಣವಾದುದು. ಇದು ಕೌರ್ ಅವರ ನಿಷ್ಠೆ, ಪ್ರಾಮಾಣಿಕತೆ, ಧ್ಯೈರ್ಯ, ಪ್ರಗತಿಪರ ಮನೋಧರ್ಮ, ನ್ಯಾಯಪರತೆಯ ಸಂಕೇತವಾಗಿದೆ. ಇವಿಖಾನ್ ಅವರನ್ನು ನಾನು 1990ರ ನವೆಂಬರ್ 16 ರಂದು ನವದೆಹಲಿಯಲ್ಲಿ ಸಂದರ್ಶಿಸಿದಾಗ ಅವರು ಹೇಳಿದ ಮಾತಿನ ಸಾರಾಂಶವಿದು. ನಾವು ಎಷ್ಟು ಹಣ ಕೊಡುತ್ತೇವೆ ಎಂಬುದಕ್ಕಿಂತ ಹಣ ಕೊಡಬೇಕು ಎನ್ನುವ ಮನೋಭಾವ ದೊಡ್ಡದು. ಎಂಬುದು ಇದರ ಅಂತರಾರ್ಥ. ಅವರು ಮುಂದಾದ ಎಲ್ಲಾ ಕೆಲಸ ಕಾರ್ಯಗಳಲ್ಲೂ ಅತ್ಯಂತ ಉದಾರಿಯಾಗಿದ್ದರು. ಅದರ ಜೀವನ ಮತ್ತು ತಮ್ಮ ಒಡನಾಡಿಗಳ ಹಿತ ಸಾಧನೆಗಾಗಿ ಅವರು ಮಾಡಿದ ಕಾರ್ಯ ನನ್ನ ಚಿಂತನೆ ಮತ್ತು ಗ್ರಹಿಕೆಗೆ ಹೊಸ ಆಯಾಮವನ್ನೇ ಕಲ್ಪಿಸಿತು. ಜನತೆಯ ಭವಿಷ್ಯದ ಬಗ್ಗೆ, ಅವರ ಯೋಗಕ್ಷೇಮ ಮತ್ತು ಅಭ್ಯುದಯದ ಬಗ್ಗೆ ಅವರ ವಿಶೇಷ ಕಾಳಜಿ ಹೊಂದಿದ್ದರು. ಭಾರತದಲ್ಲಿ ಮಾತ್ರವಲ್ಲ ಜಗತ್ತಿನ ಎಲ್ಲೆಡೆ ತಮ್ಮ ಜನತೆಯ ನ್ಯಾಯಬದ್ಧ ಬೇಡಿಕೆಗಳನ್ನು ಈಡೇರಿಸಲು ಅಗತ್ಯವಾಗಿರುವ ನ್ಯಾಯ ಸಮ್ಮತ ವ್ಯವಸ್ಥೆ ಸ್ಥಾಪನೆಯ ವಿಷಯದಲ್ಲಿ ಅವರ ನಿಷ್ಠೆ ಅನನ್ಯವಾಗಿತ್ತು ಮತ್ತು ಅಸಂದಿಗ್ಧವಾಗಿತ್ತು.

## ಅಧ್ಯಾಯ-11

## ಸ್ಮರಣೆಯಲ್ಲಿ

*ಇವಿ ಖಾನ್

"ಬಿರುಗಾಳಿ ಬೀಸಿದಾಗ ಒಂದು ಆಶ್ರಮದ ತಾಣದಂತೆ, ಚಂಡಮಾರುತ ಎದ್ದಾಗ ರಕ್ಷಣೆಯ ನೆಲೆಯಂತೆ, ನೀರಿಲ್ಲದ ಮರುಭೂಮಿಯಲ್ಲಿ ನದಿಯಂತೆ, ಬೆಂಗಾಡಿನಲ್ಲಿ ನೆರಳು ನೀಡುವ ಬಂಡೆಯಂತೆ ಇದ್ದವಳು".

ರಾಜಕಮಾರಿ ಅಮೃತ ಕೌರ್ ಅವರನ್ನು ನೆನೆದಾಗಲೆಲ್ಲಾ ಬೈಬಲ್‌ನ ಈ ವರ್ಣನೆ ನನ್ನ ನೆನಪಿಗೆ ಬರುತ್ತದೆ. ಎಲ್ಲರಿಗೂ ಆಶ್ರಯ ನೀಡುವ ಹೃದಯವಂತಿಕೆ .ಎಲ್ಲರ ಅಭಿಪ್ರಾಯಗಳಿಗೆ ಅವಕಾಶವಿರುವ ಮನೋವೈಶಾಲ್ಯ, ಎಲ್ಲರ ವಿಚಾರಗಳನ್ನು ನಿರ್ವಿಕಾರ ಚಿತ್ತದಿಂದ ಗ್ರಹಿಸುವ ಪ್ರಬುದ್ಧತೆ ಅವರಲ್ಲಿತ್ತು. ನಿಜವಾಗಿಯೂ ಅವರ ಹೃದಯದಲ್ಲಿ ಎಲ್ಲದಕ್ಕೂ ಅವಕಾಶವಿತ್ತು. ಎಲ್ಲರ ದುಃಖ ದುಮ್ಮಾನಗಳನ್ನು ಅರ್ಥಮಾಡಿಕೊಂಡು, ಯಾರೊಬ್ಬರಿಗೂ ನೋವಾಗದಂತೆ ವ್ಯವಹರಿಸುವ ಚಾತುರ್ಯ ಅವರಲ್ಲಿತ್ತು. ಅವರು ಎಲ್ಲರ ಹಿತಚಿಂತನೆಯನ್ನು ತಮ್ಮದೇ ಕೆಲಸ ಎಂಬಂತೆ ಮಾಡುತ್ತಿದ್ದರು. ಎಲ್ಲರಲ್ಲೂ ಅದೇ ಭಾವನೆ ಮೂಡಿಸುತ್ತಿದ್ದರು. ಅವರ ಕಾರ್ಯಕ್ಷೇತ್ರ ವೈವಿಧ್ಯಮಯವಾಗಿದ್ದರೂ ಯಾವುದರಲ್ಲೂ ತಾದಾತ್ಮ್ಯಕ್ಕೆ ಕೊರತೆ ಇರಲಿಲ್ಲ.

ಒಂದು ಕ್ಷಣವೂ ಬಿಡುವಿಲ್ಲದ ವ್ಯಕ್ತಿಗಳಲ್ಲಿ ಅವರು ಒಬ್ಬರಾಗಿದ್ದರು. ಆದರೆ ಯಾರು ಬೇಕಾಗಿದ್ದರೂ ಅವರನ್ನು ಸುಲಭವಾಗಿ ನೋಡಿ ತಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳಬಹುದಿತ್ತು. ಅವರು ಹೊಂದಿದ್ದ ಹಲವಾರು ಹೊಣೆಗಾರಿಕೆಗಳ ಅಗತ್ಯ ಮತ್ತು ಒತ್ತಡಗಳ ನಡುವೆಯೂ ಯಾರಾದರೂ ಅವರ ಬಳಿ ಸಮಸ್ಯೆಯನ್ನು ತೆಗೆದುಕೊಂಡು ಹೋದರೆ ಅಚ್ಚರಿ ಹುಟ್ಟಿಸುವ ರೀತಿಯಲ್ಲಿ ಸಾವಧಾನವಾಗಿ ಕುಳಿತು ಎಲ್ಲವನ್ನು ಆಲಿಸುತ್ತಿದ್ದರು.

ರಾಜಕುಮಾರಿ ಅವರು ನಿಧಿ ಸಂಗ್ರಹಿಸುವುದಲ್ಲಿ ಎತ್ತಿದ ಕೈ. ಅವರು ಬೆಂಬಲಿಸಿದ ಧ್ಯೇಯಗಳಲ್ಲಿ ಅವರಿಗೆ ಎಂತಹ ವಿಶ್ವಾಸವಿತ್ತೋ, ಅಷ್ಟೇ ನಂಬಿಕೆಯನ್ನು ತಾವು ಯೋಚಿಸುತ್ತಿದ್ದ ವ್ಯಕ್ತಿಗಳಲ್ಲೂ ಇಡುತ್ತಿದ್ದರು. ಅದೇ ರೀತಿ ಅವರ ಮನವಿಗೆ ಓಗೊಟ್ಟು ದೇಣಿಗೆ ನೀಡುತ್ತಿದ್ದವರಿಗೂ ನಂಬಿಕೆ ತಾನಾಗಿ ಬಲಗೊಳ್ಳುತ್ತಿತ್ತು.

ಯಾವುದೇ ಒಂದು ದೇಣಿಗೆಯ ಪ್ರಮಾಣ ಅವರಿಗೆ ಮುಖ್ಯವಾಗುತ್ತಿರಲಿಲ್ಲ. ರಾಜ ಕುಮಾರಿ ಕೌರ್ ಅವರು ತಮ್ಮ ಮನೆಗೆಲಸದವರಿಂದಲೂ ವಂತಿಗೆ ಸಂಗ್ರಹಿಸುತ್ತಿದ್ದರು. ಚರ್ಚ್‌ಗಳಲ್ಲಿರುವ ಕಾಣಿಕೆಯ ಡಬ್ಬಿಗಳ ಮಾದರಿಯಲ್ಲಿ ಅವರು ಮನೆಯ ಪಡಸಾಲೆಯಲ್ಲಿನ ಮೇಜೊಂದರಲ್ಲಿ ನೀಲಗಿರಿಯ ಎಲೆ ಗೊಂಚಲಿಟ್ಟು ಸಿಂಗರಿಸಿದ ಹೂದಾನಿ, ಅದರ ಬಳಿಯಲ್ಲಿ ಹಿತ್ತಾಳೆಯ ಪಾತ್ರೆ ಇರುತ್ತಿತ್ತು. ಅವರ ಮನೆಗೆ ಬರುವವರು ಸ್ವಯಂ ಪ್ರೇರಣೆಯಿಂದ ಆ ಪಾತ್ರೆಗೆ ಹಣ ಹಾಕಬಹುದಿತ್ತು. ಅವರ ಮನೆಯ ನೌಕರರೂ ಇದಕ್ಕೆ ಹಣ ಹಾಕುತ್ತಿದ್ದರು.

---

*ಶ್ರೀಮತಿ ಇವಿಖಾನ್ ಭಾರತದ ವೈಡಬ್ಲ್ಯುಸಿಎ ಪ್ರಧಾನ ಕಾರ್ಯದರ್ಶಿ

ವೈಡಬ್ಲ್ಯುಸಿಎಗೆ ಹಣ ಸಂಗ್ರಹಿಸಲು ಅವರು 'ಫ್ರೆಂಡ್ಸ್ ಆಫ್ ದಿ ವೈಡಬ್ಲ್ಯುಸಿಎ'ಯೋಜನೆ ರೂಪಿಸಿದರು. ಈ ವಂತಿಗೆ ಬಹಳ ಕಡಿಮೆ ಮೊತ್ತದಲ್ಲಿರುತ್ತಿತ್ತು. ಆದರೆ ದಿನಗಳು ಉರುಳಿದಂತೆ ಅದರ ಪ್ರಮಾಣ ಹೆಚ್ಚುತ್ತಿತ್ತು. ಈ ಯೋಜನೆಗೆ ಹಣ ನೀಡಿದವರ ಹೆಸರು ಮತ್ತು ವಿಳಾಸಗಳ ಯಾದಿ ಸಿದ್ಧಪಡಿಸಿ ವೈಡಬ್ಲ್ಯುಸಿಎಗೆ ಕಳುಹಿಸಿ ಕೊಡುತ್ತಿದ್ದರು. ಹಣ ಬಂದ ಕೂಡಲೇ ಸಂಬಂಧಪಟ್ಟವರಿಗೆ ರಸೀದಿ ಕಳುಹಿಸಿಕೊಡುವ ವಿಷಯದಲ್ಲಿ ಮತ್ತು ಪತ್ರ ಬರೆದು ಕೃತಜ್ಞತೆ ಸೂಚಿಸುವದರಲ್ಲಿ ಅವರು ತುಂಬಾ ಕರಾರುವಕ್ಕಾಗಿದ್ದರು.

ಒಂದು ಬಾರಿ ಯಾವುದೋ ಕೆಲಸಕ್ಕಾಗಿ ಅವರ ಬಳಿ ಹೋದ ಸಂದರ್ಭ ನೆನಪಿಗೆ ಬರುತ್ತದೆ. ಅಂದು ತೀವ್ರ ಕಾರ್ಯಭಾರದ ಒತ್ತಡದಲ್ಲಿದ್ದರು. ನಾನು ನನ್ನ ಕೆಲಸ ಮುಗಿಯುತ್ತಿದ್ದಂತೆಯೇ ಅವಸರವಸರವಾಗಿ ಹೊರಡುವುದರಲ್ಲಿದ್ದೆ. ಅವರು ನನ್ನನ್ನು ಹಿಂದಕ್ಕೆ ಕರೆದು ಒಂದು ಲಕೋಟೆಯನ್ನು ಇಟ್ಟರು. ಅದು ಫ್ರೆಂಡ್ ಆಫ್ ದಿ ವೈಡಬ್ಲ್ಯುಸಿಎ ಯೋಜನೆಗೆ ಬಂದ ವಂತಿಕೆ ಇರಬೇಕೆಂದು ಭಾವಿಸಿ ಅದನ್ನು ತೆಗೆದುಕೊಂಡೆ. ತೆರೆದು ನೋಡಿದರೆ ಅದು  ಐವತ್ತು ಸಾವಿರ ರೂಪಾಯಿಗಳ ಚೆಕ್ ಆಗಿತ್ತು. ಅವರದೇ ದೇಣಿಗೆಯಾಗಿತ್ತು. ಅದು ಈ ಸಂಸ್ಥೆಗೆ ಮೂಲನಿಧಿ ಸ್ಥಾಪಿಸಬೇಕು ಎಂಬುದು ನನ್ನ ಬಹಳ ದಿನಗಳ ಆಸೆಯಾಗಿತ್ತು. ಇದರಿಂದ ಬರುವ ಬಡ್ಡಿ ಹಣವನ್ನು ಸಂಸ್ಥೆಯ ಚಟುವಟಿಕೆಗಳಿಗೆ ಬಳಸಿಕೊಳ್ಳಬಹುದು ಎಂಬ ವಿವರಣೆ ಕೊಟ್ಟರು. "ಈ ಕೊಡುಗೆಯಿಂದ ನೀವು ಮೂಲ ನಿಧಿಯನ್ನು ಸ್ಥಾಪಿಸಬಹುದು" ಎಂದು ಅವರೂ ಹೇಳಿದರು. ಅವರ ದೃಷ್ಟಿಯಲ್ಲಿ ಕೊಡುಗೆ ಸಣ್ಣದಿರಲಿ, ದೊಡ್ಡದಿರಲಿ ಅದಕ್ಕೆ ಮಹತ್ವ ಒಂದೇ.

ರಾಜಕುಮಾರಿ ಅಮೃತ್ ಕೌರ್ ಅವರು ದೇಶದ ಉದ್ದಗಲಗಳಲ್ಲಿ ಅನೇಕ ಶಿಲಾನ್ಯಾಸಗಳನ್ನು ಮಾಡಿದ್ದಾರೆ. ಇಂದು ಅವು ಇಟ್ಟಿಗೆ ಮತ್ತು ಗಾರೆಯಿಂದ ಕೂಡಿದ ಸ್ಮಾರಕಗಳಾಗಿ ಮಾತ್ರ ಉಳಿದಿಲ್ಲ. ಹಲವಾರು ಸಂಸ್ಥೆಗಳಿಗೆ ಆಶ್ರಯ ನೀಡುವ ಬೃಹತ್ ಕೇಂದ್ರಗಳಾಗಿವೆ. ಅವುಗಳಲ್ಲಿ ಸಾವಿರಾರು ಮಹಿಳೆಯರಿಗೆ ಆಸರೆ ದೊರೆಯುತ್ತಿದ್ದೆ. ಉದ್ಯೋಗ ಲಭಿಸುತ್ತಿದೆ. ಲಕ್ಷಾಂತರ ಮಂದಿಗೆ ಅವು ಆಶಾಗೋಪುರಗಳಾಗಿವೆ. ಭರವಸೆ ಸಂಕೇತಗಳಾಗಿವೆ ಮತ್ತು ಶಿಕ್ಷಣ ಕೇಂದ್ರಗಳಾಗಿವೆ.

ಮೃದು ಮನಸ್ಸಿನ, ಹೆಚ್ಚು ಎತ್ತರವಲ್ಲದ ನಿಲುವು ಕೌರ್ ಅವರದು. ಉಡುಗೆ-ತೊಡುಗೆ ಸೇರಿದಂತೆ ಎಲ್ಲಾ ವಿಷಯಗಳಲ್ಲೂ ನಯ ನಾಜೂಕಿನವರು. ಆಕೆಯ ಸೌಂದರ್ಯ ಪ್ರಜ್ಞೆ ಸ್ವಚ್ಛತೆ ಮತ್ತು ನೈರ್ಮಲ್ಯದ ಬಗ್ಗೆ ಅಪಾರ ಕಳಕಳಿ, ನಡೆ-ನುಡಿಗಳಲ್ಲಿನ ನಯವಂತಿಕೆ  ಸಂಯಮದಿಂದ ಕೂಡಿದ ಸರಳತೆ ಅವರ ಜೀವನ ಶೈಲಿಗೆ ವಿಶಿಷ್ಟ ಮೆರಗು ನೀಡಿತ್ತು. ಸಂದರ್ಭದ ಒತ್ತಡದಲ್ಲಿ ಉದ್ವೇಗಕ್ಕೆ ಒಳಗಾಗಿ ಯಾವುದೇ ವಿಷಯವನ್ನು ಗ್ರಹಿಸದೇ ಪರಿಹಾರ ನಮ್ಮ ಬಳಿಯೇ ಇದ್ದರೂ ಅದರಿಂದ ದೂರ ಉಳಿಯುವುದು ನಮ್ಮೆಲ್ಲರ ಅನುಭವ ಆದರೆ ಕೌರ್ ಅವರು ಹಾಗಲ್ಲ.ಅವರಲ್ಲಿದ್ದ ಒಂದು ಮಹಾನ್ ಗುಣವೆಂದರೆ  ಯಾವುದೇ ಒಂದು ವಿಷಯವನ್ನು ಗಮನವಿಟ್ಟು ಆಲಿಸುವುದು ಅನಂತರ ಒಂದು ಸರಳ ಪರಿಹಾರವನ್ನು ಕಂಡು ಹಿಡಿಯುವುದು.

ನಮ್ಮ ಚಳವಳಿಯ ಶತಾಬ್ದಿ ಆಚರಣೆಯ ಯೋಜನೆಗಳನ್ನು ರೂಪಿಸುತ್ತಿದ್ದೆವು. ನಮ್ಮ ನೂರು ವರ್ಷಗಳ ಇತಿಹಾಸವನ್ನು ಹೇಗೆ ಬಿಂಬಿಸಬೇಕು ಎಂಬುದರ ಬಗ್ಗೆ ಅತ್ಯಂತ ಲವಲವಿಕೆಯ

ಚರ್ಚೆ ನಡೆಯುತ್ತಿತ್ತು. ಚಳವಳಿಗೆ ಸಂಬಂಧಿಸಿದ ದಾಖಲೆಗಳು, ಛಾಯಾಚಿತ್ರಗಳು ಹಾಗೂ ಸ್ಮೃತಿಚಿತ್ರಗಳನ್ನು ನಾವು ಪತ್ರಾಗಾರಗಳಲ್ಲಿ ತಡಕಾಡಿದೆವು. ನಮ್ಮ ಈ ಗದ್ದಲ ಮತ್ತು ಹರಟೆಯ ನಡುವೆ ರಾಜಕುಮಾರಿ ಅವರ ಮೆದುವಾದ ಧ್ವನಿ ಕೇಳಿಬಂದಿತ್ತು.

"ನಮ್ಮ ಸಂಸ್ಥೆ ಬೆಳೆಯುತ್ತಿದೆಯೇ ಅಥವಾ ಅದಕ್ಕೆ ವಯಸ್ಸಾಗುತ್ತಿದೆಯೇ? ಎಂಬ ಪ್ರಶ್ನೆಯನ್ನು ನಾವು ಎಂದಾದರೂ ಹಾಕಿಕೊಂಡಿದ್ದೇವೆಯೇ?ಎಂದು ಪ್ರಶ್ನಿಸಿದರು. "ನಾವು ಹೊಸ ಸವಾಲುಗಳನ್ನು ಎದುರಿಸುವ ರೀತಿಯಲ್ಲಿ ಬೆಳೆಯುತ್ತಿದೇವೆಯೇ? ಸಮುದಾಯದ ಅಗತ್ಯಗಳಿಗೆ ತಕ್ಕಂತೆ ಹೊಣೆಗಾರಿಕೆಯ ಪ್ರಜ್ಞೆಯನ್ನು ಬೆಳೆಯಿಸಿಕೊಂಡು ಬದುಕಲು ಕಲಿಯುತ್ತಿದ್ದೇವೆಯೇ? ಯುವ ಜನತೆ ಇಂದು ನಮ್ಮನ್ನು ಪ್ರಸ್ತುತರೆಂದು ನೋಡುತ್ತಿದ್ದಾರೆಯೇ? ಮಹಿಳೆಯರ ಹಕ್ಕುಗಳಿಗಾಗಿ ನಾವು ನಡೆಸುತ್ತಿರುವ ಹೋರಾಟ ದೃಢತೆಯಿಂದ ಕೂಡಿದೆಯೇ? ಅದು ಪರಿಣಾಮಕಾರಿಯಾಗಿದೆಯೇ? ಕಾರ್ಯ ನಿರ್ವಹಿಸಲು ರಸ್ತೆಗಿಳಿದು ಚಳವಳಿ ನಡೆಸಲು ನಾವು ಸಮರ್ಥರಾಗಿದ್ದೇವೆಯೇ?- ಅಥವಾ ಚಳವಳಿಯ ಮುಂಚೂಣಿಯಲ್ಲಿ ನಿಲ್ಲಲು ನಾವು ಸಿದ್ಧರಿದ್ದೇವೆಯೇ? ಎಂಬ ಪ್ರಶ್ನೆಗಳನ್ನು ನಾವಿಂದು ಕೇಳಿಕೊಳ್ಳಬೇಕಾಗಿದೆ" ಇವೆಲ್ಲವೂ ನಮ್ಮನ್ನು ಚಿಂತೆಗೆ ಹಚ್ಚಲು ಕೇಳಿದ ಪ್ರಶ್ನೆಗಳು ಅವರ ಸಂದೇಶವು ಸರಳವಾಗಿತ್ತು ಮತ್ತು ಸೂಚ್ಯವಾಗಿತ್ತು. "ನಮ್ಮ ಸಂಸ್ಥೆಗೆ ಎಷ್ಟು ವರ್ಷಗಳಾದವು ಎಂಬುದು ಮುಖ್ಯವಲ್ಲ. ಎಷ್ಟು ಸಾಧನೆ ಮಾಡಿತು ಎಂಬುದು ಮುಖ್ಯ" ಎಂದು ಅವರು ಹೇಳುತ್ತಿದ್ದರು. ನಾವು ರಾಜಕುಮಾರಿ ಅಮೃತ ಕೌರ್ ಅವರನ್ನು ನೆನಪಿಸಿಕೊಳ್ಳುವುದು ಅನೇಕ ಕಾರಣಗಳಿಗೆ:

ಅವರ ಅದಮ್ಯ ಚೈತನ್ಯಕ್ಕಾಗಿ, ಅವರಲ್ಲಿ ಇರುವ ಸಾತ್ವಿಕ ಶಕ್ತಿಗಾಗಿ, ಎಲ್ಲ ಕಠಿಣ ಸಂದರ್ಭಗಳಲ್ಲಿ ತಮ್ಮ ಧ್ಯೇಯವನ್ನು ಸಾಧಿಸುವ ನಿಟ್ಟಿನಲ್ಲಿ ಅವರು ತೋರುವ ತಾಳ್ಮೆ, ಸಹನೆ ಹಾಗೂ ಸತತ ಪ್ರಯತ್ನಗಳಿಗಾಗಿ. ಸೇವೆ ಮತ್ತು ತ್ಯಾಗದಲ್ಲಿ ಅವರು ತೋರುವ ಸಂತಸ ಮತ್ತು ನಿರುದ್ವೇಗಕ್ಕಾಗಿ. ರಾಜಕುಮಾರಿ ಅಮೃತ್ ಕೌರ್ ಅವರು ಎಲ್ಲ ಕಾಲಕ್ಕೂ ಸಲ್ಲುವ ಮಹಾನ್ ಮಹಿಳೆ ಮತ್ತೆ ಅಂತಹ ಮಹಾನ್ ಮಹಿಳೆಯನ್ನು ಕಾಣುವುದು ದುರ್ಲಭ.

## ಅಧ್ಯಾಯ-12

# ಅಸಾಧಾರಣ ವ್ಯಕ್ತಿತ್ವದ ರಾಜಕುಮಾರಿ ಅಮೃತ್ ಕೌರ್

*ಫುಲ್‌ರೇಣು ಗುಹ

ರಾಜಕುಮಾರಿ ಅಮೃತ್ ಕೌರ್ ಅವರನ್ನು ನಾನು ಎಲ್ಲಿ ಭೇಟಿಯಾದೆ ಎಂಬುದು ನನಗೆ ನಿಖರವಾಗಿ ನೆನಪಿಲ್ಲ. ಆದರೆ ಅವರನ್ನು ಮೊದಲ ಬಾರಿಗೆ ಕಂಡದ್ದು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಯೊಂದರಲ್ಲಿ ಎಂಬುದು ನನಗೆ ಚೆನ್ನಾಗಿ ನೆನಪಿದೆ. ಎದ್ದು ಕಾಣುವ ನಿಲುವು, ತೆಳ್ಳಗೆ ಎತ್ತರ, ಬೇಸಿಗೆ ಇರಲಿ, ಚಳಿಗಾಲವಿರಲಿ ಶುಭ್ರ ಬಿಳಿ ಉಡುಗೆ ತಲೆ ಮೇಲೆ ಸದಾ ಸೆರಗು ಹೊದ್ದುಕೊಳ್ಳುತ್ತಿದ್ದರು. ಅದು ಸ್ವಾತಂತ್ರ್ಯ ಪೂರ್ವದ ದಿನಗಳಾಗಿದ್ದವು.

1940ರ ದಶಕದ ಆರಂಭದಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನದ ಸಂದರ್ಭದಲ್ಲಿ ನನಗೆ ಅವರ ನಿಕಟ ಸಂಪರ್ಕ ಬೆಳೆಯಿತು. ಆ ದಿನಗಳಲ್ಲಿ ಅಖಿಲ ಭಾರತ ಸಮ್ಮೇಳನದ ಸ್ಥಾಯಿ ಸಮಿತಿ ಮತ್ತು ಕಾರ್ಯಕಾರಿಣಿ ಸಮಿತಿ ಸಭೆಗಳಲ್ಲಿ ಆಕೆ ನಿಯತವಾಗಿ ಭಾಗವಹಿಸುತ್ತಿದ್ದರು. ಸಂಸ್ಥೆಯ ಓರ್ವ ಸದಸ್ಯನಾಗಿ ನಾನೂ ತಪ್ಪದೆ ಆ ಸಭೆಗಳಲ್ಲಿ ಭಾಗವಹಿಸುತ್ತಿದ್ದೆ. ಬಂಗಾಳದಲ್ಲಿ ಬರಗಾಲ ಸಂಭವಿಸಿದ ನಂತರದಲ್ಲಿ ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್ ಅವರು ಎಐಡಬ್ಲ್ಯೂಸಿಯ ಅಧ್ಯಕ್ಷರಾಗಿದ್ದಾಗ ರಾಜಕುಮಾರಿ ಕೌರ್ ಅವರೊಂದಿಗೆ ಕೆಲಸ ಮಾಡುವ ಅವಕಾಶ ನನಗೆ ದೊರಕಿತ್ತು. ಬರಗಾಲದ ದಿನಗಳಲ್ಲಿ ಅವಿಭಜಿತ ಬಂಗಾಳದಲ್ಲಿ ಎಐಡಬ್ಲ್ಯೂಸಿಯ ಅನೇಕ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದವು. ಬರಗಾಲ ಪರಿಸ್ಥಿತಿಯನ್ನು ನಿಭಾಯಿಸುವ ಸಲುವಾಗಿ ಮಕ್ಕಳ ಆಶ್ರಯಕೇಂದ್ರಗಳನ್ನು ಸಂಘಟಿಸಲಾಗಿತ್ತು. ಈ ಅವಧಿಯಲ್ಲಿ ನಾವು ಎಐಡಬ್ಲ್ಯೂಸಿಯ ಕೇಂದ್ರಗಳ ಅಭಿವೃದ್ಧಿಗಾಗಿ ಅಲ್ಲಿನ ಮಕ್ಕಳ ಪುನರ್ವಸತಿ ಮತ್ತು ಶಿಕ್ಷಣಕ್ಕಾಗಿ ಆಗಾಗ ಭೇಟಿಯಾಗುತ್ತಿದ್ದೆವು.

ಕೌರ್ ಅವರು ತುಂಬಾ ಮೃದು ಸ್ವಭಾವದವರು. ಸಾಮಾನ್ಯವಾಗಿ ತೀರಾ ಮಂದ್ರಸ್ಥಾಯಿಯಲ್ಲಿ ಮಾತನಾಡುತ್ತಿದ್ದರು. ನನಗೆ ಅವರು ಚಿಕ್ಕ ವಯಸ್ಸಿನ ನವವಧುವಿನಂತೆ ಕಾಣುತ್ತಿದ್ದರು. ಆದರೆ, ಅವರಲ್ಲಿ ಏನಾದರೂ ಸಾಧಿಸುವ ಛಲವಿತ್ತು. ದೃಢತೆ ಇತ್ತು. ಬೇರೆ ಬೇರೆ ಸಮಸ್ಯೆಗಳನ್ನು ಹಾಗೂ ಅಭಿಪ್ರಾಯಗಳನ್ನು ಹೊತ್ತುಕೊಂಡು ತಮ್ಮ ಬಳಿಗೆ ಬರುತ್ತಿದ್ದವರ ಅಹವಾಲುಗಳನ್ನು ಅವರು ಸಾವಧಾನಚಿತ್ತದಿಂದ ಆಲಿಸುತ್ತಿದ್ದರು. ಆದರೆ ಯಾವುದೇ ವಿಷಯದಲ್ಲಾದರೂ ಸ್ವತಂತ್ರ ನಿಲುವು ಹೊಂದಿರುತ್ತಿದ್ದ ಅವರು ಮುಲಾಜಿಲ್ಲದೆ ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ಹೇಳುತ್ತಿದ್ದರು. ಯಾವುದೇ ನಿರ್ಧಾರ ತೆಗೆದುಕೊಳ್ಳುವಾಗಲೂ ಸ್ನೇಹಿತರ ಅಭಿಪ್ರಾಯಕ್ಕೆ ವ್ಯತಿರಿಕ್ತವಾದ ಅಭಿಪ್ರಾಯಗಳನ್ನು ಪ್ರಕಟಿಸಲು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಆದರೆ ಇದರಿಂದ ಒಡನಾಡಿಗಳೊಂದಿಗಿನ ಬಾಂಧವ್ಯಕ್ಕೆ ಎಂದೂ ಕುಂದು ಬರುತ್ತಿರಲಿಲ್ಲ. ಮಾತುಕತೆ ಮುಗಿದ ಮೇಲೆ ಎಂದಿನಂತೆ ಸ್ನೇಹದಿಂದ ವರ್ತಿಸುತ್ತಿದ್ದರು. ದಿನಾಂಕ

---

*ಶ್ರೀಮತಿ ಫುಲ್‌ರೇಣು ಗುಹ ಅವರು ಲೋಕಸಭೆಯ ಮಾಜಿ ಸದಸ್ಯೆ.

ನಿಖರವಾದ ನೆನಪಿಲ್ಲ. ಆದರೂ ಒಂದು ಸಂದರ್ಭ ನನ್ನ ಕಣ್ಣ ಮುಂದೆ ಅಚ್ಚೊತ್ತಿ ನಿಂತಿದೆ. ದೆಹಲಿಯಲ್ಲಿ ಒಂದು ಸಭೆ ನಡೆಯುತ್ತಿತ್ತು. ರಾಜಕುಮಾರಿ ಕೌರ್ ಅವರು ತಮ್ಮ ಎಂದಿನ ಶುಭ್ರ ಬಿಳಿ ಉಡುಪಿನಲ್ಲಿ, ಕೈಯಲ್ಲಿ ಟೆನಿಸ್ ರಾಕೆಟ್ ಕಿಟ್ ಹಿಡಿದುಕೊಂಡೇ ಅಲ್ಲಿಗೆ ಬಂದಿದ್ದರು.

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದ ಮೇಲೆ ರಚನೆಗೊಂಡ ಸರ್ಕಾರದಲ್ಲಿ ಅವರು ಪ್ರಥಮ ಮಹಿಳಾ ಆರೋಗ್ಯ ಸಚಿವೆಯಾದರು. ಆದರೂ ಅವರು ದೆಹಲಿಯಲ್ಲಿ ನಡೆಯುತ್ತಿದ್ದ ಎಐಡಬ್ಲ್ಯುಸಿ ಸಭೆಗಳಿಗೆ ತಪ್ಪದೇ ಹಾಜರಾಗುತ್ತಿದ್ದರು. ಆದರೆ ದೆಹಲಿಯ ಹೊರಗಡೆ ನಡೆಯುತ್ತಿದ್ದ ಸಭೆಗಳಿಗೆ ಅವರಿಗೆ ಮೊದಲಿನಂತೆ ಬರಲಾಗುತ್ತಿರಲಿಲ್ಲ.

ಸ್ವಾತಂತ್ರ್ಯ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ಮೂರು ಅಖಿಲ ಭಾರತ ಮಕ್ಕಳ ಸಂಘಟನೆಗಳು ಜತೆಗೂಡಿ 1952ರಲ್ಲಿ ಭಾರತೀಯ ಮಕ್ಕಳ ಕಲ್ಯಾಣ ಮಂಡಳಿ ರೂಪಗೊಂಡಿತು. ಇದು ರೂಪುಗೊಳ್ಳಲು ಕಾರಣಕರ್ತರಾಗಿದ್ದವರಲ್ಲಿ ಅವರೂ ಒಬ್ಬರು. ಈ ಸಂಘಟನೆಯ ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದ ಅವರು ಅದರ ಅಭಿವೃದ್ಧಿ ಸಾಧನೆಯಲ್ಲಿ ಸಕ್ರಿಯ ಆಸಕ್ತಿ ವಹಿಸುತ್ತಿದ್ದರಲ್ಲದೆ ನಿಧಿ ಸಂಗ್ರಹದಲ್ಲೂ ನೆರವಾಗುತ್ತಿದ್ದರು. ಭಾರತೀಯ ಮಕ್ಕಳ ಕಲ್ಯಾಣ ಮಂಡಳಿಯ ಸದಸ್ಯರಲ್ಲಿ ನಾನೂ ಒಬ್ಬಳಾಗಿದ್ದೆ. ಮಕ್ಕಳ ಬಗ್ಗೆ, ಅದರಲ್ಲೂ ವಿಶೇಷವಾಗಿ ಅವರ ಆರೋಗ್ಯದ ಬಗ್ಗೆ ಹೆಚ್ಚಿನ ಕಾಳಜಿ ವಹಿಸುವಂತೆ ಕಾರ್ಯಕರ್ತರಿಗೆ ಅವರು ಸದಾ ಸಲಹೆ ನೀಡುತ್ತಿದ್ದರು.

ಆಕೆ ಒಳ್ಳೆಯ ಸಂಭಾಷಣಾಕಾರ್ತಿ. ಕಾರ್ಯಕರ್ತರ ಜೊತೆ ಅವರು ಮುಕ್ತವಾಗಿ, ಬಿಚ್ಚು ಮನಸ್ಸಿನಿಂದ ಮಾತನಾಡುತ್ತಿದ್ದರು. ಅವರು ತಮ್ಮ ಕಾರ್ಯಕರ್ತರಿಗೂ ಮತ್ತು ಸಹೋದ್ಯೋಗಿಗಳಿಗೂ ಉತ್ತಮ ಮಾರ್ಗದರ್ಶನ ನೀಡುತ್ತಿದ್ದರು ಮತ್ತು ಸದಾ ಉತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸುವಂತೆ ಸ್ಫೂರ್ತಿ ತುಂಬುತ್ತಿದ್ದರು. ಕೆಲಸ ಇಲ್ಲದೆ ಇದ್ದಾಗ ತಮಾಷೆ ಎಂದರೆ ಅವರಿಗೆ ಬಹಳ ಇಷ್ಟ. ಪಾರ್ಟಿಗಳಲ್ಲಿ ಔತಣ ಕೂಟಗಳಲ್ಲಿ ಅವರು ಎಲ್ಲರೊಂದಿಗೆ ಆತ್ಮೀಯವಾಗಿ, ಮುಕ್ತವಾಗಿ ವ್ಯವಹರಿಸುತ್ತಿದ್ದರು.

ಓರ್ವ ಸಂಸದೀಯ ಪಟುವಾಗಿ ಅವರು ಹೇಗೆ ಕಾರ್ಯ ನಿರ್ವಹಿಸುತ್ತಿದ್ದರೆಂಬುದನ್ನು ನೋಡುವ ಅವಕಾಶ ಎಂದೂ ನನಗೆ ಸಿಗಲಿಲ್ಲ. ಓರ್ವ ಕಾಂಗ್ರೆಸ್ ಕಾರ್ಯಕರ್ತೆಯಾಗಿ, ಸಾಮಾಜಿಕ ಕಾರ್ಯಕರ್ತೆಯಾಗಿ ಮಾತ್ರವೇ ನಾನು ಅವರನ್ನು ನೋಡಿದ್ದೇನೆ. ಸಮಾಜ ಸೇವಾ ಕ್ಷೇತ್ರದಲ್ಲಿ, ನಾನು ಅವರೊಂದಿಗೆ ಬೆರೆತು ಬಹಳಷ್ಟು ಕೆಲಸ ಮಾಡಿದ್ದೇನೆ. ಅವರ ಸ್ವಭಾವ ಸಾರ್ವಜನಿಕ ಸಭೆಗಳಲ್ಲಿ, ಸಮಾರಂಭಗಳಲ್ಲಿನ ಅವರ ನಡವಳಿಕೆಯಂತೂ ನನ್ನ ಮನಸ್ಸಿನ ಮೇಲೆ ಅಚ್ಚಳಿಯದೆ ಮುದ್ರೆಯೊಂದನ್ನು ಒತ್ತಿದೆ. ಓರ್ವ ನೇತಾರರಾಗಿ, ಓರ್ವ ಸಹೋದ್ಯೋಗಿಯಾಗಿ ಅವರ ನೆನಪು ನನ್ನಲ್ಲಿ ಚಿರಸ್ಥಾಯಿಯಾಗಿದೆ.

## ಅಧ್ಯಾಯ-13

## ರಾಜಕುಮಾರಿ ಅಮೃತ್ ಕೌರ್:ಆಕೆಯ ಜೀವನ, ಸಾಧನೆ ಮತ್ತು ಸಿದ್ಧಾಂತ

*ಕಮಲಾ ಕುಮಾರ್

ರಾಜಕುಮಾರಿ ಕೌರ್ ಅವರು ಭಾರತದ ಮಹಾನ್ ಮಹಿಳೆಯರಲ್ಲಿ ಒಬ್ಬರು. ವಿಶೇಷವಾಗಿ ಮಹಿಳೆಯರ ಸಮಸ್ಯೆಗಳ ನಿವಾರಣೆಗೆ ಶ್ರಮಿಸಿದರು. ಒಟ್ಟಾರೆಯಾಗಿ ರಾಷ್ಟ್ರ ಸೇವೆಯೇ ಅವರ ಜೀವನದ ದೀಕ್ಷೆಯಾಗಿತ್ತು. ಮಹಿಳೆಯರ ವಿಮೋಚನೆ, ಆರೋಗ್ಯ ಮತ್ತು ಕ್ರೀಡಾಕ್ಷೇತ್ರಗಳಿಗೆ ಅವರು ನೀಡಿದ ಅಸಾಧಾರಣ ಕೊಡುಗೆ ಸ್ವಾತಂತ್ರ್ಯ ಪೂರ್ವ ಭಾರತದ ಇತಿಹಾಸದ ಪುಟಗಳಲ್ಲಿ ಸ್ವರ್ಣಾಕ್ಷರಗಳಿಂದ ಬರೆದಿಡಬೇಕಾದಂತಹುದು. ಮಹಾತ್ಮಾಗಾಂಧೀಜಿಯವರ ಜೊತೆಗೆ ಕೆಲವು ವರ್ಷಗಳ ಕಾಲ ಕಾರ್ಯ ನಿರ್ವಹಿಸುವ ಅದೃಷ್ಟಶಾಲಿಯಾಗಿದ್ದ ಆಕೆ ಗಾಂಧೀಜಿಯವರ ಮಹಾನ್ ಶೋಧನೆಗಳನ್ನು ಕಾರ್ಯರೂಪಕ್ಕೆ ತರುವ ಕಾರ್ಯಕ್ರಮದಲ್ಲೂ ಸಮರ್ಥರಾದರು. ರಾಮಕೃಷ್ಣ ಪರಮ ಹಂಸ ಸಂದೇಶಗಳನ್ನು ಅವರ ಮೆಚ್ಚಿನ ಶಿಷ್ಯ ಸ್ವಾಮಿ ವಿವೇಕಾನಂದರು ಪ್ರಚುರ ಪಡಿಸಿದಂತೆ ಕೌರ್ ಗಾಂಧೀಜಿಯವರ ಸಂದೇಶಗಳನ್ನು ಪ್ರಚುರ ಪಡಿಸಿದರು.

ರಾಜಕುಮಾರಿ ಕೌರ್ ಅವರು 1889ರ ಫೆಬ್ರವರಿ 2 ರಂದು ಪಂಜಾಬ್ ರಾಜ್ಯದ ಕಪುರ್ತಲಾದ ರಾಜಮನೆತನದಲ್ಲಿ ಜನಿಸಿದರು. ಏಳು ಮಂದಿ ಸಹೋದರರಲ್ಲಿ ಅವರೊಬ್ಬರೇ ಹೆಣ್ಣುಮಗಳು. ಅವರ ತಂದೆ ಸರ್ ರಾಜಾ ಹರ್ನಾಮ್ ಸಿಂಗ್ ಕ್ರೈಸ್ತ ಮತಕ್ಕೆ ಮತಾಂತರ ಹೊಂದಿದ ಕಾರಣದಿಂದ ರಾಜ ಸಿಂಹಾಸನದ ಅಧಿಕಾರವನ್ನು ಕಳೆದುಕೊಂಡಿದ್ದರು. ಇದು ರಾಜಕುಮಾರಿ ಅವರ ಚಿಂತನೆ ಮತ್ತು ಸಾಧನೆಗಳ ಮೇಲೂ ಗಾಢವಾದ ಪ್ರಭಾವ ಬೀರಿತ್ತು. ಈ ಬಗ್ಗೆ ಅವರೇ ಒಂದು ಕಡೆ ಹೀಗೆ ಹೇಳಿದ್ದಾರೆ: "ನನ್ನನ್ನು ಅತ್ಯಂತ ಕಟ್ಟುನಿಟ್ಟಾಗಿ ಬೆಳೆಸಿದ್ದು, ಈಗ ನನಗೆ ಹೆಮ್ಮೆ ಎನಿಸುತ್ತಿದೆ. ಅದರಿಂದ ನನಗೆ ಜೀವನದಲ್ಲಿ ಶಿಸ್ತಿನ ಅವಶ್ಯಕತೆ ಏನು ಎಂಬುದು ಮನವರಿಕೆಯಾಗಿದೆ. ಸದಾ ಸತ್ಯವನ್ನೇ ಹೇಳಬೇಕು. ನಮ್ಮ ಸುಖ, ಸಂತೋಷವನ್ನು ಇತರರೊಂದಿಗೆ ಹಂಚಿಕೊಳ್ಳಬೇಕು, ಎಂದೂ ಜಗಳವಾಡಬಾರದು ಎಂದು ಮನೆಯಲ್ಲಿ ಪ್ರತಿನಿತ್ಯ ಹೇಳುತ್ತಿದ್ದರು. ಯಾರೊಡನೆಯೂ ಉದ್ಧಟತನದಿಂದ, ಒರಟಾಗಿ, ನಡೆದುಕೊಳ್ಳಬಾರದು. ಪ್ರಾಣಿಗಳ ಬಗ್ಗೆ ದಯೆ ಹಾಗು ಕರುಣೆ ತೋರಿಸುವುದು ನಮ್ಮ ಕರ್ತವ್ಯ. ಸ್ವಚ್ಛತೆ ಮತ್ತು ಕೆಲಸದಲ್ಲಿ ಅಚ್ಚುಕಟ್ಟುತನ ಅಗತ್ಯ ಎಂದು ನಮಗೆ ಹೇಳಿಕೊಡುತ್ತಿದ್ದರು. ಅವಿಧೇಯತೆ, ಅವಿನಯ ತೋರಿಸಿದಾಗ ಕಠಿಣವಾದ ಶಿಕ್ಷೆಯನ್ನು ನಮಗೆ ನೀಡುತ್ತಿದ್ದರು.

ರಾಜಕುಮಾರಿ ಅವರ ಪ್ರಾರಂಭಿಕ ಶಿಕ್ಷಣ ಇಂಗ್ಲೆಂಡಿನ ಡೋರ್‌ಸೆಟ್ ಶೈರ್‌ನಲ್ಲಿರುವ ಶೆರ್‌ಬೋರ್ನ್ ಬಾಲಕಿಯರ ಶಾಲೆಯಲ್ಲಿ ನಡೆಯಿತು. ಇಂಗ್ಲೆಂಡಿನಲ್ಲಿ ವಿದ್ಯಾರ್ಥಿಯಾಗಿದ್ದ ದೆಸೆಯಲ್ಲೇ ಅವರು ಕ್ರೀಡೆಗಳಲ್ಲಿ ಅತೀವ ಆಸಕ್ತಿ ಬೆಳೆಸಿಕೊಂಡರು. ಹಾಕಿ, ಕ್ರಿಕೆಟ್ ಮತ್ತು ಟೆನಿಸ್‌ನಲ್ಲಿ ಅವರು ವಿಶೇಷ ನೈಪುಣ್ಯ ಗಳಿಸಿಕೊಂಡಿದ್ದರು.

---

ಶ್ರೀಮತಿ ಕಮಲಾ ಕುಮಾರ್ ಪ್ರಖ್ಯಾತ ಸಾಮಾಜಿಕ ಕಾರ್ಯಕರ್ತೆ

ಶಾಲಾ ವಿದ್ಯಾಭ್ಯಾಸದ ನಂತರ ಅವರು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ಸೇರಿದರು. ಆದರೆ ಪದವಿ ಗಳಿಸದೆ ಭಾರತಕ್ಕೆ ಮರಳಿದರು. ಬ್ರಿಟನ್ನಲ್ಲಿದ್ದ ದಿನಗಳಲ್ಲಿ ಅವರು ಅಪಾರ ಅಧ್ಯಯನ ನಡೆಸಿದರು. ಯೋರೋಪಿನಾದ್ಯಂತ ಪ್ರವಾಸ ಕೈಗೊಂಡರು. ಇದೇ ವೇಳೆಗೆ ಪಿಯಾನೋ ನುಡಿಸುವುದನ್ನು ಕಲಿತರು. ಪಾಶ್ಚಾತ್ಯ ಶಾಸ್ತ್ರೀಯ ಸಂಗೀತ ಅವರಿಗೆ ಬಹಳ ಇಷ್ಟವಾಗಿತ್ತು. ಫ್ರೆಂಚ್ ಮತ್ತು ಇಟಲಿ ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡುತ್ತಿದ್ದರು. ಭಾರತಕ್ಕೆ ಮರಳುವ ವೇಳೆಗೆ ಅದೃಷ್ಟ ತನಗಾಗಿ ಏನನ್ನು ಕಾದಿರಿಸಿತ್ತು ಎಂಬುದರ ಇನಿತೂ ಮುನ್ಸೂಚನೆ ಅವರಿಗೆ ಇರಲಿಲ್ಲ. ಆಕೆ ಭಾರತಕ್ಕೆ ಮರಳಿ ಬಂದ್ದದ್ದು ಅವರ ಬದುಕಿಗೊಂದು ಮಹತ್ತರ ತಿರುವು ನೀಡಿತು. ಆಕೆ ತಮ್ಮ ರಾಜಭೋಗದ ಜೀವನವನ್ನು ಪರಿತ್ಯಜಿಸಿ ಸ್ವಾತಂತ್ರ್ಯ ಹೋರಾಟ ಮತ್ತು ಸ್ವದೇಶಿ ಚಳವಳಿಗಾಗಿ ತಮ್ಮನ್ನು ಸಮರ್ಪಿಸಿಕೊಂಡರು. "ಹದಿಹರೆಯದಲ್ಲೂ ಕೂಡಾ ನನಗೆ ವಿಲಕ್ಷಣವಾದ ತಿಳುವಳಿಕೆ ಇತ್ತು. ನನ್ನ ಬದುಕು ವಾಸ್ತವ ಪ್ರಪಂಚವಲ್ಲ ಎಂಬುದರ ಅರಿವು ನನಗಿತ್ತು. ಬ್ರಿಟನ್‌ನಿಂದ ಮರಳಿ ಬಂದಾಗ ರಸ್ತೆ ಬದಿಗಳಲ್ಲಿ ಬಿಕ್ಷುಕರನ್ನು ನೋಡಿದಾಗಲೆಲ್ಲಾ ಅಂತಹ ಭಾವನೆ ಬರುತ್ತಿತ್ತು. ಈ ಭಾವನೆ ದಿನೇ ದಿನೇ ಬಲಗೊಳ್ಳುತ್ತಾ ಹೋಯಿತು" ಎಂದು ಆಕೆ ಒಂದೆಡೆ ತಮ್ಮಲ್ಲಾದ ಬದಲಾವಣೆ ಬಗ್ಗೆ ಹೇಳಿಕೊಂಡಿದ್ದಾರೆ.

ಅವರು ಇಂತಹ ತುಮುಲದಲ್ಲಿದ್ದಾಗಲೇ ಅವರಿಗೆ ಗೋಪಾಲಕೃಷ್ಣ ಗೋಖಲೆ, ಪಂಡಿತ್ ಮದನ ಮೋಹನ ಮಾಳವೀಯ ಹಾಗೂ ಸುರೇಂದ್ರನಾಥ ಬ್ಯಾನರ್ಜಿ ಮೊದಲಾದ ಮಹಾನ್ ವ್ಯಕ್ತಿಗಳನ್ನು ಭೇಟಿಯಾಗುವ ಅವಕಾಶ ಸಿಕ್ಕಿತು. ಅವರೆಲ್ಲರೂ ಆಕೆಯ ತಂದೆ ರಾಜಾ ಹರ್ನಾಮ್ ಸಿಂಗರನ್ನು ಕಾಣಲು ಆಗಾಗ ಬರುತ್ತಿದ್ದರು. ಮಹಾನ್ ರಾಷ್ಟ್ರೀಯವಾದಿಯಾಗಿದ್ದ ಹರ್ನಾಮ್ ಸಿಂಗ್ ಅವರು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು.

ರಾಜಕುಮಾರಿ ಕೌರ್ ಅವರಿಗೆ ಆಗ 20ರ ಹರೆಯ ಸ್ಫುರದ್ರೂಪಿ ಹಾಗೂ ಸುಶಿಕ್ಷಿತೆಯಾದ ಅವರನ್ನು ವಿವಾಹವಾಗಲು ಅನೇಕರು ಹಾತೊರೆಯುತ್ತಿದ್ದರು. ಆದರೆ ಆಕೆ ಜೀವನ ಪೂರ್ತಿ ಬ್ರಹಚರ್ಯ ಸ್ವೀಕರಿಸಿ ದೇಶ ಸೇವೆಗಾಗಿಯೇ ತಮ್ಮ ಬದುಕನ್ನು ಮುಡಿಪಿಟ್ಟರು.

ಗೋಪಾಲ ಕೃಷ್ಣ ಗೋಖಲೆಯವರಿಂದ ಮಹಾತ್ಮಾ ಗಾಂದೀಜಿಯವರ ಬಗ್ಗೆ ಕೇಳಿ ತಿಳಿದುಕೊಂಡಿದ್ದ ಕೌರ್ ಗಾಂಧೀಜಿಯವರನ್ನು ಭೇಟಿಯಾಗಲು ಕಾತರಿಸಿದ್ದರು. ಮಹಾತ್ಮಾ ಗಾಂಧೀಜಿಯವರು ಜಲಂಧರ್‌ಗೆ ಬಂದು ತಮ್ಮ ಮನೆಯಲ್ಲೇ ಉಳಿದುಕೊಂಡಾಗ ಅವರಿಗೆ ಅಂತಹ ಅವಕಾಶ ದೊರೆಯಿತು. ಗಾಂಧೀಜಿ ಅವರ ಮನೆಯಲ್ಲೇ ವಿಶ್ರಾಂತಿ ಪಡೆದರು. ರಾಜಕುಮಾರಿ ಕೌರ್ ಅವರು ಗಾಂಧೀಜಿ ಅವರನ್ನು ಕಂಡು ಬಹಳಷ್ಟು ಪ್ರಭಾವಿತರಾದರು. ದುಬಾರಿ ಬೆಲೆಯ ರೇಷ್ಮೆ ವಸ್ತ್ರಧರಿಸುವುದನ್ನು ಬಿಟ್ಟು ಖಾದಿ ಧರಿಸುವಂತೆ ಗಾಂಧೀಜಿ ಹೇಳಿದಾಗ ಆಕೆ ಈ ಮಾತುಗಳಿಗೆ ಅಷ್ಟಾಗಿ ಗಮನ ಕೊಡಲಿಲ್ಲ."ಮಹಾತ್ಮಾ ಗಾಂಧೀಜಿ ಅವರಿದ್ದಲ್ಲಿ ಅವ್ಯಕ್ತವಾದ ಶಕ್ತಿ, ಪ್ರಾಮಾಣಿಕತೆ ಮತ್ತು ನಮ್ರತೆಯ ವಾತಾವರಣ ಇರುತ್ತಿತ್ತು. ಅದು ನೇರವಾಗಿ ನನ್ನ ಹೃದಯವನ್ನು ತಟ್ಟಿತು ಮತ್ತು ಆ ಕ್ಷಣದಿದಂದಲೇ ಅವರ ಬಗ್ಗೆ ಮತ್ತು ಅವರ ಜೀವನದ ವಿಧಾನದ ಬಗ್ಗೆ ನಿಷ್ಠೆ ಬೆಳೆಯ ತೊಡಗಿತು. ಸಮಯ, ಸಂದರ್ಭಗಳು ಕೂಡಿಬಾರದೇ ಇದ್ದುದ್ದರಿಂದ ಅವರ ಜೊತೆಗೂಡಲು ಬಹಳ ಸಮಯ ಹಿಡಿಯಿತು"ಎಂದು ಕೌರ್ ಒಂದೆಡೆ ಹೇಳಿದ್ದಾರೆ.

ಗಾಂಧೀಜಿಯವ ಧ್ಯೇಯ ದರ್ಶಗಳು ಮತ್ತು ಚಿಂತನೆಗಳಿಂದ ಗಾಢವಾಗಿ ಪ್ರಭಾವಿತರಾಗಿದ್ದ ರಾಜಕುಮಾರಿ ಕೌರ್ ಅವರು ಜೀವನದುದ್ದಕ್ಕೂ ಈ ಮೌಲ್ಯಗಳಿಗಾಗಿ ಶ್ರಮಿಸಿದರು. ಅವರ ವಿಶಾಲ ದೃಷ್ಟಿಕೋನ ವಿವಿಧ ಸಮಸ್ಯೆಗಳನ್ನು ಬಗೆಹರಿಸುವಲ್ಲಿನ ಅವರ ನಿಲುವು- ನಿಲುಮೆಗಳಿಗೆ ಈ ಪ್ರಭಾವವೇ ಕಾರಣವಾಗಿತ್ತು. ಅವರು ತಮ್ಮ ಭಾಷಣಗಳಲ್ಲಿ ಮಹಿಳಾ ಕಲ್ಯಾಣ, ಆರೋಗ್ಯ , ಶಿಕ್ಷಣ, ಕರಕುಶಲಕಲೆ,ಅಸ್ಪೃಶ್ಯತೆ ನಿವಾರಣೆ, ಮದ್ಯಪಾನದ ವಿರುದ್ಧದ ಹೋರಾಟಕ್ಕೆ ವಿಶೇಷ ಒತ್ತು ನೀಡುತ್ತಿದ್ದರು. ಅವರ ಚಿಂತನೆಗಳಲ್ಲಿ ಯಾವಾಗಲೂ ಸ್ಪಷ್ಟತೆ ಇರುತ್ತಿತ್ತು. ಅವರ ಭಾಷಣಗಳು ಬರಿಯ ಒಣ ಮಾತುಗಳಾಗಿರದೆ ಪರಿಣಾಮಕಾಗಿ ಬದಲಾವಣೆ ತರಬಲ್ಲ ನಿರ್ಧಿಷ್ಟ ಸಲಹೆ- ಸೂಚನೆಗಳಿಂದ ಕೂಡಿರುತ್ತಿದ್ದವು.

1930ರಲ್ಲಿ ಗಾಂಧೀಜಿಯವರ ಸಂಗಾತಿಯಾದ ನಂತರ 16 ವರ್ಷಗಳ ಕಾಲ ಅವರ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದರು. ಸೇವಾಗ್ರಾಮ ಮತ್ತು ವಾರ್ಧಾ ಆಶ್ರಮಗಳಲ್ಲಿ ಅವರು ಗಾಂಧೀಜಿಯವರೊಂದಿಗಿದ್ದರು.

ರಾಜಕುಮಾರಿಯಾಗಿ ಬೆಳೆದ ಕೌರ್ ಅವರು ಆಶ್ರಮವಾಸಿಯಾದ ಮೇಲೆ ಪರಿಸರವನ್ನು ಸ್ವಚ್ಛಗೊಳಿಸುವ, ಕಸಗುಡಿಸುವ ಹಾಗೂ ತೊಳೆಯುವ ಕೆಲಸವನ್ನು ಮಾಡುತ್ತಿದ್ದರು. "ಮಾಗುನ್‌ವಾಡಿ ಎಂಬಲ್ಲಿ ನಾನು ಗಾಂಧೀಜಿಯವರೊಂದಿಗೆ ಇರಲು ಬಂದಾಗ ಎಲ್ಲರೂ ರಾಜಕುಟುಂಬದಲ್ಲಿ ಕೈಗೊಂದು ಕಾಲಿಗೊಂದರಂತೆ ಆಳುಗಳನ್ನು ಹೊಂದಿ ರೂಢಿಯಾಗಿದ್ದ ನನಗೆ ಆಶ್ರಮವಾಸ ಹೊಂದುವುದಿಲ್ಲವೆಂದು ಭಾವಿಸಿದ್ದರು. ಅಂತಹ ಕೆಲಸಗಳನ್ನು ಮಾಡಲು ನಾನು ಸಮರ್ಥಳಲ್ಲ ಎಂದೇ ಅವರು ಗ್ರಹಿಸಿದ್ದರು. ಹಾಗಾಗಿ ಗಾಂಧೀಜಿಯವರು ಮೊದಮೊದಲು ನನಗೆ ನೆಲದ ಮೇಲೆ ಮಲಗಲು ಬಿಡುತ್ತಿರಲಿಲ್ಲ. ನಾನು ಊಟ ಮಾಡಿದ ತಟ್ಟೆಗಳನ್ನು ಸಹ ತೊಳೆಯಲು ಬಿಡುತ್ತಿರಲಿಲ್ಲ. ಆಶ್ರಮದಲ್ಲಿ ನಾನು ಯಾವ ಕೆಲಸವನ್ನಾದರೂ ಮಾಡಲು ಸಿದ್ಧಳಿದ್ದೆ. ಅದಕ್ಕೆ ಅನುಮತಿ ನೀಡುವಂತೆ ನಾನು ಅವರನ್ನು ಒತ್ತಾಯಿಸಿದೆ" ಎಂದು ರಾಜಕುಮಾರಿ ಕೌರ್ ನೆನಪಿಸಿಕೊಳ್ಳುತ್ತಾರೆ. ಗಾಂಧೀಜಿಯವರು ಪ್ರವಾಸ ಕೈಗೊಂಡಾಗಲೆಲ್ಲ ಕೌರ್ ಅವರಿಗೆ ನಿಯತವಾಗಿ ಪತ್ರಗಳನ್ನು ಬರೆಯುತ್ತಿದ್ದರು. ಗಾಂಧೀಜಿಯವರು ತಮ್ಮ ಪತ್ರಗಳಲ್ಲಿ ಆಕೆಯನ್ನು ಪ್ರೀತಿಯಿಂದ ಚಿರಂಜೀವಿ ಅಮೃತ್ ಎಂದು ಸಂಬೋಧಿಸುತ್ತಿದ್ದರು. 1946ರ ಅಕ್ಟೋಬರ್ 21 ರಂದು ಬರೆದ ಪತ್ರವೊಂದರಲ್ಲಿ "ನಿನ್ನ ಯಾತನೆಗಳನ್ನು ನೋಡಿ ನನಗೂ ಮರುಕ ಉಂಟಾಗುತ್ತದೆ. ನಿಜ ಆದರೆ, ನೀನು ಸರಿಯಾಗಿ ಅರ್ಥ ಮಾಡಿಕೊಂಡರೆ ಅದು ನಿನಗೇ ಒಳ್ಳೆಯದು ದೈಹಿಕ ಯಾತನೆಯನ್ನು ಆಧ್ಯಾತ್ಮಿಕ ಸಂತೋಷವನ್ನಾಗಿ ಪರಿವರ್ತಿಸಲು ಸಾಧ್ಯ ಮತ್ತು ಪರಿವರ್ತಿಸಲೇ ಬೇಕು. ಇದು ನಿಜವಾಗಲೂ ಅತ್ಯಂತ ಕ್ಲಿಷ್ಟವಾದ ಪ್ರಕ್ರಿಯೆ. ಆದರೆ ಮನುಷ್ಯ ನಿಜವಾಗಿಯೂ ಶ್ರೀಮಂತನಾಗಬೇಕಾದರೆ ಅಂತಹ ಪ್ರಕ್ರಿಯೊಗೆ ಒಳಗಾಗಲೇ ಬೇಕು. ನಮ್ಮ ಚಿಂತನೆಗಳನ್ನು ಸಮೃದ್ಧಗೊಳಿಸಲು ಇದು ಅತ್ಯಗತ್ಯ" ಎಂದು ಹೇಳಿದ್ದಾರೆ. 1947ರಲ್ಲಿ ಆಗಸ್ಟ್ 16 ರಂದು ಪಾಟ್ನಾದಿಂದ ಬರೆದ ಮತ್ತೊಂದು ಪತ್ರದಲ್ಲಿ ಗಾಂಧೀಜಿಯವರು "ನೀನೀಗ ಸಚಿವೆ. ನೀನು ನಿರ್ವಹಿಸುವ ಕಾರ್ಯದಲ್ಲಿ ದೃಢತೆ ಮತ್ತು ಸತ್ಯನಿಷ್ಠೆ ಬೆಳೆಸಿಕೊಳ್ಳಬೇಕು. ನಿನ್ನೊಂದಿಗೆ ಇರುವವರಿಗೆ ಸಂಘಟಿತರಾಗಿ ಕೆಲಸ ಮಾಡುವಂತೆ ಪ್ರೇರಣೆ ನೀಡಬೇಕು. ಆಗ ನಿನಗೆ ಅನೇಕ ವಿಷಯಗಳು ತಾನಾಗಿ ಮನವರಿಕೆಯಾಗುತ್ತದೆ" ಎಂದಿದ್ದಾರೆ.

ಸ್ವತಂತ್ರ ಭಾರತದ ಪ್ರಧಾನಿ ಜವಹರಲಾಲ್ ನೆಹರು ಅವರ ಪ್ರಥಮ ಸಚಿವ ಸಂಪುಟದಲ್ಲಿ ಆರೋಗ್ಯ ಖಾತೆ ಪಡೆದು ಕ್ಯಾಬಿನೆಟ್ ದರ್ಜೆಯ ಪ್ರಥಮ ಮಹಿಳಾ ಸಚಿವರೆಂಬ ಹೆಗ್ಗಳಿಕೆಗೆ ಪಾತ್ರರಾದರು. 1957ರವರೆಗೆ ಅವರು ಸಚಿವರಾಗಿದ್ದರು. ಆರೋಗ್ಯ ಖಾತೆಯ ಜೊತೆಗೆ ವಸತಿ, ಕ್ರೀಡೆ ಮತ್ತು ಸ್ಥಳೀಯ ಸ್ವಯಮಾಡಳಿತ ಖಾತೆಗಳ ಜವಾಬ್ದಾರಿಯನ್ನು ಹೊತ್ತಿದ್ದರು. 1957ರಲ್ಲಿ ಅವರು ರಾಜ್ಯಸಭಾ ಸದಸ್ಯರಾಗಿ ಆಯ್ಕೆಗೊಂಡರು.

ಆರೋಗ್ಯ ಸಚಿವರಾಗಿ ತಮ್ಮ ಖಾತೆಯ ಅನೇಕ ಕಾರ್ಯಕ್ರಮಗಳನ್ನು ಕಾರ್ಯ ರೂಪಕ್ಕೆ ತರುವಲ್ಲಿ ಅವರು ಕಾರಣಕರ್ತರಾಗಿದ್ದರು. ನವದೆಹಲಿಯಲ್ಲಿ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯ (ಎಐಐಎಂಎಸ್) ಸ್ಥಾಪನೆ ಅವರ ಮಹತ್ತರ ಕೊಡುಗೆಯಾಗಿದೆ. ತಮ್ಮ ವ್ಯಕ್ತಿಗತ ಪ್ರಭಾವವನ್ನು ಬೀರಿ ಅವರು ಜಗತ್ತಿನ ಅನೇಕ ಸಂಸ್ಥೆಗಳಿಂದ ಲಕ್ಷಾಂತರ ಡಾಲರ್ ಬೆಲೆಯ ಯಂತ್ರೋಪಕರಣಗಳನ್ನು ಮತ್ತು ಭಾರಿ ಮೊತ್ತದ ದೇಣಿಗೆಗಳನ್ನು ಸಂಗ್ರಹಿಸಿಕೊಟ್ಟ ಅಂಶ ವಿಜ್ಞಾನ ಸಂಸ್ಥೆಯ ಹೊರಗಿರುವ ಅನೇಕರಿಗೆ ತಿಳಿದಿರಲಾರದು. ಅಂತಹ ಸಂಸ್ಥೆಯೊಂದನ್ನು ಸ್ಥಾಪಿಸುವ ಸಲಹೆಯನ್ನು 1943ರಲ್ಲಿ ಬೋರೆ ಆಯೋಗದ ವರದಿ ಮುಂದಿಟ್ಟಿತ್ತಾದರೂ ಹಣಕಾಸಿನ ಕೊರತೆಯಿಂದಾಗಿ ಅದು ಕಾರ್ಯಗತಗೊಂಡಿರಲಿಲ್ಲ. ರಾಜಕುಮಾರಿ ಅವರು ಆ ಹೊಣೆಯನ್ನು ಹೊತ್ತುಕೊಂಡು ಈ ಸಂಸ್ಥೆಯನ್ನು ಪ್ರಾರಂಭಿಸುವ ಪ್ರಯತ್ನಕ್ಕೆ ಮುಂದಾದರು. ಕೌರ್ ಅವರಿಗೆ ನ್ಯೂಜಿಲ್ಯಾಂಡ್‌ನ ಪ್ರಧಾನಿಯವರ ಪರಿಚಯವಿತ್ತು. ಅವರಿಂದ ಸಂಸ್ಥೆಗಾಗಿ ಕೌರ್ ಅವರು ಒಂದು ಮಿಲಿಯನ್ ಪೌಂಡ್‌ಗಳ ದೇಣಿಗೆ ಪಡೆದುಕೊಂಡರು. 1959ರಲ್ಲಿ ನ್ಯೂಜಿಲ್ಯಾಂಡ್‌ನ ಪ್ರಧಾನ ಮಂತ್ರಿಯವರು ಭಾರತಕ್ಕೆ ಭೇಟಿ ನೀಡಿದಾಗ ಮತ್ತೆ ಇದೇ ಸಂಸ್ಥೆಗೆ ಒಂದು ಲಕ್ಷ ಪೌಂಡ್‌ಗಳ ದೇಣಿಗೆ ನೀಡಿದರು. ಕೌರ್ ಅವರ ವಿನಂತಿಯ ಮೇರೆಗೆ ನ್ಯೂಜಿಲ್ಯಾಂಡ್ ಸರ್ಕಾರವು ಈ ಸಂಸ್ಥೆಗಾಗಿ ಕಾರ್ಯಾಗಾರವೊಂದನ್ನು ನಿರ್ಮಿಸಿಕೊಡಲು ಸಮ್ಮತಿಸಿತು ಮತ್ತು 80 ಸಾವಿರ ಪೌಂಡ್‌ಗಳ ಸಾಧನೆ- ಸಲಕರಣೆಗಳನ್ನು ಸರಬರಾಜು ಮಾಡಲು ಹಾಗೂ ಸಿಬ್ಬಂದಿಗೆ ತರಬೇತಿ ನೀಡಲು ಒಪ್ಪಿಕೊಂಡಿತು. ಅಮೆರಿಕೆಯಿಂದಲೂ ದೊಡ್ಡ ಪ್ರಮಾಣದಲ್ಲಿ ದೇಣಿಗೆಯನ್ನು ಪಡೆದರು. ಇಂದು ಅಖಿಲ ಭಾರತದ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈದ್ಯಕೀಯ ಶಿಕ್ಷಣದಲ್ಲಿ ಭಾರೀ ಪ್ರಾವಿಣ್ಯದ ಕೇಂದ್ರವಾಗಿ ಬೆಳೆದು ನಿಂತಿದೆ. ಈ ಸಂಸ್ಥೆಯ ಬಗ್ಗೆ ಕೌರ್ ಅವರಿಗೆ ಎಷ್ಟೊಂದು ಕಾಳಜಿ ಮತ್ತು ಪ್ರೀತಿ ಇತ್ತೆಂದರೆ ತಾವು ಸಾಯುವ ಕೆಲವು ದಿನಗಳ ಮುಂಚೆ ಶಿಮ್ಲಾದಲ್ಲಿದ್ದ ತಮ್ಮ ನಿವಾಸವನ್ನು ಅವರು ಭಾರತ ಸರ್ಕಾರಕ್ಕೆ ಕೊಡುಗೆಯಾಗಿ ನೀಡಿ ಅದನ್ನು ವೈದ್ಯಕೀಯ ವಿಜ್ಞಾನಸಂಸ್ಥೆಯ ವೈದ್ಯರು ಮತ್ತು ದಾದಿಯರಿಗೆ ವಿಶ್ರಾಂತಿ ಗೃಹವಾಗಿ ಪರಿವರ್ತಿಸುವಂತೆ ಕೋರಿದ್ದರು.

ಕೇಂದ್ರ ಆರೋಗ್ಯ ಸಚಿವೆಯಾಗಿದ್ದ ಅವರಿಗೆ ವಿಶ್ವ ಆರೋಗ್ಯ ಸಂಸ್ಥೆಯ ಅಧಿವೇಶನಗಳಲ್ಲಿ ಮಾತನಾಡುವ ಸಂದರ್ಭಗಳು ಬರುತ್ತಿದ್ದವು. 1950ರಲ್ಲಿ ಅವರು ವಿಶ್ವ ಆರೋಗ್ಯ ಸಂಸ್ಥೆಯ ಅಧ್ಯಕ್ಷರಾಗಿ ಆಯ್ಕೆಯಾದರು. 1951ರ ಮೇ 7 ರಂದು ವಿಶ್ವ ಆರೋಗ್ಯ ಸಂಸ್ಥೆಯ ಮಹಾ ಅಧಿವೇಶನದ ಅಧ್ಯಕ್ಷೀಯ ಭಾಷಣದಲ್ಲಿ ಅವರು ಹೀಗೆ ಹೇಳಿದ್ದಾರೆ:"ಯುದ್ಧಗಳು ಮತ್ತು ಯುದ್ಧಗಳ ಬಗೆಗಿನ ವದಂತಿಗಳ ನಡುವೆಯೂ ಸಮಾಜ ಕಲ್ಯಾಣ ಕ್ಷೇತ್ರದಲ್ಲಿ ಬಹುಮುಖ್ಯವಾದ ಮಾನವೀಯ ಅಭಿವೃದ್ಧಿ ಕಾರ್ಯಗಳು ನಿರಂತರವಾಗಿ ಸಾಗಿವೆ. ಪ್ರತಿಯೊಂದು ದೇಶವು ಇದಕ್ಕೆ ಸಾಕ್ಷಿಯಾಗಿದೆ

ರೋಗಿಷ್ಟರಾಗುವ ಸಂಭವ ಇರುತ್ತದೆ. ಹಾಗಾಗಿ ಜನಸಂಖ್ಯೆಯ ಸಮಸ್ಯೆಯನ್ನು ಬಗೆಹರಿಸುವಲ್ಲಿ ಇಂತಹ ಬರಿಯ ಮೇಲ್ನೋಟದ ಅಧ್ಯಯನದಿಂದ ಯಾವ ಪ್ರಯೋಗವೂ ಆಗುವುದಿಲ್ಲ. ಈ ನಿರ್ಣಯಕವನ್ನು ಮಂಡಿಸಿದ ಗೌರವಾನ್ವಿತ ಸದಸ್ಯರು ಮತ್ತು ಅದನ್ನು ಬೆಂಬಲಿಸಿದ ಇತರ ಸದಸ್ಯರ ಉದ್ದೇಶ ಈ ವ್ಯಾಧಿಗಳಿಂದ ಬಳಲುತ್ತಿರುವ ಜನರಿಗೆ ಸಹಾಯ ಮಾಡಬೇಕು ಎಂಬುದಕ್ಕಿಂತ ಜನಸಂಖ್ಯೆಯ ಸ್ಫೋಟವನ್ನು ತಡೆಯುವುದರ ಕಡೆಗೆ ಇದೆ ಎಂದು ನಾನು ತಿಳಿಯುತ್ತೇನೆ. ಈ ವ್ಯಾಧಿಗಳ ನಿಯಂತ್ರಣಕ್ಕಾಗಿ ಶ್ರಮಿಸುತ್ತಿರುವ ನನಗೆ ಮತ್ತು ನನ್ನ ಸಹೋದ್ಯೋಗಿಗಳಿಗೆ ಮತ್ತು ವಿವಿಧ ರಾಜ್ಯಗಳ ನಿಯಂತ್ರಣದಲ್ಲಿ ಜನತೆ ಸಹಾಯ ಮಾಡಬೇಕೆಂಬುದು ಸರ್ಕಾರದ ಆಶಯವಾಗಿದೆ. ನನಗೂ ಎಲ್ಲಕ್ಕಿಂತ ಇದು ಮುಖ್ಯವಾಗಿದೆ. ನಾನು ಈ ಸಮಸ್ಯೆಯನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡಲು ಮತ್ತು ಅದೇ ನೆಲೆಯಲ್ಲಿ ಪರಿಹಾರ ಕಂಡುಕೊಳ್ಳಲು ಬಯಸುತ್ತೇನೆ. ಹಾಗಾಗಿ ಈ ವಿಷಯದಲ್ಲಿ ಜಗತ್ತಿನಾದ್ಯಂತ ಪ್ರಚಲಿತವಿರುವ ತಜ್ಞ ವೈದ್ಯರ ಅಭಿಪ್ರಾಯವನ್ನು ತಮ್ಮ ಮುಂದಿಡಲು ಪ್ರಯತ್ನಿಸಿದ್ದೇನೆ.

ಈ ವಿಷಯದಲ್ಲಿ ಅಮೆರಿಕ, ಸ್ವಿಟ್ಜರ್‌ಲ್ಯಾಂಡ್, ಡೆನ್ಮಾರ್ಕ್ ಮತ್ತಿತರ ರಾಷ್ಟ್ರಗಳಲ್ಲಿ ಅನುಸರಿಸುತ್ತಿರುವ ಮಾರ್ಗಗಳನ್ನು ನಾವು ಅನುಸರಿಸಲು ಸಾಧ್ಯವೇ ಎಂಬ ಪ್ರಶ್ನೆಯು ಇಲ್ಲಿ ಉದ್ಭವಿಸುತ್ತದೆ. ನಮ್ಮ ದೇಶದಲ್ಲಿನ ಸ್ಥಿತಿಗತಿಗಳು ಮತ್ತು ನಮಗೆ ಲಭ್ಯವಿರುವ ಸಂಪನ್ಮೂಲಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬೇಕಾಗುತ್ತದೆ. ಸಂತಾನ ಶಕ್ತಿ ಹರಣ ಶಸ್ತ್ರಕ್ರಿಯೆಯಲ್ಲಿ ಸೂಕ್ಷ್ಮವಾದ ಮನೋ ವೈಜ್ಞಾನಿಕ ಅಂಶವೂ ಸೇರಿಕೊಂಡಿದೆ ಎಂಬುದನ್ನು ನಾನು ತಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಅದರಲ್ಲೂ ಅದು ಬಲವಂತದಿಂದ ಕಾರ್ಯರೂಪಕ್ಕೆ ತಂದರೆ ಅದರ ಪರಿಣಾಮ ಏನಾದೀತು ಎಂಬುದನ್ನು ಮಾನ್ಯ ಸದಸ್ಯರು ಯೋಚಿಸಬೇಕು. ಒಬ್ಬ ಕುಷ್ಠರೋಗಿ ಸಂತಾನ ಹರಣ ಶಸ್ತ್ರಕ್ರಿಯೆಗೆ ಒಳಗಾಗಲು ನಿರಾಕರಿಸಿದಲ್ಲಿ ನೀವು ಏನು ಮಾಡುತ್ತೀರಿ ? ಆಗ ನೀವು ಅವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವಿರಾ ? ಈ ರೀತಿಯ ಹಿಂಸಾಚಾರದಲ್ಲಿ ಸರ್ಕಾರ ನಿರತವಾದಲ್ಲಿ ನಾನು ಅಂತಹ ಸರ್ಕಾರದ ಒಂದು ಭಾಗವಾಗಿರಲು ಎಂದೂ ಬಯಸುವುದಿಲ್ಲ ಎಂಬ ಅಂಶವನ್ನು ಮನವರಿಕೆ ಮಾಡಿಕೊಡಲು ಬಯಸುತ್ತೇನೆ. ಈ ಸಂದರ್ಭದಲ್ಲಿ ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರ ಹೆಸರನ್ನು ಪ್ರಸ್ತಾಪಿಸಿರುವುದಕ್ಕೆ ನಾನು ವಿಷಾದಿಸುತ್ತೇನೆ. ಮಹಾತ್ಮಾಜಿಯವರು ಅನೇಕ ಅವ್ಯವಹಾರಿಕ ವಿಚಾರಧಾರೆಗಳನ್ನು ಹೊಂದಿದ್ದರು ಎಂದು ಅವರ ಬಗ್ಗೆ ಟೀಕಿಸಲಾಗಿದೆ. ಆದರೆ ಮಹಾತ್ಮಾ ಗಾಂಧೀಜಿಯವರು ಸಾರಿದ ಎಲ್ಲ ಆದರ್ಶಗಳನ್ನು ನಾನು ಸಂಪೂರ್ಣವಾಗಿ ಸಮರ್ಥಿಸುತ್ತೇನೆ. ಒಂದು ವೇಳೆ ಗಾಂಧೀಜಿಯವರು ಬದುಕಿದ್ದರೆ ಈ ರೀತಿಯ ನಿರ್ಣಯವನ್ನು ಅವರು ಖಂಡಿತವಾಗಿ ವಿರೋಧಿಸುತ್ತಿದ್ದರು. ದೇಶದ ಜನಸಂಖ್ಯೆಯನ್ನು ನಿಯಂತ್ರಿಸುವ ವಿಷಯದಲ್ಲಿ ಗಾಂಧೀಜಿಯವರು ತಳೆದಿದ್ದ ಧೋರಣೆ ನ್ಯಾಯೋಚಿತವಾದುದೆಂದು ನಾನು ಭಾವಿಸಿದ್ದೇನೆ. ದೇವರು ಮನುಷ್ಯನಿಗೆ ಸ್ವಯಂ ಸಂಯಮದ ಶಕ್ತಿಯನ್ನು ಕೊಟ್ಟಿದ್ದಾನೆ. ಅದು ಅವರ ಕರ್ತವ್ಯವಾಗಿದೆ ಮತ್ತು ಅದನ್ನು ಬಳಸುವುದು ಅವರ ಹಕ್ಕಾಗಿದೆ. ದೇಶಕ್ಕೆ ಸೇವೆ ಸಲ್ಲಿಸಬೇಕೆಂಬ ಇಚ್ಛೆ ಇದ್ದರೆ ನೀವು ಸ್ವಯಂ ಸಂಯಮ ಸಾಧ್ಯವಿಲ್ಲ ಎಂದು ನೀವು ಹೇಳಲೇಬಾರದು. ನಿಮಗೆ ಅದನ್ನು ಸಾಧಿಸುವುದು ಸಾಧ್ಯವಿಲ್ಲವೆಂದಾದರೆ ನೀವು ಅತ್ಯಂತ ಸಣ್ಣವರಾಗುತ್ತೀರಿ. ಈ ಸಂತಾನ ಹರಣ ಶಸ್ತ್ರಕ್ರಿಯೆಗೆ ಒಳಗಾದವರಲ್ಲಿ ಸ್ವಲ್ಪಮಟ್ಟಿನ ಅಪೂರ್ಣತೆಯ ಭಾವನೆಯು ಕಾಡುತ್ತದೆ. ಕಳೆದ ವರ್ಷ ಮುಂಬಯಿಯಲ್ಲಿ ನಡೆದ ಸಮ್ಮೇಳನದಲ್ಲಿ

ಭಾಗವಹಿಸಲು ಬಂದಿದ್ದ ಡಾ. ಗಾಂಬ್ಲೆ ಅವರೊಂದಿಗೆ ನಾನು ಈ ವಿಷಯವನ್ನು ಚರ್ಚಿಸಿದ್ದೇನೆ. ಅದಲ್ಲದೆ ಯಾಂತ್ರಿಕ ಗರ್ಭ ನಿರೋಧಕಗಳ ಪ್ರತಿಪಾದಕರಾದ ಡಾ. ಹಿಲೀನಾ ರೈಟ್ ಮತ್ತು ಇತರರೊಂದಿಗೂ ನಾನು ಮಾತನಾಡಿದ್ದೇನೆ. " ನಿಮ್ಮ ದೇಶಕ್ಕೆ ಬಂದು ಇಲ್ಲಿನ ಪರಿಸ್ಥಿತಿಯನ್ನು ನೋಡಿದ ಮೇಲೆ ಆ ವಿಧಾನಗಳನ್ನು ಬಳಸುವುದು ಭಾರತದಲ್ಲಿ ಸಾಧ್ಯವಿಲ್ಲವೆಂಬುದು ನಮಗೆ ಮನವರಿಕೆಯಾಗಿದೆ " ಎಂದು ಅವರಲ್ಲಿ ಪ್ರತಿಯೊಬ್ಬರು ಅಭಿಪ್ರಾಯ ಪಟ್ಟಿದ್ದಾರೆ. ನಾವು ಈಗ ಈ ಪ್ರಶ್ನೆಯ ಸಾಧ್ಯಾಸಾಧ್ಯತೆಯ ಬಗ್ಗೆ ಪರಿಶೀಲಿಸೋಣ. ಈ ನಿರ್ಣಯವನ್ನು ಬೆಂಬಲಿಸಿದ ಸದನದ ಸದಸ್ಯರಿಗೆ ಈ ಕುರಿತ ಕಾಯ್ದೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ಎಷ್ಟೊಂದು ಅಗಾಧ ಸ್ವರೂಪದ ಆಡಳಿತ ಯಂತ್ರ ಬೇಕೆಂಬ ಪರಿಜ್ಞಾನವಾದರೂ ಇದೆಯೇ ? ಬ್ರಿಟನ್‌ನಲ್ಲಿ ಕೂಡಾ, ಈ ನಿರ್ಣಯವನ್ನು ಮಂಡಿಸಿದ ಮಾನ್ಯ ಸದಸ್ಯರು ಹೇಳಿರುವಂತೆ ಸಂತಾನಶಕ್ತಿ ಹರಣ ಕಾರ್ಯಕ್ರಮದ ಇಲಾಖಾ ಸಮಿತಿಯು ಸ್ವಯಂ ಪ್ರೇರಿತ ತಳಹದಿಯ ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಬೇಕಾದ ಕಾನೂನನ್ನು ತರುವಂತೆ ಶಿಫಾರಸು ಮಾಡಿದ್ದಾರೆ. ಆದರೆ ಹಲವಾರು ಕಠಿಣತೆಗಳಿಂದಾಗಿ ಸಂತಾನ ಶಕ್ತಿ ಹರಣ ಕಾರ್ಯಕ್ರಮವನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗಲಿಲ್ಲ ಎಂಬುದು ಈ ನಿರ್ಣಯ ಮಂಡಿಸಿದ ಸದಸ್ಯರಿಗಾಗಲಿ ಅಥವಾ ಈ ಸದನದ ಸದಸ್ಯರಿಗಾಗಲಿ ತಿಳಿದಿದೆಯೇ ? ಅದಕ್ಕೆ ಒಂದು ಕಾರಣ ಸಾಕಷ್ಟು ಸಂಖ್ಯೆಯಲ್ಲಿ ಅರ್ಹತೆ ಹೊಂದಿದ ವೈದ್ಯಕೀಯ ಸಿಬ್ಬಂದಿಯ ಕೊರತೆ. ಇಂಗ್ಲೆಂಡ್‌ನಲ್ಲಿಯೇ ಈ ಪರಿಸ್ಥಿತಿ ಎಂದಾದರೆ ನಮ್ಮ ದೇಶದಲ್ಲಿ ಈ ಕಾರ್ಯಕ್ರಮದ ಅನುಷ್ಠಾನ ಸಾಧ್ಯವಾಗುವುದಾದರೂ ಹೇಗೆ ? ಎಂಬುದನ್ನು ನೀವು ಊಹಿಸಬಹುದು. ಇಂಗ್ಲೆಂಡ್‌ನಲ್ಲಿ ಪ್ರತಿ 300 - 400 ಮಂದಿಗೆ ಒಬ್ಬ ವೈದ್ಯನಿದ್ದಾನೆ. ಆದರೆ ನಮ್ಮ ದೇಶದಲ್ಲಿ ಆರ ರಿಂದ ಏಳುಸಾವಿರ ಮಂದಿಗೆ ಒಬ್ಬ ವೈದ್ಯನಿದ್ದಾನೆ ಮತ್ತು ಅವರೆಲ್ಲರೂ ನಗರಗಳಲ್ಲೇ ನೆಲೆಸಿದ್ದಾರೆ. ಹಾಗಿರುವಾಗ ಬಹುಸಂಖ್ಯಾತರು ನೆಲೆಸಿರುವ ಗ್ರಾಮಾಂತರ ಪ್ರದೇಶದ ಪರಿಸ್ಥಿತಿ ಏನು ? ಅಲ್ಲಿ ಎಷ್ಟು ಮಂದಿ ಕುಷ್ಠರೋಗಿಗಳಿದ್ದಾರೆ ? ಎಷ್ಟು ಮಂದಿ ಮನೋ ರೋಗಿಗಳಿದ್ದಾರೆ? ಎಂಬುದನ್ನು ಪತ್ತೆ ಹಚ್ಚುವವರು ಯಾರು ? ಅಲ್ಲಿ ಕ್ಷಯರೋಗಿಗಳು ಎಷ್ಟು ಮಂದಿ ಇದ್ದಾರೆ ಎಂಬುದನ್ನು ಕಂಡು ಹಿಡಿಯುವವರು ಯಾರು ? ಇದು ನಿಜಕ್ಕೂ ತೀರಾ ಅಸಂಭವವಾದ ಕಾರ್ಯಭಾರ - ಏಕೆಂದರೆ ಈ ನಿರ್ಣಯವನ್ನು ಅಂಗೀಕರಿಸಿದ್ದರೂ ಅದನ್ನು ಕಾರ್ಯಗತಗೊಳಿಸಲು ಆಗುವುದಿಲ್ಲ. ಅಮೆರಿಕದಂತಹ ದೇಶಗಳಲ್ಲಿ ಕೂಡಾ ವೈದ್ಯ ವಿಜ್ಞಾನ ಇಂದಿನ ಪ್ರಗತಿ ಸಾಧಿಸುವ ಮೊದಲೇ ಇಂತಹ ಕಾಯ್ದೆಗಳನ್ನು ತರಲಾಗಿತ್ತು. ಅಂತಹ ಮುಂದುವರಿದ ರಾಷ್ಟ್ರದಲ್ಲಿ ಅಲ್ಲಿರುವ ಕಾಯ್ದೆಗಳ ರೀತ್ಯಾ ಎಷ್ಟು ಮಂದಿಯನ್ನು ಸಂತಾನ ಹರಣ ಚಿಕಿತ್ಸೆಗೆ ಗುರಿಪಡಿಸಲಾಗಿದೆ ಎಂದು ಕೇಳಿದರೆ ಬಹುಶಃ ಇಲ್ಲವೇ ಇಲ್ಲ ಎಂಬಷ್ಟು ಪ್ರಮಾಣದಲ್ಲಿ. ಹಾಗಾಗಿ ಇಂದಿನ ಸನ್ನಿವೇಶದಲ್ಲಿ ಯಾವುದೇ ಸಮಸ್ಯೆಯನ್ನು ಅದು ಮೇಲ್ನೋಟಕ್ಕೆ ಕಂಡಷ್ಟು ಸುಲಭವಾಗಿ ಬಗೆಹರಿಸಲು ಸಾಧ್ಯವಿಲ್ಲ. ಹಾಗಾಗಿ ನಾವು ಅಂತಹ ಸಾಹಸಕ್ಕೆ ಮುಂದಾಗದಿರುವುದೇ ಒಳಿತೆಂಬುದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ. ಮಿತಿಮೀರಿದ ಜನಸಂಖ್ಯೆಯ ಸಮಸ್ಯೆಯನ್ನು ನಮ್ಮ ಸುಶಿಕ್ಷಿತ ಮಹಿಳೆಯರೇ ಹೇಳುವಂತೆ ಯಾಂತ್ರಿಕ ಗರ್ಭನಿರೋಧಕಗಳಿಂದ ಬಗೆಹರಿಸಲು ಸಾಧ್ಯ ಎಂದು ಪದೇ ಪದೇ ನನಗೆ ಸಲಹೆ ನೀಡಲಾಗಿದೆ. ಇದು ಮೇಲ್ನೋಟಕ್ಕೆ ತುಂಬಾ ಸರಳವಾಗಿ ಕಂಡರೂ ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಗುರಿಪಡಿಸುವುದನ್ನು ಅನುಷ್ಠಾನಕ್ಕೆ ತರಲು ಸಾಧ್ಯವಿಲ್ಲ. ಯಾವುದೇ ನಿರ್ದಿಷ್ಟ ರೂಪದ ಮನೋವೈಕಲ್ಯವನ್ನು ಅನುವಂಶಿಕ ಎಂದು ಪತ್ತೆ ಹಚ್ಚುವುದು ಯಾವ

ವೈದ್ಯರಿಗೂ ಸಾಧ್ಯವಾಗುವುದಿಲ್ಲ. ಅತ್ಯಂತ ಆರೋಗ್ಯವಂತ ದಂಪತಿಗಳಿಗೆ ಹುಟ್ಟಿದ ಎಷ್ಟೋ ಮಕ್ಕಳು ಬುದ್ಧಿಮಾಂದ್ಯರಾಗಿರುವುದನ್ನು ನಾವು ನೋಡುತ್ತೇವೆ. ಸರ್ಕಾರದಲ್ಲಿ ಅತ್ಯುಚ್ಚ ಹುದ್ದೆಯಲ್ಲಿರುವ ತಂದೆ ತಾಯಿಗಳಿಗೆ ಹುಟ್ಟಿದ ಮಕ್ಕಳು ಈ ರೀತಿ ಆಗಿರುವ ಎರಡು ಪ್ರಕರಣಗಳು ನನ್ನ ಗಮನಕ್ಕೆ ಬಂದಿದೆ. ದಂಪತಿಗಳನ್ನು ಇಂತಹ ಮಕ್ಕಳಿಗೆ ಜನ್ಮ ನೀಡಿರುವುದಕ್ಕಾಗಿ ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಗುರಿಪಡಿಸಲು ಸಾಧ್ಯವೇ ? ಈ ಮನೋವೈಕಲ್ಯ ಎಂಬುದು ವಂಶಪಾರಂಪರ್ಯದಿಂದ ಬರುವಂತಹುದೆಂದು ಯಾವೊಬ್ಬ ವೈದ್ಯನೂ ಹೇಳುವುದಿಲ್ಲ ಮತ್ತು ಬುದ್ಧಿಮಾಂದ್ಯದ ಮಕ್ಕಳು ಬುದ್ಧಿಮಾಂದ್ಯರಾಗಿಯೇ ಇರಬೇಕಾಗಿಲ್ಲ. ಒಬ್ಬ ಮನುಷ್ಯನಿಗೆ ಒಬ್ಬ ಬುದ್ಧಿ ಮಾಂದ್ಯ ಮಗನಿದ್ದ. ಆ ಬುದ್ಧಿಮಾಂದ್ಯ ಮಗನಿಗೆ ಏಳು ಮಂದಿ ಮಕ್ಕಳಿದ್ದರು. ಆ ವ್ಯಕ್ತಿ ತನ್ನ ಮಗನನ್ನು ಹಾಗೂ ಈ ಏಳು ಮಂದಿ ಮೊಮ್ಮಕ್ಕಳನ್ನು ನೋಡಿಕೊಳ್ಳಬೇಕಾಗಿತ್ತು. ಆ ಏಳು ಮಂದಿ ಮೊಮ್ಮಕ್ಕಳು ಬುದ್ಧಿಮಾಂದ್ಯರಾಗಿರಲಿಲ್ಲ. ಅಂತಹ ದೃಷ್ಟಾಂತವೊಂದು ನಮ್ಮೆಲ್ಲರಿಗೂ ಗೊತ್ತಿದೆ. ಆದರೆ ಮಾನ್ಯ ಸದಸ್ಯರು ಈ ಸೂಕ್ಷ್ಮವಾದ ಪ್ರಶ್ನೆಯನ್ನು ಅತ್ಯಂತ ವಿವೇಚನೆ ಮತ್ತು ಸರಿಯಾದ ದೃಷ್ಟಿಕೋನದಿಂದ ಪರಿಶೀಲಿಸಬೇಕು. ಜನಸಮುದಾಯಕ್ಕೆ ಸೇರಿದ ಈ ವರ್ಗದವರ ಸಮಸ್ಯೆಗಳನ್ನು ನಾವು ಈ ಹಿನ್ನಲೆಯಿಂದ ಅಭ್ಯಸಿಸಬೇಕು. ನಾನು ಈಗಾಗಲೇ ಹೇಳಿರುವಂತೆ ಕಾರ್ಯಸಾಧ್ಯತೆಯ ದೃಷ್ಟಿಯಿಂದಲೂ ಯೋಚಿಸಬೇಕು ಇಂತಹ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸರ್ಕಾರಕ್ಕಿರುವ ಸಂಪನ್ಮೂಲಗಳ ಇತಿಮಿತಿಗಳನ್ನು ನಾವು ಅರಿತುಕೊಳ್ಳಬೇಕು. ಈ ಸಮಸ್ಯೆಗಳನ್ನು ಬಗೆಹರಿಸಲು ಸಾಕಷ್ಟು ಸಂಖ್ಯೆಯ ತಜ್ಞರು ನಮ್ಮಲ್ಲಿದ್ದಾರೆ. ಒಬ್ಬ ವ್ಯಕ್ತಿ ಮನೋ ವೈಕಲ್ಯ ಹೊಂದಿದ್ದಾನೆಯೇ ? ಮತ್ತು ಈ ಮನೋವೈಕಲ್ಯ ಗುಣಪಡಿಸಲು ಸಾಧ್ಯವಿರುವಂತಹುದೇ ಅಲ್ಲವೇ ಎಂಬುದನ್ನು ನಿಷ್ಕರ್ಷಿಸುವಂತಹ ವೈದ್ಯರು ಅಷ್ಟು ಸಂಖ್ಯೆಯಲ್ಲಿ ನಮ್ಮಲ್ಲಿಲ್ಲ. ಆಸ್ತಿಯ ಉತ್ತರಾಧಿಕಾರವನ್ನು ನಿರ್ಧರಿಸುವ ಸಂದರ್ಭದಲ್ಲಿ ಮತ್ತು ಅಂತಹ ಇತರ ಸಂದರ್ಭಗಳಲ್ಲಿ ನಮ್ಮಲ್ಲಿ ಉದ್ಭವಿಸುವ ಸಮಸ್ಯೆಗಳು ಮತ್ತು ಮೊಕದ್ದಮೆಗಳ ಪ್ರಮಾಣ ಎಷ್ಟೊಂದು ಅಗಾಧ ಪ್ರಮಾಣದಲ್ಲಿದೆ ಮತ್ತು ಅಂತಹ ಸಂದರ್ಭಗಳಲ್ಲಿ ಆಗುವ ಅನ್ಯಾಯವನ್ನು ನಾವು ಸುಲಭವಾಗಿ ಊಹಿಸಬಹುದು. ತಮ್ಮ ಖಾಸಗಿ ಪ್ರಯೋಜನಕ್ಕಾಗಿ ಮಹಿಳೆ ಅಥವಾ ಪುರುಷ ಇಂತಿಂತಹವರನ್ನು ಸಂತಾನ ಶಕ್ತಿ ಹರಣ ಪ್ರಕ್ರಿಯೆಗೆ ಒಳಪಡಿಸಬೇಕೆಂದು ಕಾತರರಾಗಿರುವ ಪ್ರಕರಣಗಳು ನಮ್ಮಲ್ಲಿ ಸಾಕಷ್ಟಿವೆ. ನಾವೊಂದು ಆರೋಗ್ಯ ಪೂರ್ಣ ರಾಷ್ಟ್ರ ನಿರ್ಮಿಸಬೇಕೆಂಬ ವಿಷಯದಲ್ಲಿ ನನಗೂ ಸಂಪೂರ್ಣ ಕಾಳಜಿ ಮತ್ತು ಆಸಕ್ತಿ ಇದೆ. ಆದರೆ ಅದನ್ನು ಸಾಧಿಸಲು ಇತರ ಹಲವು ಮಾರ್ಗಗಳು ಇವೆ ಎಂಬುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು.

" ಕ್ಷಯರೋಗಿಗಳಿಗೆ ಸರಿಯಾದ ಚಿಕಿತ್ಸೆ ನೀಡಲು ನಮ್ಮಿಂದ ಸಾಧ್ಯವಿಲ್ಲ ಅಂತಹವರನ್ನು ಸಂತಾನ ಶಕ್ತಿ ಹರಣ ಕ್ರಿಯೆಗೆ ಒಳಪಡಿಸುವುದು ಒಳ್ಳೆಯದು " ಇಂತಹ ಸಲಹೆಯೂ ಸದನದ ಮುಂದಿದೆ. ಈ ಅಭಿಪ್ರಾಯವನ್ನೂ ನಾನು ಒಪ್ಪುತ್ತೇನೆ. ದೇಶದಲ್ಲಿರುವ ಎಲ್ಲ ಕ್ಷಯರೋಗಿಗಳಿಗೆ ಸೂಕ್ತ ಚಿಕಿತ್ಸೆ ಒದಗಿಸುವ ಸಾಮರ್ಥ್ಯ ನಮ್ಮಲ್ಲಿಲ್ಲ. ನಿಜಕ್ಕೂ ಇದು ದುರಂತವಾಗಿದೆ ಮತ್ತು ಈ ದುರಂತವನ್ನು ನಾವು ನಿವಾರಿಸಲೇ ಬೇಕು. ಇದನ್ನು ನಾವು ಸುಧಾರಿಸುವುದಾದರೂ ಹೇಗೇ? ಇದಕ್ಕಾಗಿ ನಾವು ಹೆಚ್ಚು ಹೆಚ್ಚು ಹಣವನ್ನು ಆರೋಗ್ಯದ ಮೇಲೆ ವಿನಿಯೋಗಿಸಬೇಕು ಕುಷ್ಠರೋಗಿಗಳಿಗೆ ನಾವು ಪ್ರತ್ಯೇಕ ವಸತಿಗಳನ್ನು ನಿರ್ಮಿಸಿಕೊಡಬೇಕು. ಅದೇ ರೀತಿ ಕ್ಷಯ ರೋಗಪೀಡಿತರಿಗೆ ಊರಿನ ಹೊರಗೆ ಪ್ರತ್ಯೇಕ ವಾರ್ಡ್‌ಗಳನ್ನು ನಿರ್ಮಿಸಬೇಕು. ಕ್ಷಯರೋಗಿಗಳ

ಚಿಕಿತ್ಸಾಲಯದಲ್ಲಿ ಕ್ಷಯರೋಗಿಗಳಿಗೆ ಒಂದು ಮಗು ಜನಿಸಿದ ನಿದರ್ಶನವನ್ನು ಅಪವಾದಗಳಲ್ಲಿ ಅಪವಾದ ಎಂದು ತಿಳಿಯಬೇಕು. ಏಕೆಂದರೆ ದೇಶದಲ್ಲಿ ನಾನು ಭೇಟಿ ನೀಡದಿರುವ ಕ್ಷಯರೋಗಿಗಳ ಒಂದೇ ಒಂದು ನಿದರ್ಶನವು ನನ್ನ ಗಮನಕ್ಕೆ ಬಂದಿಲ್ಲ. ಕುಷ್ಠರೋಗಿಗಳಿಗೆ ಮಕ್ಕಳಾಗುವುದನ್ನು ನಾನು ನೋಡಿದ್ದೇನೆ. ಕುಷ್ಠ ವ್ಯಾಧಿ ಪೀಡಿತ ಮಹಿಳೆಯೊಬ್ಬಳ ಕೈಯಲ್ಲಿ ಮಗುವೊಂದನ್ನು ನೋಡಿ ಈ ನಿರ್ಣಯವನ್ನು ಮಂಡಿಸಿದ ಮಾನ್ಯ ಸದಸ್ಯರಿಗೆ ಎಷ್ಟರಮಟ್ಟಿಗೆ ವೇದನೆಯಾಗಿದೆಯೋ ಅದನ್ನು ಕಂಡು ನಾನು ಅಷ್ಟೇ ವೇದನೆ ಅನುಭವಿಸಿದ್ದೇನೆ. ಈ ನಿರ್ಣಯ ಮಂಡಿಸಿದ ಮಾನ್ಯ ಸದಸ್ಯೆ ಆ ಮಹಿಳೆಯನ್ನು ಸಂತಾನಶಕ್ತಿ ಹರಣ ಚಿಕಿತ್ಸೆಗೆ ಒಳಪಡಿಸಲು ಬಯಸಿರಬಹುದು. ಆದರೆ ನಾನು ಆ ಮಗುವನ್ನು ಆಕೆಯಿಂದ ಬೇರ್ಪಡಿಸಿ ಅದನ್ನು ದೇಶದ ಆರೋಗ್ಯವಂತ ಪೌರರನ್ನಾಗಿ ಪರಿವರ್ತಿಸಲು ಬಯಸುತ್ತೇನೆ. ಕುಷ್ಠ ವ್ಯಾಧಿ ಪೀಡಿತರಿಗೆ ಅತ್ಯುತ್ತಮ ಚಿಕಿತ್ಸೆ ಒದಗಿಸುವುದು ನಮ್ಮ ಕರ್ತವ್ಯವಾಗಿದೆ. ಹಣಕಾಸು ಮತ್ತು ಇತರ ಸಂಪನ್ಮೂಲಗಳ ವಿಷಯದಲ್ಲಿ ನಮಗೆ ಪರಿಮಿತಿಗಳಿದ್ದರೂ ಕೂಡಾ ನಾವು ಕ್ಷಯರೋಗಿಗಳ ಶುಶ್ರೂಷೆಯಲ್ಲಿ ಬಹಳಷ್ಟು ಪ್ರಗತಿ ಸಾಧಿಸಿದ್ದೇವೆ. ದೇಶಕ್ಕೆ ಸ್ವಾತಂತ್ರ್ಯ ದೊರೆತ ನಂತರದಲ್ಲಿ ನಾವು ಕ್ಷಯರೋಗ ನಿವಾರಣಾ ಕಾರ್ಯ ಕೈಗೆತ್ತಿಕೊಂಡಾಗ ನಮ್ಮಲ್ಲಿದ್ದ ಹಾಸುಗೆಗಳ ಸಂಖ್ಯೆ ಐದು ಸಾವಿರ ಮಾತ್ರವೇ ಆಗಿತ್ತು. ಈಗ ಆ ಸಂಖ್ಯೆ ನಾಲ್ಕು ಪಟ್ಟು ಹೆಚ್ಚಿದೆ. ನಮ್ಮ ದೊಡ್ಡ ಪಟ್ಟಣಗಳಲ್ಲೆಲ್ಲ ನಾವು ಕ್ಷಯರೋಗ ಚಿಕಿತ್ಸಾ ಕೇಂದ್ರಗಳನ್ನು ತೆರೆದಿದ್ದೇವೆ. ಈಗ ಕ್ಷಯರೋಗ ಪ್ರಕರಣಗಳನ್ನು ಸರಿಯಾದ ಸಮಯದಲ್ಲೇ ಪತ್ತೆ ಹಚ್ಚಲಾಗುತ್ತಿದ್ದು ಸಕಾಲದಲ್ಲೇ ಅವರಿಗೆ ಚಿಕಿತ್ಸೆಯೂ ದೊರೆಯುತ್ತಿದೆ. ದೇಶಾದ್ಯಂತದ ಕ್ಷಯರೋಗಿಗಳ ಎಲ್ಲ ಅಗತ್ಯಗಳನ್ನು ನಾವು ಪೂರೈಸುತ್ತಿದ್ದೇವೆ. ಕ್ಷಯರೋಗಿಗಳು ಸ್ವಯಂ ಪ್ರೇರಣೆಯಿಂದ ಈ ಚಿಕಿತ್ಸಾಲಯಗಳಿಗೆ ಬಂದು ಈ ಪ್ರಯೋಜನ ಪಡೆಯುತ್ತಿದ್ದಾರೆ. ಕಳೆದ ಮೂರು ವರ್ಷಗಳಿಂದ ಇದಕ್ಕೆ ಸಂಬಂಧಿಸಿದ ಅಂಕಿ - ಅಂಶಗಳನ್ನು ಸಂಗ್ರಹಿಸಲಾಗುತ್ತಿದೆ. ನಮ್ಮ ಈ ಪ್ರಯತ್ನ ಸಾಗರದಲ್ಲಿನ ಒಂದು ಹನಿ ಎಂಬುದು ನಮಗೆ ಗೊತ್ತಿದೆ. ಇಂತಹ ಹನಿಗಳೇ ಸೇರಿ ಸಾಗರವಾಗುತ್ತದೆ ಎಂಬುದನ್ನು ನಾವು ತಿಳಿಯಬೇಕು. ಈ ವಿಷಯದಲ್ಲಿ ನನಗೆ ಹತಾಶೆಯ ಪ್ರಶ್ನೆಯೇ ಇಲ್ಲ. ಕ್ಷಯ ರೋಗಗಳ ಪಿಡುಗನ್ನು ನಾವು ನಿವಾರಿಸಿಯೇ ನಿವಾರಿಸುತ್ತೇವೆ ಎಂಬ ದೃಢ ವಿಶ್ವಾಸ ನನ್ನದು. ನಮಗೆ ಸಾಕಷ್ಟು ಹಣ ದೊರೆತರೆ ಇದೇ ರೀತಿ ಕುಷ್ಠ ರೋಗವನ್ನು ನಾವು ನಿರ್ಮೂಲನೆಗೊಳಿಸಬಲ್ಲೆವು. ಜನರನ್ನು ಅವರ ಇಚ್ಛೆಗೆ ವಿರುದ್ಧವಾಗಿ ನಿರ್ವೀಯರನ್ನಾಗಿ ಮಾಡುವ ಬದಲು ಈ ಸಮಸ್ಯೆಯನ್ನು ಈ ವಿಧಾನಗಳಿಂದ ನಿಭಾಯಿಸುವುದು ಎಷ್ಟೋ ಹೆಚ್ಚು ಉತ್ತಮವಾದ ಮಾರ್ಗವಾಗಿದೆ. ಸದನವು ಇಂತಹ ನಿರ್ಣಯವನ್ನು ಅಂಗೀಕರಿಸಿದಲ್ಲಿ ಅದು ನಮ್ಮನ್ನು ತೀರಾ ಅಪಾಯಕಾರಿಯಾದ ಒಂದು ದಾರಿಗೆ ಹಚ್ಚುವುದು. ನಮ್ಮ ಸದನದ ಎಷ್ಟು ಮಂದಿ ಸದಸ್ಯರು ಜನತೆಗೆ ಈ ವಿಷಯದಲ್ಲಿ ತಿಳುವಳಿಕೆ ನೀಡಲು ಸಿದ್ಧರಿದ್ದಾರೆ. ನಾವು ಜನರ ಬಳಿಗೆ ಹೋಗಿ ಕುಷ್ಠ ವ್ಯಾಧಿಯಿಂದ ಬಳಲುತ್ತಿರುವವರನ್ನು ಗುರುತಿಸಿ ಮತ್ತು ಆ ವ್ಯಾಧಿ ತಮಗೆ ಇದೆ ಎಂದು ಬಹಿರಂಗ ಪಡಿಸುವಂತೆ ಮಾಡಿದರೆ ಅದಕ್ಕಿಂತ ಉತ್ತಮವಾದ ಮಾರ್ಗ ಇನ್ನೊಂದಿಲ್ಲ. ಈ ಮಾದರಿಯ ನಿರ್ಣಯವೊಂದು ಅಂಗೀಕೃತವಾದರೆ ಈ ವ್ಯಾಧಿಗಳ ನಿವಾರಣೆಯ ನಿಟ್ಟಿನಲ್ಲಿಯ ಎಲ್ಲ ಪ್ರಯತ್ನಗಳಿಗೂ ನಾವೇ ಕಲ್ಲು ಹಾಕಿದಂತಾಗುವುದು ಎಂದು ಮಾನ್ಯ ಸದಸ್ಯರೊಬ್ಬರು ಹೇಳಿರುವುದು ಸರಿಯಾಗಿಯೇ ಇದೆ. ಜನರಿಗೆ ಕ್ಷಯ, ಕುಷ್ಠ ಹಾಗೂ ಗುಪ್ತರೋಗಗಳ ವಿಷಯದಲ್ಲಿ ತಿಳುವಳಿಕೆ ನೀಡುವ, ರೋಗದ ಲಕ್ಷಣಗಳು ಕಂಡು

ಬಂದ ತಕ್ಷಣವೇ ಆಸ್ಪತ್ರೆಗೆ ಬರುವಂತೆ ಮತ್ತು ಅವುಗಳಿಗೆ ಪ್ರಾಥಮಿಕ ಹಂತದಲ್ಲಿಯೇ ಚಿಕಿತ್ಸೆ ಪಡೆಯುವಂತೆ ಅರಿವು ಮೂಡಿಸುವ ನಮ್ಮೆಲ್ಲ ಪ್ರಯತ್ನಗಳಿಗೂ ಅವಕಾಶವೇ ಇಲ್ಲದಂತಾಗುತ್ತದೆ. ಅಂದರೆ ಈ ವ್ಯಾಧಿಗಳ ಪತ್ತೆ ಹಚ್ಚುವಿಕೆ, ಪ್ರತಿಬಂಧಿಸುವಿಕೆ ಮತ್ತು ಅವುಗಳಿಗೆ ಚಿಕಿತ್ಸೆ ನೀಡುವ ಎಲ್ಲ ದಾರಿಗಳು ಮುಚ್ಚಿ ಹೋಗುವುದು. ಈ ಎಲ್ಲ ವ್ಯಾಧಿಗಳು ರಹಸ್ಯವಾಗಿಯೇ ಉಳಿದರೆ ಅವುಗಳಿಂದ ಸಂಭವಿಸುವ ಸೋಂಕಿನ ಭಯವು ಈಗಿನದ್ದಕ್ಕಿಂತ ಎಷ್ಟೋ ಪಾಲು ಹೆಚ್ಚಾಗುವುದು.

ಸದನದ ಬಹುತೇಕ ಸದಸ್ಯರು ಅದರಲ್ಲೂ ವಿಶೇಷತಃ ಮಹಿಳಾ ಸದಸ್ಯರು ಕ್ಷಯರೋಗ ಪೀಡಿತರು ರೋಗ ಗುಣವಾಗುವ ತನಕ ಕಡ್ಡಾಯವಾಗಿ ಮದುವೆಯಾಗದಂತೆ ನಿರ್ಬಂಧಿಸುವ ಶಾಸನವೊಂದನ್ನು ತರಬೇಕೆಂಬ ವಿಷಯದಲ್ಲಿ ತೀವ್ರ ಕಾತರ ಹೊಂದಿದ್ದಾರೆಂದು ನನಗೆ ಗೊತ್ತಿದೆ. ಕ್ಷಯ ರೋಗ ಸೋಂಕು ತಟ್ಟದಂತೆ ಅದನ್ನು ಪ್ರತಿಬಂಧಿಸುವ ಸಲುವಾಗಿ ಇಂತಹ ಕ್ರಮ ಆಗತ್ಯ ಎಂಬುದನ್ನು ನಾನು ಒಪ್ಪುತ್ತೇನೆ. ಕುಷ್ಟ ರೋಗದಿಂದ ಬಳಲುತ್ತಿರುವವರು ಮದುವೆಯಾಗದಂತೆ ಮತ್ತು ಅದು ಗುಣಮುಖವಾಗುವವರೆಗೆ ಗಂಡ - ಹೆಂಡತಿಯರು ಪ್ರಪ್ರತ್ಯೇಕವಾಗಿ ಇರುವಂತೆ ನಿರ್ಬಂಧಿಸುವ ಒಂದು ಕಾಯ್ದೆಯನ್ನು ತರುವ ವಿಚಾರವನ್ನು ಕೂಡಾ ನಾನು ಬೆಂಬಲಿಸಲು ಸಿದ್ಧಳಾಗಿದ್ದೇನೆ. ಅದೇ ರೀತಿ ಗುಹ್ಯರೋಗದಿಂದ ಬಳಲುತ್ತಿರುವವರ ವಿಚಾರದಲ್ಲೂ ಇದೇ ರೀತಿಯ ಕ್ರಮವನ್ನು ಅನುಸರಿಸಲು ಸಿದ್ಧಳಿದ್ದೇನೆ. ಆದರೆ ಅಂತಹ ಕ್ರಮವಾದರೂ ನಮ್ಮ ದೇಶದಲ್ಲಿ ಕಾರ್ಯ ಸಾಧುವೆ ಎಂಬುದು ನನ್ನ ಪ್ರಶ್ನೆಯಾಗಿದೆ. ನಮ್ಮ ದೇಶದಲ್ಲಿ ಅಷ್ಟೊಂದು ದೊಡ್ಡ ಪ್ರಮಾಣದ ನಗರಗಳಿಲ್ಲ. ರಾಜಧಾನಿ ದೆಹಲಿಯನ್ನೇ ನೈಜ ಭಾರತ ಎಂದು ನಾವು ಪರಿಗಣಿಸುವ ಹಾಗಿಲ್ಲ. ನಮ್ಮ ದೇಶವು ಹಳ್ಳಿಗಳಿಂದ ಕೂಡಿದೆ. ಹಾಗಾಗಿಯೇ ಇಂತಹ ನಿರ್ಣಯಗಳ ಅನುಷ್ಠಾನ ಅಸಾಧ್ಯವಾಗಿದೆ. ಇಂತಹ ನಿರ್ಣಯಗಳನ್ನು ತರುವಾಗ ನಮಗೆ ಪರಿಕಲ್ಪನೆಯೇ ಇರುವುದಿಲ್ಲ. ಗ್ರಾಮೀಣ ಭಾರತದ ಆಗತ್ಯಗಳನ್ನು ಪೂರೈಸಬಲ್ಲಷ್ಟು ಪ್ರಮಾಣದಲ್ಲಿ ಸರಕಾರ ಸಂಪನ್ಮೂಲಗಳನ್ನು ಹೊಂದಿದೆಯೇ ಎಂಬುದರ ಸರಿಯಾದ ಗ್ರಹಿಕೆ ಇಲ್ಲದೆಯೇ ಇಂತಹ ನಿರ್ಣಯಗಳನ್ನು ಮಂಡಿಸಿದರೆ ಅದು ಫಲಕಾರಿಯಾಗುವುದಿಲ್ಲ. ನಮ್ಮ ದೇಶದ ಜನರು ಬುದ್ಧಿಶಾಲಿಗಳಾಗಿದ್ದಾರೆ. ಅವರಿಗೂ ಅನೇಕ ವಿಷಯಗಳಲ್ಲಿ ತಮ್ಮದ್ದೇ ಆದ ದೃಷ್ಟಿಕೋನ ಇರುತ್ತದೆ. ವಿಚಾರ ಮಾಡುವ ಪ್ರಜ್ಞೆಯೂ ಇರುತ್ತದೆ. ಗ್ರಾಮಗಳಲ್ಲಿನ ಕಡು ಬಡವರ ಬಳಿಗೆ ಹೋಗಿ ನೋಡಿ. ಅವರಲ್ಲಿ ಈ ವಿಷಯದ ಬಗ್ಗೆ ತಮ್ಮದ್ದೇ ಆದ ಅಭಿಪ್ರಾಯಗಳನ್ನು ಹೊಂದಿರುವುದನ್ನು ನೀವು ಖಂಡಿತವಾಗಿಯೂ ಕಾಣುತ್ತೀರಿ. ಈ ನಿರ್ಣಯವನ್ನು ಬಹುಶಃ ಯಾರೂ ಸಮರ್ಥಿಸಲಾರರು. ಅಂದರೆ ಅದಕ್ಕೆ ಎಲ್ಲಿಯೂ ಬೆಂಬಲ ಸಿಗಲಾರದು. ನಾವು ಜನತೆಯ ದೃಷ್ಟಿಯಿಂದ ಇಂತಹ ವಿಷಯಗಳನ್ನು ಪರಾಮರ್ಶಿಸಬೇಕು. ಅವರಿಗೆ ತಿಳುವಳಿಗೆ ನೀಡಿ ಕ್ರಮೇಣ ಅವರನ್ನು ನಮ್ಮ ದಾರಿಗೆ ತರಬೇಕು. ಈ ದಿಸೆಯಲ್ಲಿ ಕೆಲಸ ನಡೆಯುತ್ತಿದೆ. ಆದರೆ ಈ ದಿಸೆಯಲ್ಲಿ ಇನ್ನು ಬಹಳಷ್ಟನ್ನು ನಾವು ಸಾಧಿಸಬೇಕಾಗಿದೆ. ಯಾವುದೇ ಒಂದು ವಿಷಯವನ್ನಾದರೂ ನೀವು ಇನ್ನೊಬ್ಬರ ಮೇಲೆ ಹೇರುವುದು ಸಾಧ್ಯವಿಲ್ಲ. ನೀವು ನಿರೀಕ್ಷಿಸಿದಂತೆಯೇ ಅಥವಾ ನೀವು ಯೋಚಿಸಿದಂತೆಯೇ ಇನ್ನೊಬ್ಬರು ಯೋಚಿಸಬೇಕೆಂದಾಗಲಿ, ಕೆಲಸ ಮಾಡಬೇಕೆಂದಾಗಲಿ ಭಾವಿಸಬಾರದು. ನೀವು ಏನನ್ನು ಯೋಚಿಸುತ್ತೀರಿ ಮತ್ತು ಏನನ್ನು ಮಾಡಲು ಉದ್ದೇಶಿಸಿದ್ದೀರಿ ಎಂಬುದನ್ನು

ವ್ಯಾವಹಾರಿಕವಾದ ರೀತಿಯಲ್ಲಿ ಕಾರ್ಯರೂಪಕ್ಕೆ ತಂದಲ್ಲಿ ಮಾತ್ರವೇ ಜನರು ಅದನ್ನು ಒಪ್ಪಿಕೊಳ್ಳುವರು.

ಕುಷ್ಠರೋಗ ನಿವಾರಣೆಯ ಕಾರ್ಯಕ್ರಮದಲ್ಲಿ ಇಂದು ನಡೆಯುತ್ತಿರುವುದಾದರೂ ಏನು? ಕುಷ್ಠರೋಗದಿಂದ ನರಳುತ್ತಿರುವ ಗಂಡಸರು ಮತ್ತು ಹೆಂಗಸರನ್ನು ಬಹಿಷ್ಕೃತರಂತೆ ಮನೆಗಳಿಂದ ಹೊರಹಾಕಿರುವ ಪ್ರಕರಣಗಳು ಒಂದರ ಹಿಂದೆ ಒಂದರಂತೆ ನನ್ನ ಕಿವಿಗೆ ಬೀಳುತ್ತಲೇ ಇದೆ. ಅಂತಹವರು ನಮ್ಮ ಊರಿನ ರಸ್ತೆಗಳಲ್ಲಿ ಬಿಕ್ಷೆ ಬೇಡುತ್ತಿದ್ದಾರೆ. ಅಂತಹವರು ದೆಹಲಿಯಲ್ಲೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಅಂತಹವರು ತಮ್ಮ ಹೊಟ್ಟೆ ಹೊರೆಯಲು ಅದನ್ನೇ ವೃತ್ತಿಯಾಗಿ ಮಾಡಿಕೊಳ್ಳುವ ಅನಿವಾರ್ಯತೆ ಇದೆ. ಮೊನ್ನೆ ನಾನು ಕುಷ್ಠ ರೋಗಿಗಳ ಚಿಕಿತ್ಸಾಲಯವೊಂದಕ್ಕೆ ಹೋಗಿದ್ದಾಗ ಅಲ್ಲಿ ಸಂಪೂರ್ಣ ಗುಣಮುಖರಾದ ಇಬ್ಬರು ಮಹಿಳಾ ಕುಷ್ಠರೋಗಿಗಳನ್ನು ನೋಡಿದೆ. ಅವರಿಂದ ಸೋಂಕು ತಗಲುವ ಯಾವ ಸಾಧ್ಯತೆಗಳೂ ಇಲ್ಲವೆಂದು ವೈದ್ಯರು ದೃಢಪಡಿಸಿದ್ದಾರೆ. ಆದರೆ ಅವರು ಮರಳಿ ತಮ್ಮ ಗಂಡಂದಿರ ಬಳಿಗೆ ಹೋಗಲಾರರು. ಏಕೆಂದರೆ ಅವರ ಗಂಡಂದಿರು ಅವರನ್ನು ಸ್ವೀಕರಿಸಲು ಸಿದ್ಧರಿಲ್ಲ. ಹೀಗಾಗಿ ಇಂತಹ ಮಹಿಳೆಯರನ್ನು ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಗುರಿಪಡಿಸುವ ಅಥವಾ ಅವರನ್ನು ನಿರ್ವೀರ್ಯರನ್ನಾಗಿ ಮಾಡುವ ಈ ನಿರ್ಣಯದ ಪರವಾಗಿ ಮಾತನಾಡುವ ಬದಲು ಸದನದ ಮಹಿಳಾ ಸದಸ್ಯರು ಇಂತಹ ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಟ ನಡೆಸುವುದು ಹೆಚ್ಚು ಅಪೇಕ್ಷಣೀಯವಾಗಿದೆ. ಗುಣಮುಖರಾದ ಈ ಇಬ್ಬರು ಕುಷ್ಠರೋಗಿಗಳಿಗೆ ಉದ್ಯೋಗ ಅವಕಾಶ ಕಲ್ಪಿಸುಲು ಸಾಧ್ಯವಾದರೆ ಅದು ನನ್ನ ಅದೃಷ್ಟ ಎಂದು ನಾನು ಭಾವಿಸುತ್ತೇನೆ. ಅವರಿಂದು ಸಮಾಜದ ದುಡಿಯುವ ವರ್ಗಕ್ಕೆ ಸೇರಬೇಕು. ಅವರಿಗೆ ಮತ್ತೆಂದೂ ಈ ವ್ಯಾಧಿಯ ಸೋಂಕು ತಗಲುವುದಿಲ್ಲವೆಂಬ ವಿಶ್ವಾಸ ನನಗಿದೆ. ಹಾಗಾಗಿ ಅಂತಹ ವ್ಯಾಧಿ ಪೀಡಿತರನ್ನು ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಒಳಪಡಿಸುವುದು ಅತ್ಯಂತ ಕ್ರೂರ ಮತ್ತು ಅಮಾನವೀಯ ನಡವಳಿಕೆಯಾಗಿದೆ ಎಂಬ ಅಂಶವನ್ನು ನಾನು ಈ ಸಂದರ್ಭದಲ್ಲಿ ಒತ್ತಿ ಹೇಳುತ್ತಿದ್ದೇನೆ. ಈ ಸಮಸ್ಯೆಯನ್ನು ನಿವಾರಿಸುವ ನಿಟ್ಟಿನ ಮಾರ್ಗೋಪಾಯಗಳನ್ನು ಕಂಡು ಹಿಡಿಯಲು ಸದನದ ಸದಸ್ಯರನ್ನು ಭೇಟಿ ಮಾಡಿ ಚರ್ಚಿಸಲು ನಾನು ಸದಾ ಸಿದ್ಧಳಿದ್ದೇನೆ. ಆದರೆ ಈ ನಿರ್ಣಯವನ್ನು ಯಾವುದೇ ಕಾರಣಕ್ಕೂ ನಾನು ಬೆಂಬಲಿಸಲು ಸಿದ್ಧಳಿಲ್ಲ. ನಾನು ಮೊದಲೇ ಸ್ಪಷ್ಟಪಡಿಸಿರುವಂತೆ ಈ ನಿರ್ಣಯವು ವೈಜ್ಞಾನಿಕ ತಳಹದಿಯಲ್ಲಿ ಅವೈಜ್ಞಾನಿಕವಾಗಿದೆ. ನೈತಿಕ ದೃಷ್ಟಿಯಲ್ಲಿ ಅತ್ಯಂತ ಅನೈತಿಕವಾಗಿದೆ ಮತ್ತು ವ್ಯಾವಹಾರಿಕವಾದ ದೃಷ್ಟಿಯಿಂದ ಅವ್ಯವಹಾರಿಕವಾಗಿದೆ.

ಇನ್ನು ಈ ವಿಧೇಯಕಕ್ಕೆ ಸೂಚಿಸಿರುವ ವಿಷಯದಲ್ಲಿ ಹೇಳುವುದಾದರೆ ಸ್ವಯಂ ಪ್ರೇರಣೆಯಿಂದ ಸಂತಾನ ಶಕ್ತಿ ಹರಣ ಶಸ್ತ್ರಕ್ರಿಯೆಗೆ ಮುಂದಾಗುವವರ ಮೇಲೆ ಯಾವುದೇ ರೀತಿಯ ನಿಷೇಧ ಹೇರಲಾಗಿಲ್ಲ. ಪಟ್ಟಣಗಳಲ್ಲಿ ನೂರಾರು ಮಂದಿ ಅಂತಹ ಶಸ್ತ್ರಚಿಕಿತ್ಸೆಗೆ ಒಳಗಾಗುತ್ತಿದ್ದಾರೆ. ಹಾಗೆ ಅಪೇಕ್ಷಿಸಲು ಬರುವವರಿಗೆ ಅದರ ಪರಿಣಾಮಗಳ ಬಗ್ಗೆ ನಾನು ಎಚ್ಚರಿಸುತ್ತೇನೆ. ಆದರೆ ಸ್ವಯಂ ಪ್ರೇರಣೆಯಿಂದ ಅವರು ಮುಂದಾದಲ್ಲಿ ನಾನು ಅವರ ದಾರಿಗೆ ಅಡ್ಡ ಬರುವುದಿಲ್ಲ.

ಸಂದರಯ್ಯನವರು ಈ ನಿರ್ಣಯಕ್ಕೆ ಸೂಚಿಸಿರುವ ಗೊತ್ತುವಳಿ ಅರ್ಥಹೀನವಾಗಿದೆ.*

ಮಾನ್ಯ ಸದಸ್ಯರೊಬ್ಬರು ತಂದಿರುವ ತಿದ್ದುಪಡಿಯಲ್ಲಿ ಪ್ರೌಢರನ್ನು ನಿಸ್ಸತ್ವರನ್ನಾಗಿ ಮಾಡಬಾರದು ಎಂದು ಹೇಳಿದ್ದಾರೆ. ಈ ತಿದ್ದುಪಡಿಯನ್ನು ಸೂಚಿಸಿರುವ ಸದಸ್ಯರು ನಿಸ್ಸತ್ವ ಎಂಬ ಶಬ್ದವನ್ನು ನಿರ್ವೀರ್ಯ ಎಂಬ ಅರ್ಥದಲ್ಲಿ ಬಳಸಿದ್ದಾರೆಯೇ ? ಅಥವಾ ದೈಹಿಕವಾಗಿ ಅಥವಾ ಮಾನಸಿಕವಾಗಿ ಸಾಮರ್ಥ್ಯವನ್ನು ಕಳೆದುಕೊಂಡವರು ಎಂಬ ಅರ್ಥದಿಂದ ಬಳಸಿದ್ದಾರೆಯೇ ಎಂಬುದು ನನಗೆ ತಿಳಿದಿಲ್ಲ. ಹಾಗಾಗಿ ಈ ತಿದ್ದುಪಡಿಯಿಂದ ಏನಾದರೂ ಪ್ರಯೋಜನವಾಗುತ್ತದೆ ಎಂದಾಗಲಿ ಅಥವಾ ಅದು ಹೆಚ್ಚು ಅರ್ಥಪೂರ್ಣವಾಗಿದೆ ಎಂದಾಗಲಿ ಭಾವಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಸದನವು ಈ ನಿರ್ಣಯ ಮತ್ತು ಅದಕ್ಕೆ ಬಂದಿರುವ ತಿದ್ದುಪಡಿಗಳನ್ನು ತಿರಸ್ಕರಿಸುವುದೆಂದು ನಾನು ಭಾವಿಸುತ್ತೇನೆ.

---

* ಏಕೆಂದರೆ ಕುಷ್ಠರೋಗದಿಂದ ಬಳಲುತ್ತಿರುವವರನ್ನು ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಒಳಪಡುವಂತೆ ಅವರ ಮನ ಪರಿವರ್ತಿಸಲು ಸದನದ ಮಾನ್ಯ ಸದಸ್ಯರು ಮುಂದಾದರೆ ಅದಕ್ಕೆ ನಾನು ಏನನ್ನು ಹೇಳಲು ಬಯಸುವುದಿಲ್ಲ. ಆದರೆ ನಾನು ಈಗ ಹೇಳಿರುವ ಎಲ್ಲ ದೇಶಗಳಲ್ಲೂ ನನಗೆ ತಿಳಿದಿರುವಂತೆ ಅಂತಹ ನಿರ್ಬಂಧಕ ಕಾಯ್ದೆಗಳಿಲ್ಲ.

## 24. ಜಿನೀವಾ ಒಡಂಬಡಿಕೆ ವಿಧೇಯಕ *

ಮಾನ್ಯ ಉಪ ಸಭಾಪತಿಗಳೇ, ಮಾನ್ಯ ಸಚಿವರು ಅತ್ಯಂತ ಸಮರ್ಥವಾಗಿ ಸದನದಲ್ಲಿ ಮಂಡಿಸಿದ ಜಿನೀವಾ ಒಡಂಬಡಿಕೆ ವಿಧೇಯಕವನ್ನು ಬೆಂಬಲಿಸಲು ನನಗೆ ಅತ್ಯಂತ ಸಂತಸವಾಗುತ್ತಿದೆ. ಕಳೆದ ಹದಿನೈದು ವರ್ಷಗಳಿಂದ ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಮಿತಿಯೊಂದಿಗೆ ನಾನು ಹೊಂದಿರುವ ಅತ್ಯಂತ ನಿಕಟ ಸಂಪರ್ಕ ಮತ್ತು ನಮ್ಮದೇ ಆದ ಭಾರತೀಯ ರೆಡ್‌ಕ್ರಾಸ್ ಸಂಘಟನೆಯೊಂದಿಗೆ ಅದರ ಸ್ಥಾಪನೆಯ ಕಾಲದಿಂದಲೂ ನಾನು ಹೊಂದಿರುವ ಸಂಬಂಧಗಳ ಹಿನ್ನೆಲೆಯಲ್ಲಿ ಈ ಒಡಂಬಡಿಕೆಗಳ ವಿಷಯದಲ್ಲಿ ತೆಗೆದುಕೊಂಡಿರುವ ಪ್ರತಿಯೊಂದು ನಿರ್ಣಯವನ್ನು ನಾನು ತಿಳಿದಿದ್ದೇನೆ. ಯುದ್ಧಗಳು ಮತ್ತು ಒಟ್ಟಾರೆಯಾಗಿ ಇಡೀ ಜಗತ್ತಿನಲ್ಲಿ ಬದಲಾಗುತ್ತಿರುವ ಪರಿಸ್ಥಿತಿಯ ಬೆಳಕಿನಲ್ಲಿ ಈ ಒಡಂಬಡಿಕೆಗಳಲ್ಲಿ ಕೆಲವೊಂದು ಬದಲಾವಣೆಗಳನ್ನು ತರುವುದು ಅನಿವಾರ್ಯವಾಗಿದೆ. ರಣರಂಗದಲ್ಲಿ ಸೈನಿಕರು ಕೊಲ್ಲಲ್ಪಟ್ಟು, ಗಾಯಾಳುಗಳಾಗಿ ಯುದ್ಧಭೂಮಿಯಲ್ಲೇ ಯಾವ ಶುಶ್ರೂಷೆಯೂ ಇಲ್ಲದೆ ಅನಾಥರಾಗಿ ಯಾತನೆ ಪಡುತ್ತಿರುವುದನ್ನು ಕಂಡು ಮರುಗಿದ ವ್ಯಕ್ತಿಯೊಬ್ಬರ ಮಾನವೀಯ ಅನುಕಂಪದ ಫಲವಾಗಿ ರೆಡ್‌ಕ್ರಾಸ್ ಸಂಘಟನೆ ಅಸ್ತಿತ್ವಕ್ಕೆ ಬಂದಿತು ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಸಹಜವಾಗಿಯೇ ಪ್ರಥಮ ಒಡಂಬಡಿಕೆಯು ಗಾಯಾಳುಗಳಾಗಿ ಅಥವಾ ಅಸ್ವಸ್ಥರಾಗಿ ಬಿದ್ದ ಸೈನಿಕರ ರಕ್ಷಣೆಗೆ ಸಂಬಂಧಿಸಿದ್ದಾಗಿದೆ. ಅನಂತರದಲ್ಲಿ ಅದರ ಕಾರ್ಯಕ್ಷೇತ್ರ ಇನ್ನಷ್ಟು ವಿಸ್ತೃತಗೊಂಡಿತು. ಯುದ್ಧ ಭೂಮಿಯಲ್ಲಿ ಅಸ್ವಸ್ಥರಾಗಿ ಅಥವಾ ಗಾಯಾಳುಗಳಾಗಿ ಬಿದ್ದವರಿಗೆ ಸಹಾಯ ನೀಡುವ ನಿಟ್ಟಿನಲ್ಲಿ ಅದು ಕಾರ್ಯ ನಿರ್ವಹಿಸಲು ಪ್ರಾರಂಭಿಸಿತು. ನಂತರದಲ್ಲಿ ಅದರ ಸೇವೆ ಯುದ್ಧ ಕೈದಿಗಳಿಗೂ ಅನ್ವಯವಾಯಿತು. ಈ ಯುದ್ಧ ಕೈದಿಗಳಿಗೆ ಒದಗಿಸಲಾದ ರಕ್ಷಣೆಯು ನಂತರದಲ್ಲಿ ಜಗತ್ತಿನ ಸಾಮಾಜಿಕ ಪ್ರಜ್ಞೆ ವಿಸ್ತರಿಸಿದಂತೆ ಇನ್ನಷ್ಟು ಹೆಚ್ಚಿನ ವ್ಯಾಪ್ತಿಯನ್ನು ಪಡೆದು ರೆಡ್‌ಕ್ರಾಸ್‌ನಂತಹ ಸಂಘಟನೆ ಇನ್ನು ಹೆಚ್ಚಿನದನ್ನು ಮಾಡಬಹುದೆಂದು ಜನರು ಭಾವಿಸತೊಡಗಿದರು. ನಾಲ್ಕನೇ ಒಡಂಬಡಿಕೆಯು ಅದರ ಸೇವೆಯನ್ನು ಪೌರರಿಗೆ ವಿಸ್ತರಿಸಬೇಕೆಂದು ಅಭಿಪ್ರಾಯಕ್ಕೆ ಬಂದಿದೆ. ಮಾನ್ಯ ಸಚಿವರು ಪ್ರತಿಯೊಂದನ್ನು ಅತ್ಯಂತ ಸ್ಪಷ್ಟವಾಗಿ ಹೇಳಿದ್ದಾರೆ. ಹಾಗಾಗಿ ಅವರು ಹೇಳಿದುದನ್ನೇ ಪುನರುಚ್ಚರಿಸಲು ನಾವು ಬಯಸುವುದಿಲ್ಲ. ಆದರೆ ನನ್ನ ಮಾನ್ಯ ಮಿತ್ರರಾದ ಶ್ರೀ ಭೂಪೇಶ್ ಗುಪ್ತ ಅವರು ಹೇಳಿರುವ ವಿಚಾರಗಳಿಗೆ ಸಂಬಂಧಿಸಿದಂತೆ ಕೆಲವೊಂದು ಮಾತುಗಳನ್ನು ಆಡಲು ನಾನು ಇಚ್ಛಿಸುತ್ತೇನೆ. ಅವರು ಬಹಳಷ್ಟು ಮಾತನಾಡಿ "ಇಂತಹ ಒಡಂಬಡಿಕೆಗಳಿಂದ ಏನು ಪ್ರಯೋಜನ ? ಪ್ರತಿಯೊಬ್ಬರೂ ಅದನ್ನು ಅಲಕ್ಷಿಸುತ್ತಾರೆ" ಎಂದು ಹೇಳಿದ್ದಾರೆ. ಜಗತ್ತಿನಲ್ಲಿ ಕೆಟ್ಟದ್ದು ಯಾವಾಗಲೂ ಇದ್ದೇ ಇರುತ್ತದೆ. ಆದರೆ ಅದರ ವಿರುದ್ಧ ಒಳ್ಳೆಯತನ ಹೋರಾಟ ನಡೆಸಬಾರದು ಎಂದೇನಿಲ್ಲ. ಯುದ್ಧವು ಒಂದು ಮೃಗೀಯ ನಡವಳಿಕೆ. ಇಂತಹ ಯುದ್ಧದ ಸಂದರ್ಭದಲ್ಲಿ ಮನುಷ್ಯ ಪ್ರಾಣಿಯ ಮಟ್ಟಕ್ಕೆ ಇಳಿಯುತ್ತಾನೆ. ಆದರೆ ಮನುಷ್ಯ ಎಲ್ಲ ಕಾಲದಲ್ಲಿಯೂ ಪ್ರಾಣಿಯಂತೆಯೇ ವರ್ತಿಸಬೇಕಾಗಿಲ್ಲ. ಯುದ್ಧದಂತಹ

---

* ರಕ್ಷಣಾ ಸಚಿವ ಶ್ರೀ ವಿ.ಕೆ. ಕೃಷ್ಣ ಮೆನನ್ ಅವರು ಮಂಡಿಸಿದ ಜಿನೀವಾ ಒಡಂಬಡಿಕೆ ವಿಧೇಯಕ 1960 ಕುರಿತು ಮಾತನಾಡುತ್ತಾ ( ರಾಜ್ಯಸಭೆ ಚರ್ಚೆ, ಫೆಬ್ರವರಿ 16, 1960 ಸಿಸಿ 860 - 864).

ಅತ್ಯಂತ ಅನಾಗರಿಕ ಮತ್ತು ಬರ್ಬರ ವಿನಾಶಕಾರಿ ನಡವಳಿಕೆಯ ಮಧ್ಯದಲ್ಲಿಯೂ ಮನುಷ್ಯರು ಮತ್ತು ಸರ್ಕಾರಗಳು ಮಾನವೀಯ ನಡವಳಿಕೆಗಳನ್ನು ತೋರುವುದು ಸಾಧ್ಯ. ತನ್ನ ನೂರು ವರ್ಷಗಳ ಇತಿಹಾಸದಲ್ಲಿ ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆ ಇದನ್ನು ತೋರಿಸಿಕೊಟ್ಟಿದೆ. ಈ ನಿಟ್ಟಿನಲ್ಲಿ ಅದು ತಾನು ನಂಬಿದ ಮೌಲ್ಯಗಳತ್ತ ಜನರ ಗಮನವನ್ನು ಸೆಳೆದಿದೆ ಮತ್ತು ಈ ದಿಸೆಯಲ್ಲಿ ಮಹತ್ತರವಾದ ಕೊಡುಗೆಯನ್ನು ನೀಡಿದೆ. ವಿಶ್ವ ಸಂಸ್ಥೆಯೊಂದಿಗಾಗಲಿ, ಲೀಗ್ ಆಫ್ ನೇಷನ್ಸ್ ಸಂಘಟನೆಯೊಂದಿಗಾಗಲಿ ಸಹಮತ ಇಲ್ಲದ ದೇಶಗಳು ಆ ವೇದಿಕೆಗಳಿಂದ ಹೊರ ನಡೆದಿವೆ. ಆದರೆ ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆಯಿಂದ ಯಾವೊಂದು ರಾಷ್ಟ್ರವು ಹೊರಬಂದಿದ್ದಿಲ್ಲ. ಹೀಗಾಗಿ ಅಂತರರಾಷ್ಟ್ರೀಯ ಸಂಘಟನೆ ವಿಶ್ವ ಸಂಸ್ಥೆಗಿಂತಲೂ ಹೆಚ್ಚು ಸದಸ್ಯರನ್ನು ಹೊಂದಿದೆ. ರೆಡ್‌ಕ್ರಾಸ್ ಸಂಘಟನೆಯ ಒಡಂಬಡಿಕೆಗಳನ್ನು ಅತ್ಯಂತ ಎಚ್ಚರದಿಂದ ರೂಪಿಸಲಾಗಿದೆ. ಹಲವು ತಿಂಗಳುಗಳು, ಹಲವು ವರ್ಷಗಳು ಸರಿದು ಹೋಗಬಹುದು. ಆದರೆ ರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆಯ ಸಮ್ಮತಿ ಪಡೆದೇ ನಮ್ಮ ಕೆಲಸ ಮುಂದುವರಿಯುವುದು ಮತ್ತು ಈ ನಿಟ್ಟಿನಲ್ಲಿ ಸಂಪೂರ್ಣ ಸಹಾನುಮತ ಏರ್ಪಡಲಿದೆ. ಪ್ರತಿಯೊಂದು ಒಡಂಬಡಿಕೆಯನ್ನೂ ಮುನ್ನೆಚ್ಚರಿಕೆ, ಸಮಗ್ರ ವಿಶ್ಲೇಷಣೆ ಮತ್ತು ಪ್ರತಿಯೊಬ್ಬರ ಸಂಪೂರ್ಣ ಸಹಮತದಿಂದಲೇ ರೂಪಿಸಲಾಗಿದೆ. ಈ ವಿಧೇಯಕವನ್ನು ಸಂಸತ್ತಿನ ಮುಂದೆ ತರಲು ಭಾರತ ಸರ್ಕಾರ ಇಷ್ಟೊಂದು ದೀರ್ಘ ಅವಧಿಯನ್ನು ತೆಗೆದುಕೊಂಡಿದೆ ಎಂಬುದು ನಿಜಕ್ಕೂ ವಿಷಾದ ಪಡಬೇಕಾದ ಸಂಗತಿಯಾಗಿದೆ. ಒಡಂಬಡಿಕೆಗೆ 1949ರಲ್ಲೇ ಹಸ್ತಾಕ್ಷರವಾಗಿದ್ದು, ನಮ್ಮ ಸರ್ಕಾರವೂ ಅದರಲ್ಲಿ ಭಾಗಿಯಗಿತ್ತು. ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆಯು ರೂಪಿಸುವ ಒಡಂಬಡಿಕೆಗಳಲ್ಲಿ ಸದಸ್ಯ ರಾಷ್ಟ್ರಗಳ ಸರ್ಕಾರಗಳೆಲ್ಲವೂ ಭಾಗಿಯಾಗಿರುತ್ತದೆ. ಅದೇ ವೇಳೆಗೆ ರಾಷ್ಟ್ರೀಯ ರೆಡ್‌ಕ್ರಾಸ್ ಸೊಸೈಟಿಗಳೂ ಈ ಸಂಘಟನೆಯ ಸದಸ್ಯತ್ವ ಹೊಂದಿರುತ್ತವೆ. ಸೊಸೈಟಿಗಳು ಯಾವುದೇ ಹೊಣೆಗಾರಿಕೆಗಳನ್ನು ಹೊತ್ತಿರುವುದಿಲ್ಲ. ಈ ಒಡಂಬಡಿಕೆಗಳನ್ನು ಯುದ್ದ ಅವಧಿಯಲ್ಲಿ ಅಲಕ್ಷಿಸಲು ಅಥವಾ ರದ್ದುಪಡಿಸಲು ಸಾಧ್ಯವಿದ್ದರೂ ಕೂಡಾ ಅಂತಾರಾಷ್ಟ್ರೀಯ ಸಂಘಟನೆ ಶಾಂತಿಯ ಕಾಲದಲ್ಲಿ ಬಹಳಷ್ಟು ಕೆಲಸವನ್ನು ಮಾಡುತ್ತದೆ ಎಂಬ ಅಂಶವನ್ನು ನಿಮ್ಮ ನೆನಪಿಗೆ ತರಲು ಬಯಸುತ್ತೇನೆ. ಇಂದಿಗೂ ಅಲ್ಜೀರಿಯಾದ ಶಿಬಿರಗಳಲ್ಲಿರುವ ಯುದ್ದ ಕೈದಿಗಳ ವಿಷಯದಲ್ಲಿ ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆ ಬಹಳಷ್ಟು ಕೆಲಸ ಮಾಡುತ್ತಿದೆ. ಯುದ್ಧ ಕೈದಿಗಳ ವಿಷಯದಲ್ಲಿ ರೆಡ್‌ಕ್ರಾಸ್ ಅತ್ಯುತ್ತಮ ಶಿಫಾರಸುಗಳನ್ನು ಮಾಡಿದೆ. ಈ ದಿಸೆಯಲ್ಲಿ ಅದು ಏಕೋಭಾವದಿಂದ ಕಾರ್ಯ ನಿರ್ವಹಿಸುತ್ತಿದೆ. ಅಲ್ಜೀರಿಸ್‌ನಲ್ಲಿನ ಕೈದಿಗಳ ಶಿಬಿರದಲ್ಲಿ ಯುದ್ಧ ಕೈದಿಗಳನ್ನು ಸಂದರ್ಶಿಸಿದ ಸಮಿತಿಯು ಈಚೆಗೆ ಸಲ್ಲಿಸಿರುವ ವರದಿಯಿಂದ ಈ ಅಂಶವನ್ನು ನೀವು ಮನಗಾಣಬಹುದು. ಪಕ್ಷಪಾತದ ಪ್ರಶ್ನೆಯೇ ಇಲ್ಲ. ರೆಡ್‌ಕ್ರಾಸ್ ಯಾರ ಪಕ್ಷವನ್ನೂ ವಹಿಸುವುದಿಲ್ಲ. ರಾಜಕೀಯದಲ್ಲಿ ಅದಕ್ಕೆ ಆಸಕ್ತಿಯೂ ಇಲ್ಲ. ರೆಡ್‌ಕ್ರಾಸ್ ಸಂಘಟನೆಯ ಆದರ್ಶಗಳನ್ನೇ ಪಾಲಿಸುತ್ತದೆ. ನಿಮಗೇ ಗೊತ್ತಿರುವಂತೇ ಸಂಘಟನೆಯ ಧ್ಯೇಯಗಳು ಸೀಮಿತವಾಗಿವೆ ಮತ್ತು ಅವು ಮಾನವೀಯ ಅಗತ್ಯಗಳನ್ನಷ್ಟೇ ದೃಷ್ಟಿಯಲ್ಲಿಟ್ಟುಕೊಂಡಿರುತ್ತದೆ. ಸಚಿವರು ಹೇಳಿರುವಂತೆ ರೂಢಿಯಲ್ಲಿರುವ ಕಾನೂನು ಕಾಯ್ದೆಗಳಂತೆ ಇದು ನೈತಿಕತೆಗೆ ಹೆಚ್ಚಿನ ಒತ್ತು ಕೊಡುತ್ತದೆ. ಯಾವುದೇ ದೇಶದ ಅಥವಾ

ಅಂತಾರಾಷ್ಟ್ರೀಯ ಕಾಯ್ದೆಯಿರಲಿ ನೈತಿಕತೆಗೇ ಅಲ್ಲಿ ಆದ್ಯತೆ. ಹೀಗೆ ನಾವು ಈ ಒಡಂಬಡಿಕೆಗಳನ್ನು ಅಂತಹ ಸ್ಫೂರ್ತಿ, ಆದರ್ಶಗಳಿಂದ ನೋಡಬೇಕು. ಈ ವಿಧೇಯಕದಲ್ಲಿ ಒಳಗೊಂಡಿರುವ ಪ್ರಕ್ರಿಯೊಂದನ್ನು ನಾವು ಈ ಸ್ಫೂರ್ತಿಯಿಂದ ಸ್ವೀಕರಿಸಬೇಕು.

ಈ ಸಂದರ್ಭದಲ್ಲಿ ನಾನು ಸಚಿವರಲ್ಲಿ ಒಂದು ವಿನಂತಿ ಮಾಡಿಕೊಳ್ಳಲು ಬಯಸುತ್ತೇನೆ. ಎರಡು ವರ್ಷಗಳ ಹಿಂದೆ ಜರುಗಿದ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಈ ಒಡಂಬಡಿಕೆಗೆ ಸಂಬಂಧಿಸಿದ ನಿಯಮಾವಳಿಗಳ ಕರಡನ್ನು ರಾಷ್ಟ್ರೀಯ ರೆಡ್‌ಕ್ರಾಸ್ ಸೊಸೈಟಿಗಳು ಮತ್ತು ಸರ್ಕಾರಗಳ ಅಂಗೀಕಾರಕ್ಕಾಗಿ ಕಳುಹಿಸಿಕೊಡಲಾಯಿತು. ಅದಕ್ಕೆ ಮುನ್ನ ಸುಮಾರು ಒಂದೂವರೆ ವರ್ಷಗಳ ಕಾಲ ವ್ಯಾಪಕ ಚರ್ಚೆ ನಡೆಸಿ, ಬೇರೆ ಬೇರೆ ರಾಷ್ಟ್ರಗಳು, ಸರ್ಕಾರಗಳು ಮತ್ತು ರೆಡ್‌ಕ್ರಾಸ್ ಸಂಘಟನೆಗಳ ಜೊತೆ ಸಮಾಲೋಚಿಸಿಯೇ ಈ ನಿಯಮಾವಳಿಗಳನ್ನು ರೂಪಿಸಲಾಗಿತ್ತು. ಈ ನಿಯಮಗಳು ಮಾನವೀಯ ಆದರ್ಶಗಳು ಮತ್ತು ಅಗತ್ಯಗಳಿಗೆ ಅನುಗುಣವಾಗಿದ್ದು ಯುದ್ಧದ ದುಷ್ಪರಿಣಾಮಗಳಿಂದ ನಾಗರಿಕರನ್ನು ಸಂರಕ್ಷಿಸುವುದೇ ಇವುಗಳ ಲಕ್ಷ್ಯವಾಗಿದೆ.

ಪರಿಣಾಮ ಯುದ್ಧಗಳನ್ನು ತಡೆಹಿಡಿಯುವ ನಿಟ್ಟಿನಲ್ಲಿ ಶೃಂಗ ಸಮ್ಮೇಳನಗಳು ಅಥವಾ ಇತರ ನಿರ್ಧಾರಗಳನ್ನು ತೆಗೆದುಕೊಳ್ಳುವುದಕ್ಕೆ ಬಹಳ ಮೊದಲೇ ಯಾವುದೇ ಒಂದು ರಾಷ್ಟ್ರ ಅಣು ಸಮರಕ್ಕೆ ಮುಂದಾದಲ್ಲಿ ಅದರ ಪರಿಣಾಮಗಳನ್ನು ಪರಾಮರ್ಶಿಸಲು ನಾವು ಸಮಿತಿಗಳನ್ನು ರೂಪಿಸಿಕೊಂಡಿದ್ದೇವೆಯೆಂಬ ಅಂಶವನ್ನು ಸದನಕ್ಕೆ ನೆನೆಪಿಸಬಯಸುತ್ತೇನೆ. ಪರಮಾಣು ಸಮರ ತಂತ್ರದ ವಿರುದ್ಧ ಪರಮಾಣು ಪರೀಕ್ಷಾ ಸ್ಫೋಟಗಳ ವಿರುದ್ಧ, ಜೈವಿಕ ಸಮರ ತಂತ್ರಗಳ ವಿರುದ್ಧ, ರಾಸಾಯನಿಕ ಸಮರ ತಂತ್ರದ ವಿರುದ್ಧ ಮತ್ತು ಇಂತಹ ಇತರ ಹೇಯ ತಂತ್ರಗಳ ವಿರುದ್ಧ ಸರ್ವಾನುಮತದ ನಿರ್ಣಯಗಳನ್ನು ಅಂಗೀಕರಿಸಿದ ಸಂಸ್ಥೆ ಎಂದರೆ ರೆಡ್‌ಕ್ರಾಸ್ ಸಂಸ್ಥೆಯೊಂದೇ ಆಗಿದೆ. ಅದು ಎಲ್ಲ ಸಂದರ್ಭಗಳಲ್ಲೂ ಒಂದೇ ಧ್ವನಿಯಲ್ಲಿ ಮಾತನಾಡಿದೆ. ಈ ನಿರ್ಣಯಗಳಿಗೆ ಯಾರೂ ಕಿವಿಗೊಡದಿರಬಹುದು. ಆದರೆ ಈ ಸಂಸ್ಥೆಯು ಇಡೀ ಜಗತ್ತಿನ ಗಮನವನ್ನು ತನ್ನೆಡೆಗೆ ಸೆಳೆದುಕೊಂಡಿದೆ ಮತ್ತು ವಿಶ್ವಸಂಸ್ಥೆಯ ಮಹಾ ಕಾರ್ಯದರ್ಶಿಗಳು ಈ ನಿರ್ಣಯಗಳ ವಿಷಯದಲ್ಲಿ ಭಾರೀ ಶ್ಲಾಘನೆ ವ್ಯಕ್ತಪಡಿಸಿದ್ದಾರೆ. ಈ ಕರಡು ನಿಯಮಗಳು ಬೇರೆ ಬೇರೆ ಸರ್ಕಾರಗಳ ಪರಿಶೀಲನೆಗೆ ಒಳಪಟ್ಟು ಇವುಗಳನ್ನು ಸರ್ಕಾರಗಳು ಅಂಗೀಕರಿಸಿದ ಬಳಿಕ ನಾವು ಮತ್ತೊಂದು ನಿರ್ಣಯವನ್ನು ಮಂಡಿಸುವ ಮೂಲಕ ಸಂಸತ್ತಿನಲ್ಲಿ ಅವುಗಳನ್ನು ಸ್ಥಿರೀಕರಿಸಬೇಕಾಗಿದೆ. ಒಟ್ಟಿನಲ್ಲಿ ಮಾನವ ಸಮುದಾಯದ ಅವಶ್ಯಕತೆಗಳಿಗೆ ಸಂಬಂಧಿಸಿದ ವಿಚಾರದಲ್ಲಿ - ಜಗತ್ತಿನ ಯಾವುದೇ ದೇಶದ ಜನಸಂಖ್ಯೆಯ, ಯಾವುದೇ ಒಂದು ಭಾಗದ ಸಂರಕ್ಷಣೆಯ ವಿಷಯದಲ್ಲಿ - ಆಯಾ ರಾಷ್ಟ್ರದ ರಕ್ಷಣಾ ಖಾತೆಯು ಸಹಜವಾಗಿಯೇ ಸಹಾಯ ನೀಡಲು ಮುಂಬರಬೇಕಿತ್ತು. ಹೀಗಾಗಿ ಮಾನ್ಯ ರಕ್ಷಣಾ ಸಚಿವರು ಈ ಕರಡು ನಿಯಮಗಳನ್ನು ಪರಿಶೀಲಿಸಿ ಅವುಗಳನ್ನು ಅನುಮೋದಿಸಬೇಕೆಂದು ನಾನು ಈ ಸಂದರ್ಭದಲ್ಲಿ ಕೇಳಿಕೊಳ್ಳುತ್ತಿದ್ದೇನೆ. ಕಳೆದ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಬೇರೆ ಬೇರೆ ರಾಷ್ಟ್ರಗಳ ಸರ್ಕಾರಗಳು ಈ ನಿಯಮಗಳಿಗೆ ಅನುಮೋದನೆ ನೀಡಿವೆ. ಅದೇ ರೀತಿ ಭಾರತೀಯ ರೆಡ್‌ಕ್ರಾಸ್ ಸೊಸೈಟಿಯು ಈ

ನಿಯಮಾವಳಿಯನ್ನು ಆರೋಗ್ಯ ಸಚಿವ ಖಾತೆಗೆ ಅನುಮೋದನೆಗಾಗಿ ಸಲ್ಲಿಸಿದೆ. ಈ ನಿರ್ಣಯಗಳ ಪ್ರತಿಗಳನ್ನು ವಿದೇಶಾಂಗ ಖಾತೆಗೂ ಕಳುಹಿಸಿದ್ದೇವೆ. ನಿರ್ಣಯಗಳ ಪ್ರತಿಗಳು ರಕ್ಷಣಾ ಖಾತೆಗೆ ತಲುಪಿಯೇ ಇಲ್ಲವೇ ನನಗೆ ತಿಳಿದಿಲ್ಲ. ಈ ಪ್ರತಿಗಳು ತಲುಪದೇ ಇದ್ದಲ್ಲಿ ನಾನು ತಕ್ಷಣವೇ ಅವುಗಳನ್ನು ರಕ್ಷಣಾ ಖಾತೆಗೆ ಕಳುಹಿಸಿಕೊಡಲಿದ್ದೇನೆ. ಈ ಕರಡು ನಿಯಮಾವಳಿಗಳಿಗೆ ಸರ್ಕಾರದ ಅನುಮತಿ ದೊರೆಯುವಂತೆ ಈ ಕಾರ್ಯವನ್ನು ತ್ವರಿತಗೊಳಿಸಲು ನಾನು ಈ ಸಂದರ್ಭದಲ್ಲಿ ಸಚಿವರನ್ನು ಮತ್ತೊಮ್ಮೆ ವಿನಂತಿಸಿಕೊಳ್ಳುತ್ತೇನೆ. ಈ ನಿಯಮಾವಳಿಗೆ ಭಾರತ ಸರ್ಕಾರವು ಬದ್ಧವಾಗಿದೆ ಎಂಬುದನ್ನು ಅಂತಾರಾಷ್ಟ್ರೀಯ ಸಮಿತಿಗೆ ತಿಳಿಸುವುದು ನನ್ನ ಕರ್ತವ್ಯವಾಗಿದೆ. ಈ ವಿಷಯದಲ್ಲಿ ಯಾವುದೇ ರೀತಿಯ ವಿಳಂಬವಾದಲ್ಲಿ ಅದು ದುರಾದೃಷ್ಟಕರ. ಈ ವಿಧೇಯಕಕ್ಕೆ ಸಂಬಂಧಿಸಿದಂತೆ ಇಷ್ಟೊಂದು ವಿಳಂಬ ಏಕಾಯಿತೋ ನನಗೆ ಗೊತ್ತಿಲ್ಲ. ಆದರೆ ಸರ್ಕಾರದ ಔಪಚಾರಿಕ ಅನುಮೋದನೆಯನ್ನು ಇನ್ನಷ್ಟು ವಿಳಂಬಿಸಬಾರದು. ಏಕೆಂದರೆ ಸರ್ಕಾರ ಅದಕ್ಕೆ ಈಗಾಗಲೇ ಅಂಗೀಕಾರ ನೀಡಿದೆ. ಇಷ್ಟು ವಿಷಯಗಳನ್ನು ಸದನದ ಮುಂದಿಡುವ ಮೂಲಕ ಈ ವಿಧೇಯಕವನ್ನು ಬೆಂಬಲಿಸಲು ನನಗೆ ಅತ್ಯಂತ ಹರ್ಷವಾಗುತ್ತಿದೆ. ಸದನವು ಅದನ್ನು ಸರ್ವಾನುಮತದಿಂದ ಅಂಗೀಕರಿಸುವುದೆಂದೂ ನಾನು ನಂಬಿದ್ದೇನೆ. *

---

* ನಂತರ ಈ ವಿಧೇಯಕವು ಸರ್ವಾನುಮತದಿಂದ ಅಂಗೀಕೃತವಾಯಿತು.

## ಸಾಮಾಜಿಕ ಮತ್ತು ಶೈಕ್ಷಣಿಕ ವಿಷಯಗಳು

### 25. ವರದಕ್ಷಿಣೆ ನಿಷೇಧ ವಿಧೇಯಕ --- 1959 *

ಈ ಸ್ವರೂಪದ ವಿಧೇಯಕದ ಔಚಿತ್ಯ ಮತ್ತು ಅದರ ಹಿಂದಿರುವ ವಿವೇಕವನ್ನು ಪ್ರಶ್ನಿಸಲು ನಾನು ಇಲ್ಲಿ ನಿಂತಿದ್ದೇನೆ. [illegible] ಸಮಾಜ ಸುಧಾರಕಿಯಾಗಿ ನಾನು ಕೆಲಸ ಮಾಡಿದವಳು. ಮಹಿಳೆಯರು ಮತ್ತು ಮಕ್ಕಳ ಸೇವೆಯಲ್ಲಿ ನನ್ನ ಕೂದಲು ಬೆಳ್ಳಗಾಗಿದೆ. ಆದರೆ ಇದೀಗ ಮಂಡಿಸಿರುವ ವಿಧೇಯಕವು ತಾನು ಇರಿಸಿಕೊಂಡಿರುವ ಧ್ಯೇಯೋದ್ದೇಶಗಳನ್ನು ಸಾಧಿಸುವುದಿಲ್ಲವೆಂಬುದು ನನ್ನ ಖಚಿತ ಅಭಿಪ್ರಾಯವಾಗಿದೆ. ಈ ಸಂಬಂಧದಲ್ಲಿ ಆಂಧ್ರಪ್ರದೇಶ ಮತ್ತು ಬಿಹಾರ ರಾಜ್ಯಗಳಲ್ಲಿ ಈಗಿರುವ ಕಾಯ್ದೆಗಳು ಸಂಪೂರ್ಣ ವಿಫಲವಾಗಿರುವ ಹಿನ್ನೆಲೆಯಲ್ಲಿ ಭಾರತ ಸರ್ಕಾರವು ಅಖಿಲ ಭಾರತ ವ್ಯಾಪ್ತಿಯ ಕಾಯ್ದೆಯೊಂದನ್ನು ರೂಪಿಸುವ ಒತ್ತಡಕ್ಕೆ, ಒಳಗಾಗಿ ಈ ವಿಧೇಯಕವನ್ನು ಮಂಡಿಸಲು ಮುಂದಾಯಿತೋ ಹೇಗೆ ಎಂದು ನಾನು ಚಕಿತಪಟ್ಟಿದ್ದೇನೆ. ಬಿಹಾರ ಮತ್ತು ಆಂಧ್ರ ಪ್ರದೇಶಗಳಲ್ಲಿ ಈಗಿರುವ ಕಾಯ್ದೆಗಳಿಂದ ಅಂತಹ ಪ್ರಯೋಜನಗಳೇನೂ ಆಗಿಲ್ಲ. ಬಹುಶಃ ಒಂದೋ ಎರಡೋ ಪ್ರಕರಣಗಳಲ್ಲಿ ಮೊಕದ್ದಮೆ ಹೂಡಿರಬಹುದು. ಆದರೆ ಒಂದೇ ಒಂದು ಪ್ರಕರಣದಲ್ಲೂ ಶಿಕ್ಷೆಯಂತೂ ಆಗಿಲ್ಲ. ಆದರೆ ನಾವು ಎಷ್ಟೇ ಪ್ರಯತ್ನಿಸಿದರೂ ನನ್ನ ತಿಳುವಳಿಕೆಯಂತೆ ಅದನ್ನು ಸುಧಾರಿಸಲು ಸಾಧ್ಯವಾಗದಿದ್ದಲ್ಲಿ, ಒಂದು ವೇಳೆ ಅದನ್ನು ಆಯ್ಕೆ ಸಮಿತಿಯ ಮುಂದೆ ಕಳುಹಿಸಿದರೂ ಕೂಡಾ ಅದರಿಂದೇನು ಪ್ರಯೋಜನವಾಗದೆಂಬ ಅಂಶವನ್ನು ನಾನು ಮಾನ್ಯ ಕಾನೂನು ಸಚಿವರ ಗಮನಕ್ಕೆ ತರಲು ಬಯಸುತ್ತೇನೆ. ಒಂದು ವೇಳೆ ಈ ವಿಧೇಯಕ ಅಂಗೀಕೃತವಾದರೆ ಅದನ್ನು ಯಾವ ರೀತಿಯಲ್ಲೂ ಜಾರಿಗೆ ತರುವುದು ಮಾತ್ರ ಎಂದೆಂದಿಗೂ ಸಾಧ್ಯವೇ ಇಲ್ಲ. ಈ ಕಾಯ್ದೆಯನ್ನು ತಂದರೆ ಅದನ್ನು ಜಾರಿಗೊಳಿಸುವುದು ನಿಮ್ಮಿಂದ ಸಾಧ್ಯವೇ ? ಒಂದು ನಿರ್ದಿಷ್ಟ ಕುಟುಂಬಕ್ಕೆ ಸೇರಿದ ನ್ಯಾಯಾಲಯಕ್ಕೆ ಹೋಗಿ ಹುಡುಗನ ತಂದೆ ಇಷ್ಟು ಹಣವನ್ನು ವರದಕ್ಷಿಣೆಯಾಗಿ ಕೇಳಿದರು ಎಂದು ಮೊಕದ್ದಮೆ ಹೂಡಲು ಸಾಧ್ಯವೇ? ಖಂಡಿತ ಇಲ್ಲ. ಒಂದು ವೇಳೆ ನಾನು ಹಾಗೆ ಮಾಡಿದರೆ ? ನನ್ನ ಮಗಳು ಅವಿವಾಹಿತಳಾಗಿಯೇ ಉಳಿದುಬಿಡುತ್ತಾಳೆ.

ವರದಕ್ಷಿಣೆಗೆ ಸಂಬಂಧಿಸಿದಂತೆ ನಮ್ಮ ಪರಿಸ್ಥಿತಿ ಎಷ್ಟೊಂದು ಭಯಾನಕವಾಗಿದೆ. ದೇಶದ ಜನಸಂಖ್ಯೆಯಲ್ಲಿ ಶೇ.80ರಷ್ಟು ಮಂದಿ ಅಥವಾ ಅದಕ್ಕಿಂತ ಹೆಚ್ಚು ಮಂದಿ ಕಡು ಬಡವರಾಗಿದ್ದಾರೆ. ಅದರಲ್ಲಿ ಹೆಚ್ಚಿನವರಿಗೆ ಇನ್ನೂರು ರೂಪಾಯಿ ಅಥವಾ ಮುನ್ನೂರು ರೂಪಾಯಿಗಿಂತ ಹೆಚ್ಚು ಖರ್ಚು ಮಾಡಬಾರದೆಂದು ನಾನು ಬಡವರಿಗೆ ಹೇಳುತ್ತಲೇ ಬಂದಿದ್ದೇನೆ. ಈ ವಿಷಯದಲ್ಲಿ ಅವರ ಮನ ಒಲಿಸಲು ಪ್ರಯತ್ನಿಸುತ್ತಲೇ ಬಂದಿದ್ದೇನೆ. ಸ್ವಲ್ಪ ಮಟ್ಟಿಗೆ ಯಶಸ್ಸನ್ನೂ ಸಾಧಿಸಿದ್ದೇನೆ. ಇವರಲ್ಲಿ ಅನೇಕರು ಮದುವೆಗಾಗಿ 500 ರೂಪಾಯಿಗಳಷ್ಟು ಹಣವನ್ನು ಕೂಡಿಟ್ಟಿದ್ದಾರೆ. ಆದರೆ ನಾನು ಅವರ ಮನ ಒಲಿಸಿದ ಪರಿಣಾಮವಾಗಿ ಅಷ್ಟು ಹಣವನ್ನು ಖರ್ಚು ಮಾಡುವುದಿಲ್ಲ.

---

* ನಂತರ ಕಾನೂನು ಸಚಿವ ಎ.ಕೆ. ಸೇನ್ ಅವರು ಮಂಡಿಸಿದ ವಿಧೇಯಕದ ಕುರಿತು ಮಾತನಾಡುತ್ತಾ. (ರಾಜ್ಯಸಭೆ ಚರ್ಚೆ, ಆಗಸ್ಟ್ 31 1959 ಸಿಸಿ 2393 - 2397 ಮತ್ತು 2569 - 71).

ಅಂತಹ ಕೆಲವು ಮದುವೆಗಳಿಗೂ ನಾನು ಹೋಗಿದ್ದೇನೆ. ಅವರು ಗಂಡಿನ ಕಡೆಯವರಿಗೆ ಒಂದು ಊಟ ಮತ್ತು ಅಳಿಯನಿಗೆ ಸಣ್ಣ ಉಡುಗೊರೆಯನ್ನಷ್ಟೇ ನೀಡಿದ್ದಾರೆ. ಭಾರತೀಯ ಸನಾತನ ಸಂಪ್ರದಾಯದಂತೆ ಮಗಳಿಗೆ ಏನನ್ನು ಕೊಡಲು ಶಕ್ತರೊ ಅಷ್ಟನ್ನು ಕೊಟ್ಟಿದ್ದಾರೆ. ಹೀಗಿರುವಾಗ ಶಾಸನವೊಂದನ್ನು ತರುವ ಮೂಲಕ ಈ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಾದೀತೆ ? ಎಂಬುದನ್ನು ನಾವು ಯೋಚಿಸಬೇಕು.

ನನ್ನ ಸೋದರಿಯರು - ಅವರಲ್ಲಿ ಒಬ್ಬರು ಇಂದು ಇಲ್ಲೇ ಇದ್ದಾರೆ - ಭಾರತೀಯ ಜೀವನದ ಬಗ್ಗೆ ಇಲ್ಲಿ ಕೆಟ್ಟ ಚಿತ್ರಣ ನೀಡಿರುವುದು ನನಗೆ ನಿಜಕ್ಕೂ ಅಚ್ಚರಿ ಉಂಟುಮಾಡಿದೆ. ನಮ್ಮ ದೇಶದಲ್ಲಿ ಮದುವೆಯಾಗಿರುವ ಹುಡುಗಿಯರಾರೂ ಸಂತುಷ್ಟರಾಗಿಲ್ಲ ಅಥವಾ ಅವರೆಲ್ಲರೂ ಈ ಪರಿಸ್ಥಿತಿಯ ಬಲಿ ಪಶುಗಳಾಗಿದ್ದಾರೆ ಎಂಬುದನ್ನು ನಾನು ಒಪ್ಪುವುದಿಲ್ಲ. ಪ್ರಗತಿ ಹೊಂದಿದಂತೆ ನಾವು ನಮ್ಮ ವ್ಯಕ್ತಿತ್ವವನ್ನೂ, ನಮ್ಮ ದೃಷ್ಟಿಕೋನವನ್ನೂ ಬದಲಿಸಿಕೊಳ್ಳಬೇಕಾಗಿದೆ. ನಮ್ಮ ಧೋರಣೆಯನ್ನೂ, ಬದುಕನ್ನು ಕುರಿತ ಕಲ್ಪನೆ, ರೀತಿ ನೀತಿಗಳನ್ನು ಬದಲಿಸಬೇಕಾಗಿದೆ. ನಾವಿಂದು ವೈಜ್ಞಾನಿಕ ಯುಗದಲ್ಲಿದ್ದೇವೆ. ಇನ್ನೂ ಹೆಚ್ಚು ಚಲನಶೀಲ ಯುಗವನ್ನು ಎದುರು ನೋಡುತ್ತಿದ್ದೇವೆ. ಎಲ್ಲ ಕ್ಷೇತ್ರಗಳಲ್ಲೂ ಬಹಳಷ್ಟನ್ನು ಸಾದಿಸುವ ಹುಮ್ಮಸ್ಸಿನಲ್ಲಿದ್ದೇವೆ. ನೀವು ನಿಮ್ಮ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುತ್ತಾ ಹೋದಂತೆ ಈ ಪಿಡುಗುಗಳು ತಾವಾಗಿಯೇ ನಿವಾರಣೆಯಾಗುವುವು. ನಿಮ್ಮ ಹೆಣ್ಣು ಮಕ್ಕಳನ್ನು ಉದ್ಯೋಗ ನಿರ್ವಹಿಸಲು ಸಮರ್ಥರಾಗುವಂತೆ ಮಾಡಿ ಆಗ ವರದಕ್ಷಿಣೆ ಪದ್ಧತಿ ತಾನಾಗಿಯೇ ಹೋಗುತ್ತದೆ. ವರದಕ್ಷಿಣೆ ರೂಢಿಯಲ್ಲಿರುವುದು ಮಧ್ಯಮ ವರ್ಗದವರಲ್ಲಿ ಮಾತ್ರ. ಶ್ರೀಮಂತರಿಗೆ ಅದು ಅನ್ವಯವಾಗುವುದಿಲ್ಲ. ಬಡವರಿಗೂ ಅನ್ವಯಿಸುವುದಿಲ್ಲ. ಮಧ್ಯಮ ವರ್ಗದವರಲ್ಲಿ ದುರಾಸೆ ಪೀಡಿತರು, ಅತಿ ಮಹತ್ವಾಕಾಂಕ್ಷಿಗಳು ಈ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ತಂದೆ ತಾಯಂದಿರು ತಮ್ಮ ಮಕ್ಕಳ ಹಿತಾಸಕ್ತಿಯನ್ನೇ ಮುಂದಿಟ್ಟುಕೊಂಡು ಪರಿಸ್ಥಿತಿಯ ಲಾಭ ಪಡೆಯಲು ಮುಂದಾಗುತ್ತಾರೆ. ಇದಕ್ಕೆ ಮದುವೆಯಾಗುವ ಗಂಡು ಹೆಣ್ಣುಗಳಿಗಿಂತಲೂ ಅವರ ತಂದೆ ತಾಯಂದಿರೇ ಹೊಣೆಗಾರರಾಗಿದ್ದಾರೆ. ಹುಡುಗನ ತಂದೆ ತಾಯಿ ವರದಕ್ಷಿಣೆ ಕೇಳಿದರೆ ಹುಡುಗಿಯ ತಂದೆ ' ವರದಕ್ಷಿಣೆ ನೀಡುವುದಿಲ್ಲ, ಎಂಬ ದಾಷ್ಟ್ಯ ತೋರಬೇಕು. ತನ್ನ ಮಗಳು ಮದುವೆಯಾಗದೆ ಉಳಿದಾಳೆಂದು ಹತಾಶರಾಗಬಾರದು. ಒಟ್ಟಿನಲ್ಲಿ ತಂದೆ - ತಾಯಂದಿರ ದೃಷ್ಟಿಕೋನವೇ ಈ ವಿಷಯದಲ್ಲಿ ಬದಲಾಗಬೇಕಾಗಿದೆ. ಮಗಳಿಗೆ ಮದುವೆ ಮಾಡಬೇಕು ಎಂಬುದೇ ಇಲ್ಲಿ ಮುಖ್ಯವಾಗಬಾರದು. ಅವಳಿಗೆ ಮದುವೆಯನ್ನೇ ಏಕೆ ಮಾಡಬೇಕು ? ಅವಳು ಸ್ವಾವಲಂಬಿಯಾಗುವಂತೆ ಬೆಳೆಸಿದರೆ ಅದೇ ಭವಿಷ್ಯವನ್ನು ಕಲ್ಪಿಸುವುದು. ನಮ್ಮ ಇಂದಿನ ದಿನಗಳಲ್ಲಿ ಯುವತಿಯರಿಗೆ ತಮ್ಮ ಗಂಡಂದಿರನ್ನು ಆಯ್ದುಕೊಳ್ಳಲು ಮುಕ್ತ ಅವಕಾಶ ಮಾಡಿಕೊಡಬೇಕು. ಅಂದಾಗ ಮಾತ್ರ ವರದಕ್ಷಿಣೆ ಅಂತ್ಯ ಕಂಡೀತು.

ನಮ್ಮ ಕಾಯ್ದೆ ಪುಸ್ತಕದಲ್ಲಿ ಶಾರದಾ ಕಾಯ್ದೆ ಎಂಬ ಹೆಸರಿನ ಕಾಯ್ದೆ ಒಂದುಂಟು. ಆದರೆ ಪ್ರತಿ ವರ್ಷ ರಾಜಸ್ಥಾನದಲ್ಲಿ ಪುಟ್ಟ ಪುಟ್ಟ ಶಿಶುಗಳೇ ವಿವಾಹ ಬಂಧನಕ್ಕೆ ಒಳಗಾಗುತ್ತಿರುವ ಸುದ್ದಿಗಳನ್ನು ಕೇಳುತ್ತಿರುತ್ತೇವೆ. ಇಂತಹ ಒಂದೇ ಒಂದು ಪ್ರಕರಣದಲ್ಲಾದರೂ ನಾವು ಕಾನೂನು ಕ್ರಮ ಕೈಗೊಂಡಿದ್ದೇವೆಯೇ ? ಖಂಡಿತಾ ಇಲ್ಲ. ಇಂತಹವರು, ನಿರಕ್ಷರಿಗಳಾಗಿದ್ದರೆ, ಅಶಿಕ್ಷಿತರಾಗಿದ್ದರೆ

ಅವರನ್ನು ನಿಭಾಯಿಸುವುದು ಬಹಳ ಕಷ್ಟ. ಅಂತಹ ಸಂದರ್ಭಗಳಲ್ಲಿ ಸಂಬಂಧಪಟ್ಟ ವ್ಯಕ್ತಿಗಳ ಮನೋಸ್ಥಿತಿಯನ್ನು ವಿಶ್ಲೇಷಿಸಬೇಕಾಗುತ್ತದೆ. ದುರದೃಷ್ಟವಶಾತ್ ನಮ್ಮ ಹುಡುಗಿಯರು ಪಡೆಯಬೇಕಾದ ವಿದ್ಯಾಭ್ಯಾಸವನ್ನು ಪಡೆದುಕೊಳ್ಳುತ್ತಿಲ್ಲ. ಪ್ರತಿಯೊಬ್ಬ ಹುಡುಗಿಯೂ ಅವರಿಗೆ ಉದ್ಯೋಗ ಕೊಡಬಹುದಾದಂತಹ ಶಿಕ್ಷಣ ನೀಡುವಂತೆ ಶಿಕ್ಷಣ ಖಾತೆಗೆ ನಾವು ಮನವಿ ಮಾಡಿಕೊಳ್ಳಬೇಕು ಮತ್ತು ಹುಡುಗಿಯನ್ನು ನಾವು ಹೇಗೆ ಬೆಳೆಸಬೇಕೆಂದರೆ ಪ್ರತಿಯೊಬ್ಬರು ಅವರನ್ನು ಮದುವೆಯಾಗಲು ಸಂತೋಷದಿಂದ ಮುಂದೆ ಬರುವಂತಿರಬೇಕು. ಈಗ ತರಲು ಉದ್ದೇಶಿಸಿರುವ ಕಾಯ್ದೆಯಿಂದ ನೀವು ಏನನ್ನೂ ಸಾಧಿಸುವುದಿಲ್ಲ. ಅದಕ್ಕೆ ಬದಲಾಗಿ ಮಹಿಳಾ ಸಂಘಟನೆಗಳು ಅಂತಹವರ ಬಳಿಗೆ ಹೋಗಿ ಮನ ಒಲಿಸುವ ಕೆಲಸ ಮಾಡಬೇಕೆಂದು ನಾನು ಸರ್ಕಾರವನ್ನು ವಿನಂತಿಸುತ್ತಿದ್ದೇನೆ. ಜೀವನದಲ್ಲಿರುವ ಪ್ರತಿಯೊಂದು ಕೆಡುಕಿಗೂ ಕಾಯ್ದೆಯೇ ಉತ್ತರ ಎಂದು ಭಾವಿಸಿದರೆ ಅದು ತಪ್ಪು. ಕಾಯ್ದೆಯಿಂದ ಯಾವುದೇ ಸಮಸ್ಯೆಯನ್ನು ಬಗೆಹರಿಸುವುದು ಸಾಧ್ಯವಿಲ್ಲ. ಅಂತಹ ಕಾಯ್ದೆಗಳು ಇಂತಹ ಸಾಮಾಜಿಕ ಪಿಡುಗುಗಳನ್ನು ನಿವಾರಿಸುವ ಬದಲಾಗಿ ಅವು ಭೂಗತವಾಗಿ ಇನ್ನಷ್ಟು ಕ್ರಿಯಾಶೀಲವಾಗುವಂತೆ ಮಾಡುತ್ತವೆ. ಪಾನ ನಿಷೇಧವನ್ನು ಜಾರಿಗೆ ತಂದು ನಾವು ಅದನ್ನು ಕಂಡಿದ್ದೇವೆ. ಇಂತಹ ಕಾಯ್ದೆಯನ್ನು ನಾವು ತಂದದ್ದಾದರೆ ವರದಕ್ಷಿಣೆ ಪಿಡುಗು ನಿವಾರಣೆಯಾಗುವುದಕ್ಕೆ ಬದಲಾಗಿ ಅದು ಇನ್ನಷ್ಟು ತೀವ್ರಗೊಳ್ಳುವುದು. ಸಾಮಾಜಿಕ ಸುಧಾರಣೆಗಳನ್ನು ತರುವ ಮಾರ್ಗವಂತೂ ಇದಲ್ಲ. ನಾವು ಮಾತು ಮಾತಿಗೆ ನಮ್ಮ ಸಹೋದರಿಯರಿಗೆ ರಕ್ಷಣೆ ಬೇಕು, ರಕ್ಷಣೆ ಬೇಕು, ರಕ್ಷಣೆ ಬೇಕು ಎಂದು ಹೇಳುತ್ತಾ ಹೋಗುತ್ತಿದ್ದೇವೆ. ಆದರೆ ನನ್ನ ದೃಷ್ಟಿ ಅದಲ್ಲ. ಬದಲಾಗಿ ಅವರು ತಮ್ಮನ್ನು ತಾವು ಸಂರಕ್ಷಿಸಿಕೊಳ್ಳಲು ಸಮರ್ಥರಾಗಬೇಕು. ಬಲವಂತವಾಗಿ ಯಾರನ್ನೋ ಮದುವೆಯಾಗುವ ನಿರ್ಬಂಧಕ್ಕೆ ಒಳಗಾಗುವ ಹುಡುಗಿಯರು - ವರದಕ್ಷಿಣೆ ನೀಡಲೇಬೇಕಾದ ಬಲವಂತಕ್ಕೆ ಕಟ್ಟುಬಿದ್ದ ಹುಡುಗಿಯರ ತಂದೆ - ತಾಯಂದಿರು ಯಾವ ಕಾರಣಕ್ಕೂ ಆತ್ಮಹತ್ಯೆ ಮಾಡಿಕೊಳ್ಳಬಾರದು. ಬದಲಾಗಿ ನಾವು ಮದುವೆಯಾಗುವುದಿಲ್ಲ ಎಂದು ಖಂಡಾಖಂಡಿತವಾಗಿ ಹೇಳಬೇಕು. ನಾನು ಅಪೇಕ್ಷಿಸುವುದು ಇದನ್ನು ಗಾಂಧೀಜಿಯವರು ಕಲಿಸಿಕೊಟ್ಟಂತೆ ಅಬಲೆಯರನ್ನಲ್ಲ, ಸಬಲೆಯರನ್ನು ಸೃಷ್ಟಿಸಬೇಕು. ಹಾಗಾಗಿ ಈ ವಿಧೇಯಕವನ್ನು ಪುನರ್ ಪರಿಶೀಲಿಸುವಂತೆ ಮತ್ತು ವಿಧೇಯಕವನ್ನು ಹಿಂದಕ್ಕೆ ಪಡೆಯುವಂತೆ ಕಾನೂನು ಸಚಿವರನ್ನು ವಿನಂತಿಸಿಕೊಳ್ಳುತ್ತಿದ್ದೇನೆ. ಈ ಪಿಡುಗು ಅದನ್ನು ಚಿತ್ರಿಸಿರುವಷ್ಟು ಭಯಾನಕವಾಗಿಯೂ ಇಲ್ಲ. ವರದಕ್ಷಿಣೆ ಪಿಡುಗಿನಿಂದ ನಾವು ಹಲವು ಮಂದಿಯನ್ನು ಮುಕ್ತಿಗೊಳಿಸಿದ್ದೇವೆ. ಅನೇಕ ಸ್ಥಳಗಳಲ್ಲಿ ನಾವು ಈ ಪದ್ಧತಿಯನ್ನು ನಿಲ್ಲಿಸಿದ್ದೇವೆ. ಮಗುವಿಗೆ ಮದುವೆ ಮಾಡಲು ಹೊರಟಿದ್ದ ಒಬ್ಬರಿಗೆ "ವರದಕ್ಷಿಣೆ ನೀಡಲು ಸಾಮರ್ಥ್ಯ ಇಲ್ಲದಂತಹ ಮತ್ತು ಅದಕ್ಕಾಗಿ ಸಾಲ ಮಾಡಬೇಕಾದ ಪರಿಸ್ಥಿತಿ ಇರುವ ಪೋಷಕರಿಂದ ವರದಕ್ಷಿಣೆ ಅಪೇಕ್ಷಿಸುವುದು ತಪ್ಪು. ಅದು ದುಷ್ಟತನ " ಎಂದು ನಾನು ಹೇಳಿದ್ದೆ. ಹಾಗೆ ಹೇಳಿದ್ದರಿಂದ ಒಳ್ಳೆಯ ಪರಿಣಾಮವೂ ಆಯಿತು. ಆದರೆ ದುರಾದೃಷ್ಟವಶಾತ್ ನಮ್ಮ ಮಹಿಳೆಯರು, ನಮ್ಮ ಮಹಿಳಾ ಸಂಘಟನೆಗಳು ಗೊತ್ತುವಳಿಗಳನ್ನು ಅಂಗೀಕರಿಸುವುದರಲ್ಲಷ್ಟೇ ತೃಪ್ತಿಪಡುತ್ತಾರೆ. ಕಾಯ್ದೆಗಳನ್ನು ರೂಪಿಸುವುದರಲ್ಲೇ ಸಂತೃಪ್ತಿ ಪಡೆಯುತ್ತಾರೆ. ನಮ್ಮಲ್ಲಿ ವಂಶಪಾರಂಪರ್ಯದ ಆಸ್ತಿ ಹಕ್ಕಿನ ರಕ್ಷಣೆಗೆ ಸಂಬಂಧಿಸಿದಂತೆ ಕಾಯ್ದೆ ಇದೆ. ವಂಶಪಾರಂಪರ್ಯದ ಆಸ್ತಿಯಲ್ಲಿ ಮಹಿಳೆಯರಿಗೆ ಸರಿಸಮಾನ ಹಕ್ಕು ನೀಡುವ ಕಾಯ್ದೆಗಳಿವೆ. ಪುರುಷರಿಗೆ ಸರಿ ಸಮಾನರಾಗಿ ಶಿಕ್ಷಣ ಪಡೆಯುವ, ಸಮನ ಅವಕಾಶ ಪಡೆಯುವ ಹಕ್ಕುಗಳು ಇವೆ. ಈ ಹಕ್ಕುಗಳಿಂದಾಗಿ ಅವರು ಸ್ವಾವಲಂಬಿಗಳಾಗಿದ್ದಾರೆ. ಅಂತಹ ಸುಧಾರಣೆಗಳು

ವರದಕ್ಷಿಣೆಯ ಪಿಡುಗನ್ನು ನಿವಾರಿಸಬಲ್ಲವೇ ಹೊರತು ಇಂತಹ ವಿಧೇಯಕಗಳಲ್ಲ. * ಇಂತಹ ಕಾಯ್ದೆಗಳಿಂದ ಪ್ರತಿಯೊಬ್ಬರೂ ತಪ್ಪಿಸಿಕೊಳ್ಳುತ್ತಾರೆ ಮತ್ತು ಈ ನಿರ್ಬಂಧಗಳಿಗೆ ಯಾರೊಬ್ಬರೂ ಕಿವಿಗೊಡುವುದಿಲ್ಲ. ಇದರಿಂದ ಆಗುವುದಾದರೂ ಏನು ? ಸರ್ಕಾರಕ್ಕೆ ಕೆಟ್ಟ ಹೆಸರು ಬರುತ್ತದೆ, ಕಾಯ್ದೆಗೆ ಕೆಟ್ಟ ಹೆಸರು ಬರುತ್ತದೆ. ಅಷ್ಟೇ ಅಷ್ಟು ಮಾತ್ರವಲ್ಲ ಕಾಯ್ದೆಯ ದುರುಪಯೋಗವಾಗುತ್ತದೆ. ಅಂಥವರಿಗೆ ಕಾಯ್ದೆಯಿಂದ ತಪ್ಪಿಸಿಕೊಳ್ಳಲು ನಾವೇ ಅವಕಾಶ ಕಲ್ಪಿಸಿಕೊಟ್ಟಂತಾಗುತ್ತದೆ. ಸಮಾಜದಲ್ಲಿ ಎಲ್ಲ ಬಗೆಯ ಕೆಡುಕುಗಳಿಗೂ ಇದರಿಂದ ದಾರಿ ಮಾಡಿಕೊಟ್ಟಂತಾಗುತ್ತದೆ. ಹಾಗಾಗಿ ಇಂತಹ ವಿಷಯಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸಬೇಕೆ ಹೊರತು ಬೇರಾವ ಕ್ರಮದಿಂದಲೂ ಸಮಾಜ ಸುಧಾರಣೆಯನ್ನು ತರುವುದು ಸಾಧ್ಯವಾಗುವುದಿಲ್ಲ. ಯಾವೊಂದು ಶಾಸನದಿಂದಲೂ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸಲು ಬರುವುದಿಲ್ಲ ಎಂಬುದನ್ನು ತಮಗೆ ವಿನಯಪೂರ್ವಕವಾಗಿ ಅರಿಕೆ ಮಾಡಿಕೊಳ್ಳುತ್ತೇನೆ. ಶಾಸನಗಳಿಂದ ಯಾವುದೇ ಪ್ರಯೋಜನವೂ ಆಗದು. ಬದಲಾಗಿ ಅದು ಜೀವನವನ್ನು ಇನ್ನಷ್ಟು ಕಠಿಣಗೊಳಿಸುವುದು. ಹಾಗಾಗಿ ಈ ವಿಧೇಯಕವನ್ನು ಹಿಂತೆಗೆದುಕೊಳ್ಳಬೇಕೆಂದು ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ.

ಸಮಾಜದಲ್ಲಿ ಹಾಸುಹೊಕ್ಕಾಗಿರುವ ವರದಕ್ಷಿಣೆ ಪದ್ಧತಿಯ ವಿರುದ್ಧ ಈಗ ಇನ್ನಷ್ಟು ಜನಾಭಿಪ್ರಾಯ ನಿರ್ಮಾಣವಾಗಿದೆ. ಕಳೆದ ನಲವತ್ತು ವರ್ಷಗಳಿಂದ ಈ ದುಷ್ಟ ಪದ್ಧತಿಯ ವಿರುದ್ಧ ಪ್ರಚಾರ ನಡೆಸಿದ್ದೇವೆ. ಹೀಗಾಗಿಯೇ ಬಿಹಾರ ಸರ್ಕಾರ ಅಂತಹ ವಿಧೇಯಕವನ್ನು ತಂದಾಗ ನಾವು ಅದನ್ನು ಸ್ವಾಗತಿಸಿದೆವು. ಅದೇ ರೀತಿ ಆಂಧ್ರಪ್ರದೇಶ ಸರ್ಕಾರ ವಿಧೇಯಕ ತರಲು ಉದ್ದೇಶಿಸಿದಾಗಲೂ ನಾವು ಅದನ್ನು ಅಭಿನಂದಿಸಿದೆವು. ಆದರೆ ಆಗಿದ್ದೇನು ? ಬಿಹಾರದಲ್ಲಾಗಲಿ, ಆಂಧ್ರಪ್ರದೇಶದಲ್ಲಾಗಲಿ ಏನಾಯಿತು ? ಏನೂ ಆಗಲಿಲ್ಲ. ಈಗಲೂ ಕೂಡಾ, ಅಂದರೆ ಈ ವಿಧೇಯಕವನ್ನು ತಂದರೂ ಸಹ ನಾವು ಯಾವುದೇ ರೀತಿಯ ಪರಿಣಾಮವನ್ನು ಕಾಣಲಾರೆವು.

* * ಸಮಾಜ ಸುಧಾರಣೆಯ ವಿಷಯದಲ್ಲಿ ಜೀವನದುದ್ದಕ್ಕೂ ನಾನು ಅತೀವವಾದ ಆಸಕ್ತಿ ವಹಿಸಿದವಳು. ಇಂದು ಕೂಡಾ ನಮ್ಮ ಸಮಾಜದಲ್ಲಿ ನುಸುಳಿಕೊಂಡಿರುವ ಇಂತಹ ಎಲ್ಲ ಅತಿರೇಕಗಳನ್ನು ನಿರ್ಮೂಲನೆಗೊಳಿಸುವ ವಿಚಾರದಲ್ಲಿ ಅಷ್ಟೇ ಆಸಕ್ತಿಯನ್ನು ಹೊಂದಿರುವವಳು. ಆದರೆ ಈಗ ನಾವು ತರಲು ಉದ್ದೇಶಿಸಿರುವ ವಿಧೇಯಕದ ಬಗ್ಗೆ ಇದುತನಕ ನಮಗೆ ಯಾವ ರೀತಿಯಿಂದಲೂ ಮನವರಿಕೆಯಾಗಿಲ್ಲ. ಯಾವ ಉದ್ದೇಶವನ್ನು ಸಾಧಿಸುವ ಸಲುವಾಗಿ ಸರ್ಕಾರ ಈ ವಿಧೇಯಕವನ್ನು ತಂದಿತ್ತೋ ಆ ಉದ್ದೇಶವನ್ನು ಈ ವಿಧೇಯಕ ಖಂಡಿತಕ್ಕೂ ಸಾಧಿಸುವುದಿಲ್ಲ. ದೇಶದಲ್ಲಿ ಎಷ್ಟು ಪ್ರಮಾಣದಲ್ಲಿ ವರದಕ್ಷಿಣೆ ಪ್ರಕರಣಗಳು ಸಂಭವಿಸುತ್ತಿವೆ ಎಂಬುದನ್ನು ಸರ್ಕಾರ ಪರಿಶೀಲಿಸಿದೆಯೇ ? ಅಥವಾ ದೇಶದ ಜನಸಂಖ್ಯೆಯಲ್ಲಿ ಶೇಕಡಾವಾರು ಎಷ್ಟು ಮಂದಿ ಈ ವರದಕ್ಷಿಣೆಯ ಪಿಡುಗಿಗೆ ಗುರಿಯಾಗಿದ್ದಾರೆ ? ಎಂಬುದನ್ನು ತಿಳಿಯಲು ನಾನು ಬಯಸುತ್ತೇನೆ. ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ

---

* ಶಾಸನವೊಂದನ್ನು ತರುವ ಮೂಲಕ ಸಾಮಾಜಿಕ ಅಭಿಪ್ರಾಯವನ್ನು ರೂಪಿಸುವುದು ಅಗತ್ಯವಾಗಿತ್ತೇ ? ಎಂದು ಶ್ರೀ ಶೀಲ ಚಂದ್ರ ಯಾಜಿ ಅವರ ಪ್ರಶ್ನೆಗೆ ಉತ್ತರಿಸುತ್ತಾ.

* * 1959ರ ಆಗಸ್ಟ್ 21ರಂದು ರಾಜ್ಯಸಭೆಯಲ್ಲಿ ಮುಂದುವರಿದ ಚರ್ಚೆಯಲ್ಲಿ ಮಾತನಾಡುತ್ತಾ.

ಶಾಪವಾಗಿರುವ ಶೇ.85ರಷ್ಟು ಜನರು ವರದಕ್ಷಿಣೆಯ ಪಿಡುಗಿನಿಂದ ಅಷ್ಟರಮಟ್ಟಿಗೆ ಬಾಧಿತರಾಗಿಲ್ಲ. ದೇಶದ ಜನಸಂಖ್ಯೆಯಲ್ಲಿ ಬಹುತೇಕ ಮಂದಿಗೆ ಮದುವೆಯಾಗುವುದಕ್ಕೆ ಇನ್ನೂರರಿಂದ ಮುನ್ನೂರು ರೂಪಾಯಿ ಖರ್ಚು ಮಾಡುವುದೇ ಕಷ್ಟವಾಗಿದೆ. ಸ್ಥಿತಿವಂತರಾಗಿರುವ ಮತ್ತು ವರದಕ್ಷಿಣೆ ನೀಡುವ ಸಾಮರ್ಥ್ಯ ಉಳ್ಳ ಶೇ.5ರಷ್ಟು ಜನರು ಮಾತ್ರ ಈ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಈಗ ನಾವು ಸಮಾಜದಲ್ಲಿ ನಗಣ್ಯ ಪ್ರಮಾಣದಲ್ಲಿರುವ ವರ್ಗದವರಿಗಾಗಿ ಈ ಕಾನೂನನ್ನು ತರಲು ಹೊರಟಿದ್ದೇವೆ. ಸಮಾಜ ಸುಧಾರಕರೂ ಕೂಡಾ ತಮ್ಮ ಹೆಣ್ಣು ಮಕ್ಕಳು ಹೆಚ್ಚು ಸುಖಜೀವನಕ್ಕೆ ಹೋಗಬೇಕೆಂಬ ಅಭಿಲಾಷೆಯಿಂದ ಮದುವೆ ಮಾಡುವಾಗ ವರದಕ್ಷಿಣೆಯನ್ನು ನೀಡಿಯೇ ನೀಡುತ್ತಾರೆ. ಇದನ್ನು ತಡೆಯಲು ಹೇಗೆ ಸಾಧ್ಯ ? ತಮಗೆ ಬೇಕಾದುದನ್ನು ಪಡೆದುಕೊಳ್ಳಲು ಈ ರೀತಿಯ ಪ್ರವೃತ್ತಿಯನ್ನು ತಡೆಯುವುದಾದರೂ ಹೇಗೆ ? ಮದುವೆ ನಿಜವಾಗಿ ನಡೆಯುವುದಕ್ಕೆ ಎರಡೋ ಮೂರೋ ವರ್ಷಗಳ ಮುಂಚಿತವಾಗಿಯೇ ಅಥವಾ ಮದುವೆಯಾದ ಒಂದೆರಡು ವರ್ಷಗಳ ಅನಂತರವೂ ಅವರು ವರದಕ್ಷಿಣೆ ನೀಡಬಹುದು. ಅದು ಇಲ್ಲಿ ಮುಖ್ಯವಲ್ಲ. ಆದರೆ ವರದಕ್ಷಿಣೆ ಪದ್ಧತಿ ಮುಂದುವರಿಯುವುದು ಅದನ್ನು ನಿಲ್ಲಿಸಲೂ ಬರುವುದಿಲ್ಲ. ಇದು ಸಹಜವೂ ಆಗಿದೆ. ತಮ್ಮ ಹೆಣ್ಣು ಮಕ್ಕಳಿಗಾಗಿ ಜನರು ವರದಕ್ಷಿಣೆ ನೀಡಲು ಕಾತರರಾಗಿರುತ್ತಾರೆ ಮತ್ತು ತಮ್ಮ ಮಕ್ಕಳಿಗಾಗಿ ತಮ್ಮ ಬಳಿ ಇರುವ ಅಷ್ಟಿಷ್ಟನ್ನು ಕೊಡಲು ಇಷ್ಟಪಟ್ಟರೆ ಅದಕ್ಕೆ ಅವಕಾಶ ಇರಲೇಬೇಕು. ನಮ್ಮಲ್ಲಿ ನಡೆಯುವ ಬಹುತೇಕ ಮದುವೆಗಳಲ್ಲಿ ಬಹುತೇಕ ಜನರು ತೀರಾ ಪರಿಮಿತ ಪ್ರಮಾಣದಲ್ಲಿ ಖರ್ಚು ಮಾಡುತ್ತಾರೆ ಎಂಬ ಅಂಶವನ್ನು ನಾವು ಗಮನಿಸಬೇಕು. ಕಾಯ್ದೆಯೊಂದರ ಮೂಲಕ ರಾತ್ರಿ ಬೆಳಗಾಗುವುದರೊಳಗಾಗಿ ಜನರನ್ನು ಒಳ್ಳೆಯವರನ್ನಾಗಿ ಪರಿವರ್ತಿಸುವ ವಿಚಾರದಲ್ಲೂ ನನಗೆ ನಂಬಿಕೆ ಇಲ್ಲ. ಹಾಗಾಗಿ ನಾವು ಜನರಲ್ಲಿರುವ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸುವುದೊಂದೇ ಇದಕ್ಕೆ ಪರಿಹಾರ ಮಾರ್ಗವಾಗಿದೆ. ನಿನ್ನೆ ದೆಹಲಿಯಲ್ಲೊಂದು ಮದುವೆ ಇತ್ತು. ಮದುವೆ ನಡೆಯುತ್ತಿದ್ದಾಗಲೇ ಹುಡುಗನ ತಂದೆ ತಾಯಿ ಹುಡುಗಿಯ ತಂದೆ ತಾಯಿಯನ್ನು ವರದಕ್ಷಿಣೆಗಾಗಿ ಆಗ್ರಹಪಡಿಸಿದರು. "ವರದಕ್ಷಿಣೆಯನ್ನು ನಾವು ಹೇಗಿದ್ದರೂ ಕೊಡಲೇಬೇಕು. ಇಲ್ಲದಿದ್ದರೆ ಮದುವೆ ಅರ್ಧದಲ್ಲೇ ನಿಂತು ಹೋಗುತ್ತದೆಯಲ್ಲ?" ಎಂದು ವರದಕ್ಷಿಣೆ ಕೊಡಲೂ ಸಮ್ಮತಿಸಿದರು. ಮದುವೆ ಸಾಂಗವಾಗಿ ನಡೆಯಿತು. ಸಹಜವಾಗಿಯೇ ಹುಡುಗನ ತಂದೆ ತಾಯಿ ವಧುವನ್ನು ಮನೆಗೆ ಕರೆತರುವಂತೆ ಹೇಳಿದರು. ಆದರೆ ಹುಡುಗ ಅದನ್ನು ನೇರವಾಗಿ ನಿರಾಕರಿಸಿದ. "ನಾನೂ ಬರುವುದಿಲ್ಲ. ಅವಳನ್ನು ಕರೆತರುವುದಿಲ್ಲ. ನೀವು ನನ್ನನ್ನು ಹುಡುಗಿಯ ತಂದೆ ತಾಯಿಗೆ ಮಾರಿದ್ದೀರಾ ಹೀಗಾಗಿ ನಾನು ಅವಳ ಜೊತೆಯಲ್ಲೇ ಇರುತ್ತೇನೆ. ನಿಮ್ಮಲ್ಲಿಗೆ ಮರಳಿ ಬರುವ ಪ್ರಶ್ನೆಯೇ ಇಲ್ಲ" ಎಂದು ಖಂಡಾಖಂಡಿತವಾಗಿ ಹೇಳಿದ. ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸುವ ರೀತಿ ಇದು ಎಂದು ನಾನು ಭಾವಿಸಿದ್ದೇನೆ. ಆ ಹುಡುಗ ಮತ್ತೆಂದೂ ತನ್ನ ತಂದೆ ತಾಯಿಯ ಬಳಿಗೆ ಹೋಗಲಿಲ್ಲ. ಅಷ್ಟೇ ಅಲ್ಲ ಹೆತ್ತವರು ಪಡೆದುಕೊಂಡ ವರದಕ್ಷಿಣೆಯನ್ನು ಹಿಂದಿರುಗಿಸುವುದಾಗಿಯೂ ಆಶ್ವಾಸನೆ ಕೊಟ್ಟ. ಈ ಹುಡುಗ ಈ ವಿಧೇಯಕದ ಮೂಲಕ ಸರ್ಕಾರ ಸಮಾಜಕ್ಕೆ ಕೊಡಲಿರುವ ಕೊಡುಗೆಗಿಂತ ಎಷ್ಟೋ ದೊಡ್ಡ ಮೊತ್ತದ ಕೊಡುಗೆ ನೀಡಿದ್ದಾನೆಂಬುದು ನನ್ನ ಅಭಿಪ್ರಾಯವಾಗಿದೆ. ಈ ಸಮಸ್ಯೆಗೆ ಪರಿಹಾರ ಶಾಸನವಂತೂ ಅಲ್ಲವೇ ಅಲ್ಲ. ಇದು ಈ ಪಿಡುಗನ್ನು ನಿಲ್ಲಿಸುವುದಕ್ಕೆ ಬದಲಾಗಿ ಜನರು ಕಾಯ್ದೆಯಿಂದ ತಪ್ಪಿಸಿಕೊಳ್ಳುವಂತೆ ಮಾಡುತ್ತದೆ. ಕಾಯ್ದೆಯ ಕಣ್ಣು ತಪ್ಪಿಸಿ ತೆರೆಮರೆಯಲ್ಲಿ ನಡೆಯುವ ಇಂತಹ

ವ್ಯವಹಾರಗಳನ್ನು ಪತ್ತೆ ಹಚ್ಚುವುದು ಅತ್ಯಂತ ಕಠಿಣ. ಒಂದು ವೇಳೆ ನೀವು ಈ ವಿಧೇಯಕವನ್ನು ಅಂಗೀಕರಿಸಿ ಅದನ್ನು ಕಾಯ್ದೆ ಪುಸ್ತಕದಲ್ಲಿ ಸೇರಿಸಿದರೂ ಕೂಡಾ ಅದನ್ನು ಜಾರಿಗೊಳಿಸಲು ಸಮರ್ಥರಾಗುವುದಿಲ್ಲ ಮತ್ತು ಯಾವ ಉದ್ದೇಶವನ್ನು ಇಟ್ಟುಕೊಂಡು ಈ ವಿಧೇಯಕ ರೂಪಿಸಿದ್ದೀರೋ ಆ ಉದ್ದೇಶವೂ ಈಡೇರುವುದಿಲ್ಲ. ಹಾಗಾಗಿ ಈ ವಿಧೇಯಕವು ಯಾವುದೇ ರೀತಿಯ ಫಲಿತಾಂಶವನ್ನು ನೀಡುವುದಿಲ್ಲ. ಬದಲಾಗಿ ಜನರ ಸಾಮಾಜಿಕ ಪ್ರಜ್ಞೆಯನ್ನು ಎಚ್ಚರಿಸುವ ಕೆಲಸ ಮಾಡಿ. ವಾಸ್ತವವಾಗಿ ನೀವು ಮಾಡಬೇಕಾದದ್ದು ಅದನ್ನೇ. ನಾವು ಜನರ ಜೊತೆ ಸೇರಿ ಕೆಲಸ ಮಾಡಬೇಕು. ಸದನದ ಮಹಿಳಾ ಸದಸ್ಯರು, "ಈ ದೇಶ ಹೆಣ್ಣು ಮಕ್ಕಳ ಹೊರೆಯನ್ನು ಹೊರಲಾಗದೆ ತತ್ತರಿಸುತ್ತಿದೆ ಮತ್ತು ವರದಕ್ಷಿಣೆಯ ದುಷ್ಟ ಪದ್ಧತಿ ಹೆಣ್ಣುಮಕ್ಕಳ ತಂದೆ ತಾಯಂದಿರನ್ನು ಜಗತ್ತಿನಿಂದಲೇ ನಿರ್ಮೂಲನೆಗೊಳಿಸುವ ಮಟ್ಟಕ್ಕೆ ಮುಟ್ಟಿದೆ" ಎಂದು ಹೇಳಿದ್ದಾರೆ. ವಾಸ್ತವವಾಗಿ ವರದಕ್ಷಿಣೆ ಪದ್ಧತಿ ಜನಸಂಖ್ಯೆಯ ಒಂದು ಅತಿ ಸಣ್ಣ ಸಮುದಾಯಕ್ಕೆ ಮಾತ್ರವೇ ಸೀಮಿತವಾಗಿದೆ. ನಾನೀಗಾಗಲೇ ಹೇಳಿರುವಂತೆ ಕಾಯ್ದೆಯು ನಮಗೆ ಈ ವಿಷಯದಲ್ಲಿ ದಾರಿ ತೋರಿಸಲಾರದು. ನಾವು ಜನರ ಮಧ್ಯೆ ಇದ್ದು ಅವರಿಗೆ ತಿಳುವಳಿಕೆ ನೀಡುವ ಮೂಲಕ ವರದಕ್ಷಿಣೆ ಸಮಸ್ಯೆಯನ್ನು ನಿವಾರಿಸಬೇಕು. ನಾನು ಇತ್ತೀಚೆಗೆ ಎಂಟು, ಹತ್ತು ಮಂದಿಯ ಮನೆಗಳಿಗೆ ಭೇಟಿ ನೀಡಿದೆ ಮತ್ತು ಅವರ ಮದುವೆ ವೆಚ್ಚವನ್ನು ಶೇ. 60ರಷ್ಟು ತಗ್ಗಿಸುವಂತೆ ಅವರ ಮನ ಒಲಿಸಿದೆ. ಅವರು ನಾನು ಹೇಳಿದ್ದನ್ನು ಒಪ್ಪಿಕೊಂಡರು. ಮದುವೆಗೆ ಐನೂರು ರೂಪಾಯಿ ಖರ್ಚು ಮಾಡುತ್ತಿದ್ದ ಬಡವರು ಅದನ್ನು 200 ರೂಪಾಯಿಗಳಿಗೆ ಇಳಿಸಿದರು. ವರದಕ್ಷಿಣೆ ಪದ್ಧತಿಯನ್ನಾಗಲಿ ಅಥವಾ ಇತರ ಯಾವುದೇ ಪಿಡುಗನ್ನಾಗಲಿ ನೀವು ನಿರ್ಮೂಲನೆಗೊಳಿಸಲು ಇದೇ ಸರಿಯಾದ ಮಾರ್ಗ. ಹೊಸ ಹೊಸ ಕಾಯ್ದೆಗಳನ್ನು ತಂದಂತೆ ಅವುಗಳನ್ನು ಮುರಿಯುವ ಪರಿಪಾಠವೂ ಬೆಳೆಯುತ್ತಿದೆ ಎಂಬುದನ್ನೂ ನೀವು ನೆನಪಿಟ್ಟುಕೊಳ್ಳಬೇಕು. ಬಿಹಾರ ಮತ್ತು ಆಂಧ್ರ ಪ್ರದೇಶಗಳಲ್ಲಿ ಈಗಾಗಲೇ ನಿಮಗೆ ಈ ಅನುಭವ ಆಗಿದೆ. ಅಲ್ಲಿ ಕಾಯ್ದೆಗಳನ್ನು ತಂದು ಆದದ್ದಾದರೂ ಏನು ? ವಾಸ್ತವವಾಗಿ ಅದರಿಂದ ಏನನ್ನೂ ಸಾಧಿಸಲು ಆಗಲಿಲ್ಲ. ಇದರಿಂದ ಸಮಯ ಹಾಗೂ ಹಣ ಎರಡೂ ವ್ಯರ್ಥ. ಅಂದರೆ ಸರ್ಕಾರದ ಹಣ ಮತ್ತು ಸಾರ್ವಜನಿಕರ ಹಣ ಎರಡೂ ಪೋಲು ಮತ್ತೆ ಮತ್ತೆ ಕಾಯ್ದೆಗಳನ್ನು ಮಾಡಿ ಅವುಗಳನ್ನು ಕಾಯ್ದೆ ಸಂಪುಟಗಳಲ್ಲಿ ಸೇರಿಸುವ ಇಂತಹ ಕ್ರಮದಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ನಾನು ನನ್ನ ಮಗಳ ಮದುವೆಯನ್ನು ಇಂತಹ ಹುಡುಗನೊಂದಿಗೆ ಮಾಡಬೇಕೆಂದು ನಿರ್ಧರಿಸಿದರೆ ಅದನ್ನು ಹೇಗಾದರೂ ಮಾಡಿಯೇ ಮಾಡುತ್ತೇನೆ. ಮದುವೆಗೆ ಹೊರಡುವ ಯಾರೊಬ್ಬರೂ ಈ ವಿಧೇಯಕದ ವಿಧಿಗಳ ಉಲ್ಲಂಘನೆ ಆದಾಗ ಪರಸ್ಪರರ ವಿರುದ್ಧ ನ್ಯಾಯಾಲಯಕ್ಕೆ ಹೋಗುವುದಿಲ್ಲ. ಹಾಗಾಗಿ ಯುವ ಸಮುದಾಯದ ಮನಸ್ಸನ್ನು ಒಲಿಸಿಕೊಳ್ಳಿ. ನಮ್ಮ ಎಲ್ಲ ಯುವಕರು ಪ್ರಜ್ಞಾವಂತರಾಗಿದ್ದಾರೆ

* ನಂತರ 1959ರ ಡಿಸೆಂಬರ್ 16ರಂದು ಈ ವಿದೇಯಕವನ್ನು ಅಂಗೀಕರಿಸಲಾಯಿತು.

ಮತ್ತು ಇಂತಹ ದುಷ್ಟ ಪದ್ಧತಿಯ ವಿರುದ್ಧ ಹೆಚ್ಚು ಹೆಚ್ಚು ಜಾಗೃತರಾಗುತ್ತಿದ್ದಾರೆ. ವಾಸ್ತವವಾಗಿ ಈ ಪದ್ಧತಿಯನ್ನು ಪ್ರತಿರೋಧಿಸಬೇಕಾಗಿರುವವರು ಅವರೇ. ಇಂತಹ ವಿಷಯಗಳಲ್ಲಿ ಈ ರೀತಿ ವ್ಯಕ್ತಿಗಳ ಮೇಲೆ ನಿಯಂತ್ರಣ ಹೇರುವುದು ತಪ್ಪು ಎಂದು ನಾನು ಮತ್ತೆ ಮತ್ತೆ ಹೇಳಲು ಇಚ್ಛಿಸುತ್ತೇನೆ. ಸರ್ಕಾರವು ತನ್ನ ನಿಯಂತ್ರಣವನ್ನು ಎಲ್ಲ ಕಡೆಗೂ ವಿಸ್ತರಿಸಲು ಹೊರಟಿರುವಂತೆ ತೋರುತ್ತದೆ. ಇದು ಸರಿಯಲ್ಲ. ನಿಮ್ಮ ಸರ್ಕಾರಿ ನೌಕರರಿಗೆ ಅವರ ಹೆಂಡತಿಯರನ್ನು ಸರಿಯಾಗಿ ನೋಡಿಕೊಳ್ಳುವಂತೆ ಮೊದಲು ಹೇಳಿ. ಜಗತ್ತಿನ ಇತರ ಯಾವುದೇ ರಾಷ್ಟ್ರದಲ್ಲೂ ಹೀಗೆ ನಡೆಯುತ್ತಿರುವುದನ್ನು ನಾನು ಎಂದೂ ಕೇಳಿಯೇ ಇಲ್ಲ. ಸರ್ಕಾರದ ನಿಯಂತ್ರಣ ಎಷ್ಟು ಕಡಿಮೆ ಇರುತ್ತದೆಯೇ ಅಷ್ಟು ಒಳ್ಳೆಯದು. ಅತಿಯಾದ ನಿಯಂತ್ರಣ ಇಲ್ಲದಿರುವುದೇ ಉತ್ತಮ ಆಡಳಿತ. ಈಗ ಮಂಡಿಸಿರುವ ವಿಧೇಯಕವನ್ನು ನಾನು ವಿರೋಧಿಸುತ್ತಿರುವುದು ಇದೇ ಕಾರಣಕ್ಕೆ. ಯಾವ ಉದ್ದೇಶಕ್ಕಾಗಿ ಈ ವಿಧೇಯಕ ತರಲಾಗುತ್ತಿದೆಯೋ ಆ ಉದ್ದೇಶವನ್ನು ಈ ವಿಧೇಯಕ ಸಾಧಿಸುವುದಿಲ್ಲ ಎಂಬುದು ನನ್ನ ಖಚಿತ ಅಭಿಪ್ರಾಯವಾಗಿದೆ.*

---

* ನಂತರ 1959ರ ಡಿಸೆಂಬರ್ 16ರಂದು ಈ ವಿಧೇಯಕವನ್ನು ಅಂಗೀಕರಿಸಲಾಯಿತು.

## 26. ಅನಾಥಾಲಯ ವಿಧೇಯಕ *

ಇವತ್ತು ಬೆಳಿಗ್ಗೆ ಸದನದಲ್ಲಿ ಮಾತನಾಡುವ ಇಚ್ಛೆ ನನಗಿರಲಿಲ್ಲ. ಆದರೆ ಮಕ್ಕಳ ದೈಹಿಕ ಮಾನಸಿಕ ಮತ್ತು ಆಧ್ಯಾತ್ಮಿಕ ಯೋಗಕ್ಷೇಮ ಚಿಂತನೆ ನನ್ನ ಮಹತ್ತರವಾದ ಕಾಳಜಿಯಾಗಿರುವುದರಿಂದ ಮತ್ತು ಸದನದಲ್ಲಿ ಮಾನ್ಯ ಸದಸ್ಯರು ಮಾಡಿರುವ ಭಾಷಣಗಳಿಂದ ಪ್ರೇರಿತಳಾಗಿ ನಾನೀಗ ಇಲ್ಲಿ ಮಾತನಾಡಲು ನಿಂತಿದ್ದೇನೆ. ಸದನದಲ್ಲಿ ಇದು ನಡೆದ ಚರ್ಚೆಯಲ್ಲಿ ಮಕ್ಕಳ ಸಂರಕ್ಷಣೆಗಾಗಿ ಸರ್ಕಾರ ಏನನ್ನಾದರೂ ಮಾಡಲೇಬೇಕು ಎಂಬ ಉದ್ದೇಶದಿಂದ ಮಂಡಿಸಿರುವ ಈ ವಿಧೇಯಕದ ಬಗ್ಗೆ ಮಾನ್ಯ ಸದಸ್ಯರು ತೋರಿರುವ ಕಳಕಳಿ ಮತ್ತು ಕಾತರವನ್ನು ಕಂಡು ನಾನು ಪುಳಕಗೊಂಡಿದ್ದೇನೆ. ನನ್ನ ಸಹೋದ್ಯೋಗಿಯಾಗಿರುವ ಮಾನ್ಯ ಆರೋಗ್ಯ ಸಚಿವರು ಈ ವಿಧೇಯಕವನ್ನು ರೂಪಿಸಿದ್ದು ಅದು ಸಮಗ್ರ ರೂಪದಲ್ಲಿರುವುದು ನನಗೆ ಅತ್ಯಂತ ಸಂತಸದ ವಿಷಯವಾಗಿದೆ. ಈ ವಿಧೇಯಕವು ಮಕ್ಕಳಿಗೆ ಇದುವರೆಗೂ ಇಲ್ಲದಿದ್ದ ರಕ್ಷಣೆಯನ್ನು ಒದಗಿಸುತ್ತದೆ ಎಂಬುದು ನನ್ನ ಸಂತಸಕ್ಕೆ ಕಾರಣವಾಗಿದೆ. ಈ ವಿಷಯದಲ್ಲಿ ಸಂಸತ್ತಿನಲ್ಲಿ ಮಾತನಾಡಿದ ಮಹಿಳಾ ಸದಸ್ಯರು ಇದು ಅಂತಹ ಮಹತ್ವದ ಮಸೂದೆಯಾಗಿದೆ ಎಂದು ಹೇಳಿರುವುದನ್ನು ನಾನು ಆಲಿಸಿದ್ದೇನೆ. ಅದೇನಿದ್ದರೂ ಈ ವಿಧೇಯಕ ಅನಾಥ ಮಕ್ಕಳ ರಕ್ಷಣೆಗಾಗಿ ರೂಪಿತವಾದುದಾಗಿದೆ. ಒಂದು ಮಗುವಿಗೆ ತಂದೆ ತಾಯಿ ಇಲ್ಲದಿರಬಹುದು. ಆದರೆ ಅಂತಹ ಮಗುವನ್ನು ಬಂಧುಗಳು ನೋಡಿಕೊಳ್ಳಬಹುದು. ಆದರೆ ನೂರಾರು, ಸಾವಿರಾರು, ಲಕ್ಷಾಂತರ ಮಂದಿ ಮಕ್ಕಳಿಗೆ ಅಂತ ಅದೃಷ್ಟ ಇರುವುದಿಲ್ಲ. ವಾಸ್ತವವಾಗಿ ಹೆಚ್ಚಿನ ರಕ್ಷಣೆಯ ಅಗತ್ಯವಿರುವ ಇಂತಹ ಮಕ್ಕಳ ಸಂರಕ್ಷಣೆಗೆ ಸ್ವಯಂ ಸೇವಾ ಸಂಘಟನೆಗಳು ಮುಂದಾಗುತ್ತಿರುವುದು ಸಂತಸದ ವಿಷಯವಾಗಿದೆ. ಅದೇ ವೇಳೆಗೆ ಅನಾಥ ಮಕ್ಕಳಿಗಾಗಿ ಸಮಗ್ರ ಕಾಯ್ದೆಯೊಂದು ಕಾರ್ಯರೂಪಕ್ಕೆ ಬರುವ ಮೊದಲೇ ಇಂತಹ ಸೇವಾ ಕಾರ್ಯದಲ್ಲಿ ನಿರತರಾಗಿರುವ ಸ್ವಯಂಸೇವಾ ಸಂಘಟನೆಗಳ ಯೋಜನಾ ವರದಿಯಲ್ಲಿ ನಾಲ್ಕು ಕೋಟಿ ರೂಪಾಯಿಗಳನ್ನು ವಿಂಗಡಿಸಿಡಲಾಗಿದೆಯೆಂಬ ಅಂಶವನ್ನು ಸದನದ ಮಾನ್ಯ ಸದಸ್ಯರ ಗಮನಕ್ಕೆ ತರಲು ನಾನು ಬಯಸುತ್ತೇನೆ. ಈ ಸದನದ ಮಾನ್ಯ ಸದಸ್ಯರು ಅದರಲ್ಲೂ ಕುರಿತಾಗಿ ಮಹಿಳಾ ಸಂಸತ್ ಸದಸ್ಯರು ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿನ ಇತರ ಮಹಿಳೆಯರು ಮಕ್ಕಳ ಯೋಗಕ್ಷೇಮಕ್ಕಾಗಿ ಶ್ರಮಿಸುತ್ತಿರುವ ಸಂಘಟನೆಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿ ನೀಡಬೇಕು. ಯೋಜನಾ ಆಯೋಗದ ವರದಿಯಲ್ಲಿ ಒದಗಿಸಿರುವ ಈ ಹಣವನ್ನು ಬಳಸಿಕೊಂಡು ಈ ಸಂಘಟನೆಗಳು ತಮ್ಮ ಚಟುವಟಿಕೆಗಳನ್ನು ವಿಸ್ತರಿಸಿಕೊಳ್ಳಬಹುದಾಗಿದೆ. ಮಕ್ಕಳ ಸಂರಕ್ಷಣೆಯು ಸಂಪೂರ್ಣವಾಗಿ ಸರ್ಕಾರದ ಹೊಣೆಗಾರಿಕೆಯಾಗಿದೆ. ಮಗುವೊಂದು ಅನಾಥವಾಗಿರಲಿ ಅದು ಅಂಗವಿಕಲವಾಗಿರಲಿ ಅಥವಾ

---

* ತಂದೆ ತಾಯಿಯಂದಿರನ್ನು ಕಳೆದುಕೊಂಡ ಮತ್ತು ಸರಿಯಾದ ರೀತಿಯ ಪಾಲನೆ ಪೋಷಣೆಗೆ ಅವಕಾಶ ಇಲ್ಲದ ಮಕ್ಕಳ ಲಾಲನೆ - ಪಾಲನೆ ಮತ್ತು ಶಿಕ್ಷಣಕ್ಕೆ ಅವಕಾಶ ಕಲ್ಪಿಸುವ ಸಲುವಾಗಿ ಶ್ರೀ ಎಂ. ಎಲ್. ದ್ವಿವೇದಿಯವರು ಮಂಡಿಸಿದ ಖಾಸಗಿ ಮಸೂದೆಯ ಮೇಲಿನ ಚರ್ಚೆಯಲ್ಲಿ ಸದಸ್ಯರು ಎತ್ತಿದ ಪ್ರಶ್ನೆಗೆ ಉತ್ತರಿಸುತ್ತಾ (ಲೋಕಸಭೆ ಚರ್ಚೆ 1953, ಏಪ್ರಿಲ್ 24, ಸಿಸಿ 5048-5049)

ಇನ್ನಾವುದೇ ಕಾರಣದಿಂದ ಅಶಕ್ತರಾಗಿರಲಿ ಅಂತಹ ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಸರ್ಕಾರದ ಹೊಣೆಗಾರಿಕೆಯಾಗಿದೆ. ಆದರೆ ಈ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸ್ವಯಂ ಸೇವಾ ಸಂಘಟನೆಗಳಿಂದ ಈ ವಿಷಯದಲ್ಲಿ ಅವುಗಳಿಗಿರುವ ಅಧಿಕಾರ, ಸಂಪನ್ಮೂಲ ಮತ್ತು ಇತರ ಸೌಕರ್ಯ ಸವಲತ್ತುಗಳನ್ನು ಸರ್ಕಾರ ತನ್ನ ಕೈಗೆ ತೆಗೆದುಕೊಳ್ಳುವುದಕ್ಕೂ ನನ್ನ ಸಮ್ಮತಿ ಇಲ್ಲ. ಬದಲಾಗಿ ಈ ಸಂಸ್ಥೆಗಳು ತಮ್ಮ ಕಾರ್ಯ ಚಟುವಟಿಕೆಗಳನ್ನು ಮುಂದುವರಿಸಿಕೊಂಡು ಹೋಗಬೇಕೆಂಬುದೇ ನನ್ನ ಆಶಯವಾಗಿದೆ. ಈ ಸಂಘಟನೆಗಳು ಈ ಕ್ಷೇತ್ರದಲ್ಲಿ ತಾವು ನಡೆಸುತ್ತಿರುವ ಕಾರ್ಯ ಚಟುವಟಿಕೆಗಳನ್ನು ಸರ್ಕಾರದ ಗಮನಕ್ಕೆ ತರಬಹುದು. ಈ ಕ್ಷೇತ್ರದಲ್ಲಿ ಯಾವ ಸಂಘಟನೆಗಳು ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ ಎಂದು ಹೇಳಲು ಅವರೇ ಸಮರ್ಥರಾಗಿರುತ್ತಾರೆ. ಮಕ್ಕಳ ಯೋಗಕ್ಷೇಮಕ್ಕಾಗಿ ಭಾರತೀಯ ಮಕ್ಕಳ ಕಲ್ಯಾಣ ಮಂಡಳಿ ಇದ್ದು, ನಾನೇ ಅದರ ಅಧ್ಯಕ್ಷೆಯಾಗಿದ್ದೇನೆ. ಈ ಕ್ಷೇತ್ರದಲ್ಲಿ ಬಲ್ಕಾನ್-ಜಿ ಬಾರಿ ಎಂಬ ಸಂಸ್ಥೆಯೊಂದು ಅಖಿಲ ಭಾರತ ಮಟ್ಟದಲ್ಲಿ ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸುತ್ತಿದೆ. ಅದೇ ರೀತಿ ಮದ್ರಾಸ್‌ನಲ್ಲಿ ಅಶೋಕ ವಿಹಾರ ಎಂಬ ಸಂಘಟನೆಯೊಂದು ಪ್ರಶಂಸನೀಯವಾದ ಕಾರ್ಯ ನಿರ್ವಹಿಸುತ್ತಿದೆ. ಮುಂಬಯಿ, ಕಲ್ಕತ್ತಾ ಮತ್ತು ದೇಶದ ಇತರ ಕಡೆಗಳಲ್ಲೂ ಇಂತಹ ಅನೇಕ ಸಂಘಟನೆಗಳಿದ್ದು, ಅವು ಮಕ್ಕಳ ಕಲ್ಯಾಣಕ್ಕಾಗಿ ಕಾರ್ಯ ನಿರ್ವಹಿಸುತ್ತಿವೆ. ನಾವು ಈ ವಿಧೇಯಕವನ್ನು ಅದು ಅನಾಥರಿಗಾಗಿಯೇ ಇರುವ ಮಸೂದೆ ಎಂದು ಸಂಕುಚಿತ ದೃಷ್ಟಿಯಿಂದ ನೋಡಬಾರದು. ಬದಲಾಗಿ ಅದನ್ನು ಸಮಗ್ರ ದೃಷ್ಟಿಯಿಂದ ಪರಿಶೀಲಿಸಬೇಕು. ಸರ್ಕಾರವು ಈಗಾಗಲೇ ಮಕ್ಕಳ ಕಾಯ್ದೆಯೊಂದನ್ನು ಸಿದ್ಧಪಡಿಸಿದೆ. ಹಾಗಾಗಿ ಸರ್ಕಾರವು ಮಕ್ಕಳ ಹಿತಚಿಂತನೆಯ ಪ್ರಶ್ನೆಯನ್ನು ಸಮಗ್ರ ದೃಷ್ಟಿಯಿಂದ ನೋಡುವುದೆಂದು ನಾನು ದೃಢ ವಿಶ್ವಾಸ ಹೊಂದಿದ್ದೇನೆ. ಆದರೆ ಅದೇ ವೇಳೆಗೆ ಈ ನಿಟ್ಟಿನಲ್ಲಿ ಯೋಜನಾ ಆಯೋಗವು ನಮಗೆ ಕಲ್ಪಿಸಿಕೊಡುತ್ತಿರುವ ಅವಕಾಶದ ಸಂಪೂರ್ಣ ಪ್ರಯೋಜನ ಪಡೆಯಬೇಕೆಂದೂ ಕೇಳಿಕೊಳ್ಳುತ್ತೇನೆ.

## 27. ಅನಾಥಾಲಯಗಳು ಮತ್ತು ಇತರ ಧಾರ್ಮಿಕ ದತ್ತಿ ಸಂಸ್ಥೆಗಳ (ನಿರ್ವಹಣೆ ಮತ್ತು ನಿಯಂತ್ರಣ) ವಿಧೇಯಕ - 1950*

ಈ ವಿಧೇಯಕದ ಕುರಿತು ಮಾತನಾಡಲು ನನಗೆ ಒಂದಿಷ್ಟು ಅವಕಾಶ ಕೊಟ್ಟಿರುವುದಕ್ಕಾಗಿ ನಾನು ಅತ್ಯಂತ ಸಂತುಷ್ಟಳಾಗಿದ್ದೇನೆ. ನಾನು ಈ ವಿಧೇಯಕವನ್ನು ಮತ್ತೆ ಮತ್ತೆ ಓದಿ ನೋಡಿದ್ದೇನೆ. ಆದರೆ ನಾನು ಈ ವಿಧೇಯಕದ ಪರವಾಗಿಲ್ಲ ಎಂಬುದನ್ನು ಇದೇ ಸಂದರ್ಭದಲ್ಲಿ ಸ್ಪಷ್ಟ ಪಡಿಸುತ್ತಿದ್ದೇನೆ. ಇದು ರಾಜ್ಯ ಸರ್ಕಾರಗಳು ಪರಿಶೀಲಿಸಬೇಕಾದ ವಿಷಯ ಎಂದು ನನಗಿಂತಲೂ ಮೊದಲು ಮಾತನಾಡಿದ ಇಬ್ಬರು ಭಾಷಣಕಾರರ ಅಭಿಪ್ರಾಯವನ್ನು ನಾನು ಸಂಪೂರ್ಣವಾಗಿ ಸಮ್ಮತಿಸುತ್ತೇನೆ. ಈ ಉದ್ದೇಶಕ್ಕಾಗಿ ಮಂಡಳಿಗಳನ್ನು ರಚಿಸುವಂತೆ ರಾಜ್ಯ ಸರ್ಕಾರಗಳನ್ನು ಕೇಳಲು ಕೇಂದ್ರಕ್ಕೆ ಅಧಿಕಾರವಿಲ್ಲ ಎಂಬುದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ. ಈ ಕ್ಷೇತ್ರದಲ್ಲಿನ ಎಲ್ಲ ಸಂಸ್ಥೆಗಳು ಮಹಿಳೆಯರು ಮತ್ತು ಮಕ್ಕಳ ಅಗತ್ಯಗಳನ್ನು ಈಡೇರಿಸುವ ನಿಟ್ಟಿನಲ್ಲಿ ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿಲ್ಲ ಎಂದು ನಾನು ಭಾವಿಸಿದ್ದೇನೆ. ಆದರೆ ಅಧಿಕಾರ ಇದೆ ಎಂಬ ಕಾರಣಕ್ಕಾಗಿ ಪ್ರತಿಯೊಂದರ ಮೇಲೂ ಸರಕಾರ ನಿಯಂತ್ರಣ ಹೊಂದಿರಬೇಕಾದ ಅಗತ್ಯವಿಲ್ಲ. ಜೀವನದುದ್ದಕ್ಕೂ ನಾನು ಓರ್ವ ಸಾಮಾಜಿಕ ಕಾರ್ಯಕರ್ತೆಯಾಗಿ ದುಡಿದಿದ್ದೇನೆ. ಸಮಾಜ ಸೇವೆಗೆ ತಮ್ಮ ಸೇವೆಯನ್ನು ಮುಡುಪಿಟ್ಟ ಮಹನೀಯರು ಮಹಿಳೆಯರು ಮಕ್ಕಳ ಯೋಗಕ್ಷೇಮಕ್ಕಾಗಿ ಎಷ್ಟೊಂದು ಕೆಲಸ ಮಾಡಿದ್ದಾರೆ ಎಂಬುದನ್ನು ನಾನು ನೋಡಿದ್ದೇನೆ. ಇಂತಹ ಸಂಸ್ಥೆಗಳು ಮಹಿಳೆಯರು ಮತ್ತು ಮಕ್ಕಳಿಗೆ ಸಂಬಂಧಿಸಿದ ಎಲ್ಲ ಸಮಸ್ಯೆಗಳನ್ನು ಎತ್ತಿಕೊಂಡಿವೆ ಮತ್ತು ಅವುಗಳ ಪರಿಹಾರಕ್ಕಾಗಿ ಶ್ರಮಿಸಿವೆ. ಪ್ರತಿಯೊಂದು ರಾಜ್ಯದಲ್ಲೂ ಮಕ್ಕಳ ಕಾಯ್ದೆಗಳಿದ್ದು, ಅವು ಮಕ್ಕಳ ಎಲ್ಲ ಅಗತ್ಯಗಳನ್ನು ಪೂರೈಸಿವೆ. ಈ ಸಂಸ್ಥೆಗಳು ಮಕ್ಕಳ ಶೋಷಣೆಗೆ ಕಾರಣವಾಗಿದ್ದರೆ ಅವುಗಳನ್ನು ನಿಯಂತ್ರಿಸುವ ಅಧಿಕಾರ ಈ ಕಾಯ್ದೆಗಳಿಗಿದೆ. ಮಹಿಳೆಯರ ವಿಷಯದಲ್ಲೂ ಇದೇ ಮಾತು ಅನ್ವಯವಾಗುತ್ತದೆ.

ಇಂತಹ ವಿಷಯಗಳಲ್ಲಿ ಸಾಮಾಜಿಕ ಜಾಗೃತಿಯನ್ನು ಉಂಟು ಮಾಡುವುದು ಅತ್ಯುತ್ತಮ ಮಾರ್ಗವಾಗಿದೆ. ಯಾವ ಸರ್ಕಾರದಲ್ಲಿ ನಿಯಂತ್ರಣ ಕಡಿಮೆ ಇರುತ್ತದೆಯೋ ಅದೇ ಅತ್ಯುತ್ತಮ ಸರ್ಕಾರ ಎಂಬ ಸೂಕ್ತಿಯನ್ನು ನಾನಿಂದು ಇನ್ನಷ್ಟು ಒತ್ತುಕೊಟ್ಟು ಪುನರುಚ್ಚರಿಸುತ್ತೇನೆ. ಆದರೆ ಭಾರತ ಸರ್ಕಾರ ಶಾಸನಗಳನ್ನು ರೂಪಿಸುವುದರಲ್ಲೇ ವಿಶೇಷ ಆಸಕ್ತಿ ತಳೆದಿದೆ. ಹೀಗೆ ಮಾಡುವ ಮೂಲಕ ಜನರ ಕ್ರಿಯಾಶೀಲತೆಯನ್ನೇ ಅದು ಸಾಯಿಸುತ್ತದೆ ಎಂದು ಹೇಳಲು ನನಗೆ ನಿಜಕ್ಕೂ ವಿಷಾದವೆನಿಸುತ್ತದೆ. ನಮ್ಮಲ್ಲಿ ಮಹಿಳೆಯರ ಮತ್ತು ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವ

---

* ಅನಾಥಾಲಯಗಳು ಮತ್ತು ನಿರ್ಲಕ್ಷಿತ ಮಹಿಳೆಯರು ಅಥವಾ ಮಕ್ಕಳ ಆಶ್ರಯಧಾಮಗಳು ಹಾಗೂ ಇಂತಹ ಸಂಸ್ಥೆಗಳ ಉಸ್ತುವಾರಿ ಮತ್ತು ನಿಯಂತ್ರಣ ಹಾಗೂ ಅದಕ್ಕೆ ಸಂಬಂಧಪಟ್ಟ ವಿಷಯಗಳಿಗೆ ಶ್ರೀ ಕೈಲಾಶ್ ಬಿಹಾರಿ ಅವರು ಮಂಡಿಸಿದ ಖಾಸಗಿ ವಿಧೇಯಕದ ಮೇಲಿನ ಚರ್ಚೆಯಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತಾ (ರಾಜ್ಯಸಭೆ ಚರ್ಚೆ ಆಗಸ್ಟ್ 21, 1959, ಸಿಸಿ 1389-1392)

ನಿಟ್ಟಿನಲ್ಲಿ ಹಲವಾರು ಸಮಾಜ ಸೇವಾ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. ದೇಶದಲ್ಲಿ ಮಹಿಳೆಯರು ಮತ್ತು ಮಕ್ಕಳ ಶೋಷಣೆ ಯಾವ ಮಟ್ಟದಲ್ಲಿ, ಎಷ್ಟರ ಮಟ್ಟಿಗೆ ನಡೆಯುತ್ತಿದೆ? ಎಂಬುದನ್ನು ತೀರ್ಮಾನಿಸಬೇಕಾದವರೂ ಸಾಮಾಜಿಕ ಕಾರ್ಯಕರ್ತರೇ. ಈಗ ಉದ್ದೇಶಿಸಿರುವ ರೀತಿಯ ಮಂಡಳಿಗಳನ್ನು ರಚಿಸುವಾಗ ಅಂತಹ ಮಂಡಳಿಗಳ ಅಗತ್ಯ ಇದೆಯೇ ಎಂಬ ಬಗ್ಗೆ ರಾಜ್ಯ ಸರ್ಕಾರಗಳು ಸಾಮಾಜಿಕ ಕಾರ್ಯಕರ್ತರೊಂದಿಗೆ ಸಮಾಲೋಚಿಸಿವೆಯೇ ಎಂಬುದನ್ನು ನಾನು ತಿಳಿಯಬಯಸುತ್ತೇನೆ. ರಾಜ್ಯಗಳು ಅಂತಹ ಮಂಡಳಿಗಳನ್ನು ಹೊಂದಿರಬೇಕೆಂದು ಕೇಂದ್ರ ಸರ್ಕಾರವು ಶಾಸನವೊಂದನ್ನು ತರುವುದಕ್ಕೆ ಮೊದಲು ಈ ವಿಷಯದ ನಿಷ್ಕರ್ಷೆಯಾಗಬೇಕು. ಆದರೆ ತಮ್ಮ ಹಕ್ಕುಗಳ ಮೇಲೆ ಅತಿಕ್ರಮಣ ನಡೆಯುವುದನ್ನು ರಾಜ್ಯ ಸರ್ಕಾರಗಳು ಖಂಡಿತವಾಗಿಯೂ ಪ್ರತಿಭಟಿಸುವು ಎಂದು ನಾನು ಭಾವಿಸಿದ್ದೇನೆ. ಒಂದು ವೇಳೆ ಅವು ಹಾಗೆ ಮಾಡಿದರೂ ಅದು ತಪ್ಪಲ್ಲ. ಈ ವಿದ್ಯಾರ್ಹತೆಗಳ ಬಗ್ಗೆ ನನಗೆ ಕಿಂಚಿತ್ತೂ ಸಂದೇಹವಿಲ್ಲ. ಆದರೆ ಈ ವಿಧೇಯಕದ ಹಲವು ಖಂಡಗಳು ಗೊಂದಲಕ್ಕೆ ಎಡೆ ಮಾಡಿಕೊಡುವ ರೀತಿಯಲ್ಲಿವೆ. ಹಾಗಾಗಿ ಅದನ್ನು ಕಾಯಿದೆಯಾಗಿ ಜಾರಿಗೆ ತಂದರೆ ಅದು ಇನ್ನಷ್ಟು ಗೊಂದಲಕ್ಕೆ ಕಾರಣವಾಗುತ್ತದೆ. "ಮಾನ್ಯತೆ ಪಡೆದ ಅನಾಥಾಶ್ರಮಕ್ಕೆ ಸೇರಿಸಿಕೊಂಡ ಪ್ರತಿಯೋರ್ವ ಮಹಿಳೆ ಮತ್ತು ಮಗುವಿಗೆ ಶಿಕ್ಷಣ ನೀಡುವುದು. ತರಬೇತಿ ನೀಡುವುದು, ವಸತಿ ಒದಗಿಸುವುದು, ಬಟ್ಟೆ ಬರೆಗಳನ್ನು ಒದಗಿಸುವುದು ಹಾಗೂ ಆಹಾರವನ್ನು ಪೂರೈಸುವುದು ಪ್ರತಿಯೊಬ್ಬ ವ್ಯವಸ್ಥಾಪಕನ ಕರ್ತವ್ಯವಾಗಿರುತ್ತದೆ" ಎಂದು ನಾವು ಈ ವಿಧೇಯಕದಲ್ಲಿ ಹೇಳಿದ್ದೇವೆ. ನಮ್ಮಲ್ಲಿ ಸಂಘಗಳ ನೋಂದಣಿ ಕಾಯ್ದೆಯನ್ವಯ ನೋಂದಣಿ ಹೊಂದಿರುವ ಹಲವಾರು ಸಂಘ ಸಂಸ್ಥೆಗಳಿವೆ. ಅವು ಮೇಲೆ ಹೇಳಿದ ಎಲ್ಲ ಹೊಣೆಗಾರಿಕೆಯನ್ನು ಹೊಂದಿವೆ. ಹಾಗಿರುವಾಗ ಈ ವಿಷಯದಲ್ಲಿ ಕೇಂದ್ರ ಮಧ್ಯ ಪ್ರವೇಶಿಸುವ ಅಗತ್ಯವೇನು ? ದೇಶದಲ್ಲಿನ ಮಕ್ಕಳ ಅನಾಥಾಲಯಗಳು ಮತ್ತು ಮಹಿಳೆಯರ ಆಶ್ರಯ ಧಾಮಗಳಲ್ಲಿ ಯಾವುವು ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ ಎಂಬುದು ನನಗೆ ಗೊತ್ತಿಲ್ಲ. ತಮ್ಮ ಬಳಿ ಇದಕ್ಕೆ ಸಂಬಂಧಿಸಿದ ಮಾಹಿತಿಗಳೇನಾದರೂ ಇವೆಯೇ? ಆದರೆ ನೂರಾರು ಸಂಸ್ಥೆಗಳು ಈ ಕ್ಷೇತ್ರದಲ್ಲಿ ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸುತ್ತಿರುವುದು ನನಗೆ ಗೊತ್ತಿದೆ. ಅಂತಹ ಅನಾಥಾಶ್ರಮಗಳಿಗೆ ಆಡಳಿತ ಮಂಡಳಿಗಳಲ್ಲಿ ನಾನೂ ಓರ್ವ ಸದಸ್ಯೆಯಾಗಿರುವುದರಿಂದ ನನಗೆ ಈ ವಿಷಯ ಗೊತ್ತಿದೆ. ಹಾಗಾಗಿಯೇ ಈ ವಿಷಯದಲ್ಲಿ ಸರ್ಕಾರದ ಹಸ್ತಕ್ಷೇಪವನ್ನು ನಾನು ವಿರೋಧಿಸುತ್ತೇನೆ. ಏಕೆಂದರೆ ಈ ರೀತಿಯ ನಿಯಂತ್ರಣವನ್ನು ತಂದಾಗ ವ್ಯವಸ್ಥಾಪಕರು ಏನು ಮಾಡಬೇಕು, ಏನನ್ನು ಮಾಡಬಾರದು ಎಂಬುದನ್ನು ಸರ್ಕಾರವೇ ತಾಕೀತು ಮಾಡುತ್ತದೆ. ಈ ವಿಧೇಯಕದ ಧ್ಯೇಯೋದ್ದೇಶಗಳ ಪ್ರಸ್ತಾವನೆಯಲ್ಲಿ ಹೀಗೆ ಹೇಳಲಾಗಿದೆ:

"ಇಂತಹ ಸಂಸ್ಥೆಗಳ ಸಂಘಟನೆಗೆ ಸಂಬಂಧಿಸಿದಂತೆ, ಈಗ ಅಸ್ತಿತ್ವದಲ್ಲಿರುವ ಯಾವುದೇ ಅನಾಥಾಲಯ, ಸೇವಾಸಂಸ್ಥೆಗಳ ಸ್ವರೂಪವನ್ನು ಹಾಗೆಯೇ ಉಳಿಸಿಕೊಳ್ಳಬೇಕು. ಆದರೆ ಅವುಗಳ ಆಡಳಿತವನ್ನು ಚುನಾಯಿತ ಆಡಳಿತ ಸಮಿತಿಯ ಮೂಲಕ ಕ್ರಮಬದ್ಧಗೊಳಿಸಲು ಅವಕಾಶ ಕಲ್ಪಿಸಬೇಕು"

ಒಂದು ಅನಾಥಾಶ್ರಮವು ಸರಿಯಾಗಿ ಕೆಲಸ ಮಾಡುತ್ತಿದ್ದರೆ ಅದರ ಆಡಳಿತ ಚೆನ್ನಾಗಿರಲೇಬೇಕು. ಹಾಗಿರುವಾಗ ಅವುಗಳನ್ನು ಕ್ರಮಬದ್ಧಗೊಳಿಸುವುದಾದರೂ ಏಕೆ ? ಅದನ್ನು ಕ್ರಮಬದ್ಧಗೊಳಿಸಲು ನಿಮಗೆ ಹಕ್ಕೆಲ್ಲಿದೆ ? ಎಲ್ಲಕ್ಕಿಂತ ಮೇಲಾಗಿ ಈ ರೀತಿಯ ಸಂಸ್ಥೆಗಳು ಸಾರ್ವಜನಿಕರ ದೇಣಿಗೆಗಳಿಂದಲೇ ನಡೆಯುವಂಥವು ಎಂಬುದೂ ನಮ್ಮ ನೆನಪಿನಲ್ಲಿರಬೇಕು.

ಈ ಮಂಡಳಿಗಳನ್ನು ರಚಿಸಿದಾಕ್ಷಣ ಅವು ಅನಾಥಾಶ್ರಮಗಳ ಕಾರ್ಯ ನಿರ್ವಹಣೆಯಲ್ಲಿ ಮಧ್ಯ ಪ್ರವೇಶಿಸಿ ಕ್ರಮೇಣ ಎಲ್ಲ ವಿಷಯಗಳಲ್ಲೂ ಹಸ್ತಕ್ಷೇಪ ನಡೆಸಲು ಪ್ರಾರಂಭಿಸುತ್ತವೆ. ಇದು ಖಂಡಿತ ಒಳ್ಳೆಯದಲ್ಲ. ಇದು ಖಾಸಗಿಯವರ ಕ್ರಿಯಾಶೀಲತೆ ಮತ್ತು ಉತ್ಸಾಹವನ್ನೇ ನಾಶಗೊಳಿಸುತ್ತದೆ; ಎಲ್ಲ ವಿಷಯಗಳಲ್ಲಿ ಸರ್ಕಾರದ ನಿಯಂತ್ರಣ ಯಾವುದೇ ಕಾರಣಕ್ಕೂ ಸಮರ್ಥನೀಯವಲ್ಲ.* ಇಂತಹ ವಿಷಯಗಳನ್ನು ಮಹಿಳಾ ಸಂಘಟನೆಗಳಿಗೆ, ಸ್ವಯಂ ಸೇವಾ ಸಂಸ್ಥೆಗಳಿಗೆ ಬಿಟ್ಟುಬಿಡಿ. ಅಂಥ ಕೆಲಸಗಳನ್ನು ಮಾಡುವಂತೆ ಅವುಗಳಿಗೆ ಮನವಿ ಮಾಡಿಕೊಳ್ಳಿ; ಈ ಕ್ಷೇತ್ರಕ್ಕೆ ಸಂಬಂಧಿಸಿದ ಮಾಹಿತಿಗಳೇನಾದರೂ ನಿಮ್ಮ ಬಳಿ ಇದ್ದರೆ ಅವುಗಳನ್ನು ಈ ಸಂಸ್ಥೆಗಳ ಗಮನಕ್ಕೆ ತನ್ನಿ. ಅಗತ್ಯ ಇದ್ದರೆ ರಾಜ್ಯ ಸಾರ್ಕಾರಗಳ ಗಮನಕ್ಕೂ ತನ್ನಿ. ಆದರೆ ಯಾವ ಕಾರಣಕ್ಕೂ ಇಂತಹ ಕಾಯ್ದೆಗಳನ್ನು ಅಂಗೀಕರಿಸಲು ಹೋಗಬೇಡಿ. ಮೇಲಾಗಿ ಈ ಮಾದರಿಯ ವಿಧೇಯಕಗಳ ಪರಾಮರ್ಶೆಗಾಗಿ ಆಯ್ಕೆ ಸಮಿತಿಗಳ ಮೇಲೆ ಹಣವನ್ನು ಪೋಲು ಮಾಡುವ ಅಗತ್ಯವೇನು? ಇದು ಅಕ್ಷರಶಃ ಹಣದ ದುಂದುವೆಚ್ಚವಾಗಿದೆ. ವ್ಯರ್ಥ ಕಾಲ ಹರಣವಾಗಿದೆ. ಈ ನಿಟ್ಟಿನಲ್ಲಿ ಸಾರ್ವಜನಿಕರು ಖಾಸಗಿ ನೆಲೆಯಲ್ಲಿ ದೇಶವೇ ಹೆಮ್ಮೆ ಪಡುವ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅಂತಹ ಸಂಸ್ಥೆಗಳಲ್ಲಿ ನಾವು ಮಧ್ಯ ಪ್ರವೇಶಿಸುವುದು ಸರಿಯಾದ ಕ್ರಮವಲ್ಲ ಎಂಬುದೇ ನನ್ನ ಅಭಿಪ್ರಾಯವಾಗಿದೆ. ಅಂತಾರಾಷ್ಟ್ರೀಯ ಮಟ್ಟದಲ್ಲೂ ನಮ್ಮ ಮಹಿಳೆಯರು ಸಮಾಜ ಸೇವೆಗಾಗಿ ತಮ್ಮ ಸಮಯವನ್ನು ಮೀಸಲಿಡುತ್ತಿದ್ದಾರೆಂದು ನಾವು ಹೆಮ್ಮೆ ಪಟ್ಟುಕೊಳ್ಳಬಹುದು ಅಂತಾರಾಷ್ಟ್ರೀಯ ಸಮುದಾಯದಲ್ಲಿ ತಲೆ ಎತ್ತಿ ನಿಲ್ಲಬಹುದು. ಜಗತ್ತಿನ ಯಾವ ದೇಶದಲ್ಲೂ ಇಂತಹ ಸಮಾಜ ಕಲ್ಯಾಣ ಮಂಡಳಿ ಅಸ್ತಿತ್ವದಲ್ಲಿಲ್ಲ. ಒಂದು ವೇಳೆ ಯಾವುದೇ ಒಂದು ಅನಾಥಾಲಯ ಸರಿಯಾಗಿ ಕಾರ್ಯ ನಿರ್ವಹಿಸುವುದಿಲ್ಲವೆಂದಾದಲ್ಲಿ ಅದಕ್ಕೆ ಅನುದಾನ ನೀಡುವುದಿಲ್ಲ ಎಂದು ಹೇಳಬಹುದು. ಕೇಂದ್ರ ಸಮಾಜಕಲ್ಯಾಣ ಮಂಡಳಿಯು ಎಲ್ಲ ರಾಜ್ಯಗಳಲ್ಲಿ ತನ್ನ ಶಾಖೆಗಳನ್ನು ಹೊಂದಿದೆ. ಅದು ಸಂಬಂಧಪಟ್ಟ ರಾಜ್ಯಗಳಿಗೆ ಹೋಗಿ "ಇಂತ ಸಂಸ್ಥೆ ಅಥವಾ ಅನಾಥಾಲಯ ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಇಲ್ಲಿಯ ನಿವಾಸಿಗಳನ್ನು ಶೋಷಿಸಲಾಗುತ್ತಿದೆ. ಹಾಗಾಗಿ ತಕ್ಷಣ ಇಂತಹ ಸಂಸ್ಥೆಗಳ ವಿರುದ್ಧ ಕ್ರಮ ತೆಗೆದುಕೊಳ್ಳಿ" ಎಂದು ಹೇಳಬಹುದಾಗಿದೆ. ಅಂತಹ ಕ್ರಮ ತೆಗೆದುಕೊಳ್ಳುವುದು ಸರ್ಕಾರದ ಅಧಿಕಾರ ಕಕ್ಷೆಯೊಳಗೇ ಇದೆ. ಅದಕ್ಕೆ ಇಂತಹ ಒಂದು ಶಾಸನದ ಅಗತ್ಯವಾದರೂ ಏಕೆ ? ಇಂತಹ ಒಂದು ಕಾಯ್ದೆಯನ್ನು ತರುವುದಕ್ಕೆ ಅಥವಾ ತರಬೇಕೆಂದು ಬಯಸುವುದಕ್ಕೆ ನಾನು ಸಂಪೂರ್ಣ ವಿರೋಧಿಯಾಗಿದ್ದೇನೆ. ಇದರಿಂದ ರಾಜ್ಯಗಳ ಅಧಿಕಾರವನ್ನು ಅತಿಕ್ರಮಿಸಿದಂತಾಗುತ್ತದೆ. ಈ ಕ್ಷೇತ್ರದಲ್ಲಿ ಖಾಸಗಿ

---

* ಮೇಲುಸ್ತುವಾರಿ ಮತ್ತು ನಿಯಂತ್ರಣ ಅವಶ್ಯವಿರುವ ಕೆಲವು ಸೇವಾ ಸಂಸ್ಥೆಗಳಿವೆ ಎಂದು ಶ್ರೀ ಅಕ್ಬರ್ ಅಲಿಖಾನ್ ಅವರು ವ್ಯಕ್ತಪಡಿಸಿದ ಅಭಿಪ್ರಾಯಕ್ಕೆ ಸ್ಪಷ್ಟನೆ ನೀಡುತ್ತಾ.

ಪ್ರಯತ್ನಗಳಿಗೆ ಸ್ವಯಂಸೇವಾ ಸಂಸ್ಥೆಗಳ ಕಾರ್ಯ ನಿರ್ವಹಣೆಗೆ ಅವಕಾಶ ಕೊಡಬೇಕೆಂಬುದು ನನ್ನ ವಿನಮ್ರ ಮನವಿಯಾಗಿದೆ. ಅನಾಥರ ಸೇವೆಯಲ್ಲಿ ನಮ್ಮ ದೇಶ ಹೆಮ್ಮೆ ಪಡುವಂತಹ ದಾಖಲೆ ಹೊಂದಿದೆ. ಒಂದು ವೇಳೆ ಸರಿಯಾಗಿ ಕಾರ್ಯ ನಿರ್ವಹಿಸದ ಸಂಸ್ಥೆಗಳಿದ್ದರೆ ಅದನ್ನು ಸಂಬಂಧಪಟ್ಟ ರಾಜ್ಯ ಸರ್ಕಾರದ ಗಮನಕ್ಕೆ ತರುವುದು ಸಮಾಜ ಕಲ್ಯಾಣ ಮಂಡಳಿಯ ಕರ್ತವ್ಯವಾಗಿದೆ. ಅಂತ ಅಕ್ರಮಗಳು ನಡೆದಲ್ಲಿ ಅದನ್ನು ಸಂಬಂಧಪಟ್ಟ ಅಧಿಕಾರಸ್ಥರ ಗಮನಕ್ಕೆ ತಂದು ಶಿಕ್ಷೆ ವಿಧಿಸುವುದೂ ಅಪೇಕ್ಷಣೀಯವೇ ಆಗಿದೆ. ಅದಕ್ಕೆ ಅಯಾ ರಾಜ್ಯಗಳಲ್ಲಿ ಸಾಕಷ್ಟು ಕಾನೂನು ಕಾಯ್ದೆಗಳಿವೆ. ಸರಿಯಾಗಿ ಕಾರ್ಯನಿರ್ವಹಿಸದ ಅನಾಥಾಲಯಗಳು ಮತ್ತು ಸಮಾಜ ಸೇವಾ ಸಂಸ್ಥೆಗಳ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಎಲ್ಲಾ ರಾಜ್ಯ ಸರ್ಕಾರಗಳು ತತ್ಸಂಬಧಿಥಾಕಾಯ್ದೆಗಳನ್ನು ಹೊಂದಿವೆ. ಇಂತಹ ಒಂದು ಮಸೂದೆಯನ್ನು ತರುತ್ತಿರುವುದಕ್ಕೆ ಸಮರ್ಥನೆ ಒದಗಿಸಬಲ್ಲ ಯಾವುದೇ ಸಕಾರಣ ನಮ್ಮ ಮುಂದಿಲ್ಲ. ಹಾಗಾಗಿ ಈ ವಿಧೇಯಕವನ್ನು ಪರಿಶೀಲನೆಗಾಗಿ ಆಯ್ಕೆ ಸಮಿತಿಗೆ ಶಿಫಾರಸು ಮಾಡುವ ಅಗತ್ಯವೂ ನನಗೆ ಕಾಣುವುದಿಲ್ಲ. ಹಾಗಾಗಿ ನಾನು ಈ ವಿಧೇಯಕವನ್ನು ಸ್ಪಷ್ಟವಾಗಿ ವಿರೋಧಿಸುತ್ತೇನೆ.

---

* ಶಿಕ್ಷಣ ಸಚಿವೆ ಡಾ. ಕೆ.ಎಲ್. ಶ್ರೀಮತಿ ಅವರು ಮುಂಡಿಸಿದ ಪ್ರಸ್ತಾವನೆ ಕುರಿತು ಮಾತನಾಡುತ್ತಾ (ರಾಜ್ಯ ಸಭೆ ಚರ್ಚೆ ಫೆಬ್ರವರಿ 15, 1955. ಸಿಸಿ 702-704)

## 28. ಮಕ್ಕಳ ವಿಧೇಯಕ 1959 *

ಮಾನ್ಯ ಉಪಾಧ್ಯಕ್ಷರೇ, ಈ ವಿಧೇಯಕವನ್ನು ಬಹುಶಃ ಯಾರೂ ವಿರೋಧಿಸಲಾರರು. ಮಾನ್ಯ ಸಚಿವರೇ ಹೇಳಿದಂತೆ ಇದು ಬಹಳ ಹಿಂದೆಯೇ ಬರಬೇಕಾಗಿದ್ದ ವಿಧೇಯಕ. ಕೇಂದ್ರ ಸರ್ಕಾರ ಎಲ್ಲ ರಾಜ್ಯಗಳೊಂದಿಗೆ ಈ ವಿಷಯದಲ್ಲಿ ಸಮಾಲೋಜನೆ ನಡೆಸಿ ಏಕರೂಪದ ಕಾಯ್ದೆಯೊಂದನ್ನು ತರುವ ಆಗತ್ಯವನ್ನು ಮನಗಂಡಿರಬೇಕೆಂದು ನಾನು ಭಾವಿಸಿದ್ದೇನೆ. ನನಗಿಂತಲೂ ಮೊದಲು ಮಾತನಾಡಿದ ಭಾಷಣಕಾರರೆಲ್ಲರೂ ಈ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಮಕ್ಕಳ ಯೋಗಕ್ಷೇಮಕ್ಕಾಗಿ ಕಾಯ್ದೆಗಳನ್ನು ರೂಪಿಸಬೇಕೆಂದು ಬಹಳ ಹಿಂದಿನಿಂದಲೇ ಒತ್ತಾಯಿಸುತ್ತಾ ಬಂದವರಲ್ಲಿ ನಾನೂ ಒಬ್ಬಳಾಗಿದ್ದೇನೆ. ಈಗಾಗಲೇ ಮುಂಬೈ ಮತ್ತು ಮದ್ರಾಸ್ ರಾಜ್ಯಗಳಲ್ಲಿ ಜಾರಿಗೆ ಬಂದಿರುವ ಕಾಯ್ದೆಗಳು ಮಕ್ಕಳ ಕಲ್ಯಾಣಕ್ಕಾಗಿ ಬಹಳಷ್ಟು ಕೆಲಸ ಮಾಡಿವೆ. ಈ ವಿಧೇಯಕಕ್ಕೆ ಸಂಬಂಧಿಸಿದ ಎಲ್ಲ ಖಂಡಗಳನ್ನೂ ಜಂಟಿ ಆಯ್ಕೆ ಸಮಿತಿ ಸಮಗ್ರ ದೃಷ್ಟಿಕೋನದಿಂದ ಪರಿಶೀಲಿಸಿದೆ. ಈ ವಿಧೇಯಕವನ್ನು ಕಾರ್ಯರೂಪಕ್ಕೆ ತರುವ ನಿಟ್ಟಿನಲ್ಲಿ ಮಾನ್ಯ ಸಚಿವರು ಮತ್ತು ಅವರ ಖಾತೆ ನೀಡಬೇಕಾದ ಗಮನವನ್ನು ನೀಡಿದೆಯೇ ಎಂದು ನಾನು ಕೇಳಬಯಸುತ್ತೇನೆ ? ಅದರ ನಿರ್ವಹಣೆಗೆ ಆಡಳಿತಗಾರರ ನೇಮಕ ಆಗಬೇಕು. ದಂಡಾಧಿಕಾರಿಗಳ-ಮ್ಯಾಜಿಸ್ಟ್ರೇಟರುಗಳ ನೇಮಕ ಆಗಕಬೇಕಾಗುತ್ತದೆ; ಮಕ್ಕಳ ನಿರೀಕ್ಷಣಾಲಯಗಳು ಬೇಕಾಗುತ್ತವೆ; ಈ ಮಕ್ಕಳಿಗಾಗಿ ವಿಶೇಷ ಶಾಲೆಗಳನ್ನು ತೆರೆಯಬೇಕಾಗುತ್ತದೆ. ಈ ಶಾಲೆಗಳನ್ನು ನಡೆಸುವವರು ಯಾರು? ಈ ನಿರೀಕ್ಷಣಾಲಯಗಳ ಉಸ್ತುವಾರಿ ನಡೆಸುವವರು ಯಾರು ? ಅಲ್ಲಿ ಮಕ್ಕಳಿಗೆ ಸರಿಯಾದ ಪಾಲನೆ-ಪೋಷಣೆ, ಪ್ರೀತಿ, ವಾತ್ಸಲ್ಯ ಸಿಗುತ್ತಿದೆಯೇ ಎಂದು ನೋಡಿಕೊಳ್ಳುವವರು ಯಾರು? ಮಕ್ಕಳು ಬಾಲಾಪರಾಧಿಗಳಾಗಿದ್ದಲ್ಲಿ ಅವರನ್ನು ಸರಿ ದಾರಿಗೆ ತರಲು, ಅವರ ಅಗತ್ಯಗಳನ್ನು ನೋಡಿಕೊಳ್ಳಲು ಅಲ್ಲಿ ಯಾರಿರುತ್ತಾರೆ? ಇಂತಹ ಮಕ್ಕಳಿಗೆ ಇತರ ಎಲ್ಲಕ್ಕಿಂತ ಹೆಚ್ಚಾಗಿ ಮನೋ ವೈಜ್ಞಾನಿಕ ಚಿಕಿತ್ಸೆ ಕೂಡಾ ಅಗತ್ಯ ಎಂಬುದನ್ನು ಸರ್ಕಾರ ಮನಗಂಡಿದೆಯೇ? ಸಚಿವೆಯಾಗಿ ಜಗತ್ತಿನಾದ್ಯಂತ ಪ್ರವಾಸ ಕೈಗೊಳ್ಳುವ ಅವಕಾಶ ನನಗೆ ಸಿಕ್ಕಿದೆ. ಇಂತಹ ಸಂದರ್ಭದಲ್ಲಿ ನಾನು ಮಕ್ಕಳ ಯೋಗಕ್ಷೇಮ ಕೇಂದ್ರಗಳ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿ ಅಂತಹ ಕೇಂದ್ರಗಳಿಗೆ ಭೇಟಿ ನೀಡಿ ಅದು ಕಾರ್ಯ ನಿರ್ವಹಿಸುವ ರೀತಿಯನ್ನು ಗಮನಿಸಿದ್ದೇನೆ. ಮೊನ್ನೆ ಮೊನ್ನೆಯಷ್ಟೇ ನಾನು ನ್ಯೂಜಿಲ್ಯಾಂಡ್‌ಗೆ ಹೋಗಿದ್ದೆ. ನಾನು ಅಲ್ಲಿ ವಿಲಕ್ಷಣ ವ್ಯಾಧಿಯಿಂದ ನರಳುತ್ತಿದ್ದ ಮಕ್ಕಳ ವಿಶೇಷ ಶುಶ್ರೂಷಾ ಕೇಂದ್ರವೊಂದಕ್ಕೆ ಭೇಟಿ ನೀಡಿದ್ದೆ. ಈ ಮಕ್ಕಳನ್ನು ನೋಡಿಕೊಳ್ಳಲು ಸರಿಯಾದ ತರಬೇತಿ ಹೊಂದಿದ ಮಹಿಳೆಯರು-ಸಾಮಾನ್ಯವಾಗಿ ಮಹಿಳೆಯರನ್ನೇ ಅಲ್ಲಿ ನೇಮಿಸಿಕೊಳ್ಳುತ್ತಾರೆ-ದೊರೆಯದಿರುವುದು ತಮ್ಮ ದೊಡ್ಡ ಸಮಸ್ಯೆಯಾಗಿದೆ ಎಂದು ಅಲ್ಲಿ ನನಗವರು ಹೇಳಿದರು. ಎಲ್ಲ ದೇಶಗಳಲ್ಲಿ ಈ ವಿಷಯದಲ್ಲಿ ಇದೇ ರೀತಿಯ ಸಮಸ್ಯೆ ಇರುವುದು ನನ್ನ ಗಮನಕ್ಕೆ ಬಂದಿದೆ. ನಾನು ಭೇಟಿ ನೀಡಿದ ದೇಶಗಳಲ್ಲಿ ಹೆಚ್ಚು ಕಡಿಮೆ ಎಲ್ಲ ಕಡೆ ಇದೇ ಪರಿಸ್ಥಿತಿ ಇತ್ತು. ವಿದೇಶಗಳಲ್ಲಿ ಬಾಲಪರಾಧಿಗಳ ಅನೇಕ ಕೇಂದ್ರಗಳಿಗೆ ನಾನು ಭೇಟಿ ನೀಡಿದ್ದೇನೆ. ನ್ಯಾಯಾಲಯಗಳಲ್ಲಿ ಮ್ಯಾಜಿಸ್ಟ್ರೇಟರು ಅವರ ವಿಚಾರಣೆ ನಡೆಸುವುದನ್ನು ಕಂಡಿದ್ದೇನೆ. ಎಲ್ಲ ಕಡೆಯಲ್ಲೂ ಕಂಡು ಬಂದ ಸಮಸ್ಯೆ ಎಂದರೆ ತರಬೇತಿ ಹೊಂದಿದ ಸಿಬ್ಬಂದಿಗಳ ಕೊರತೆ. ಅದೇ ರೀತಿ ವಿಧೇಯಕವನ್ನು ಅಂಗೀಕರಿಸಿ ಅದನ್ನು ಕಾರ್ಯರೂಪಕ್ಕೆ ತರುವಾಗ ವಿಶೇಷ ಶಾಲೆಗಳನ್ನು ನಡೆಸಲು, ನಿರೀಕ್ಷಣಾಲಯಗಳನ್ನು ನಿರ್ವಹಿಸಲು ಹಾಗೂ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಲು ಅಗತ್ಯವಿರುವ ಪರಿಣಿತ ಸಿಬ್ಬಂದಿಯನ್ನು ಹೊಂದಿರಲು ನಮಗೆ ಸಾಧ್ಯವಾದೀತೇ? ನಾವು ಈ ವಿಧೇಯಕದ ಮೂಲಕ ಮಕ್ಕಳಿಗೆ ಅವರ ಅವಶ್ಯಕತೆಗಳನ್ನೂ ಪೂರೈಸಲು ಮತ್ತು ಅವರಿಗೆ ಬೇಕಾದ ಎಲ್ಲ ರೀತಿಯ ಸೇವೆಗಳನ್ನು ಒದಗಿಸಲು ಉದ್ದೇಶಿಸಿದ್ದೇವೆ. ಆದರೆ ಇದಾವನ್ನೂ

ಸೂಕ್ತ ತರಬೇತಿ ಹೊಂದಿದ ಸಿಬ್ಬಂದಿಗಳಿಲ್ಲದೆ ಕಾರ್ಯರೂಪಕ್ಕೆ ತರಲು ಸಾಧ್ಯವಾಗುವುದಿಲ್ಲ. ಈ ವಿಷಯದಲ್ಲಿ ಪರಿಣಿತ ಸಂಘ ಸಂಸ್ಥೆಗಳು ಮತ್ತು ವಿಶ್ವ ಸಂಸ್ಥೆಯಂತಹ ಸಂಘಟನೆಗಳು ಕಲ್ಪಿಸಿಕೊಟ್ಟಿರುವ ಸೌಕರ್ಯಗಳನ್ನು ನಾವು ಬಳಸಿಕೊಂಡಿದ್ದೇವೆಯೇ ಎಂಬ ವಿಷಯದಲ್ಲಿಯೂ ನನಗೆ ಸಂದೇಹವಿದೆ. ಈ ಕ್ಷೇತ್ರದಲ್ಲಿ ವಿಶೇಷ ತರಬೇತಿಯನ್ನು ಪಡೆಯುವ ಸಲುವಾಗಿ ವಿದೇಶಗಳಿಗೆ ಹೋಗಲು ಅಂತ ಸಂಸ್ಥೆಗಳಿಂದ ಸಿಗುವ ವಿದ್ಯಾರ್ಥಿ ವೇತನ ಮತ್ತಿತರ ಸೌಲಭ್ಯಗಳನ್ನು ಬಳಸಿಕೊಳ್ಳಲು ನಾವು ಯೋಚಿಸಿದ್ದೇವೆಯೇ? ಈ ಬಗ್ಗೆಯೂ ನನಗೆ ಅನುಮಾನ ಉಂಟು. ಮಹಿಳೆಯರು ಅಂತಹ ತರಬೇತಿಯನ್ನು ಪಡೆದು ಬಂದರೆ ಇಲ್ಲಿನ ಬಾಲಪರಾಧಿಗಳ ನಿರೀಕ್ಷಣಾಲಯಗಳ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಲು ಅವರು ಸಮರ್ಥರಾಗುವರು ಅದೇ ರೀತಿ ತರಬೇತಿ ಹೊಂದಿದ ಸಿಬ್ಬಂದಿ ಇದ್ದರೆ ನ್ಯಾಯಾಲಯಗಳಲ್ಲಿ ಸಮರ್ಪಕ ವಾತಾವರಣ ನಿರ್ಮಾಣವಾಗುವುದು. ಆಡಳಿತಾಧಿಕಾರಿ ಎಂದರೆ 'ನಮ್ಮಲ್ಲಿ ಕೆಲವು ಮಕ್ಕಳಿದ್ದಾರೆ. ನಾವು ಇವರಿಗಾಗಿ ವಿಶೇಷ ಸೌಕರ್ಯಗಳನ್ನು ಕಲ್ಪಿಸಿದ್ದೇನೆ' ಎಂದು ಹೇಳಿಕೊಳ್ಳಲು ಇರುವ ಒಬ್ಬ ವ್ಯಕ್ತಿಯಲ್ಲ. ವಿಶೇಷ ಬಾಲ ಕೇಂದ್ರಗಳನ್ನು ನಡೆಸಲು ವಿಶೇಷ ತರಬೇತಿ ಹೊಂದಿದ ಸಿಬ್ಬಂದಿ ಬೇಕು. ಅದೇ ರೀತಿ ಬಾಲ ನಿರೀಕ್ಷಣಾಲಯಗಳಿಗೂ ವಿಶೇಷ ತರಬೇತಿ ಹೊಂದಿದ ಸಿಬ್ಬಂದಿಯೇ ಬೇಕು. ಮನಃಶಾಸ್ತ್ರದಲ್ಲಿ, ವೈದ್ಯ ಪದ್ಧತಿಗಳಲ್ಲಿ ಮತ್ತು ಮಕ್ಕಳ ವಿಷಯದಲ್ಲಿ ಹೆಚ್ಚಿನ ಪರಿಣತಿ ಹೊಂದಿದವರು ಇಲ್ಲಿ ಬೇಕಾಗುತ್ತದೆ. ಮಕ್ಕಳು ಯಾವ ಕಾರಣದಿಂದಾಗಿ ಅಪರಾಧಿಗಳಾಗಿದ್ದಾರೆಯೆಂಬುದನ್ನು ಅರಿಯುವ ಸಾಮರ್ಥ್ಯ ಇರುವ ತಜ್ಞರು ಇಲ್ಲಿ ಅಗತ್ಯ. ಮಗು ಯಾವ ಪರಿಸರದಲ್ಲಿ ಬೆಳೆದು ಹಾಗಾಗಿದೆ ಎಂಬ ಪರಿಜ್ಞಾನ ಅಗತ್ಯ. ಅದೇ ರೀತಿ ಮಕ್ಕಳ ಅನಾಥಾಲಯಗಳಿಗೆ ಬರಲು ಕಾರಣವಾದ ಆರ್ಥಿಕ ಅಂಶಗಳು ಯಾವುದೆಂಬುದನ್ನೂ ಅವರು ಅರಿತುಕೊಂಡಿರಬೇಕಾಗುತ್ತದೆ. ಮಕ್ಕಳ ಕಲ್ಯಾಣ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಈ ಎಲ್ಲ ಅರ್ಹತೆಗಳೂ ಇರಬೇಕು. ಮೊನ್ನೆ ನಾನು ಬಿಕ್ಷಾಟನೆ ವೃತ್ತಿಗೆ ಅತುಕೊಳ್ಳಲಿದ್ದ ಮಗುವೊಂದನ್ನು ರಕ್ಷಿಸಿದೆ. ವಿಷಯ ತಿಳಿದೊಡನೆಯೇ ನಾನು ಮಗುವಿನ ತಂದೆ, ತಾಯಿ ವಾಸವಾಗಿದ್ದಲ್ಲಿಗೆ ಹೋಗಿದೆ. ಅವರು ವಾಸಿಸುತ್ತಿದ್ದ ಪರಿಸರ ಬೀಭತ್ಸವಾಗಿತ್ತು. ಭಿಕ್ಷೆ ಎತ್ತುವುದು ಅನಿವಾರ್ಯವೇ ಆಗಿದ್ದರೂ ಕೂಡಾ ಮಗುವನ್ನು ಬೇಡಲು ಬಿಡಬಾರದೆಂದು ನಾನು ಹೇಗೋ ಅವರ ಮನ ಒಲಿಸಿದೆ. ನನ್ನ ಅದೃಷ್ಟಕ್ಕೆ ಅವರು ಒಪ್ಪಿಕೊಂಡರು. ನಾವು ಈಗ ತಂದಿರುವ ವಿಧೇಯಕವನ್ನು ಯಶಸ್ವಿಯಾಗಿ ಕಾರ್ಯ ರೂಪಕ್ಕೆ ತರಬೇಕಾದರೆ ಉತ್ಸಾಹ ಮಾತ್ರವಲ್ಲ. ಈ ವಿಷಯದಲ್ಲಿ ವಿಶೇಷ ತರಬೇತಿ ಹೊಂದಿದ ಕಾರ್ಯಕರ್ತರೂ ನಮಗೆ ಬೇಕಾಗುತ್ತಾರೆ. ನಾವು ಈಗ ಉದ್ದೇಶಿಸಿರುವ ಕಾರ್ಯಭಾರವನ್ನು ಕೈಗೆತ್ತಿಕೊಳ್ಳಲು ಸಿದ್ಧರಾಗಿರುವ ವಿಶೇಷ ಸಿಬ್ಬಂದಿಯನ್ನು ನಾವು ತಯಾರು ಮಾಡಿದ್ದೇವೆಯೇ ಎಂಬುದನ್ನು ಸಚಿವರು ತಮ್ಮ ಪ್ರತ್ಯುತ್ತರದಲ್ಲಿ ಹೇಳಬೇಕೆಂದು ನಾನು ಕೇಳಿಕೊಂಡಿದ್ದೇನೆ. ಈಗ ನಾವು ಮಂಡಿಸಿರುವ ವಿಧೇಯಕವು ಒಂದು ಮಾದರಿ ಕಾಯ್ದೆಯೆನಿಸಿ ಕೇಂದ್ರಾಡಳಿತ ಪ್ರದೇಶಗಳಲ್ಲಿನ ಮಕ್ಕಳಿಗಾಗಿ ಹಮ್ಮಿಕೊಂಡಿರುವ ಎಲ್ಲ ಯೋಜನೆಗಳು ರಾಜ್ಯಗಳಿಗೆ ಅನುಸರಿಸಲು ಯೋಗ್ಯ ಎಂಬುದು ಸಾಬೀತಾದಲ್ಲಿ ಎಲ್ಲ ರಾಜ್ಯ ಸರ್ಕಾರಗಳು ತಾವಾಗಿಯೇ ಇದೇ ಮಾದರಿಯ ಕಾಯ್ದೆಗಳನ್ನು ತರುವಂತೆ ನಮ್ಮನ್ನು ಕೇಳಬಹುದು. ಅಷ್ಟು ಮಾತ್ರವಲ್ಲ ಇಡೀ ದೇಶಕ್ಕೆ ಅನ್ವಯವಾಗುವಂತೆ ಏಕರೂಪದ ಕಾಯ್ದೆಯೊಂದನ್ನು ತರುವಂತೆ ನಮಗೆ ಸೂಚಿಸಬಹುದು. ಆದರೆ ಒಟ್ಟಿನಲ್ಲಿ ಈ ವಿಧೇಯಕದ ಯಶಸ್ಸು ಸಂಪೂರ್ಣವಾಗಿ ತರಬೇತಾದ ಸಿಬ್ಬಂದಿಯನ್ನೇ ಅವಲಂಬಿಸಿದೆಯೆಂಬ ಅಂಶವನ್ನು ನಾನು ಮತ್ತೊಮ್ಮೆ ಇಲ್ಲಿ ಸ್ಪಷ್ಟಪಡಿಸಬಯಸುತ್ತೇನೆ.

---

* 1960ರ ಫೆಬ್ರವರಿ 15ರಂದು ಈ ವಿಧೇಯಕವನ್ನು ಅಂಗೀಕರಿಸಲಾಯಿತು.

## 29. ವಿಶ್ವವಿದ್ಯಾನಿಲಯ ಅನುದಾನ ಆಯೋಗದ ವರದಿ*

ಸನ್ಮಾನ್ಯ ಅಧ್ಯಕ್ಷರೇ, ನಾನು ಮಾತನಾಡಲು ಆರಂಭಿಸುವ ಮೊದಲು ಈ ವರದಿಯನ್ನು ಹಾರ್ದಿಕವಾಗಿ ಸ್ವಾಗತಿಸುತ್ತೇನೆ. ಆಯೋಗವು ತನ್ನ ವರದಿಯಲ್ಲಿ ಅನೇಕ ಮೂಲಭೂತ ಪ್ರಶ್ನೆಗಳನ್ನು ಎತ್ತಿದೆಯಲ್ಲದೆ ಹಲವಾರು ಉಪಯುಕ್ತ ಸಲಹೆಗಳನ್ನು ನೀಡಿದೆ. ನನ್ನ ಸನ್ಮಾನ್ಯ ಮಿತ್ರರಾದ ಡಾ: ಕುಂಝ್ರು ಅವರು ನಿನ್ನೆ ಹೇಳಿದ ಪ್ರತಿಯೊಂದು ಮಾತೂ ನನಗೆ ಸಂಪೂರ್ಣ ಸಹಮತವಾಗಿದೆ. ಈ ವರದಿಯಲ್ಲಿನ ಶಿಫಾರಸುಗಳು ದೇಶದ ಭವಿಷ್ಯ ಮತ್ತು ಕ್ಷೇಮ ಚಿಂತನೆಯ ದೃಷ್ಟಿಯಿಂದ ಅತ್ಯಂತ ಪ್ರಾಮುಖ್ಯದ್ದಾಗಿವೆ.

ದೇಶಕ್ಕೆ ಅಗತ್ಯವಿರುವ ವಿದ್ಯಾವಂತರನ್ನು ಸೃಷ್ಟಿಸುವಲ್ಲಿ, ಪುರುಷರು ಮತ್ತು ಸ್ತ್ರೀಯರಿಗೆ ಸಮಾನತೆ ಕಲ್ಪಿಸುವಲ್ಲಿ ವಿಶ್ವವಿದ್ಯಾನಿಲಯಗಳು ವಹಿಸುವ ಪಾತ್ರವನ್ನು ಅಲ್ಲಗಳೆಯಲು ಯಾರಿಂದಲೂ ಸಾಧ್ಯವಿಲ್ಲ. ದೇಶದ ಅಭ್ಯುದಯ ಸಾಧನೆಯ ದಿಸೆಯಲ್ಲಿ ಕರ್ತವ್ಯ ಪ್ರಜ್ಞೆ ಮತ್ತು ಹೊಣೆಗಾರಿಕೆ ಹೊಂದಿರುವ ಉತ್ತಮ ಪೌರರನ್ನು ನಿರ್ಮಿಸುವಲ್ಲಿ ವಿಶ್ವವಿದ್ಯಾಲಯಗಳು ವಹಿಸುವ ಪಾತ್ರ ಪ್ರಶ್ನಾತೀತವಾಗಿದೆ.

ನನಗೆ ದೊರೆತಿರುವ ಪರಿಮಿತ ಕಾಲಾವಕಾಶದಲ್ಲಿ ಕೆಲವೊಂದು ಅಂಶಗಳನ್ನು ಒತ್ತಿಹೇಳಲು ಬಯಸುತ್ತೇನೆ. ಇವುಗಳಲ್ಲಿ ಕೆಲವನ್ನು ಈಗಾಗಲೇ ಇತರರು ಹೇಳಿದ್ದರೂ ಕೂಡಾ ನಾನು ಮತ್ತೊಮ್ಮೆ ಅವುಗಳನ್ನು ಪ್ರಸ್ತಾಪಿಸ ಬಯಸುತ್ತೇನೆ. ವಿಶ್ವವಿದ್ಯಾಲಯಗಳಲ್ಲಿನ ವಿದ್ಯಾರ್ಥಿ ಮತ್ತು ಬೋಧಕರ ನಡುವಣಾ ಅನುಪಾತವು ತೃಪ್ತಿದಾಯಕವಾಗಿಲ್ಲ ಮಾತ್ರವಲ್ಲ ಅದು ಗಾಬರಿ ಹುಟ್ಟಿಸುವಂತಿದೆ. ಪ್ರತಿಯೊಂದು ಕ್ಷೇತ್ರದಲ್ಲಿಯೂ ಅಗಾಧ ಪ್ರಗತಿ ಸಾಧಿಸುತ್ತಿರುವ ಇಂದಿನ ಜಗತ್ತಿನಲ್ಲಿ ಶಿಕ್ಷಣದ ಮಟ್ಟವನ್ನು ಎತ್ತರಿಸದಿರಲು ಸಾಧ್ಯವೇ ಇಲ್ಲ. ನಮ್ಮ ಯುವಜನರಿಗೆ ಜ್ಞಾನ ಸಂಪಾದನೆಯ ಎಲ್ಲ ಅವಕಾಶ ಮತ್ತು ಸೌಕರ್ಯಗಳನ್ನು ನಾವು ಕಲ್ಪಿಸಿಕೊಡಲೇಬೇಕು. ಅಂತಹ ಸೌಕರ್ಯಗಳಿಲ್ಲದಿದ್ದರೆ ಶಿಕ್ಷಣವು ತನ್ನ ಗುಣಮಟ್ಟವನ್ನು ಕಾಯ್ದುಕೊಳ್ಳುವುದಾದರೂ ಹೇಗೆ ಸಾಧ್ಯ? ಈಗಿರುವ ಪರಿಸ್ಥಿತಿಯಲ್ಲಿ ವಿದ್ಯಾರ್ಥಿಗಳು ಅಂತಹ ಶಿಕ್ಷಣವನ್ನು ಪಡೆದುಕೊಳ್ಳುವುದಾದರೂ ಹೇಗೆ ? ನಮ್ಮ ಮುಂದೆ ಇರುವ ಸಮಸ್ಯೆ ಇದೇ ಆಗಿದೆ. ಎಲ್ಲ ಕಡೆಗಳಿರುವ ಇಂಗ್ಲಿಷ್ ಶಿಕ್ಷಣದ ಮಟ್ಟ ಕುಸಿಯುತ್ತಿದೆ. ವಿದ್ಯಾರ್ಥಿಗಳಿಗೆ ಉಪನ್ಯಾಸಗಳನ್ನು ಅನುಸರಿಸಲು ಸಾಧ್ಯವಾಗುತ್ತಿಲ್ಲ ಮತ್ತು ವಿದ್ಯಾರ್ಥಿಗಳ ಜ್ಞಾನದ ಸಾಮಾನ್ಯ ಮಟ್ಟ ಕುಸಿಯುತ್ತಿದೆ ಎಂಬ ಮಾತುಗಳನ್ನು ಕೇಳುತ್ತಿದ್ದೇನೆ. ಅನೇಕ ಕಡೆಗಳಲ್ಲಿ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ಸೌಕರ್ಯ ಇಲ್ಲ. ಯುವಕರಿಗೆ ವಿಚಾರ ವಿನಿಮಯಕ್ಕೆ ಅವಕಾಶವೇ ಇಲ್ಲ. ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ನಡುವೆ ಇರಬೇಕಾದ ಸಂಪರ್ಕದ ಕೊರತೆಯನ್ನು ನಾವು ಎದುರಿಸುತ್ತಿದ್ದೇವೆ. ಗ್ರಂಥಾಲಯಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪುಸ್ತಕಗಳು ಸಿಗುತ್ತಿಲ್ಲ. ಪ್ರಯೋಗಶಾಲೆಗಳಲ್ಲಿ ಬಳಸುವ ಸಾಧನ-ಸಲಕರಣೆಗಳು ಸಾಕಷ್ಟು ಪ್ರಮಾಣದಲ್ಲಿ ಇರುವುದಿಲ್ಲ. ಸಹಜವಾಗಿಯೇ ಇವೆಲ್ಲದರ ಒಟ್ಟಾರೆ ಫಲಿತಾಂಶವೆಂದರೆ ಶಿಕ್ಷಣದ ಮಟ್ಟ

---

* ಕೇಂದ್ರ ಶಿಕ್ಷಣ ಸಚಿವ ಡಾ|| ಕೆ.ಎಲ್. ಶ್ರೀಮಾಲಿ ಅವರು ಮಂಡಿಸಿದ ವಿಶ್ವವಿದ್ಯಾನಿಲಯ ಅನುದಾನ ಆಯೋಗದ ವರದಿಯ ಕುರಿತು ಮಾತನಾಡುತ್ತಾ (ರಾಜ್ಯ ಸಭೆ ಚರ್ಚೆ, ಏಪ್ರಿಲ್ 23, 1958, ಸಿಸಿ1 82-186)

ಕುಸಿಯುವುದು. ಬೋಧನೆ ಮತ್ತು ಕಲಿಕೆ ಎರಡೂ ದಾರಿತಪ್ಪಿ ವಿದ್ಯಾಕ್ಷೇತ್ರದಲ್ಲಿ ಅಶಿಸ್ತು ಬೆಳೆಯುತ್ತಿದೆ. ಇಂತಹ ಹತಾಶೆಯ ವಾತಾವರಣದಲ್ಲಿ ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳು ತಾವೇ ತೊಂದರೆಗೆ ಒಳಗಾಗುತ್ತಾರೆ. ಜ್ಞಾನದ ಹಸಿವು ಎಲ್ಲೆಡೆ ಕಂಡು ಬರುತ್ತಿದೆ ಮತ್ತು ಮಾಧ್ಯಮಿಕ ಶಿಕ್ಷಣ ವಿಸ್ತರಿಸುತ್ತಾ ಹೋದಂತೆ ಅದು ಕ್ಷಿಪ್ರಗತಿಯಿಂದ ಬೆಳೆಯುತ್ತಿದೆ. ಆದರೆ ಮಾಧ್ಯಮಿಕ ಶಿಕ್ಷಣದ ಪ್ರಮುಖ ಘಟ್ಟಗಳಲ್ಲಿ ವಿದ್ಯಾರ್ಥಿಗಳ ಸಾಮರ್ಥ್ಯ ಮತ್ತು ಅರ್ಹತೆಯನ್ನು ಸರಿಯಾಗಿ ಅಳೆದು ನೋಡುವ ವ್ಯವಸ್ಥೆ ನಮ್ಮಲ್ಲಿ ಇಲ್ಲ ಎಂಬುದನ್ನು ನಾವು ಒಪ್ಪಿಕೊಳ್ಳಲೇ ಬೇಕಾಗಿದೆ. ವಿದ್ಯಾರ್ಥಿಗಳ ಆಸಕ್ತಿ ಮತ್ತು ಅರ್ಹತೆಗಳನ್ನು ಗುರುತಿಸುವ ಕೆಲಸ ಈ ಹಂತದಲ್ಲಿ ನಡೆಯಬೇಕು. ಅಂತಹ ವ್ಯವಸ್ಥೆ ನಮ್ಮಲ್ಲಿ ಇಲ್ಲದಿರುವ ಕಾರಣದಿಂದಲೇ ಗೊತ್ತು ಗುರಿ ಇಲ್ಲದೆ ವಿದ್ಯಾರ್ಥಿಗಳು ವಿಶ್ವವಿದ್ಯಾಲಯಗಳಿಗೆ ಹರಿದು ಬರುವಂತಾಗಿದೆ. ಅಂಥವರಿಗೆ ವಿಶ್ವವಿದ್ಯಾಲಯಗಳಿಗೆ ಬದಲಾಗಿ ಬೇರೆ ಸಂಸ್ಥೆಗಳಲ್ಲಿ ಕಲಿಯುವ ಅಥವಾ ತರಬೇತಿ ಹೊಂದುವ ಅವಕಾಶ ದೊರೆತಿದ್ದರೆ ಅವರಿಂದ ವಿಶ್ವವಿದ್ಯಾಲಯಗಳಲ್ಲಿ ಪದವಿಗಳನ್ನು ಪಡೆದವರಿಗಿಂತ ಹೆಚ್ಚಿನದನ್ನು ನಿರೀಕ್ಷಿಸಬಹುದಿತ್ತು. ಜಗತ್ತಿನ ಮುಂದುವರಿದ ಎಲ್ಲ ದೇಶಗಳಲ್ಲೂ ವಿದ್ಯಾರ್ಥಿಗಳ ಪ್ರವೃತ್ತಿ ಮತ್ತು ಮನೋವೃತ್ತಿಗಳನ್ನು ಸೂಕ್ತವಾದ ಹಂತದಲ್ಲೇ ಅಭ್ಯಸಿಸಿ ಅವರನ್ನು ಆ ದಾರಿಗೆ ಹಚ್ಚಲಾಗುತ್ತಿದೆ. ವಿದ್ಯಾರ್ಥಿ ಸರಿಯಾದ ವೃತ್ತಿಪರ ಶಿಕ್ಷಣವನ್ನು ಆಯ್ದುಕೊಳ್ಳುವಂತೆ ಅವರ ತಂದೆ-ತಾಯಿಯಂದಿರಿಗೂ ಸಲಹೆ ಮತ್ತು ಮಾರ್ಗದರ್ಶನ ಅಲ್ಲಿ ನೀಡಲಾಗುತ್ತಿದೆ. ಇಂದು ವಿವಿಧ ವೃತ್ತಿಗಳನ್ನು ಕಲಿಯಲು ನಮ್ಮ ವಿದ್ಯಾರ್ಥಿಗಳಿಗೆ ಸಾಕಷ್ಟು ಸಂಖ್ಯೆಯಲ್ಲಿ ಪಾಲಿಟೆಕ್ನಿಗಳನ್ನು ಸ್ಥಾಪಿಸುವ ತುರ್ತು ಅಗತ್ಯವಿದೆ. ಹಾಗಾದಲ್ಲಿ ನಮ್ಮ ಹುಡುಗ-ಹುಡುಗಿಯರು ಅನೇಕ ಹೊಸ ಕಸುಬುಗಳನ್ನು, ವೃತ್ತಿಗಳನ್ನು ಅವಲಂಬಿಸಲು ಮತ್ತು ಅದರಿಂದ ಲಾಭ ಹೊಂದಲು ಅನುಕೂಲವಾಗುತ್ತದೆ. ಆದರೆ ನಮ್ಮ ದೇಶದಲ್ಲಿ ಇಂದು ಏನು ನಡೆಯುತ್ತಿದೆ ? ಪ್ರತಿಯೊಬ್ಬರೂ ಪದವೀಧರ ಸಮೂಹವನ್ನು ಸೇರುತ್ತಿದ್ದಾರೆ. ಅವರಿಂದಾಗಿ ನಿರುದ್ಯೋಗಿಗಳ ಒಂದು ದೊಡ್ಡ ಸಮುದಾಯವೇ ನಿರ್ಮಾಣವಾಗಿದೆ. ಇದು ನಿಜಕ್ಕೂ ಅತ್ಯಂತ ಅಪಾಯಕಾಗಿ ಬೆಳವಣಿಗೆ. ಹೀಗಾಗಿ ಮಾಧ್ಯಮಿಕ ಶಿಕ್ಷಣ ಮತ್ತು ವಿಶ್ವವಿದ್ಯಾಲಯದ ಶಿಕ್ಷಣದ ನಡುವೆ ಹೆಚ್ಚಿನ ಸಮನ್ವಯ ವರ್ತಮಾನ ಒಂದು ತುರ್ತು ಅಗತ್ಯವಾಗಿದ್ದು ಅದನ್ನು ಸಾಮಾನ್ಯ ಶಿಕ್ಷಣದ ಮಟ್ಟವನ್ನು ಎತ್ತರಿಸುವ ಮೂಲಕ, ಹರಿಹರೆಯದವರ ಸಾಮರ್ಥ್ಯವನ್ನು ಸಮರ್ಥವಾಗಿ ಅಳೆಯುವ ಮೂಲಕ, ಲಂಡನ್ ಪಾಲಿಟೆಕ್ನಿಕ್‌ನಂತಹ ಅತ್ಯಾಧುನಿಕ ಶಾಲೆಗಳನ್ನು ತೆರೆಯುವ ಮೂಲಕ, ಮಾಧ್ಯಮಿಕ ಶಿಕ್ಷಣದ ಅವಧಿಯನ್ನು 18 ವರ್ಷಗಳಿಗೆ ವಿಸ್ತರಿಸುವ ಮೂಲಕ ಮತ್ತು ಮೂರು ಈ ವರ್ಷಗಳ ಪದ್ದತಿಯನ್ನು ಸ್ವೀಕರಿಸುವ ಮೂಲಕ ಅವನ್ನು ಸಾಧಿಸಬೇಕಾಗಿದೆ. ಈಗಾಗಲೇ ಬಹುತೇಕ ವಿಶ್ವವಿದ್ಯಾಲಯಗಳು ಇದನ್ನು ಅಂಗೀಕರಿಸಿದ್ದು ಇತರ ವಿಶ್ವವಿದ್ಯಾಲಯಗಳು ಅತಿಶೀಘ್ರದಲ್ಲೇ ಈ ಮಾದರಿಯನ್ನು ಅನುಸರಿಸಲಿವೆ ಎಂದು ಹೇಳಲು ನನಗೆ ಅತ್ಯಂತ ಸಂತಸವಾಗುತ್ತಿದೆ.

ನಾನು ಈವರೆಗೆ ಹೇಳಿದ್ದೆಲ್ಲವೂ ಕಾರ್ಯರೂಪಕ್ಕೆ ಬರಬೇಕೆಂಬುದು ನನ್ನ ಆಸೆ. ಆದರೆ ಹೇಗೆ ಎಂಬುದೇ ಇಲ್ಲಿ ಪ್ರಶ್ನೆಯಾಗಿದೆ. ಉತ್ತಮ ದರ್ಜೆಯ ಅಧ್ಯಾಪಕರನ್ನು ತಯಾರು ಮಾಡಲು ಇನ್ನೂ ಹೆಚ್ಚು ವಿಸ್ತೃತವಾದ ಮತ್ತು ಗತಿಶೀಲವಾದ ಆಂದೋಲನವೊಂದನ್ನು ನಡೆಸುವುದು

ಅಗತ್ಯವಾಗಿದೆ ಎಂದು ನಾನು ಭಾವಿಸಿದ್ದೇನೆ. ನಮ್ಮ ಶಿಕ್ಷಣದ ಮಟ್ಟವನ್ನು ಎತ್ತರಿಸುವ ನಿಟ್ಟಿನಲ್ಲಿ ದೇಶದ ಯಾವದೇ ಭಾಗದಿಂದಾದರೂ ಅಧ್ಯಾಪಕ ಸಿಬ್ಬಂದಿಯನ್ನು ಕರೆತರಲು ನಾನು ಹಿಂದೆ ಸರಿಯುವುದಿಲ್ಲ. ಯಾವುದೇ ವಿಶ್ವವಿದ್ಯಾಲಯದಿಂದಲಾದರೂ ಅಥವಾ ಅಗತ್ಯ ಬಿದ್ದರೆ ವಿದೇಶದಿಂದಾದರೂ ಅಂತಹ ಸಿಬ್ಬಂದಿಯನ್ನು ಕರೆಸಿಕೊಳ್ಳಲು ನಾನು ಸಿದ್ಧಳಿದ್ದೇನೆ. ಶಿಕ್ಷಣ ಕ್ಷೇತ್ರದಲ್ಲಿನ ನಮ್ಮ ಅಗತ್ಯಗಳನ್ನು ಪೂರೈಸಲು ಸಮರ್ಥರಾಗುವವರೆಗೂ ನಾವು ಈ ರೀತಿ ಮಾಡಲೇಬೇಕು. ಜನ ಸಮುದಾಯದ ಹಿತಸಾಧನೆಯ ಪ್ರಶ್ನೆ ಬಂದಾಗ ಅಲ್ಲಿ ಸಂಕುಚಿತ ಪ್ರತ್ಯೇಕತಾವಾದಕ್ಕೆ ಅವಕಾಶ ಬರಬಾರದು. ಇವತ್ತು ನಮ್ಮ ದೇಶದಲ್ಲಿ ಏನಾಗುತ್ತಿದೆ? ನಮ್ಮ ವೈದ್ಯಕೀಯ ಕಾಲೇಜುಗಳ ಪ್ರಥಮ ಶ್ರೇಣಿಯ ಓರ್ವ ಅಧ್ಯಾಪಕ ಇನ್ನೊಂದು ರಾಜ್ಯಕ್ಕೆ ಸೇರಿದವನೆಂಬ ಒಂದೇ ಕಾರಣಕ್ಕಾಗಿ ಅತನನ್ನು ಕೈಬಿಟ್ಟು ತಮ್ಮ ರಾಜ್ಯಕ್ಕೆ ಸೇರಿದವರು ಎಂಬ ಏಕೈಕ ಕಾರಣಕ್ಕಾಗಿ ಮೂರನೇ ದರ್ಜೆಯ ಅಧ್ಯಾಪಕರನ್ನು ನೇಮಿಸಿಕೊಂಡಿದ್ದ ಪ್ರಕರಣವನ್ನು ಆರೋಗ್ಯ ಖಾತೆಯ ಸಚಿವೆಯಾಗಿ ಸ್ವತಃ ನಾನು ಕಂಡಿದ್ದೇನೆ. ಇದು ತಪ್ಪು. ಇಂತಹುದನ್ನು ನಾವು ಸರಿಪಡಿಸಲೇಬೇಕು.

ಭಾಷೆಯ ವಿಷಯದಲ್ಲಿ ಹೇಳುವುದಾದರೆ ಅದು ವಿವಾದಾತ್ಮಕ ವಿಷಯ ಎಂಬುದು ನನಗೆ ಗೊತ್ತು. ಹಾಗಾಗಿ ಈ ವಿಷಯದಲ್ಲಿ ಹೆಚ್ಚೇನನ್ನೂ ಹೇಳಲು ನಾನು ಬಯಸುವುದಿಲ್ಲ. ಇಷ್ಟನ್ನು ಮಾತ್ರ ಹೇಳುತ್ತೇನೆ. ಈ ವಿಷಯದಲ್ಲಿ ನಾವು, ನಮ್ಮ ಪ್ರಾದೇಶಿಕ ಭಾಷೆಗಳು ಅತ್ಯುತ್ಸಾಹಕ್ಕೆ ಅವಕಾಶ ನೀಡಬಾರದು. ಇಂಗ್ಲಿಷ್ ನೀಡುವ ಆದ್ಯತೆಯಿಂದ ನಮ್ಮ ರಾಷ್ಟ್ರಭಾಷೆಗೆ, ಅದೇ ರೀತಿ ಪ್ರಾದೇಶಿಕ ಭಾಷೆಗಳಿಗೆ ಅನ್ಯಾಯ ಆಗಬಾರದು. ಅಗತ್ಯ ಬಿದ್ದರೆ ಸಂವಿಧಾನಕ್ಕೆ ತಿದ್ದುಪಡಿ ತಂದು ಈಗಿರುವ ಭಾಷೆಗಳ ಜೊತೆಗೆ ಇಂಗ್ಲಿಷ್‌ನ್ನು ಸೇರಿಸಬಹುದೆಂಬುದು ನನ್ನ ಪ್ರಾಮಾಣಿಕ ಅಭಿಪ್ರಾಯವಾಗಿದೆ. ಅಂದರೆ ಇಂಗ್ಲೀಷ್ ಭಾಷೆಯನ್ನು ಸಂವಿಧಾನದ ಎಂಟನೇ ಷೆಡ್ಯೂಲ್‌ನಲ್ಲಿ ಸೇರಿಸಬೇಕು. ರಾಷ್ಟ್ರಭಾಷೆಯಂತೆ ಎಳವೆಯಲ್ಲಿಯೇ ಮಕ್ಕಳಿಗೆ ಇಂಗ್ಲಿಷನ್ನೂ ಕಲಿಸಬೇಕು.

ವಿದ್ಯೆಯ ದೇಗುಲಗಳಂತಿರುವ ಈ ವಿಶ್ವವಿದ್ಯಾಲಯಗಳನ್ನು ರಾಜಕೀಯದ ಕೆಸರಿಸನಿಂದ ಹೊರತೆಗೆಯಬೇಕಾದ ಅಗತ್ಯವನ್ನು ನಾನು ಮತ್ತೊಮ್ಮೆ ಒತ್ತಿಹೇಳುತ್ತಿದ್ದೇನೆ. ನನ್ನ ಸನ್ಮಿತ್ರರಾದ ಡಾ।। ಕುಂಝು ಅವರು ಇದನ್ನು ನಿನ್ನೆ ಅತ್ಯಂತ ಸಮರ್ಥವಾಗಿ ಪ್ರತಿಪಾದಿಸಿದ್ದಾರೆ. ಅವರು ಹೇಳಿರುವ ಒಂದೊಂದು ಶಬ್ದವನ್ನು ನಾನು ಅನುಮೋದಿಸುತ್ತೇನೆ. ನಮ್ಮ ವಿಶ್ವವಿದ್ಯಾಲಯಗಳು ರಾಜಧಾನಿ ನಗರಗಳಿಂದ ದೂರವಿರಬೇಕು ಎಂದು ನನಗನಿಸುತ್ತಿದೆ. ಇದು ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಅತ್ಯಂತ ಆದರ್ಶಪ್ರಾಯವಾದ ವಾತಾವರಣವನ್ನು ಕಲ್ಪಿಸುತ್ತದೆ. ವಿಶ್ವವಿದ್ಯಾಲಯಗಳ ವ್ಯವಸ್ಥೆಯಲ್ಲಿ ಆರೋಗ್ಯಕರ ಪರಂಪರೆಯೊಂದನ್ನು ಹುಟ್ಟುಹಾಕುವಲ್ಲಿ ಅತ್ಯಂತ ಪರಿಣಾಮಕಾರಿ ಪಾತ್ರವಹಿಸುತ್ತದೆ. ರಾಜ್ಯಗಳ ರಾಜಧಾನಿಗಳಲ್ಲಿ ಏರುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ

ವಸತಿ ಕಲ್ಪಿಸಿಕೊಡುವುದು ಸರಕಾರದ ಆದ್ಯತೆಗಳಲ್ಲಿ ಒಂದಾಗಿದೆ. ಇಂತಹ ಪರಿಸ್ಥಿತಿಯಲ್ಲಿ ರಾಜ್ಯ ಸರ್ಕಾರಗಳು ವಿಶ್ವವಿದ್ಯಾಲಯಗಳ ವಸತಿಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡು ಅಲ್ಲಿನ ಕಾಲೇಜುಗಳನ್ನು ನಗರಗಳ ಹೊರಗಿನ ಹೊಸ ಪ್ರದೇಶಗಳಿಗೆ ವರ್ಗಾಯಿಸಬಾರದೇಕೆ? ನನ್ನ ಅಭಿಪ್ರಾಯದಂತೆ ವಿಶ್ವವಿದ್ಯಾಲಯಗಳು ರಾಜಧಾನಿಗಳ ಪರಿಮಿತಿಯಲ್ಲಿ ಇರಲೇಬಾರದು. ಹೊಸ ಕಾಲೇಜುಗಳನ್ನು ಅಲ್ಲಿ ನಿರ್ಮಿಸಲೇಬಾರದು

ಚರ್ಚೆಯಲ್ಲಿ ಮಾತನಾಡಿದ ಅನೇಕರು ವಿವಿಧ ಶಿಕ್ಷಣ ಮಟ್ಟಗಳಲ್ಲಿ ಸಮನ್ವಯ ಸಾಧಿಸುವುದರ ಕುರಿತೂ ಪ್ರಸ್ತಾಪಿಸಿದ್ದಾರೆ. ಇದು ಅತ್ಯಂತ ಪ್ರಮುಖವಾದ ಅಂಶವಾಗಿದೆ ಎಂದು ನಾನು ಭಾವಿಸಿದ್ದೇನೆ. ವಿಶ್ವವಿದ್ಯಾಲಯಗಳ ಶಿಕ್ಷಣವನ್ನು ಸರ್ಕಾರದ ನಿಯಂತ್ರಣಕ್ಕೆ ಒಳಪಡಿಸುವುದಾದರೆ ಅದಕ್ಕೆ ನನ್ನ ಕಡೆಯಿಂದ ಯಾವ ಆಕ್ಷೇಪವೂ ಇಲ್ಲ. ಶಿಕ್ಷಣ ಮಟ್ಟದಲ್ಲಿ ಏಕರೂಪತೆ ಸಾಧಿಸುವುದು ಮತ್ತು ಗುಣಮಟ್ಟವನ್ನು ಕಾಯುವುದು ಅದರ ಉದ್ದೇಶವಾಗಿದೆ ಎಂದು ನಾನು ನಂಬಿದ್ದೇನೆ. ವಿದ್ಯಾರ್ಥಿಗಳೊಂದಿಗೆ ಅಪವಿತ್ರ ಮೈತ್ರಿ ಹೊಂದಿ ಈ ಕ್ಷೇತ್ರದಲ್ಲಿ ರಂಪ ಎಬ್ಬಿಸುತ್ತಿರುವ ಪಕ್ಷ ರಾಜಕೀಯ ಮತ್ತು ಸ್ಥಳೀಯ ರಾಜಕೀಯದಿಂದ ಶಿಕ್ಷಣ ಕ್ಷೇತ್ರವನ್ನೂ ಮುಕ್ತಗೊಳಿಸುವುದೇ ಅದರ ಇಂಗಿತವಾಗಿದೆ ಎಂದು ನಾನು ಭಾವಿಸಿದ್ದೇನೆ. ಒಟ್ಟಿನಲ್ಲಿ ಇದು ಅತಿ ಶೀಘ್ರ ಪರಾಮರ್ಶೆಗೆ ಒಳಗಾಗಬೇಕಾದ ವಿಷಯವಾಗಿದೆ ಎಂದು ನಾನು ನಂಬಿದ್ದೇನೆ. ಅದೂ ಅಲ್ಲದೆ ಎಲ್ಲ ಬಗೆಯ ಶಿಕ್ಷಣ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಡುವುದು ಅತ್ಯಗತ್ಯವಾಗಿದೆ ಎಂಬುದನ್ನೂ ನಾನು ಒತ್ತಿ ಹೇಳುತ್ತೇನೆ. ವರದಿಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಆದರೂ ವೈದ್ಯಕೀಯ ಶಿಕ್ಷಣವನ್ನು ವಿಶ್ವವಿದ್ಯಾಲಯಗಳ ವ್ಯಾಪ್ತಿಯಿಂದ ಹೊರಗಿಟ್ಟಿರುವುದಕ್ಕೆ ಯಾವುದೇ ರೀತಿಯ ಸಮರ್ಥನೆ ಇಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಸಾಮಾನ್ಯ ಶಿಕ್ಷಣ ಕುರಿತಂತೆ ಆಯೋಗ ಮಾಡಿರುವ ಟೀಕೆ ಟಿಪ್ಪಣಿಗಳನ್ನು ನಾನು ಸಮರ್ಥಿಸುತ್ತೇನೆ. ಒಟ್ಟಿನಲ್ಲಿ ಯಾವುದೇ ಕಿಟಕಿ ಅಥವಾ ಬಾಗಿಲಿನಿಂದ ಬೆಳಕು ಬರುವುದಾದರೆ ಅದು ಸ್ವಾಗತಾರ್ಹ. ಇದರಿಂದ ನಮ್ಮ ಮನಸ್ಸು ಪ್ರಫುಲ್ಲಿತವಾಗುವುದು. ಒಟ್ಟಿನಲ್ಲಿ ವಿಶ್ವವಿದ್ಯಾಲಯಗಳು ಅತ್ಯುತ್ತಮ ತಲೆಮಾರನ್ನು ಸಾಧಿಸುವಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತದೆ.

ಈ ವರದಿಯಲ್ಲಿನ ಪ್ರಮುಖ ಅಂಶಗಳು ಮತ್ತು ಶಿಫಾರಸುಗಳಿಗೆ ಶಿಕ್ಷಣ ಖಾತೆಯಿಂದ ಸೂಕ್ತ ಮನ್ನಣೆ ಮತ್ತು ಪರಿಗಣನೆ ದೊರೆಯುವುದೆಂದು ನಾನು ಪ್ರಾಮಾಣಿಕವಾಗಿ ಭಾವಿಸಿದ್ದೇನೆ. ಕಳೆದೆರಡು ವರ್ಷಗಳ ಅವಧಿಯಲ್ಲಿ ಅತ್ಯಮೂಲ್ಯ ಕಾರ್ಯಭಾರವನ್ನು ನಿರ್ವಹಿಸಿರುವ ವಿಶ್ವವಿದ್ಯಾಲಯ ಅನುದಾನ ಆಯೋಗವು ಇದಕ್ಕೆ ಅಗತ್ಯವಿರುವ ಎಲ್ಲ ನೆರವನ್ನು ಸರ್ಕಾರದಿಂದ ಪಡೆಯಲು ಸಮರ್ಥವಾಗುವುದೆಂದು ನಾನು ನಂಬಿದ್ದೇನೆ.

## ನಗರ ಅಭಿವೃದ್ಧಿ

### 30. ದೆಹಲಿ ಅಭಿವೃದ್ಧಿ ಮಂಡಳಿ *

ಮಾನ್ಯ ಸಭಾಪತಿಗಳೇ, ಗೌರವಾನ್ವಿತ ಸದಸ್ಯರಾದ ಕೆ.ಬಿ.ಲಾಲ್ ಅವರು ಎರಡು ಪ್ರಶ್ನೆಗಳನ್ನು ಎತ್ತಿದ್ದಾರೆ. 1. ತನಿಖಾ ಸಮಿತಿಯ ವರದಿಯ ಮೇಲೆ ಸರ್ಕಾರ ಯಾವುದೇ ಕ್ರಮ ಕೈಗೊಂಡಿಲ್ಲ. 2. ಅಭಿವೃದ್ಧಿ ಮಂಡಳಿಯ ರದ್ದತಿಗೆ ಮಾಡಲಾಗಿರುವ ಒತ್ತಾಯ. ಈ ಎರಡು ವಿಷಯಗಳು ಒಂದಕ್ಕೊಂದು ಸಂಬಂಧ ಇಲ್ಲದವು. ಏಕೆಂದರೆ ಸಮಿತಿಯು ಮಂಡಳಿಯ ರದ್ಧತಿಯ ವಿಷಯದಲ್ಲಿ ಯಾವ ಶಿಫಾರಸನ್ನೂ ಮಾಡಿಲ್ಲ. ಮಾನ್ಯ ಸದಸ್ಯರು ಎತ್ತಿರುವ ಪ್ರಶ್ನೆಗಳಿಗೆ ಪ್ರತ್ಯುತ್ತರ ನೀಡಲು ನನ್ನ ಬಳಿ ಹೆಚ್ಚಿನ ಸಮಯಾವಕಾಶ ಇಲ್ಲ. ಮೊದಲನೆಯದಾಗಿ ಅವರು ನೀಡಿರುವ ದಿನಾಂಕಗಳು ಸಂಪೂರ್ಣ ತಪ್ಪಾಗಿವೆ. ದೆಹಲಿ ಅಭಿವೃದ್ಧಿ ಮಂಡಳಿಯು ಭಾರತ ಸರ್ಕಾರದಿಂದ 1950ರ ಏಪ್ರಿಲ್ ತಿಂಗಳಲ್ಲಿ ಸ್ಥಾಪಿತವಾಯಿತು. ವರದಿ ಬಂದು ಎರಡು ವರ್ಷಗಳು ಸರಿದು ಹೋಗಿವೆ. ತನಿಖಾ ಸಮಿತಿಯು ಮಧ್ಯಂತರ ವರದಿಯನ್ನು ನೀಡಿದೆ - ಈ ಸಮಿತಿಯು ಮಾಡಿದ ಅತ್ಯುತ್ತಮ ಕೆಲಸಕ್ಕಾಗಿ ನಾನು ಬಹಿರಂಗವಾಗಿ ನನ್ನ ಕೃತಜ್ಞತೆಗಳನ್ನು ಸೂಚಿಸಲು ಬಯಸುತ್ತಿದ್ದೇನೆ-ಸಮಿತಿಯು ದಾಖಲೆ ಸಮಯದಲ್ಲಿ ತನ್ನ ವರದಿಯನ್ನು ಸಲ್ಲಿಸಿರುವುದಕ್ಕಾಗಿ ನಾನು ಈ ಸಮಿತಿಯ ಸದಸ್ಯರನ್ನು ಅಭಿನಂದಿಸುತ್ತೇನೆ. ಮಧ್ಯಂತರ ವರದಿ 1950ರ ಸೆಪ್ಟೆಂಬರ್ ತಿಂಗಳಲ್ಲಿ ನಮ್ಮ ಕೈ ಸೇರಿತು. ಮಧ್ಯಂತರ ವರದಿಯನ್ನು ಸಲ್ಲಿಸಿದ ಎರಡು ತಿಂಗಳುಗಳ ಒಳಗಾಗಿ ಅದು ಸೂಚಿಸಿದ ಎಲ್ಲ ಶಿಫಾರಸ್ಸುಗಳನ್ನು ನನ್ನ ಸಲಹೆಯ ಮೇರೆಗೆ ಸಚಿವ ಸಂಪುಟ ಸಭೆಯ ಮುಂದಿಟ್ಟು ಪರಿಶೀಲಿಸಲಾಯಿತು. ಈ ಎಲ್ಲಾ ಶಿಫಾರಸುಗಳನ್ನು ಅನುಷ್ಠಾನಗೊಳಿಸಲಾಗಿದ್ದು, ಅದಕ್ಕೆ ಅನುಗುಣವಾಗಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗಿದೆ. ಸಮಿತಿಯ ಪೂರ್ಣ ವರದಿಯು 1951ರ ಏಪ್ರಿಲ್ ತಿಂಗಳಲ್ಲಿ ಹಸ್ತಪ್ರತಿ ರೂಪದಲ್ಲಿ ನನ್ನ ಕೈ ಸೇರಿತು. ಮುದ್ರಿತ ಪ್ರತಿಗಳು 1951ರ ಜೂನ್ ತಿಂಗಳಲ್ಲಿ ಲಭ್ಯವಾದವು ಮತ್ತು ಅವುಗಳನ್ನು ಸಂಬಂಧಪಟ್ಟ ಸಚಿವರು, ಸ್ಥಳೀಯ ಆಡಳಿತ ವರ್ಗ ಹಾಗೂ ಸಂಬಂಧಪಟ್ಟ ಇತರ ಎಲ್ಲರಿಗೂ ರವಾನಿಸಲಾಯಿತು. ಸಂಬಂಧಪಟ್ಟವರು ಎರಡು ತಿಂಗಳುಗಳ ಕಾಲ ಅದರ ಪರಿಶೀಲನೆ ನಡೆಸಿದ್ದರು. 1951ರ ಆಗಸ್ಟ್ ತಿಂಗಳಲ್ಲಿ ನನ್ನ ಖಾತೆಯಲ್ಲಿ ಸಭೆಗಳು ಜರುಗಿದವು. ಈ ಸಂದರ್ಭದಲ್ಲಿ ಕೆಲವು ನಿರ್ದಿಷ್ಟ ತೀರ್ಮಾನಗಳಿಗೆ ಬರಲಾಯಿತು. ಅನಂತರ ಅವುಗಳನ್ನು ಮುಖ್ಯ ಆಯುಕ್ತರ ಶಿಫಾರಸು ಮತ್ತು ಪ್ರಸ್ತಾವಗಳಿಗಾಗಿ ಅವರ ಬಳಿಗೇ ಕಳುಹಿಸಿಕೊಡಲಾಯಿತು. ಅವುಗಳಲ್ಲಿ ಕೆಲವು ನಿರ್ಣಯಗಳನ್ನು ಅಧಿಕಾರಿಗಳ ಮಟ್ಟದ, ಇನ್ನೂ ಕೆಲವು ನಿರ್ಣಯಗಳನ್ನು ಶಾಸಕಾಂಗದ ನೆಲೆಯಲ್ಲಿ ಕಾರ್ಯರೂಪಕ್ಕೆ ತರಬೇಕಾಗಿತ್ತು. ಈ ಶಿಫಾರಸುಗಳಲ್ಲಿ ಹೆಚ್ಚಿನವು ಹಣಕಾಸಿಗೆ ಸಂಬಂಧಪಟ್ಟವು ಅಥವಾ ಶಾಸಕಾಂಗದ ತೀರ್ಮಾನಕ್ಕೆ

---

* ದೆಹಲಿ ಅಭಿವೃದ್ಧಿ ಮಂಡಳಿ ತನಿಖಾ ಸಮಿತಿಯು ಮಾಡಿದ ಶಿಫಾರಸುಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ 1952ರ ಜುಲೈ 29ರಂದು ಚುಕ್ಕೆ ಗುರುತಿನ (ಸಂಖ್ಯೆ: 70) ಪ್ರಶ್ನೆಗೆ ಸಂಬಂಧಿಸಿದಂತೆ ಶ್ರೀ ಕೆ.ಬಿ.ಲಾಲ್ ಮತ್ತಿತರರು ಎತ್ತಿದ ಪ್ರಶ್ನೆಗಳಿಗೆ ಉತ್ತರ ನೀಡುತ್ತಾ (ರಾಜ್ಯಸಭೆ ಚರ್ಚೆ, ಆಗಸ್ಟ್ 6, 1952, ಸಿಸಿ 3190-97).

ಸಂಬಂಧಪಟ್ಟವುಗಳಾಗಿದ್ದವು. ಕಾರ್ಯಾಂಗದ ವ್ಯಾಪ್ತಿಯ ನಿರ್ಣಯಗಳು ಕಾಲ ಕಾಲಕ್ಕೆ ಕಾರ್ಯರೂಪಕ್ಕೆ ಬರುವಂತಹವು. ಉಳಿದವು - ಹಣಕಾಸಿಗೆ ಸಂಬಂಧಿಸಿದವು. ಅವು ಮುಖ್ಯ ಆಯುಕ್ತರು ಕಾರ್ಯರೂಪಕ್ಕೆ ತರುವಂತಹವು. ಇದರಿಂದಾಗಿ ದೆಹಲಿ ರಾಜ್ಯದ ಒಟ್ಟಾರೆ ಚಿತ್ರವೇ ಬದಲಾಗಿತ್ತು. ದೆಹಲಿ ಆಡಳಿತವು ಈ ವರ್ಷದ ಏಪ್ರಿಲ್ ತಿಂಗಳಲ್ಲಿ ಅಸ್ತಿತ್ವಕ್ಕೆ ಬಂದಿತು. ಹಾಗಾಗಿ ಅದು ಈ ವರದಿಯನ್ನು ಪರಿಶೀಲಿಸುವವರೆಗೆ ಕಾದು ನೋಡುವುದು ಒಳಿತೆಂದು ಮುಖ್ಯ ಆಯುಕ್ತರು ಯೋಚಿಸಿದರು. ಹಾಗಾಗಿ ಈ ವಿಷಯದಲ್ಲಿ ನಾನು ಕಾಲಹರಣ ಮಾಡಲಿಲ್ಲ ಎಂಬುದು ನಿಮಗೀಗ ಮನವರಿಕೆ ಆಗಿರಬಹುದೆಂದು ಭಾವಿಸುತ್ತೇನೆ. ಈ ವರದಿಯ ಶಿಫಾರಸುಗಳ ಪರಿಶೀಲನೆಯಲ್ಲಿ ತ್ವರಿತವಾಗಿ ಕ್ರಮ ಕೈಗೊಳ್ಳಲಾಗಿದೆ. ಈ ದಿಸೆಯಲ್ಲಿ ಬಹಳಷ್ಟು ಕೆಲಸ ಮಾಡಲಾಗಿದೆ ಎಂಬುದನ್ನು ಸದನದ ಮಾನ್ಯ ಉಪಾಧ್ಯಕ್ಷರು ಮತ್ತು ಸದಸ್ಯರು ಈ ವೇಳೆಗೆ ಮನವರಿಕೆ ಮಾಡಿಕೊಂಡಿದ್ದಾರೆಂದು ನಾನು ಭಾವಿಸಿದ್ದೇನೆ. ದೆಹಲಿ ರಾಜ್ಯ ಅಸ್ತಿತ್ವಕ್ಕೆ ಬಂದೊಡನೆಯೇ ನಾವು ಮುಖ್ಯ ಆಯುಕ್ತರಿಗೆ ಪತ್ರ ಬರೆದು ಈ ಶಿಫಾರಸುಗಳನ್ನು ದೆಹಲಿ ರಾಜ್ಯದ ಸಚಿವರ ಮುಂದೆ ಮಂಡಿಸುವಂತೆ ಕೇಳಿಕೊಂಡೆವು. ಈ ವಿಷಯದಲ್ಲಿ ಹಲವು ಬಾರಿ ಚರ್ಚೆ ನಡೆಸಲಾಗಿದ್ದು, ಅದೀಗ ದೆಹಲಿ ರಾಜ್ಯ ವಿಧಾನಸಭೆಯ ಮುಂದಿದೆ ಎಂದು ಮುಖ್ಯ ಆಯುಕ್ತರು ದೂರವಾಣಿ ಮೂಲಕ ನನಗೆ ತಿಳಿಸಿದ್ದಾರೆ. ನಾನೀಗ ಈ ವಿಷಯದಲ್ಲಿ ಇನ್ನು ವಿಳಂಬ ಮಾಡಬಾರದೆಂದು ಪತ್ರ ಬರೆದಿದ್ದು ಈಗ ಸರ್ಕಾರದ ಮುಂದಿರುವ ಪ್ರಸ್ತಾವಗಳನ್ನು ಕ್ಷಿಪ್ರವಾಗಿ ಕಾರ್ಯರೂಪಕ್ಕೆ ತರಬೇಕೆಂದು ಕೇಳಿಕೊಂಡಿದ್ದೇನೆ. ಇದರಿಂದ ಸಮಿತಿಯ ಶಿಫಾರಸುಗಳಿಗೆ ಅನುಗುಣವಾಗಿ ಕ್ರಮ ಕೈಗೊಳ್ಳಲು ಅನುಕೂಲವಾಗುವುದು. ಒಟ್ಟಿನಲ್ಲಿ ನನ್ನ ಖಾತೆಯು ಸಮಿತಿಯ ಶಿಫಾರಸುಗಳನ್ನು ತಾತ್ವಿಕವಾಗಿ ಅಂಗೀಕರಿಸಿದೆ ಮತ್ತು ಈ ವರದಿಯು ಒಂದು ಅತ್ಯುತ್ತಮ ಕೆಲಸವನ್ನು ಮಾಡಿದೆ ಎಂದು ನಾನು ನಂಬಿದ್ದೇನೆ. ಆದರೆ ಇದರಲ್ಲಿ ಹಣಕಾಸಿಗೆ ಸಂಬಂಧಿಸಿದ ವಿಷಯಗಳು ಒಳಗೊಂಡಿರುವಾಗ ಮತ್ತು ಶಾಸನಾತ್ಮಕ ಕ್ರಮಗಳು ಅಗತ್ಯವಿರುವಾಗ ಕ್ಷಿಪ್ರ ಕಾರ್ಯಾಚರಣೆ ಸಾಧ್ಯವಿಲ್ಲ.

ದೆಹಲಿ ಅಭಿವೃದ್ಧಿ ಮಂಡಳಿಯ ಕುರಿತು ಹೆಚ್ಚು ತಿಳಿಯದಿರುವ ಸದನದ ಸದಸ್ಯರಿಗಾಗಿ ಕೆಲವೊಂದು ವಿಷಯಗಳನ್ನು ನಾನಿಲ್ಲಿ ಹೇಳಬಯಸುತ್ತೇನೆ. ದೆಹಲಿ ಅಭಿವೃದ್ಧಿ ಮಂಡಳಿಯನ್ನು 1937ರಲ್ಲಿ ರಚಿಸಲಾಯಿತು. ಇಲ್ಲಿನ ಕೊಳಚೆ ಪ್ರದೇಶಗಳನ್ನು ನಿರ್ಮೂಲನೆಗೊಳಿಸುವುದು ಮತ್ತು ಈಗ ನಾವು ಗ್ರೇಟರ್ ದೆಹಲಿ ಎಂದು ಕರೆಯುವ ದೆಹಲಿ ನಗರಕ್ಕೆ ವಸತಿ ನಿರ್ಮಾಣ ಯೋಜನೆಯೊಂದನ್ನು ರೂಪಿಸುವುದು ಅದರ ಉದ್ದೇಶವಾಗಿತ್ತು. 1939ರಲ್ಲಿ ಎರಡನೇ ಮಹಾಯುದ್ಧ ಆರಂಭವಾಯಿತು. ಯುದ್ಧದ ಈ ವರ್ಷಗಳಲ್ಲಿ ಅಭಿವೃದ್ಧಿ ಮಂಡಳಿಗೆ ತನ್ನ ಕಾರ್ಯಭಾರ ಮುಂದುವರೆಸುವುದು ಅಸಾಧ್ಯವಾಗಿ ಪರಿಣಮಿಸಿತು. 1945ರಲ್ಲಿ ಅದು ಪುನಃ ಕೆಲಸ ಪ್ರಾರಂಭಿಸಿತು. ಆಗ ಅದಕ್ಕೆ ಸ್ವಲ್ಪ ಜಮೀನನ್ನು ನೀಡಲಾಯಿತು. ಈ ಸ್ಥಳದಲ್ಲಿ ಕಟ್ಟಡಗಳನ್ನು ಕಟ್ಟಿಸಲು ಮುಂದಾಗುವವರಿಗೆ ಆ ಜಾಗವನ್ನು ಅದು ಮಾರಾಟ ಮಾಡಬೇಕಾಯಿತು. ಅದರಿಂದ ಬಂದ ವರಮಾನ ಮತ್ತು ಅದಕ್ಕೆ ನೀಡಲಾಗಿದ್ದ ಸಾಲದ ಮೊತ್ತದಿಂದ ಅಭಿವೃದ್ಧಿ ಯೋಜನೆಗಳನ್ನು ಮುಂದುವರೆಸಲು ಅನುಕೂಲವಾಯಿತು. 1947ರಲ್ಲಿ ಸ್ವಾತಂತ್ರ್ಯ ಬಂದಿತು. ಅನಂತದಲ್ಲಿ ದೆಹಲಿ ನಗರಕ್ಕೆ ನಿರಾಶ್ರಿತರು ಮಹಾಪೂರದಂತೆ ಹರಿದು ಬಂದಿರುವುದು

ಪ್ರತಿಯೊಬ್ಬರಿಗೂ ಗೊತ್ತಿರುವ ಸಂಗತಿ. ಇದರಿಂದಾಗಿ ಎಲ್ಲ ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಂಡವು. ಇನ್ನು ದೆಹಲಿಯಲ್ಲಿನ ನಿರ್ಮಾಣ ಕಾಮಗಾರಿಗಳಿಗೆ, ಅನೇಕ ಪ್ರದೇಶಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ದೆಹಲಿ ಅಭಿವೃದ್ಧಿ ಮಂಡಳಿಯನ್ನೇ ಬೊಟ್ಟಿಟ್ಟು ತೋರಿಸುವುದು ಸರಿಯಲ್ಲ ಎಂದು ನಾನು ಈ ಸಂದರ್ಭದಲ್ಲಿ ಮತ್ತೊಮ್ಮೆ ಒತ್ತಿ ಹೇಳಲು ಬಯಸುತ್ತೇನೆ. ದೆಹಲಿ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಪಡಿಸುವ ಉದ್ದೇಶದಿಂದ ತನ್ನ ವಶಕ್ಕೆ ತೆಗೆದುಕೊಂಡ ಅತ್ಯುತ್ತಮ ದರ್ಜೆಯ ಜಮೀನನ್ನು ಮಾತ್ರ ತಾನು ಈಗಾಗಲೇ ಅಭಿವೃದ್ಧಿ ಪಡಿಸಿದ ಜಮೀನಿನಲ್ಲಿ ಮೂರು ಎಕರೆಯನ್ನು ಪುನರ್‌ವಸತಿ ಸಚಿವಾಲಯಕ್ಕೆ ವರ್ಗಾಯಿಸಿತು. ಈ ಜಮೀನಿನಲ್ಲಿ ಒಳಚರಂಡಿ ವ್ಯವಸ್ಥೆಯನ್ನೂ ಅದು ಮಾಡಿತ್ತು. ಈಗ ಭಾರತ ಸರ್ಕಾರವು ಈ ಜಮೀನಿನಲ್ಲಿ ಪುನರ್‌ವಸತಿ ಖಾತೆಯ ಮೂಲಕ ಅಥವಾ ದೆಹಲಿ ಅಭಿವೃದ್ಧಿ ಮಂಡಳಿಯ ಮೂಲಕ ಕಟ್ಟಡಗಳನ್ನು ನಿರ್ಮಿಸಿತು ಎಂಬುದು ಇಲ್ಲಿ ಮುಖ್ಯ ವಿಷಯವಲ್ಲ. ಸಹಜವಾಗಿಯೇ ದೆಹಲಿ ಅಭಿವೃದ್ಧಿ ಮಂಡಳಿ ತನ್ನ ಜಮೀನನ್ನು ವರ್ಗಾಯಿಸಿದಾಗ ಅದರ ಸ್ಥಿತಿ ಇನ್ನಷ್ಟು ಹದಗೆಟ್ಟಿತು. ಮೊದಲಿಗೆ ಅಂದರೆ 1939 ರಿಂದ 1945ರ ಅವಧಿಯಲ್ಲಿ ಮೊದಲನೇ ಮಹಾಯುದ್ಧ ಕಾರಣದಿಂದಾಗ ಅದರ ಕಾರ್ಯ ಸ್ಥಗಿತಿಗೊಂಡಿತು. ಭಾರತದ ವಿಭಜನೆಯಿಂದ ದೆಹಲಿಗೆ ನಿರಾಶ್ರೀತರ ಮಹಾಪೂರವೇ ಹರಿದು ಬಂದ ಕಾರಣದಿಂದಾಗಿ ಮತ್ತೆ ಅವರ ಕೆಲಸ ಕಾರ್ಯಗಳಲ್ಲಿ ತಡೆ ಉಂಟಾಯಿತು. ಏನೇ ಇದ್ದರೂ ದೆಹಲಿ ಅಭಿವೃದ್ಧಿ ಮಂಡಳಿಯು ತನ್ನ ಬಳಿ ಇದ್ದ ಪರಿಮಿತ ಸಂಪನ್ಮೂಲಗಳ ಮಧ್ಯೆಯೇ ನಗರದಲ್ಲಿ ವಸತಿ ನಿರ್ಮಾಣಕ್ಕೆ ಬಹಳಷ್ಟು ದೊಡ್ಡ ಕೊಡುಗೆ ನೀಡಿದೆ ಮತ್ತು ನಗರವನ್ನು ಅಭಿವೃದ್ಧಿಪಡಿಸಿದೆ ಎಂಬ ಮಾತನ್ನು ನಾನಿಲ್ಲಿ ಮತ್ತೊಮ್ಮೆ ಒತ್ತಿ ಹೇಳುತ್ತೇನೆ. ದೆಹಲಿ ನಗರದಲ್ಲಿ ಏನೆಲ್ಲಾ ಕಾಮಗಾರಿಗಳು ನಡೆದಿವೆ ಎಂಬ ವಿವರಗಳನ್ನು ಓದಿ ಹೇಳಲು ನನಗೀಗ ಸಮಯವಿಲ್ಲ. ಆದರೆ ಈ ಪ್ರಶ್ನೆ ಎತ್ತಿದ ಸನ್ಮಾನ್ಯ ಸದಸ್ಯರಿಗೆ ದೆಹಲಿಯಲ್ಲಿ ಅಭಿವೃದ್ಧಿ ಮಂಡಳಿ ಕೈಗೆತ್ತಿಕೊಂಡಿರುವ ಕೆಲಸಗಳೇನು ಮತ್ತು ಭವಿಷ್ಯದಲ್ಲಿ ಅದು ಯಾವ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಲಿದೆ ಎಂಬಿತ್ಯಾದಿ ವಿವರಗಳ ಯಾದಿಯನ್ನು ಒಪ್ಪಿಸಲು ನಾನು ಸಿದ್ಧಳಿದ್ದೇನೆ. ದೆಹಲಿ ಅಭಿವದ್ಧಿ ಮಂಡಳಿಯು 1952-53 ಹಾಗೂ 1953-54 ಸಾಲಿನ ಕಾರ್ಯಕ್ರಮವನ್ನು ರೂಪಿಸಿದ್ದು, ಒಂದು ಲಕ್ಷ ಜನಸಂಖ್ಯೆಗೆ ವಸತಿ ಸೌಕರ್ಯ ಕಲ್ಪಿಸುವಂತೆ ಅದನ್ನು ವಿನ್ಯಾಸಗೊಳಿಸಲಾಗಿದೆ. ಜನ ಸಾಮಾನ್ಯರಿಗಾಗಿ ಮನೆ ನಿರ್ಮಾಣ ಯೋಜನೆ ಇದಾಗಿದೆ. ಇದರಿಂದ ಕೆಲವರಿಗೆ ಸ್ವಲ್ಪಮಟ್ಟಿನ ಅಸಮಧಾನ ಆಗಿರುವುದು ನಿಜ. ಆದರೆ ದೊಡ್ಡ ಸಂಖ್ಯೆ ನಿರಾಶ್ರೀತರು ಇಲ್ಲಿ ಜಮಾಯಿಸಿದ್ದು ಮತ್ತು ಸಿಕ್ಕ ಸಿಕ್ಕಲ್ಲಿ ಅನಧಿಕೃತ ಮನೆಗಳನ್ನು ಕಟ್ಟಿಕೊಂಡಿದ್ದು, ಮಂಡಳಿಗೆ ಭಾರೀ ದೊಡ್ಡ ಸಮಸ್ಯೆಯಾಗಿ ಪರಿಣಮಿಸಿತು. ಮಾನ್ಯ ಸದಸ್ಯರಾದ ಶ್ರೀ ಕೆ.ಬಿ.ಲಾಲ್ ಈ ಪ್ರಶ್ನೆಯಯನ್ನು ಎತ್ತಿರುವುದರಿಂದ ಮತ್ತು ಈ ಸಂಬಂಧದಲ್ಲಿ ಕೆಲವು ಆರೋಪಗಳನ್ನು ಮಾಡಿರುವುದರಿಂದ ಸತ್ಯಾಂಶವನ್ನು ಸದನದ ಗಮನಕ್ಕೆ ತರುವುದು ಕರ್ತವ್ಯವೆಂದು ಭಾವಿಸಿ ನಾನಿದನ್ನು ಹೇಳುತ್ತಿದ್ದೇನೆ. ದೆಹಲಿ ಅಭಿವೃದ್ಧಿ ಮಂಡಳಿಯು ತಮಗೆ ಕಿರುಕುಳ ನೀಡುತ್ತಿದೆ ಎಂದು ಮಾನ್ಯ ಸದಸ್ಯರು ಆರೋಪಿಸದೆ ಹೋಗಿದ್ದರೆ ನಾನು ಈ ವಿಷಯುವನ್ನು ಪ್ರಸ್ತಾಪಿಸುತ್ತಲಿರಲಿಲ್ಲ. ಮಂಡಳಿಗೆ ಸೇರಿದ ಜಮೀನಿನಲ್ಲಿ ಮಾನ್ಯ ಸದಸ್ಯರೇ ಅನಧಿಕೃತ ಕಟ್ಟಡ ನಿರ್ಮಿಸಿದ್ದಾರೆ ಎಂಬ ಅಂಶವನ್ನಂತೂ ನಾನು ಸದನದ ಗಮನಕ್ಕೆ ತರಲೇಬೇಕಾಗಿದೆ. ಅದೂ ಅಲ್ಲದೆ ಸರ್ಕಾರಿ ಜಮೀನಿನಲ್ಲಿ ಅನಧಿಕೃತ ಕಟ್ಟಡಗಳ ನಿರ್ಮಾಣಕ್ಕೆ ಮುಂದಾಗುವವರ

ವಿರುದ್ಧ ಏನಾದರೂ ಕ್ರಮ ಕೈಗೊಳ್ಳಲೇಬೇಕು. ಸರ್ಕಾರದ ಯಾವುದೇ ಸಂಸ್ಥೆ ಯಾವುದೇ ಕಾರಣವಿಲ್ಲದೆ ಜನರಿಗೆ ಕಿರುಕುಳ ನೀಡುತ್ತಿದೆ ಎಂದು ಹೇಳುವುದು ಸರಿಯಲ್ಲ ಎಂಬ ಅಂಶವನ್ನೂ ನಾನು ಇದೇ ಸಂದರ್ಭದಲ್ಲಿ ಸದನದ ಗಮನಕ್ಕೆ ತರಲು ಇಚ್ಛಿಸುತ್ತೇನೆ. ನಾನು ಹೇಳಿರುವುದು ಸತ್ಯವಲ್ಲವೆಂದಾದಲ್ಲಿ ಅದನ್ನು ರುಜುವಾತು ಪಡಿಸಲು ನಾನು ಮಾನ್ಯ ಸದಸ್ಯರಿಗೆ ಸವಾಲು ಒಡ್ಡುತ್ತೇನೆ. ಅವರಿಗೆ ಯಾರು ಹೇಗೆ ಕಿರುಕುಳ ನೀಡಿದರು ಎಂಬುದನ್ನು ನಾನು ತಿಳಿಯ ಬಯಸುತ್ತೇನೆ. ಆದರೆ ಇದಕ್ಕೆ ವಿರುದ್ಧವಾಗಿ ನಾನು ನಿದರ್ಶನದ ಮೇಲೆ ನಿದರ್ಶನವನ್ನು ಕೊಡಬಲ್ಲೆ. ದೆಹಲಿ ಅಭಿವೃದ್ಧಿ ಮಂಡಳಿಯು ಜನರನ್ನು ಸಂತೃಪ್ತಿ ಪಡಿಸಲು ತನ್ನ ಮಿತಿಯನ್ನು ಮೀರಿ ಸಹಾಯ ಮಾಡಿದ, ನೂರಾರು, ಸಾವಿರಾರು ದೃಷ್ಟಾಂತಗಳನ್ನು ನಾನು ಕೊಡಬಲ್ಲೆ - ಇಲ್ಲಿ 'ಸಂತೃಪ್ತಿ ಪಡಿಸಲು' ಎಂಬ ಶಬ್ಧವನ್ನು ಬಳಸಿದರೆ ಸರಿಯಾದೀತೋ ಇಲ್ಲವೋ ಎಂಬ ಅನುಮಾನ ನನಗೆ ಇದ್ದೇ ಇದೆ. ಬೇರಲ್ಲೂ ಸ್ಥಳ ಸಿಗದೆ ಇಲ್ಲಿಗೆ ಬಂದು ಅನಧಿಕೃತ ವಸತಿಗಳನ್ನು ನಿರ್ಮಿಸಿವರ ಸಮಸ್ಯೆಗಳು ಮತ್ತು ಕಠಿಣತೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಾನು ಈ ಮಾತನ್ನು ಹೇಳುತ್ತಿದ್ದೇನೆ. ನಾನು ಯಾವಾಗಲೂ ಅಂಥವರಿಗೆ ವಸತಿ ಸೌಕರ್ಯ ಕಲ್ಪಿಸಲು ಪ್ರಯತ್ನಿಸಿದ್ದೇನೆ. ಪರ್ಯಾಯ ವಸತಿ ವ್ಯವಸ್ಥೆ ಕಲ್ಪಿಸುವ ತನಕವೂ ಅವರನ್ನು ಎಂದೂ ಸ್ಥಳಾಂತರಿಸಿದ್ದಿಲ್ಲ. ಯಾರಿಂದಲೂ, ಯಾರ ಮೇಲೂ ಕಿರುಕುಳ ನಡೆದಿಲ್ಲ. ಅದರಲ್ಲೂ ಅಭಿವೃದ್ಧಿ ಮಂಡಳಿಯಿಂದ ಯಾರಿಗೂ ಕಿರುಕುಳವಾಗಿಲ್ಲ. ಬದಲಾಗಿ ಸಮಾಜ ವಿರೋಧಿ ಶಕ್ತಿಗಳಿಂದಾಗಿ ಅಭಿವೃದ್ಧಿ ಮಂಡಳಿಯ ಕೆಲಸ ಕಾರ್ಯಗಳಿಗೆ ತಡೆ ಉಂಟಾಗಿದೆ. ಈ ಸಮಾಜ ವಿರೋಧಿಗಳು ಯಾವುದೇ ಹಕ್ಕಿಲ್ಲದೆ ಅನಧಿಕೃತ ಕಟ್ಟಡಗಳನ್ನು ನಿರ್ಮಿಸಿ ಮಂಡಳಿಗೇ ಕಿರುಕುಳ ನೀಡಿವೆ. ಹಾಗಾಗಿ ಅತ್ಯಂತ ಕಠಿಣ ಕಾರ್ಯಭಾರವನ್ನು ನಿರ್ವಹಿಸಬೇಕಾಗಿರುವ ದೆಹಲಿ ಅಭಿವೃದ್ಧಿ ಮಂಡಳಿಯ ಬಗ್ಗೆ ಜನರು ಸಹಾನುಭೂತಿ ತಳೆಯಬೇಕಾಗಿದೆ. ನಾನು ಈಗಾಗಲೇ ವಿವರಿಸಿರುವ ಕಾರಣಗಳಿಂದಾಗಿ ಅಭಿವೃದ್ಧಿ ಮಂಡಳಿಯ ಕಾರ್ಯ ನಿರೀಕ್ಷಿಸಿದಂತೆ ಕ್ರಮಗತವಾಗಿ ನಡೆದಿಲ್ಲ ಎಂಬುದನ್ನೂ ನಾನು ಒಪ್ಪಿಕೊಳ್ಳುತ್ತೇನೆ.

ಈಗ ಪರಿಹಾರದ ಪ್ರಶ್ನೆಯನ್ನು ತೆಗೆದುಕೊಳ್ಳೋಣ. ಈಗ ಇರುವ ಕಾಯ್ದೆಯಂತೆ ಪರಿಹಾರವನ್ನು ಜಮೀನಿನ ಮಾರುಕಟ್ಟೆ ಬೆಲೆಗೆ ಅನುಗುಣವಾಗಿ ನಿಗದಿ ಪಡಿಸಲಾಗುತ್ತದೆ. ದೆಹಲಿ ಅಭಿವೃದ್ಧಿ ಮಂಡಳಿಯ ನಿವೇಶನ ಖರೀದಿಸಿದವರ ವಿರುದ್ಧ ನಾನು ಮಾಡಲಿರುವ ಇನ್ನೊಂದು ತಕರಾರೆಂದರೆ ಈ ನಿವೇಶನಗಳನ್ನು ಖರೀದಿಸಿದ ಅನೇಕರು ಅಲ್ಲಿ ಕಟ್ಟಡಗಳನ್ನು ಕಟ್ಟದಿರುವುದು. ಅವರಲ್ಲಿ ಅನೇಕರು ಸಟ್ಟಾಬಾಜಿ ವ್ಯವಹಾರದವರು; ಜಮೀನಿನ ಬೆಲೆ ಹೆಚ್ಚುತ್ತಾ ಹೋದಂತೆ ಹೆಚ್ಚಿನ ಬೆಲೆಗೆ ನಿವೇಶನಗಳನ್ನು ಮಾರಾಟ ಮಾಡುವುದು ಅವರ ದಂಧೆ. ಅಂಥಹವರನ್ನು ನಿವೇಶನಗಳಲ್ಲಿ ಏಕೆ ಯಾವುದೇ ನಿರ್ಮಾಣ ಕಾರ್ಯ ಕೈಗೊಂಡಿಲ್ಲ ಎಂದು ಪ್ರಶ್ನಿಸಿದರೆ 'ನಮ್ಮ ಬಳಿ ಕಟ್ಟಡ ಸಾಮಗ್ರಿಗಳಿಲ್ಲ' ಎಂಬ ನೆಪ ಅವರ ಬಳಿ ಸಿದ್ಧವಾಗಿರುತ್ತದೆ. ಕಟ್ಟಡದ ಸಾಮಗ್ರಿಗಳು ಧಾರಾಳವಾಗಿದ್ದಾಗಲೂ ಸಹ ಅನೇಕರು ಅದರ ಪ್ರಯೋಜನ ಪಡೆದುಕೊಂಡಿಲ್ಲ. ಅಂತಹ ಸನ್ನಿವೇಶದಲ್ಲಿ ಅಭಿವೃದ್ಧಿ ಮಂಡಳಿಯ ಕಾರ್ಯನಿರ್ವಹಣೆಗೆ ಅಡಚಣೆ ಉಂಟಾಗಿ ತಾನು ಉದ್ದೇಶಿಸಿದ್ದ ರೀತಿಯಲ್ಲಿ ಈ ಪ್ರದೇಶವನ್ನು ಅಭಿವೃದ್ಧಿ ಪಡಿಸುವುದು ಅಸಾಧ್ಯವಾಯಿತು. ಅಭಿವೃದ್ಧಿ ಮಂಡಳಿಯ ಮುಂದಿದ್ದ ಸಮಸ್ಯೆಗಳಲ್ಲಿ ಕೆಲವೊಂದು ಯಾರ

ನಿಯಂತ್ರಣಕ್ಕೂ ಸಿಗದಂತವು. ಅದೂ ಅಲ್ಲದೆ ಪರಿಹಾರ ನಿಗದಿಪಡಿಸುವ ಪ್ರಶ್ನೆಗೆ ಅಭಿವೃದ್ಧಿ ಮಂಡಳಿಗೂ ಯಾವುದೇ ಸಂಬಂಧವಿಲ್ಲ ಎಂಬುದನ್ನು ಮಾನ್ಯ ಸದಸ್ಯರ ಗಮನಕ್ಕೆ ತರಲು ಬಯಸುತ್ತೇನೆ. ಈ ಕುರಿತು ಪ್ರಶ್ನೆಗಳು ಈಗಿರುವ ಕಾಯ್ದೆಯನ್ನೇ ಅವಲಂಬಿಸಿದೆ. ಆ ಸಂಬಂಧ ಕಾನೂನು ಸಂಬಂಧಿ ಕ್ರಮಗಳಿಗೆ ಭೂ ಸ್ವಾಧೀನತೆ ಅಧಿಕಾರಿಗಳೇ ಕಾರಣರಾಗಿದ್ದಾರೆ ಮತ್ತು ಅಭಿವೃದ್ಧಿ ಮಂಡಳಿಯು ಇಲ್ಲಿ ಈ ಕಾನೂನು ಕ್ರಮಗಳಲ್ಲಿ ಒಂದು ಅಂಗವಷ್ಟೇ ಆಗಿದ್ದು ಯಾವುದೇ ಪರಿಹಾರವನ್ನು ನಿರ್ಧರಿಸುವ ಅಧಿಕಾರ ಅದಕ್ಕಿಲ್ಲ.

ಇದೇ ವೇಳೆಯಲ್ಲಿ ಅತಿಕ್ರಮಣ ಪ್ರಕರಣಗಳ ಸಂಖ್ಯೆಯನ್ನು ನಾನು ತಮ್ಮ ಮುಂದಿಡಲು ಬಯಸುತ್ತಿದ್ದೇನೆ. 1949ರ ಅಂತ್ಯದವರೆಗೆ ಈ ಪ್ರಕರಣಗಳ ಸಂಖ್ಯೆ 6444; 1950ರ ಕೊನೆಯವರೆಗೆ 11,030, 1951ರವರೆಗೆ 13,845 ಮತ್ತು 1952ರ ಮಾರ್ಚ್‌ವರೆಗೆ 14,000 ಹೀಗೆ ಅತಿಕ್ರಮಣಗಳ ಸಂಖ್ಯೆ ಏರುತ್ತಲೇ ಹೋಗಿರುವುದನ್ನು ನೀವು ಗಮನಿಸಬಹುದು. ಇಂತಹ ಅತಿಕ್ರಮಣಗಳು ನಡೆಸದಂತೆ ಪದೇ ಪದೇ ವಿನಂತಿಸಿಕೊಂಡಿದ್ದರೂ ಅಂತಹ ಪ್ರಕರಣಗಳ ಸಂಖ್ಯೆ ತಗ್ಗಿಲ್ಲ. ಎಲ್ಲ ಸಾರ್ವಜನಿಕ ಜಮೀನುಗಳಲ್ಲೂ ಅಂದರೆ ಸರ್ಕಾರಿ ಜಮೀನಿನಲ್ಲಿ ಅಂತಹ ಅತಿಕ್ರಮಣ ಎಗ್ಗಿಲ್ಲದೆ ಸಾಗಿದೆ. ಈಗಾಗಲೇ ನಾನು ಹೇಳಿರುವಂತೆ ಎಲ್ಲ ರೀತಿಯ ರಿಯಾಯ್ತಿಗಳನ್ನು ನೀಡಲಾಗಿದೆ. ಬೇರೆ ಬೇರೆ ಸ್ಥಳಗಳಲ್ಲಿ ಸುಮಾರು ನಾಲ್ಕು ಸಾವಿರ ನಿವೇಶನಗಳನ್ನು ಮಾರಾಟ ಮಾಡಲಾಗಿದೆ. ಅವುಗಳಲ್ಲಿ ಅರ್ಧದಷ್ಟು ಖಾಲಿಯಾಗಿಯೇ ಬಿದ್ದಿವೆ. ಈ ನಿವೇಶನಗಳಲ್ಲಿ ಎಲ್ಲೂ ನಿರ್ಮಾಣ ಕಾಮಗಾರಿ ನಡೆದಿಲ್ಲ. ಅದಕ್ಕೆ ಅಭಿವೃದ್ಧಿ ಮಂಡಳಿಯನ್ನೇ ಹೊಣೆಯಾಗಿ ಮಾಡುವುದು ಸರಿಯಲ್ಲ.

ದೆಹಲಿ ಆಡಳಿತವು ಈ ಶಿಫಾರಸುಗಳನ್ನು ಪರಿಗಣಿಸಿದ ತಕ್ಷಣದಲ್ಲೇ ಭಾರತ ಸರ್ಕಾರವು ತನ್ನ ಯೋಜನೆಗಳನ್ನು ಒಂದೇ ಒಂದು ನಿಮಿಷ ಕೂಡಾ ತಡ ಮಾಡದೆ ಪ್ರಾರಂಭಿಸಲಿದೆ - ಅದು ಎಲ್ಲ ಶಿಫಾರಸ್ಸುಗಳನ್ನು ಅಂಗೀಕರಿಸಿದೆ ಎಂದು ನಾನು ಭಾವಿಸಿದ್ದೇನೆ. ದೆಹಲಿ ನಗರದಲ್ಲಿನ ವಸತಿ ಸಮಸ್ಯೆಯನ್ನೂ ಬಗೆಹರಿಸುವಲ್ಲಿ ನಾನು ಮಿಕ್ಕೆಲ್ಲವರಿಗಿಂತಲೂ ಹೆಚ್ಚು ಆಸಕ್ತಳಾಗಿದ್ದೇನೆ ಎಂಬ ಅಂಶವನ್ನೂ ಜ್ಞಾಪಿಸ ಬಯಸುತ್ತೇನೆ. ಇದರೊಂದಿಗೆ ಕೊಳಚೆ ನಿರ್ಮೂಲನೆ ಸಮಸ್ಯೆ ಬಗ್ಗೆಯೂ ಗಮನ ಹರಿಸಬೇಕಾಗಿದೆ. ಅಲ್ಲಿನ ಪರಿಸ್ಥಿತಿಯನ್ನು ಯೋಚಿಸಿದರೆ ಅದು ನಮಗೆ ತೀವ್ರ ಕಳವಳ ಉಂಟು ಮಾಡುತ್ತದೆ. ಈ ಕೊಳಚೆ ಪ್ರದೇಶಗಳದ್ದೇ ಒಂದು ವಿಭಿನ್ನ ಸಮಸ್ಯೆಯಾಗಿದೆ. ಕೊಳಚೆ ಪ್ರದೇಶಗಳನ್ನು ನಿರ್ಮೂಲನೆಗೊಳಿಸಲು ಸಾಕಷ್ಟು ಪ್ರಮಾಣದಲ್ಲಿ ಸಹಾಯ ಧನ ಒದಗಿಸದ ಹೊರತು ಈ ಪ್ರದೇಶಗಳಲ್ಲಿ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಳ್ಳುವುದು ಸಾಧ್ಯವಿಲ್ಲ. ಆದರೂ ಅಲ್ಲಿನ ಪರಿಸ್ಥಿತಿಯನ್ನು ಸುಧಾರಿಸಲು ನಾನು ಕಾತರಳಾಗಿದ್ದೇನೆ. ಆದರೆ ಅಲ್ಲಿ ಅನಧಿಕೃತ ಎಂದು ನಾನು ಏಕೆ ಹೇಳುತ್ತಿದ್ದೇನೆಂದರೆ ಅಂತಹ ಕಟ್ಟಡಗಳು ಅಲ್ಲಿ ಬರಬಾರದಿತ್ತು ಎಂಬ ಕಾರಣಕ್ಕಾಗಿ. ಅದೂ ಅಲ್ಲದೆ ಅವು ನಗರಸಭೆಯ ಕಟ್ಟಡ ನಿರ್ಮಾಣ ನಿಬಂಧನೆಗಳನ್ನು ಉಲ್ಲಂಘಿಸಿರುವ ಕಾರಣದಿಂದ. ಮುಖ್ಯವಾಗಿ ಆರೋಗ್ಯ ಮತ್ತು ನೈರ್ಮಲ್ಯ ಪಾಲನೆಯ ವಿಷಯದಲ್ಲಿ ಅವು ಯಾವುದೇ ಕಟ್ಟುಪಾಡುಗಳಿಗೂ ಒಳಗಾಗದೆ ಮನಬಂದಂತೆ ನಿರ್ಮಾಣ ಕಾರ್ಯ ಕೈಗೆತ್ತಿಕೊಂಡಿವೆ. ಇವೆಲ್ಲವೂ ಈ ನಿಟ್ಟಿನಲ್ಲಿನ ಪ್ರತಿಯೊಬ್ಬರ ಕಾರ್ಯ ನಿರ್ವಹಣೆಯನ್ನು ಕಠಿಣಗೊಳಿಸಿತು. ಪುನರ್ ವಸತಿ ಖಾತೆಯು ಅನಧಿಕೃತ

ನಿರ್ಮಾಣಗಳಿಂದಾಗಿ ಇದೇ ರೀತಿ ತೊಂದರೆಗಳನ್ನು ಎದುರಿಸುತ್ತಿದೆ. ನೀವು ಯಾವುದೇ ಕಟ್ಟಡವನ್ನು 'ಕೆಡವಿ ಹಾಕಿರಿ' ಎಂದು ಹೇಳಿದಾಕ್ಷಣ ಜನರು ನಿಯೋಗಗಳನ್ನು ತೆಗೆದುಕೊಂಡು ಬರತೊಡಗುತ್ತಾರೆ. ಪ್ರತಿಭಟನೆ, ಮತ ಪ್ರದರ್ಶನ ಇತ್ಯಾದಿಗಳನ್ನು ಆರಂಭಿಸುತ್ತಾರೆ.

* * * * * *

ಸಾಕಷ್ಟು ಹಣಕಾಸು ಒದಗಿಸಿದಾಕ್ಷಣ ಮತ್ತು ಅಭಿವೃದ್ಧಿ ಮಂಡಳಿಯ ಶಿಫಾರಸುಗಳನ್ನು ದೆಹಲಿ ಆಡಳಿತವು ಅಂಗೀಕರಿಸಿದಾಕ್ಷಣ ಎಲ್ಲ ಯೋಜನೆಗಳು ವಿಳಂಬವಿಲ್ಲದೆ ಕಾರ್ಯಗತವಾಗುವುದು ಎಂದು ನಾನು ಭರವಸೆ ನೀಡುತ್ತೇನೆ. ಈ ಯೋಜನೆಗಳಿಗೆ ಎಷ್ಟೊಂದು ಹಣಕಾಸು ಬೇಕಾಗುತ್ತದೆ. ಈ ಹಣಕಾಸನ್ನು ಅಭಿವೃದ್ಧಿ ಮಂಡಳಿಯ ಕೈಗೆ ಕೊಟ್ಟಲ್ಲಿ ಮಾತ್ರವೇ ಈ ಯೋಜನೆಗಳನ್ನು ಕಾರ್ಯರೂಪಕ್ಕೆ ತರಬಹುದಾಗಿದೆ.

* * *

## 31. ದೆಹಲಿ ಮಹಾನಗರ ಪಾಲಿಕೆ ವಿಧೇಯಕ - 1957 *

ಈ ವಿಧೇಯಕವನ್ನು ಬೆಂಬಲಿಸಿ ಮಾತನಾಡಲು ಸಮಯ ನೀಡಿರುವುದಕ್ಕಾಗಿ ನಾನು ಅತ್ಯಂತ ಕೃತಜ್ಞಳಾಗಿದ್ದೇನೆ. ಜಂಟಿ ಸಮಿತಿಯು ಪರಿಶೀಲನೆಗೆ ಒಳಪಟ್ಟು ಸೂಕ್ತ ತಿದ್ದುಪಡಿಗಳೊಂದಿಗೆ ಮಂಡಿಸಿರುವ ಈ ವಿಧೇಯಕವು ಬಹುಮಟ್ಟಿಗೆ ಲೋಕಸಭೆಯಲ್ಲಿ ಮಂಡಿಸಲ್ಪಟ್ಟ ವಿಧೇಯಕದ ಪರಿಷ್ಕೃತ ರೂಪವಾಗಿದೆ ಎಂದು ನಾನು ಭಾವಿಸುತ್ತೇನೆ. ದೆಹಲಿ ಮಹಾನಗರ ಪಾಲಿಕೆಯ ರಚನೆಯಲ್ಲಿ ನಾನು ಅತ್ಯಂತ ನಿಕಟವಾಗಿ ಕಾರ್ಯ ನಿರ್ವಹಿಸಿದ್ದೇನೆ. ನಾನು ಈ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳಲು ಇಚ್ಛಿಸುತ್ತೇನೆ. ದೇಶಕ್ಕೆ ಸ್ವಾತಂತ್ರ್ಯ ದೊರಕುವ ಮೊದಲೇ ದೆಹಲಿಯ ಆಡಳಿತವನ್ನು ಸುಧಾರಿಸುವ ವಿಚಾರ ಭಾರತ ಸರ್ಕಾರದ ಮುಂದಿತ್ತು. ಈ ಸಂಬಂಧದಲ್ಲಿ ಅತ್ಯಂತ ಸಮಗ್ರ ಸ್ವರೂಪದ ವರದಿಯೊಂದನ್ನು ಸಿದ್ಧಪಡಿಸಿ ಅದನ್ನು ಸ್ವಾತಂತ್ರ್ಯಾ ನಂತರದಲ್ಲಿ ಆರೋಗ್ಯ ಖಾತೆಯು ಆಮೂಲಾಗ್ರವಾಗಿ ಅಭ್ಯಸಿಸಿತು. ಆಗಲೇ ಅಸ್ತಿತ್ವದಲ್ಲಿದ್ದ ಅಭಿವೃದ್ಧಿ ಮಂಡಳಿಯು ನಿರೀಕ್ಷಿತ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿರಲಿಲ್ಲ. ಆದರ ಕೆಲವು ಪರಿಮಿತಿಗಳಿಂದಾಗಿ ಅದಕ್ಕೆ ನಿರೀಕ್ಷಿಸಿದ ಮಟ್ಟದಲ್ಲಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ದೆಹಲಿ ಅಭಿವೃದ್ಧಿ ಮಂಡಳಿಯು ಕಾರ್ಯ ನಿರ್ವಹಣೆಯನ್ನು ಪರಿಶೀಲಿಸುವ ಸಲುವಾಗಿ ಬಿರ್ಲಾ ಸಮಿತಿ ಎಂಬ ಹೆಸರಿನ ಸಮಿತಿಯೊಂದನ್ನು ನೇಮಿಸಲಾಯಿತು. ಅದು ಅತ್ಯುತ್ತಮ ವರದಿಯೊಂದನ್ನು ನೀಡಿತು ಮತ್ತು ಅನೇಕ ಸಲಹೆ ಸೂಚನೆಗಳನ್ನು ನೀಡಿತು. ಈ ಮಧ್ಯೆ ದೆಹಲಿ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಈ ಹಂತದಲ್ಲಿ ಮಹಾನಗರ ಪಾಲಿಕೆಯನ್ನು ವಸ್ತುತಃ ವಿಸರ್ಜಿಸಲಾಯಿತು. ನಾವು ಈ ವಿಧೇಯಕದಲ್ಲಿ ಉದ್ದೇಶಿಸಿರುವ ನಗರಪಾಲಿಕೆಯೊಂದು ಪ್ರಾರಂಭದಿಂದಲೇ ಇದ್ದಿದ್ದರೆ - ಅಂದರೆ ನಮಗೆ ಸ್ವಾತಂತ್ರ್ಯ ದೊರೆತಾಗಿನಿಂದಲೇ - ಬಹುಶಃ ದೆಹಲಿಯಲ್ಲಿ ಇಷ್ಟೊಂದು ಸಂಖ್ಯೆಯಲ್ಲಿ ಕೊಳಗೇರಿಗಳು ತಲೆ ಎತ್ತುತ್ತಲೇ ಇರಲಿಲ್ಲ. ಇದಲ್ಲದೆ ನಗರವು ಈಗಿರುವಂತೆ ಅಡ್ಡಾದಿಡ್ಡಿಯಾಗಿ ಬೆಳೆಯಲು ಅವಕಾಶ ಇರುತ್ತಿರಲಿಲ್ಲ. ದೆಹಲಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅನೇಕ ಸಮಿತಿಗಳು ಮತ್ತಷ್ಟು ಗೊಂದಲವನ್ನಷ್ಟೇ ಉಂಟು ಮಾಡಿವೆ. ದೆಹಲಿ ಮಹಾನಗರವು ಇಂದು ಹೊಸ ಶಕೆಯೊಂದನ್ನು ಪ್ರವೇಶಿಸುವ ಅಂಚಿನಲ್ಲಿದೆ ಎಂದು ನಾನು ಭಾವಿಸಿದ್ದೇನೆ. ಸಂಸತ್ತಿನ ಉಭಯ ಸದನಗಳಲ್ಲಿ ಈ ವಿಧೇಯಕದ ವಿರುದ್ಧ ಎತ್ತಲಾಗಿರುವ ಪ್ರಮುಖ ಆಕ್ಷೇಪಗಳಲ್ಲಿ ಒಂದು ನವದೆಹಲಿಯನ್ನೂ ಆದರ ವ್ಯಾಪ್ತಿಯಿಂದ ಹೊರಗಿಟ್ಟಿರುವುದು. ಎರಡನೆಯದು ಕೆಲವು ಗ್ರಾಮಾಂತರ ಪ್ರದೇಶಗಳನ್ನು ನಗರಪಾಲಿಕೆಯ ವ್ಯಾಪ್ತಿಗೆ ಒಳಪಡಿಸಿರುವುದು ಮತ್ತು ಮೂರನೆಯನದು ಕೆಲವು ಶಾಸನಾತ್ಮಕ ಅಂಶಗಳನ್ನು ಕುರಿತಾಗಿ ಹೇಳುವುದಾದರೆ ದೆಹಲಿ ಅಭಿವೃದ್ಧಿ ಮಂಡಳಿಯನ್ನು ನಗರಪಾಲಿಕೆ ವ್ಯಾಪ್ತಿಯಿಂದ ಹೊರಗಿಟ್ಟಿರುವುದು. ನವದೆಹಲಿಯನ್ನು ನಗರಪಾಲಿಕೆ ವ್ಯಾಪ್ತಿಗೆ ಒಳಪಡಿಸಬಾರದೆಂದು ಪ್ರತಿಪಾದಿಸಿದವರಲ್ಲಿ ನಾನೂ ಒಬ್ಬಳಾಗಿದ್ದು, ಈ ಬಗ್ಗೆ ನಾನು ಬಹಳಷ್ಟು ವಾದಿಸಿದ್ದೆ. ಕೇಂದ್ರ ಸರ್ಕಾರದ ಕಚೇರಿಗಳಿರುವ ಪ್ರದೇಶಗಳು ಪಕ್ಷ ರಾಜಕೀಯದ ಕೆಸರನ್ನು ಅಂಟಿಸಿಕೊಳ್ಳಬಾರದು ಎಂದು ಬಲವಾಗಿ ಭಾವಿಸಿದ್ದೇನೆ.

---

* 1957ರ ದೆಹಲಿ ಮಹಾನಗರ ಪಾಲಿಕೆ ವಿಧೇಯಕ ಕುರಿತು ಮಾತನಾಡುತ್ತಾ (ರಾಜ್ಯಸಭೆ ಚರ್ಚೆ ಡಿಸೆಂಬರ್ 16, 1957, ಸಿಸಿ 2704-2707).

ವಾಷಿಂಗ್‌ಟನ್ ಮತ್ತು ಕ್ಯಾನ್‌ಬರಗಳು ರಾಜಕೀಯವನ್ನು ತಮ್ಮಿಂದ ದೂರ ಇರಿಸುವ ದಿಸೆಯಲ್ಲಿ ಅತ್ಯಂತ ಆರೋಗ್ಯಕರವಾದ ಪರಂಪರೆಯನ್ನು ಹಾಕಿಕೊಟ್ಟಿವೆ. ಅದನ್ನೇ ನಾವು ಇಲ್ಲಿ ಅನುಸರಿಸಿದರೆ ಒಳ್ಳೆಯದೆಂಬುದು ನನ್ನ ಅಭಿಪ್ರಾಯವಾಗಿದೆ. ನಾವು ಹಾಗೆ ಮಾಡುತ್ತೇವೆ ಎಂಬ ನಿರೀಕ್ಷೆಯೂ ನನಗಿದೆ. ಗ್ರಾಮಾಂತರ ಪ್ರದೇಶಗಳನ್ನು ನಗರಪಾಲಿಕೆ ವ್ಯಾಪ್ತಿಗೆ ಒಳಪಡಿಸುವ ವಿಷಯದಲ್ಲಿ ಹೇಳುವುದಾದರೆ ಅದೊಂದು ಒಳ್ಳೆಯ ಕ್ರಮವಾಗಿದೆ ಎಂಬುದೇ ನನ್ನ ಅಭಿಪ್ರಾಯವಾಗಿದೆ. ರಾಜಧಾನಿ ನಗರವು ವಿಸ್ತರಿಸುತ್ತಲೇ ಇರುತ್ತದೆ ಮತ್ತು ಅವರು ಎಷ್ಟೊಂದು ಕ್ಷಿಪ್ರಗತಿಯಿಂದ ವಿಸ್ತರಿಸುತ್ತದೆ ಎಂಬುದೇ ನಮಗೇ ಗೊತ್ತಿರುವುದಿಲ್ಲ. ದೆಹಲಿಯಂತೂ ಈಗಾಗಲೇ ಅತಿ ವೇಗವಾಗಿ ವಿಸ್ತರಿಸಿದೆ. ಅದರ ವಿಸ್ತರಣೆಗೆ ಇನ್ನು ಎಷ್ಟು ಎಕರೆ ಜಮೀನು ಬೇಕಾದೀತು ಎಂಬುದು ನಮಗೆ ಗೊತ್ತಿಲ್ಲ. ಅದಲ್ಲದೆ ಗ್ರಾಮಾಂತರ ಜನರ ಸಮಸ್ಯೆಗಳನ್ನು ಪರಿಚಯಿಸಿಕೊಳ್ಳುವುದು ನಗರವಾಸಿಗಳಾದ ನಮಗೆ ಅತ್ಯಗತ್ಯವೂ ಹೌದು. ಗ್ರಾಮಾಂತರ ಪ್ರದೇಶಗಳಿಗೆ ನಾವು ಏನನ್ನು ಮಾಡುತ್ತಿಲ್ಲ ಮತ್ತು ನಗರದ ಜನತೆ ಗ್ರಾಮಾಂತರ ಪ್ರದೇಶಗಳ ವಿಷಯದಲ್ಲಿ ಆಸಕ್ತಿ ಹೊಂದಿಲ್ಲ ಎಂಬ ಟೀಕೆಯಲ್ಲಿ ಸತ್ಯಾಂಶವಿಲ್ಲ. ನಗರಪಾಲಿಕೆ ವ್ಯಾಪ್ತಿಯಿಂದ ಹೊರಗಿರುವ ಶಾಸಕಾಂಗಗಳು ಶಾಸನಬದ್ಧ ಅಧಿಕಾರಗಳನ್ನು ಹೊಂದಿರುವ ಸಂಸ್ಥೆಗಳು. ಈ ಕ್ಷೇತ್ರದಲ್ಲಿ ತಮ್ಮದೇ ಆದ ರೀತಿಯ ಸೇವೆ ಸಲ್ಲಿಸುವುವು. ದೆಹಲಿ ಮಹಾನಗರದ ಭಾವೀ ಯೋಜನೆಗಳ ವಿಷಯದಲ್ಲಿ ಹೆಚ್ಚಿನ ನಿಖರತೆ ಮತ್ತು ಸಮನ್ವಯ ಇರಬೇಕೆಂಬ ದೃಷ್ಟಿಯಿಂದ ದೆಹಲಿ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾಗಿದೆ. ದೆಹಲಿಯಲ್ಲಿ ಅಡ್ಡಾದಿಡ್ಡಿಯಾಗಿ ಎದ್ದಿರುವ ಕಟ್ಟಡಗಳು ನಗರದ ಅಂದವನ್ನೇ ಕೆಡಿಸಿಬಿಟ್ಟಿವೆ. ಹಾಗಾಗಿ ಇಂತಹ ಒಂದು ಸಂಸ್ಥೆಯನ್ನು ಸ್ಥಾಪಿಸುವುದು ಅನಿವಾರ್ಯವಾಗಿತ್ತು. ಇಂತಹ ಸಂಸ್ಥೆಯೊಂದು ಅಸ್ತಿತ್ವಕ್ಕೆ ಬಂದಿರುವುದರಿಂದ ಆರೋಗ್ಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ನನಗಂತೂ ಬಹಳ ಹರ್ಷವಾಗಿದೆ. ಇದರಿಂದ ನಗರದಲ್ಲಿ ಬೇಕಾಬಿಟ್ಟಿ ಕಟ್ಟಡಗಳ ನಿರ್ಮಾಣ ಹಾಗೂ ಕೊಳಗೇರಿಗಳು ಹಬ್ಬುವುದು ನಿಂತೀತೆಂದು ನಾವು ಭಾವಿಸಿದ್ದೇನೆ. ಈ ಎಲ್ಲ ಅಂಗ ಸಂಸ್ಥೆಗಳು ಮತ್ತು ನಗರಪಾಲಿಕೆ ನಡುವೆ, ನಗರಪಾಲಿಕೆ ಮತ್ತು ನವದೆಹಲಿ ಸರ್ಕಾರದ ನಡುವೆ ಎಲ್ಲಾ ಕೆಲಸ ಕಾರ್ಯಗಳಲ್ಲೂ ಸೂಕ್ತ ಸಮನ್ವಯ ಸಾಧಿಸಿದರೆ ನಗರಪಾಲಿಕೆ ಯಶಸ್ಸು ಸಾಧಿಸುವುದರಲ್ಲಿ ಯಾವುದೇ ಸಂದೇಹವಿಲ್ಲ. ಅದೇ ರೀತಿ ಸರ್ಕಾರದ ಹಸ್ತಕ್ಷೇಪದಿಂದ ಕೆಲಸ ಕಾರ್ಯಗಳಲ್ಲಿ ನಾನಾ ರೀತಿಯ ತೊಡಕುಗಳು ಉದ್ಭವಿಸಬಹುದೆಂಬ ಭೀತಿಗೂ ಒಳಗಾಗಬೇಕಾಗಿಲ್ಲ. ಸ್ಥಳೀಯ ಸ್ವಯಮಾಡಳಿತ ವ್ಯವಸ್ಥೆಯಲ್ಲಿ ನಂಬಿಕೆ ಉಳ್ಳವಳು ನಾನು. ಉತ್ತಮ ಆಡಳಿತಕ್ಕೆ ಅದೇ ಮೂಲಾಧಾರವಾಗಿದೆ. ದೇಶಾದ್ಯಂತ ಇರುವ ಸ್ಥಳೀಯ ಆಡಳಿತದ ಅಂಗಗಳನ್ನು ಅಮಾನತ್ತಿನಲ್ಲಿಸಿರುವುದು ನನಗೆ ಅತ್ಯಂತ ದುಃಖದ ವಿಷಯವಾಗಿತ್ತು. ವಾಸ್ತವವಾಗಿ ಸ್ಥಳೀಯ ಅಂಗಗಳಿಗೆ ಇರಬೇಕಾದ ಅಧಿಕಾರವನ್ನು ರಾಜ್ಯ ಸರ್ಕಾರಗಳು ಕಸಿದುಕೊಳ್ಳಲು ಯತ್ನಿಸುತ್ತಿರುವುದು ಮತ್ತು ತೆರಿಗೆ ವಿಧಿಸುವ ಅಧಿಕಾರವನ್ನು ಅವುಗಳಿಗೆ ನೀಡದಿರುವುದು ಅವುಗಳು ಕಾರ್ಯ ನಿರ್ವಹಿಸದಂತೆ ಮಾಡುತ್ತವೆ. ಸಾಕಷ್ಟು ಹಣ ಇಲ್ಲದೆ ಹೊರತು ಅವುಗಳು ಕಾರ್ಯ ನಿರ್ವಹಿಸದಂತೆ ಮಾಡುತ್ತವೆ. ಸಾಕಷ್ಟು ಹಣ ಇಲ್ಲದ ಹೊರತು ಅವುಗಳು ಸಮರ್ಪಕವಾಗಿ ಕಾರ್ಯನಿರ್ವಹಿಸಲಾರವು. ಅದೇ ರೀತಿ ಅವುಗಳ ಮೇಲೆ ವಿಶ್ವಾಸವಿಡದ ಹೊರತು ಅವುಗಳಿಂದ ಏನನ್ನಾದರೂ ನಿರೀಕ್ಷಿಸುವಂತೆಯೂ ಇಲ್ಲ. ಕೊನೆಯದಾಗಿ, ಈ ಮಾದರಿಯ ವಿಧೇಯಕದಲ್ಲಿ ಪ್ರಸ್ತಾಪಿಸಲ್ಪಡುವ ಕೆಲವೊಂದು

ವಿಷಯಗಳನ್ನು ನಾನಿಲ್ಲಿ ಪ್ರಸ್ತಾಪಿಸಬಯಸುತ್ತೇನೆ. ಸ್ಥಳೀಯ ಸ್ವಯಮಾಡಳಿತಕ್ಕೆ ಉತ್ತೇಜನ ನೀಡುವ ದೃಷ್ಟಿಯಿಂದ ನಾನಿದನ್ನು ಹೇಳುತ್ತಿದ್ದೇನೆ. ಅಂತಹ ಒಂದು ಮಾರ್ಗವೆಂದರೆ ನಗರ ಪಾಲಿಕೆಗೂ ರಾಜಕೀಯ ಪಕ್ಷಗಳ ತಳಹದಿಯಲ್ಲಿ ಚುನಾವಣೆಗಳನ್ನು ನಡೆಸದಿರುವುದು. ಈ ವಿಷಯದಲ್ಲಿ ದೆಹಲಿಯೇ ಮುಂಚೂಣಿಯಲ್ಲಿ ನಿಲ್ಲಬೇಕು ಎಂದು ನಾನು ಬಯಸುತ್ತೇನೆ. ದೆಹಲಿಯಲ್ಲಿ ಸಾಕಷ್ಟು ಮಂದಿ ಪ್ರಜ್ಞಾವಂತ ನಾಗರಿಕರಿದ್ದಾರೆ. ಎಲ್ಲ ಸ್ಥಳೀಯ ಆಡಳಿತ ಅಂಗಗಳ ಉದ್ದೇಶ ಉತ್ತಮ ಪೌರ ಪ್ರಜ್ಞೆಯನ್ನು ಪ್ರೋತ್ಸಾಹಿಸುವುದು ಮತ್ತು ಅದಕ್ಕೆ ಹೆಚ್ಚಿನ ಉತ್ತೇಜನ ನೀಡುವುದು. ನಗರಪಾಲಿಕೆಯಲ್ಲಿ ಪಕ್ಷ ರಾಜಕೀಯಕ್ಕೆ ಅವಕಾಶ ಕೊಟ್ಟರೆ ಅರ್ಹ ಪೌರರು ಚುನಾವಣೆಗಳಲ್ಲಿ ಆಯ್ಕೆಯಾಗುವುದು ಕಷ್ಟವಾಗುತ್ತದೆ. ಹಾಗಾಗಿ ದೆಹಲಿ ಮಹಾನಗರ ಪಾಲಿಕೆಯು ದೇಶದ ಉಳಿದೆಲ್ಲ ನಗರಪಾಲಿಕೆಗಳಿಗೆ ಒಂದು ಮಾದರಿಯಾಗಿ ನಿಲ್ಲಬೇಕೆಂದು ನಾನು ಬಯಸುತ್ತೇನೆ. ನಮ್ಮ ಕಾಯ್ದೆ ಸಂಪುಟಗಳಲ್ಲಿರುವ ಎಲ್ಲ ನಗರಪಾಲಿಕೆ ಕಾಯ್ದೆಗಳನ್ನು ನಾವು ಪರಿಶೀಲಿಸಿದಾಗ ಮುಂಬೈ ನಗರ ಪಾಲಿಕೆಯ ಕಾಯ್ದೆಗಳು ಅತ್ಯುತ್ತಮವಾದವು ಎಂದು ನಾನು ತೀರ್ಮಾನಿಸಿದೆ. ಹಾಗಾಗಿ ಮುಂಬೈ ನಗರಪಾಲಿಕೆ ಕಾಯ್ದೆಯನ್ನು ಅನುಕರಿಸಲು ಅಥವಾ ಅದೇ ರೀತಿಯ ಕಾಯ್ದೆ ರೂಪಿಸಲು ನಾವು ಮುಂದಾದೆವು. ಮುಂಬೈ ಮಹಾನಗರ ಪಾಲಿಕೆ ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸುತ್ತಿದೆ. ಅದಕ್ಕೆ ಒಂದು ಶತಮಾನದ ಹಿನ್ನೆಲೆಯಿದೆ. ದೆಹಲಿಯು ಹೊಸ ನಗರಪಾಲಿಕೆಯಾಗಿದ್ದು, ಅದು ನಮಗೆ ಉತ್ತಮ ಪರಂಪರೆ ಹಾಕಿಕೊಡಲಿದೆ ಎಂದು ನಾನು ಭಾವಿಸಿದ್ದೇನೆ. ನಮ್ಮಲ್ಲಿ ಅರ್ಹತೆ ಹೊಂದಿದ ಸಾಕಷ್ಟು ಮಂದಿ ಯುವಕರು ಮತ್ತು ಯುವತಿಯರು ಇದ್ದಾರೆ. ಅಂಥವರು ಯಾವುದೇ ಪಕ್ಷಕ್ಕೆ ಸೇರಿದರವಾದರೂ ಅಡ್ಡಿ ಇಲ್ಲ. ಅದೇ ರೀತಿ ಸ್ಥಳೀಯ ಸ್ವಯಮಾಡಳಿತದಲ್ಲಿ ಮಹಿಳೆಯರು ಹೆಚ್ಚು ಹೆಚ್ಚಿನ ಸಂಖ್ಯೆಯಲ್ಲಿ ಭಾಗಿಗಳಾಗಬೇಕು ಎಂಬುದೇ ನನ್ನ ಮಹದಾಸೆಯಾಗಿದೆ. ಅಂತಹವರು ನಗರಪಾಲಿಕೆಯ ಸದಸ್ಯರಾದಾಗ ತಾನಾಗಿಯೇ ಅದರ ಕಾರ್ಯ ಕ್ಷಮತೆ ಹೆಚ್ಚುವುದು. ಈ ದೃಷ್ಟಿಯಿಂದ ದೆಹಲಿ ನಗರಪಾಲಿಕೆಗೆ ಉಜ್ವಲ ಭವಿಷ್ಯವಿದೆ ಎಂದು ನಾನು ಭಾವಿಸಿದ್ದೇನೆ. *

---

* ಅನಂತರ ವಿಧೇಯಕವನ್ನು ಅಂಗೀಕರಿಸಲಾಯಿತು.

## 32. ದೆಹಲಿ ಅಭಿವೃದ್ಧಿ ವಿಧೇಯಕ - 1957 *

ಈ ವಿಧೇಯಕವನ್ನು ಬೆಂಬಲಿಸಿ ಮಾತನಾಡಲು ನನಗೆ ಅವಕಾಶ ಕಲ್ಪಿಸಿಕೊಟ್ಟದ್ದಕ್ಕಾಗಿ ನಾನು ಅತ್ಯಂತ ಸಂತುಷ್ಟಳಾಗಿದ್ದೇನೆ.

ದೆಹಲಿ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಈ ಸದನದ ಮುಂದೆ ಮಂಡಿಸಲು ದೊರೆತಿರುವ ಈ ಅವಕಾಶಕ್ಕಾಗಿ ನಾನು ಸಂತಸ ಪಡುತ್ತೇನೆ. ದೇಶದ ರಾಜಧಾನಿ ದೆಹಲಿಗೆ ಒಂದೇ ಪ್ರಾಧಿಕಾರ ಇರಬೇಕೆಂಬ ಉದ್ದೇಶದಿಂದ ಈ ಖಾಯಂ ಸ್ವರೂಪದ ದೆಹಲಿ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾಯಿತು. ಹಾಗಾಗಿ ಈ ವಿಧೇಯಕವನ್ನು ನಾನು ಸ್ವಾಗತಿಸುತ್ತೇನೆ.

ಹಿಂದಿನ ದೆಹಲಿ ಅಭಿವೃದ್ಧಿ ಮಂಡಳಿಯ ವೈಫಲ್ಯಗಳ ಬಗ್ಗೆ ಬಹಳಷ್ಟನ್ನು ಹೇಳಲಾಗಿದೆ. ಎರಡೂ ಸದನಗಳಲ್ಲಿ ನಾನು ಅದನ್ನು ಸಮರ್ಥಿಸಿಕೊಳ್ಳಬೇಕಾದ ಅನೇಕ ಸಂದರ್ಭಗಳು ಬಂದಿವೆ. ಯಾವುದೇ ಒಂದು ಸಂಸ್ಥೆಯನ್ನು ಅದರ ಪರಿಮಿತಿಗಳ ಅರಿವಿಲ್ಲದೇ ಟೀಕಿಸುವುದು ಸುಲಭ. ಈ ಕಾರಣಕ್ಕಾಗಿ ನಾನು ಹಲವು ಸಲ ಅದರ ಸಮರ್ಥನೆಗೆ ನಿಲ್ಲಬೇಕಾಯಿತು. ಜನರು ಈಗ ಅಸ್ತಿತ್ವದಲ್ಲಿರುವ ಕಾಯ್ದೆಗಳನ್ನು ಉಲ್ಲಂಘಿಸುತ್ತಿರುವ ಕಾರಣದಿಂದ ನಿರೀಕ್ಷಿತ ರೀತಿಯ ಪ್ರಗತಿಯನ್ನು ಸಾಧಿಸಲು ಅದಕ್ಕೆ ಸಾಧ್ಯವಾಗಲಿಲ್ಲ. ಜನರೇ ನಾನಾ ರೀತಿಯಿಂದ ಅದರ ಕೆಲಸ ಕಾರ್ಯಗಳಿಗೆ ಅಡ್ಡಿಯಾಗಿ ನಿಂತರು. ಈ ಕಾರಣದಿಂದಲೇ ನಾನು ಅದನ್ನು ಸಮರ್ಥಿಸುವುದು ಅನಿವಾರ್ಯವಾಯಿತು. ವಾಸ್ತವವಾಗಿ ದೆಹಲಿ ಅಭಿವೃದ್ಧಿ ಮಂಡಳಿಯೊಂದೇ ಲಾಭದ ದೃಷ್ಟಿಯಿಂದ ಕೆಲಸ ಮಾಡಿದ್ದಲ್ಲ. ಅದರಿಂದ ನಿವೇಶನಗಳನ್ನು ಕೊಂಡುಕೊಂಡ ಜನರೂ ಅಲ್ಲಿ ಕಟ್ಟಡಗಳನ್ನು ನಿರ್ಮಿಸದೆ ಬರಿಯ ಲಾಭಗಳಿಸುವ ಉದ್ದೇಶದಿಂದ ಅವುಗಳನ್ನು ಹಾಗೇ ಉಳಿಸಿಕೊಂಡಿದ್ದರು. ವಾಸ್ತವವಾಗಿ ಜನರೇ ಲಾಭ ಬಡುಕರಾಗಿದ್ದಾರೆ. ದೆಹಲಿ ಅಭಿವೃದ್ಧಿ ಮಂಡಳಿ ಲಾಭಗಳಿಸುವ ಉದ್ದೇಶದ ಸಂಸ್ಥೆ ಎಂಬ ಆರೋಪವನ್ನು ನಾನು ಯಾವ ಕಾರಣಕ್ಕೂ ಒಪ್ಪಿಕೊಳ್ಳುವುದಿಲ್ಲ.

ಈ ಪ್ರಾಧಿಕಾರವು ಅಧಿಕಾರಸ್ಥರನ್ನು ಮಾತ್ರವೇ ಒಳಗೊಂಡಿರುವಂತಹುದಲ್ಲ. ನಾವು ಕೆಲವೊಂದು ಸ್ಲೋಗನ್‌ಗಳಿಗೆ ಜೋತು ಬಿದ್ದಿದ್ದೇವೆ. ಎಲ್ಲ ಸರ್ಕಾರಿ ನೌಕರರು, ಅಧಿಕಾರಿ ಶಾಹಿಗಳು ಜನರ ಹಿತಾಸಕ್ತಿಗಳಿಗೆ ವಿರುದ್ಧವಾಗಿಯೇ ಕೆಲಸ ಮಾಡುವವರು ಎಂಬ ಗ್ರಹಿಕೆಯೂ ಅವುಗಳಲ್ಲಿ ಒಂದಾಗಿದೆ. ಆದರೆ ನಾನು ಈ ಆರೋಪವನ್ನು ಖಂಡಿಸುತ್ತೇನೆ. ದೆಹಲಿ ಕೇಂದ್ರಾಡಳಿತ ಪ್ರದೇಶದ ಆಡಳಿತಾಧಿಕಾರಿಗಳು ಈ ಪ್ರಾಧಿಕಾರದ ಪದನಿಮಿತ್ತ ಅಧ್ಯಕ್ಷರಾಗಿರುತ್ತಾರೆ. ಉಪಾಧ್ಯಕ್ಷರನ್ನು ಕೇಂದ್ರ ಸರ್ಕಾರ ನೇಮಿಸಲಿದೆ. ಅದೇ ರೀತಿ ಹಣಕಾಸು ಖಾತೆಯಿಂದ ಒಬ್ಬ ಸದಸ್ಯರು ಇನ್ಸ್ಪೋರ್ವ ಇಂಜಿನಿಯರ್ ಕೂಡಾ ಈ ಪ್ರಾಧಿಕಾರದಲ್ಲಿ

* ಗೃಹ ಖಾತೆಯ ಸಚಿವರಾದ ಶ್ರೀ ಆರ್.ಎನ್.ದಾತಾರ್ ಅವರು ಮಂಡಿಸಿದ ದೆಹಲಿ ಅಭಿವೃದ್ಧಿ ವಿಧೇಯಕ ಮೇಲಿನ ಗೊತ್ತುವಳಿ ಮೇಲಣ ಚರ್ಚೆಯಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತಾ (ರಾಜ್ಯಸಭೆ ಚರ್ಚೆ, ಡಿಸೆಂಬರ್ 20, 1959, ಸಿಸಿ 3503 -4)

ಇರುವರು. ಇವರ ಜೊತೆ ದೆಹಲಿ ನಗರಪಾಲಿಕೆಯ ಇಬ್ಬರು ಸದಸ್ಯರು ಈ ಪ್ರಾಧಿಕಾರದಲ್ಲಿರುತ್ತಾರೆ. ಅವರು ಖಂಡಿತವಾಗಿಯೂ 'ಅಧಿಕಾರ' ಶಾಹಿಗಳಾಗಿರುವುದಿಲ್ಲ. ಅವರೊಂದಿಗೆ ಸಲಹಾ ಸಮಿತಿಯ ಓರ್ವ ಪ್ರತಿನಿಧಿಯೂ ಇರುತ್ತಾರೆ. ಇವರೂ ನೌಕರ ಶಾಹಿಗಳಲ್ಲ. ಈ ಪ್ರತಿನಿಧಿಗಳನ್ನು ಕೇಂದ್ರ ಸರ್ಕಾರ ನಾಮಕರಣ ಮಾಡುವುದಿಲ್ಲ. ಈ ಸಲಹಾ ಸಮಿತಿಯು ತಜ್ಞರನ್ನೇ ಒಳಗೊಂಡಿದ್ದು, ಅದರ ಸದಸ್ಯರು ಪ್ರಾಧಿಕಾರಕ್ಕೆ ಸರಿಯಾದ ಸಲಹೆ ಮತ್ತು ಮಾರ್ಗದರ್ಶನ ನೀಡಲು ಎಲ್ಲ ರೀತಿಯ ಅರ್ಹತೆ ಹೊಂದಿದವರಾಗಿರುತ್ತಾರೆ.

ಯಾವುದೇ ಒಂದು ಆಡಳಿತ ವ್ಯವಸ್ಥೆಯಲ್ಲಿ ಕಾರ್ಯ ನಿರ್ವಾಹಕ ಅಧಿಕಾರಿಗಳೇ ಹೆಚ್ಚಾದರೆ ಯಾವ ಕೆಲಸವೂ ಸುಸೂತ್ರವಾಗಿ ನಡೆಯುವುದಿಲ್ಲ. ಅವರ ಸಂಖ್ಯೆ ಪರಿಮಿತವಾಗಿದ್ದರೆ ಕೆಲಸ ಕಾರ್ಯಗಳು ಹೆಚ್ಚು ಕ್ಷಿಪ್ರವಾಗಿ ನಡೆಯುತ್ತವೆ. ಹಾಗಾಗಿ ಈ ವಿಷಯದಲ್ಲಿ ಮಾನ್ಯ ಸದಸ್ಯರು ವ್ಯಕ್ತಪಡಿಸಿರುವ ಆತಂಕ, ಭೀತಿಗೆ ಯಾವ ಕಾರಣಗಳೂ ಇಲ್ಲ.

ದೆಹಲಿ ಅಭಿವೃದ್ಧಿ ಪ್ರಾಧಿಕಾರವು ಅತ್ಯಂತ ವಿಳಂಬಗತಿಯಿಂದ ಕಾರ್ಯ ನಿರ್ವಹಿಸುತ್ತಿದೆ ಎಂದು ಆರೋಪಿಸಲಾಗಿದೆ. ಅಭಿವೃದ್ಧಿ ಪ್ರಾಧಿಕಾರದ ಕಡೆಯಿಂದ ಆಗಿರುವ ವಿಳಂಬಕ್ಕೆ ಈಗಿರುವ ಕಾಯ್ದೆಗಳನ್ನು ಜನರು ಪಾಲಿಸದಿರುವುದೇ ಕಾರಣವಾಗಿದೆ ಎಂಬುದು ನನ್ನ ಸ್ಪಷ್ಟ ಅಭಿಪ್ರಾಯ. ಜನರು ಅನುಮತಿ ಇಲ್ಲದೆಯೇ ಕಟ್ಟಡಗಳನ್ನು ಕಟ್ಟುತ್ತಾರೆ. ಅಂತಹ ನಿರ್ಮಾಣಗಳು ನಕ್ಷೆಗಳಿಗೆ ಸರಿಯಾಗಿ ಇರುವುದಿಲ್ಲ ಮತ್ತು ಪ್ರಾಧಿಕಾರಕ್ಕೆ ಎಲ್ಲ ರೀತಿಯ ಕಿರುಕುಳವನ್ನು ಅವರು ನೀಡುತ್ತಿದ್ದಾರೆ. ಎಷ್ಟೇ ಬಾರಿ ಎಚ್ಚರಿಕೆ ನೀಡಿದರೂ ಜನರು ಮತ್ತೆ ಮತ್ತೆ ಕಾಯ್ದೆಗಳನ್ನು ಉಲ್ಲಂಘಿಸುತ್ತಲೇ ಇರುತ್ತಾರೆ. ಇದೀಗ ಇಡೀ ದೆಹಲಿಗೆ ಒಂದೇ ಪ್ರಾಧಿಕಾರ ಅಸ್ತಿತ್ವಕ್ಕೆ ಬಂದಿರುವುದು ನನಗೆ ಸಂತಸ ಉಂಟು ಮಾಡಿದೆ. ಆದರೆ ಪ್ರಾಧಿಕಾರಕ್ಕೆ ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸಲು ಅವಕಾಶ ನೀಡದೇ ಹೋದರೆ ದೆಹಲಿ ಅಭಿವೃದ್ಧಿ ಹೊಂದುವುದು ಅಸಾಧ್ಯವಾಗಿದೆ ಎಂಬುದು ನನ್ನ ದೃಢ ಅಭಿಪ್ರಾಯವಾಗಿದೆ. ಹಾಗಾಗಿ ಈ ಪ್ರಾಧಿಕಾರಕ್ಕೆ ಎಲ್ಲ ರೀತಿಯ ಸಹಾಯ ಸಹಕಾರಗಳು ದೊರಕುತ್ತವೆ ಎಂದು ನಾನು ನಂಬಿದ್ದೇನೆ. ದೆಹಲಿಯ ಅಭಿವೃದ್ಧಿ ಸಾಧನೆಯ ನಿಟ್ಟಿನಲ್ಲಿ ಕೆಲಸ ಮಾಡಲು ಹಲವಾರು ಸಂಸ್ಥೆಗಳಿದ್ದವು. ಅವುಗಳ ವೈಫಲ್ಯದಿಂದಾಗಿ ಅವ್ಯವಸ್ಥೆ ಹಾಗೂ ಕೊಳಚೆ ಪ್ರದೇಶಗಳು ನಿರ್ಮಾಣಗೊಂಡವು.

ದೆಹಲಿಯ ಅಭಿವೃದ್ಧಿಗಾಗಿ ಮಾಸ್ಟರ್ ಪ್ಲಾನ್ ರೂಪಿಸಲು ಹತ್ತು ವರ್ಷಗಳು ಬೇಕಾಗಬಹುದೆಂದು ಕೆಲವರು ವ್ಯಂಗ್ಯವಾಡಿದ್ದಾರೆ. ರಾಜಧಾನಿಗಳಿಗಾಗಿ ರೂಪಿಸುವ ಮಾಸ್ಟರ್ ಪ್ಲಾನ್‌ಗಳು ರೂಪುಗೊಳ್ಳಲು ಕಾಲಾವಕಾಶ ಬೇಕಾಗುತ್ತದೆ. ಈಗಾಗಲೇ ಸ್ಥೂಲವಾದ ಯೋಜನೆಯೊಂದನ್ನು ರೂಪಿಸಲಾಗಿದೆ. ಅದನ್ನು ಮಾನ್ಯ ಸದಸ್ಯರು ಮತ್ತೊಮ್ಮೆ ಪರಾಂಬರಿಸಬೇಕೆಂದು ನಾನು ಈಗ ಮತ್ತೆ ಅವರನ್ನು ವಿನಂತಿಸಿಕೊಳ್ಳುತ್ತಿದ್ದೇನೆ. ಇಂತಹ ವಿಷಯಗಳಲ್ಲಿ ತೋರಿಸಬೇಕಾದ ಆಸಕ್ತಿಯನ್ನು ಸದಸ್ಯರು ತೋರಿಸುತ್ತಿಲ್ಲ. ಆದರೆ ಯಾವುದೇ ವಿಧೇಯಕ ಬಂದಾಗ ಇಂತಹ ಟೀಕೆಗಳು ಸಿದ್ಧವಾಗಿರುತ್ತವೆ.

ಈಗಲಾದರೂ ಈ ವಿಧೇಯಕ ಬಂದಿರುವುದಕ್ಕೆ ನಾನು ಹರ್ಷ ಪಡುತ್ತೇನೆ. ಇದರಲ್ಲಿ ವಿವಾದಾಸ್ಪದವಾಗಬಲ್ಲ ಯಾವ ಅಂಶಗಳೂ ಇಲ್ಲ. ಹಾಗಾಗಿ ನಾನು ಈ ವಿಧೇಯಕವನ್ನು ಬೆಂಬಲಿಸುತ್ತಿದ್ದೇನೆ. *

* 1959ರ ಡಿಸೆಂಬರ್ 21ರಂದು ಈ ವಿಧೇಯಕವನ್ನು ಅನುಮೋದಿಸಿ ಅಂಗೀಕರಿಸಲಾಯಿತು.

## 33. ಸರ್ಕಾರಿ ಸ್ಥಳಗಳ (ತೆರವು) ತಿದ್ದುಪಡಿ ವಿಧೇಯಕ *

ಮಾನ್ಯ ಅಧ್ಯಕ್ಷರೇ, ಈ ವಿಷಯಕ್ಕೆ ಸಂಬಂಧಿಸಿದಂತೆ ಅದರ ಎಲ್ಲ ಸೂಕ್ಷ್ಮ ವಿವರಗಳನ್ನು ನೀಡುವುದು ಕಠಿಣವಾದ ಕಾರಣ ನಾನು ಕೆಲವೇ ಕೆಲವು ಮಾತುಗಳಲ್ಲಿ ಈ ವಿಧೇಯಕದ ಸಾಧಕ - ಬಾಧಕಗಳನ್ನು ಸದನದ ಮುಂದಿಡುತ್ತಿದ್ದೇನೆ.

ಮೊಟ್ಟ ಮೊದಲಲ್ಲಿ ನಾನು ಈ ಸಂಬಂಧದಲ್ಲಿ ನಡೆದ ಸಭೆಗಳು ಮತ್ತು ಅಲ್ಲಿ ನೀಡಲಾದ ಆಶ್ವಾಸನೆಗಳ ಬಗೆಗೆ ಪ್ರಸ್ತಾಪಿಸಬಯಸುತ್ತೇನೆ. ಕೊಳಚೆ ನಿರ್ಮೂಲನೆಗೆ ಸಂಬಂಧಿಸಿದಂತೆ ದೆಹಲಿ ಅಭಿವೃದ್ಧಿ ಮಂಡಳಿಯು ದೆಹಲಿ ಪೌರರಿಂದ ಸಲಹೆಗಳನ್ನು ಪಡೆಯುವುದೆಂದು ನೀಡಲಾಗಿರುವ ಆಶ್ವಾಸನೆಗಳತ್ತ ನಾವೀಗ ಗಮನ ಹರಿಸೋಣ. ಕೊಳಚೆ ಪ್ರದೇಶಗಳ ನಿರ್ಮೂಲನೆಗೆ ಮುಂದಾಗುವಾಗ ಕೊಳಚೆ ನಿವಾಸಿಗಳಿಗೆ ಉತ್ತಮ ವಾಸ್ತವ್ಯದ ವಾತಾವರಣ ಕಲ್ಪಿಸಿಕೊಡಲು ನಾವು ಸಮರ್ಥರಾಗಿರಬೇಕು ಮತ್ತು ಒಕ್ಕಲೆಬ್ಬಿಸದ ಮಂದಿಯ ಪುನರ್ ವಸತಿ ಸ್ಥಳಗಳಿಗೆ ಸಾಧ್ಯವಾದಷ್ಟು ಸಮೀಪದಲ್ಲಿ ಉದ್ಯೋಗಕ್ಕೆ ಬದಲಿ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕೆಂಬ ಉದ್ದೇಶದಿಂದ ಇಂತಹ ಆಶ್ವಾಸನೆ ನೀಡಲಾಯಿತು. ರಾಜಧಾನಿಯಲ್ಲ ಎಲ್ಲೆಲ್ಲಿ ಕೊಳಚೆ ಪ್ರದೇಶಗಳಿವೆ ಎಂಬುದನ್ನು ತಿಳಿದುಕೊಂಡಿರುವ ಮತ್ತು ನಿರಾಶ್ರಿತರ ಸಮಸ್ಯೆಗಳ ಪರಿಚಯ ಇರುವ ಪೌರರಿಂದಲೇ ಸಲಹೆಯನ್ನು ಪಡೆದುಕೊಂಡು ಕಾರ್ಯ ನಿರ್ವಹಿಸುವುದು ಈ ಆಶ್ವಾಸನೆಯ ಉದ್ದೇಶವಾಗಿದೆ.

ಈ ಕುರಿತು ಚರ್ಚೆಗಳು ನಡೆದು ಬಹಳಷ್ಟು ದಿನಗಳು ಕಳೆದಿವೆ ಮತ್ತು ಬಹಳಷ್ಟು ಬದಲಾವಣೆಗಳೂ ಆಗಿವೆ ಎಂಬ ಅಂಶವನ್ನು ನಾನು ಈ ಸಂದರ್ಭದಲ್ಲಿ ತಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಇದಾದ ನಂತರದಲ್ಲಿ ದೆಹಲಿ ಅಭಿವೃದ್ಧಿ ಪ್ರಾಧಿಕಾರ ಅಸ್ತಿತ್ವಕ್ಕೆ ಬಂದಿದ್ದು, ಅದಕ್ಕೆ ಸದಸ್ಯರೂ ನಿಯುಕ್ತರಾಗಿದ್ದಾರೆ. ಅವರಲ್ಲಿ ದೆಹಲಿ ರಾಜ್ಯದ ನಗರಾಭಿವೃದ್ಧಿ ಸಚಿವರು ಮತ್ತಿತರರು ಸೇರಿದ್ದಾರೆ. ಅಭಿವೃದ್ಧಿ ಮಂಡಳಿಯು ಈಗ ನಿವೇಶನಗಳನ್ನು ಮಾರಾಟ ಮಾಡುತ್ತಿಲ್ಲ. ಅಭಿವೃದ್ಧಿ ಮಂಡಳಿಯ ಅಧ್ಯಕ್ಷರು ಈ ಪ್ರಾಧಿಕಾರದ ಕಾರ್ಯದರ್ಶಿಯೂ ಆಗಿದ್ದಾರೆ. ಕೊಳಚೆ ನಿರ್ಮೂಲನೆಗೆ ಸಂಬಂಧಿಸಿದ ಎಲ್ಲ ಯೋಜನೆಗಳು ಮತ್ತು ವಸತಿ ನಿರ್ಮಾಣದ ಎಲ್ಲ ಯೋಜನೆಗಳು ಈ ಪ್ರಾಧಿಕಾರದ ಅನುಮತಿಯನ್ನು ಪಡೆದೇ ಮುಂದುವರಿಯಬೇಕಾಗಿವೆ. ಹೀಗಾಗಿ ಹಿಂದಿನ ದಿನಗಳಲ್ಲಿ ಇರುವುದಕ್ಕಿಂತ ಈಗ ಪರಿಸ್ಥಿತಿ ಸಂಪೂರ್ಣ ಭಿನ್ನವಾಗಿದೆ.

ಬದಲಿ ವಸತಿಯ ವ್ಯವಸ್ಥೆಯನ್ನು ಮಾಡಿದ ಹೊರತು ಯಾರನ್ನೂ ಒಕ್ಕಲೆಬ್ಬಿಸುವುದಿಲ್ಲ ಎಂದು ನಾನು ಮತ್ತೊಮ್ಮೆ ಸದಸ್ಯರಿಗೆ ಆಶ್ವಾಸನೆ ನೀಡುತ್ತೇನೆ. ಬದಲಿ ವಸತಿ ವ್ಯವಸ್ಥೆ ಕಲ್ಪಿಸದೆ ನಾವು ಇದುವರೆಗೆ ಯಾರೊಬ್ಬರನ್ನು ಒಕ್ಕಲೆಬ್ಬಿಸಿಲ್ಲ. ಆರೋಗ್ಯ ರಕ್ಷಣೆಯ ಮಾನದಂಡಗಳ

---

* ಕಾಮಗಾರಿ, ವಸತಿ ಮತ್ತು ಸರಬರಾಜು ಸಚಿವ ಶ್ರೀ ಸರ್ದಾರ್ ಸ್ವರ್ಣ ಸಿಂಗ್ ಅವರು ಮಂಡಿಸಿದ ಸರ್ಕಾರಿ ಸ್ಥಳಗಳ (ತೆರವು) ತಿದ್ದುಪಡಿ ವಿಧೇಯಕ ಚರ್ಚೆ ಕಾಲಕ್ಕೆ ಸದಸ್ಯರು ಎತ್ತಿದ ಪ್ರಶ್ನೆಗಳಿಗೆ ಉತ್ತರಿಸುತ್ತಾ (ಲೋಕಸಭೆ ಚರ್ಚೆ, ಆಗಸ್ಟ್ 22, 1956, ಸಿಸಿ 4057 - 4065) ಸ್ಥಳ ಮಾರಾಟ ಮಾಡಿದ ವ್ಯಕ್ತಿಯ ಹೆಸರಿನ ಬಗ್ಗೆ ಶ್ರೀ ಫಿರೋಜ್ ಗಾಂಧಿ ಅವರು ಎತ್ತಿದ ಆಕ್ಷೇಪಕ್ಕೆ ಸ್ಪಷ್ಟೀಕರಣ ನೀಡುತ್ತಾ.

ಪ್ರಕಾರ ಐದು ಸಾವಿರ ಮಂದಿಗೆ ಮಾತ್ರವೇ ಸ್ಥಳಾವಕಾಶ ಇರುವ ಪ್ರದೇಶದಲ್ಲಿ ಹತ್ತು ಸಾವಿರ ಮಂದಿ ವಾಸವಾಗಿದ್ದಾರೆ. ಸಹಜವಾಗಿಯೇ ಇನ್ನುಳಿದ ಐದು ಸಾವಿರ ಮಂದಿಯನ್ನು ಇನ್ನೊಂದು ಸ್ಥಳಕ್ಕೆ ಸ್ಥಳಾಂತರಿಸಬೇಕಾಗುತ್ತದೆ. ಹಾಗಾಗಿ ಬದಲಿ ವ್ಯವಸ್ಥೆಯನ್ನು ಯೋಚಿಸಿಕೊಂಡು ಕೊಳಚೆ ನಿರ್ಮೂಲನಕ್ಕೆ ಮುಂದಾಗಬೇಕಾಗುತ್ತದೆ. ಹಾಗಾಗಿ ಕೊಳಚೆ ಪ್ರದೇಶಗಳನ್ನು ಏಕಾಏಕಿ ನಿರ್ಮೂಲನೆಗೊಳಿಸಲು ಬರುವುದಿಲ್ಲ. ಅದೇ ರೀತಿ ಮಿತಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಜನವಸತಿ ಇರುವಲ್ಲೂ ಅದೇ ಸಮಸ್ಯೆ ಎದುರಾಗುತ್ತದ. ಇಂತಹ ಕೊಳಚೆ ಪ್ರದೇಶಗಳಿಂದ ಜನರನ್ನು ವರ್ಗಾಯಿಸಬೇಕಾದಾಗ ಕೆಲವರಿಗಾದರೂ ತೊಂದರೆ ಆಗಿಯೇ ಆಗುತ್ತದೆ. ಕೊಳಚೆ ಪ್ರದೇಶಗಳಿಂದ ಜನರನ್ನು ಸ್ಥಳಾಂತರಿಸುವಾಗ ಸಾಧ್ಯವಾದಷ್ಟು ಮಟ್ಟಿಗೆ ನಿರ್ವಸಿತರಿಗೆ ಅವರ ದೈನಂದಿನ ಜೀವನೋಪಾಯಕ್ಕೆ ಅವಕಾಶ ಇರುವ ಸ್ಥಳಗಳಲ್ಲೇ ವಸತಿಗಳನ್ನು ನೀಡಲಾಗುವುದು. ದೆಹಲಿ ಅಭಿವೃದ್ಧಿ ಮಂಡಳಿಯು ಈ ಸದನದಲ್ಲಿ ನೀಡಿರುವ ಯಾವೊಂದು ಆಶ್ವಾಸನೆಯನ್ನೂ ಮುರಿದಿಲ್ಲ ಎಂಬ ಅಂಶವನ್ನು ನಾನು ಮತ್ತೊಮ್ಮೆ ಇಲ್ಲಿ ಸ್ಪಷ್ಟಪಡಿಸ ಬಯಸುತ್ತೇನೆ. ದೆಹಲಿ ಅಭಿವೃದ್ಧಿ ಪ್ರಾಧಿಕಾರದಲ್ಲಿ ಮೂವರು ಸಂಸತ್ ಸದಸ್ಯರು ಶ್ರೀಮತಿ ಸುಭದ್ರಾ ಜೋಶಿ, ಶ್ರೀ ನವಲ್ ಪ್ರಭಾಕರ್ ಮತ್ತು ಶ್ರೀ ಕೈಲಾಸ್ ಬಿಹಾರಿ ಲಾಲ್ ಇದ್ದಾರೆ. ಅಂದರೆ ಈ ಸಮಿತಿಯಲ್ಲಿ ಸಂಸತ್ತಿಗೂ ಸೂಕ್ತ ಪ್ರಾತಿನಿಧ್ಯ ದೊರೆತಿದ್ದು ನಾವು ನಿರ್ಧಾರ ತೆಗೆದುಕೊಳ್ಳುವ ಪ್ರತಿಯೊಂದು ಸಂದರ್ಭದಲ್ಲೂ ಅವರು ಸಲಹೆ ನೀಡುತ್ತಾರೆ.

ನನ್ನ ಮಾನ್ಯ ಸಹೋದ್ಯೋಗಿ ಕಾಮಗಾರಿ, ವಸತಿ ಮತ್ತು ನಾಗರಿಕ ಪೂರೈಕೆ ಖಾತೆ ಸಚಿವರು ಹೇಳಿರುವ ಪ್ರತಿಯೊಂದು ಮಾತನ್ನು ನಾನು ಸಮರ್ಥಿಸುತ್ತೇನೆ ಎಂದು ನಾನಿಲ್ಲಿ ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ. ನೀಡಿರುವ ಆಶ್ವಾಸನೆಗಳನ್ನು ಯಾವುದೇ ಕಾರಣಕ್ಕೂ ಮುರಿಯುವ ಉದ್ದೇಶ ನನಗಿಲ್ಲ. ಈ ತನಕವೂ ಯಾವುದೇ ಆಶ್ವಾಸನೆಯನ್ನೂ ಮುರಿದಿಲ್ಲ. ಮುಂದೆಯೂ ಯಾವುದೇ ಆಶ್ವಾಸನೆಯನ್ನು ಮುರಿಯುವುದಿಲ್ಲ. ನಾವೀರ್ವರೂ ಪಂಜಾಬಿಗಳಾಗಿದ್ದು, ನಿರಾಶ್ರೀತರ ವಿಷಯದಲ್ಲಿ ಇತರ ಎಲ್ಲರಿಗಿಂತ ಹೆಚ್ಚಿನ ನೋವು ಆಗುವುದು ನಮ್ಮಿಬ್ಬರಿಗೇ ಎಂಬುದನ್ನು ನಾನು ತಮಗೆ ನೆನಪಿಸಬಯಸುತ್ತೇನೆ. ಯಾವುದೇ ವಿಷಯದಲ್ಲೂ ನಿರಾಶ್ರೀತರಿಗೆ ತೊಂದರೆ ಉಂಟು ಮಾಡುವುದಾಗಲಿ ಅಥವಾ ನೋವು ಉಂಟು ಮಾಡುವುದಾಗಲಿ ನಮ್ಮ ಉದ್ದೇಶವಲ್ಲ. ಅಭಿವೃದ್ಧಿ ಮಂಡಳಿಯು ಸರ್ಕಾರದ ಒಂದು ಶಾಸನಾತ್ಮಕ ಅಂಗವಾಗಿರುವುದರಿಂದ ಅದಕ್ಕೆ ಸರ್ಕಾರಕ್ಕೆ ಇರುವಷ್ಟೇ ಅಧಿಕಾರ ಇರಬೇಕೆಂಬುದು ನನ್ನ ಅಭಿಮತವಾಗಿದೆ. ಅಭಿವೃದ್ಧಿ ಮಂಡಳಿಗೆ ಈ ಅಧಿಕಾರಗಳು ಇಲ್ಲವೆಂದಾದಲ್ಲಿ ಅದು ಪಕ್ಷಪಾತದ ಧೋರಣೆ ಆಗುವುದು. ಹೀಗಾಗಿ ನಾನು ಮತ್ತು ನನ್ನ ಮಾನ್ಯ ಸಹೋದ್ಯೋಗಿ ಸಚಿವರು ನೀಡಿರುವ ಆಶ್ವಾಸನೆಯ ಹಿನ್ನೆಲೆಯಲ್ಲಿ ಸದನವು ಈ ವಿಧೇಯಕವನ್ನು ಅಂಗೀಕರಿಸುವುದೆಂದು ನಂಬಿದ್ದೇನೆ.

ಈ ಪ್ರದೇಶದಲ್ಲಿ ನನಗೆ ಗೊತ್ತಿರುವಂತೆ ನಾವು ಯಾರಿಗೂ ನಿವೇಶನಗಳನ್ನು ಮಾರಾಟ ಮಾಡಿಲ್ಲ. * ಅಭಿವೃದ್ಧಿ ಮಂಡಳಿಯು ಬಾವಾ ಬಚಿತ್ತರ್‌ಸಿಂಗ್ ಅವರಿಗೆ ಈಚೆಗೆ ಯಾವುದೇ

* ಸ್ಥಳ ಮಾರಾಟ ಮಾಡಿದ ವ್ಯಕ್ತಿಯ ಬಗ್ಗೆ ಶ್ರೀ ಫಿರೋಜ್ ಗಾಂಧಿಯವರು ಎತ್ತಿದ ಪ್ರಶ್ನೆಗೆ ಸ್ಪಷ್ಟೀಕರಣ ನೀಡುತ್ತಾ.

ಜಮೀನನ್ನು ಮಾರಾಟ ಮಾಡಿಲ್ಲ. ಇನ್ನು ನಿರ್ಮಾಣಕ್ಕೆ ಸಂಬಂಧಿಸಿದ ವಿಷಯದಲ್ಲಿ ಹೇಳುವುದಾದರೆ ಯಾವುದೇ ಕಟ್ಟಡವನ್ನು ದೆಹಲಿ ಅಭಿವೃದ್ಧಿ ಪ್ರಾಂತೀಯ ಪ್ರಾಧಿಕಾರದ ಗಮನಕ್ಕೆ ತಾರದೇ ನಿರ್ಮಿಸಬಾರದೆಂಬ ಬಗ್ಗೆ ಕಟ್ಟುನಿಟ್ಟಿನ ನಿರ್ಬಂಧಗಳನ್ನು ವಿಧಿಸಲಾಗಿದೆ. ನನಗೆ ನೆನಪಿರುವ ಮಟ್ಟಿಗೆ ಸದಸ್ಯರು ಪ್ರಸ್ತಾಪಿಸಿದ ಜಮೀನು ದೆಹಲಿ ಅಭಿವೃದ್ಧಿ ಮಂಡಲಿಯದೇ ಆಗಿದೆ. ಹಾಗಿರುವ ಪಕ್ಷದಲ್ಲಿ ಇದುವರೆಗೆ ಅಂತಹ ಯಾವುದೇ ಮಾರಾಟ ನಡೆದಿಲ್ಲ.

ನಿರ್ವಸಿತರಲ್ಲಿ ಯಾರೊಬ್ಬರನ್ನು ಹತ್ತು ಮೈಲುಗಳಾಚೆಗೆ ಸ್ಥಳಾಂತರಿಸುವುದಿಲ್ಲ; * ಜೀವನೋಪಾಯಕ್ಕೆ ಯಾವ ಮಾರ್ಗವೂ ಇಲ್ಲದ ಸ್ಥಳಗಳಿಗೆ ಯಾರನ್ನೂ ಸ್ಥಳಾಂತರಿಸುವುದಿಲ್ಲ. ಈ ಪ್ರದೇಶದ ಇಂತಿಂಥಾ ಸ್ಥಳಾ ಇಂತಿಂಥಾ ಉದ್ದೇಶಕ್ಕಾಗಿ ನಿಗದಿಪಡಿಸಲಾಗಿದೆ ಎಂಬುದನ್ನು ಹೇಳಲು ನನ್ನ ಬಳಿ ಯಾವ ಅಂಕಿ ಸಂಖ್ಯೆಗಳೂ ಲಭ್ಯವಿಲ್ಲ. ಇಂತಿಂಥಾ ಜಾಗ ಮೈದಾನಗಳಿಗಾಗಿ, ಉದ್ಯಾನವನಗಳಿಗಾಗಿ ಮೀಸಲಿರಿಸಲಾಗಿದೆ ಎಂಬುದನ್ನು ನಿಖರವಾಗಿ ಸೂಚಿಸುವ ಯಾವ ಅಂಕಿ ಅಂಶಗಳೂ ನನ್ನ ಬಳಿ ಇಲ್ಲ. ಈಗ ಅಲ್ಲಿರುವ ಎಲ್ಲರೂ ತಮಗಾಗಿ ಕಟ್ಟಿಕೊಂಡಿರುವ ಗುಡಿಸಲುಗಳು ಅನಧಿಕೃತವಾದವುಗಳೇ ಆಗಿವೆ. ಈ ವಿಷಯದಲ್ಲಿ ಸಂಬಂಧಪಟ್ಟವರು ವಿವರಣೆ ನೀಡಬೇಕೆಂದು ನಾನು ಕೇಳಿದ್ದೇನೆ. ನೀವು ಈ ಪ್ರಕರಣದಲ್ಲಿ ವಿಶೇಷ ಆಸಕ್ತಿ ಹೊಂದಿರುವುದರಿಂದ ನಾನು ಈ ವಿನಂತಿಯನ್ನು ಮಾಡಿಕೊಳ್ಳುತ್ತಿದ್ದೇನೆ. ಅಲ್ಲಿರುವ ಎಲ್ಲ ನಿರ್ಮಾಣಗಳು ಅನಧಿಕೃತವೇ ಆಗಿವೆ. ಆದರೆ ನಾವು ಅಂಥವರ ವಿರುದ್ಧ ಯಾವುದೇ ಕ್ರಮವನ್ನು ಕೈಗೊಂಡಿಲ್ಲ. ಅಲ್ಲಿಂದ ಯಾರನ್ನು ಸ್ಥಳಾಂತರಿಸಲೂ ಇಲ್ಲ. ಈ ವಸತಿಗಳು ಸ್ಮಶಾನದ ಬಳಿ ಇವೆ. ಸ್ಮಶಾನವು ಒಂದು ಪವಿತ್ರ ಸ್ಥಳವಾಗಿದ್ದು, ಈ ಮಾದರಿಯ ಜೋಪಡಿಗಳು ಅಥವಾ ಕಟ್ಟಡಗಳು ಅಲ್ಲಿರಬಾರದು. ಸ್ಮಶಾನದ ಆಸುಪಾಸಿನಲ್ಲಿ ಬಯಲು ಪ್ರದೇಶ ಇರಬೇಕು. ಈ ವಿಷಯದಲ್ಲಿ ನಾನು ಮತ್ತೊಮ್ಮೆ ಎಲ್ಲ ವಿವರಗಳನ್ನು ತಮ್ಮ ಮುಂದಿಡಲು ಸಿದ್ಧಳಿದ್ದೇನೆ. ಈ ಸಂಬಂಧದಲ್ಲಿ ಸ್ವತಃ ನಿರಾಶ್ರಿತರನ್ನು ಅಥವಾ ಅಲ್ಲಿಗೆ ಬರಲು ಸಿದ್ಧರಿರುವ ಸಂಸತ್ ಸದಸ್ಯರಲ್ಲಿ ಕೆಲವರನ್ನು ನನ್ನ ಬಳಿಗೆ ಬಂದು ಈ ಸಮಸ್ಯೆಯನ್ನು ಬಗೆಹರಿಸುವ ನಿಟ್ಟಿನಲ್ಲಿ ತಮ್ಮ ಸಲಹೆ - ಸೂಚನೆಗಳನ್ನು ನೀಡುವಂತೆ ಕೇಳಿಕೊಳ್ಳವುದಾಗಿ ಈ ಸಂದರ್ಭದಲ್ಲಿ ಮಾನ್ಯ ಸದಸ್ಯರಿಗೆ ಭರವಸೆ ನೀಡುತ್ತೇನೆ. ಒಟ್ಟಿನಲ್ಲಿ ಆ ಜಮೀನು ಮಾರಾಟವಾಗದಂತೆ ನಾನು ನೋಡಿಕೊಳ್ಳುತ್ತೇನೆ.

ಎಲ್ಲೇ ಆಗಲಿ, ಯಾವುದೇ ಆಗಲಿ ಯಾರಿಗೆ ಜಮೀನು ಮಾರಾಟವಾಗಿದ್ದರೆ ಮತ್ತು ಅಂತಹ ಸ್ಥಳಗಳಲ್ಲಿ ಶ್ರೀಮಂತರು ದೊಡ್ಡ ದೊಡ್ಡ ಭವನಗಳನ್ನು ನಿರ್ಮಿಸುತ್ತಾರೆಂದಾದರೆ ನಾನು ಅದಕ್ಕೆ ಖಂಡಿತವಾಗಿಯೂ ಅವಕಾಶ ನೀಡುವುದಿಲ್ಲ ಎಂದು ನನ್ನ ಸನ್ಮಾನ್ಯ ಮಿತ್ರರಾದ ಶ್ರೀ ಫಿರೋಜ್ ಗಾಂಧಿಯವರಿಗೆ ನಾನು ಭರವಸೆ ನೀಡಬಯಸುತ್ತೇನೇ. ** ಇಂತಹ ಅವಾಂತರಗಳು

* ಜನರನ್ನು ನಗರದಿಂದ ಹದಿನೈದು ಮೈಲು ಹೊರಕ್ಕೆ ಕಳುಹಿಸಲಾಗುತ್ತಿದೆ ಎಂಬ ಬಗ್ಗೆ ಶ್ರೀ ಫಿರೋಜ್ ಗಾಂಧಿಯವರು ಎತ್ತಿದ ಪ್ರಶ್ನೆಗೆ ಉತ್ತರಿಸುತ್ತಾ.

** ಈಗ ವಾಸ್ತವ್ಯ ಹೂಡಿರುವ ಸ್ಥಳದಿಂದ ಜನರನ್ನು ಸ್ಥಳಾಂತರಿಸುವುದಾದಲ್ಲಿ ಒಂದು ಅಥವಾ ಎರಡು ಮೈಲುಗಳ ಒಳಗೆ ಮತ್ತು ಎರಡು ಮೈಲು ಮೀರದಂತೆ ವಸತಿಯನ್ನು ಕಲ್ಪಿಸಿಕೊಡುವ ಬಗ್ಗೆ ಆಶ್ವಾಸನೆ ನೀಡಬೇಕೆಂದು ಕೋರಿ ಶ್ರೀ ಫಿರೋಜ್ ಗಾಂಧಿಯವರು ಕೇಳಿದ ಪ್ರಶ್ನೆಗೆ ಉತ್ತರಿಸುತ್ತಾ.

ನಡೆದಿದ್ದರೆ ಖಂಡಿತವಾಗಿಯೂ ನಾನು ಅದನ್ನು ಪರಿಶೀಲಿಸುತ್ತೇನೆ. ಅಗತ್ಯ ಬಿದ್ದಲ್ಲಿ ಅದನ್ನು ಮಾರಾಟ ಮಾಡಿದ ಬೆಲೆಗೆ ಸ್ವಾಧೀನಪಡಿಸಿಕೊಳ್ಳುತ್ತೇವೆ ಮತ್ತು ಯಾವ ಕಾರಣಕ್ಕೂ ಬಡವರನ್ನು ದಂಡನೆಗೆ ಒಳಗಾಗಲು ಬಿಡುವುದಿಲ್ಲ. ನಾನು ಈಗಾಗಲೇ ಹೇಳಿರುವಂತೆ ಯಾವುದೇ ಜಮೀನನ್ನು ಶ್ರೀಮಂತರಿಗೆ ಮಾರಾಟ ಮಾಡಿಲ್ಲ ಎಂಬುದನ್ನೂ ದೃಢೀಕರಿಸುವಂತೆ ಸಂಬಂಧಪಟ್ಟವರನ್ನು ಕೇಳುತ್ತೇನೆ. ಈ ಮೊದಲು ನಿವೇಶನಗಳನ್ನು ಮಾರಾಟ ಮಾಡಿದ ಸ್ಥಳಗಳಲ್ಲಿ ಕೂಡಾ (ಡಿ.ಡಿ.ಪಿ.ಎ.ಯ ಅಧಿಕಾರ ವ್ಯಾಪ್ತಿಯಲ್ಲಿ) ಕಟ್ಟಡ ನಿರ್ಮಾಣ ಕಾರ್ಯವನ್ನು ನಿಲ್ಲಿಸಲಾಗಿದೆ. ಮೈದಾನದ ನಿರ್ಮಾಣದ ಉದ್ದೇಶಕ್ಕಾಗಿ ಮೀಸಲಿಟ್ಟ ಜಮೀನಿನಲ್ಲಿ ಯಾವುದೇ ಕಟ್ಟಡ ಏಳದಂತೆ ತಡೆ ಹಿಡಿಯುವ ಸಲುವಾಗಿ ಈ ಕ್ರಮ ಕೈಗೊಳ್ಳಲಾಗುವುದು. ಒಂದು ವೇಳೆ ಶ್ರೀಮಂತರು ಆ ಜಾಗವನ್ನು ತೆಗೆದುಕೊಂಡಿದ್ದರೆ ಈ ವಿಚಾರವನ್ನು ಸರ್ಕಾರ ಪರಿಶೀಲಿಸುವುದು. ಈ ಆಶ್ವಾಸನೆಯನ್ನು ನಾನು ಈ ಸಂದರ್ಭದಲ್ಲಿ ನೀಡ ಬಯಸುತ್ತೇನೆ.

ಸ್ಥಳಾಂತರಗೊಳಿಸಿದ ಜನರಿಗೆ ಒಂದೆರಡು ಮೈಲುಗಳ ಅಂತರದಲ್ಲೇ ವಸತಿ ಕಲ್ಪಿಸಿಕೊಡುವುದು ಎಲ್ಲ ಸಂದರ್ಭಗಳಲ್ಲೂ ಸಾಧ್ಯವಾಗದು. ಆದರೆ ಸ್ಥಳಾಂತರಗೊಳಿಸಲು ಉದ್ದೇಶಿಸಿದ ಸ್ಥಳಗಳಲ್ಲಿ ಜೀವನೋಪಾಯಕ್ಕೆ ಯಾವುದೇ ಅವಕಾಶ ಇಲ್ಲ ಎಂದಾದಲ್ಲಿ ಅಂಥವರನ್ನು ಅಲ್ಲಿಗೆ ಸ್ಥಳಾಂತರಿಸುವ ಪ್ರಶ್ನೆಯೇ ಇಲ್ಲ. ಒಂದು ವೇಳೆ ಐದು ಮೈಲುಗಳ ದೂರಕ್ಕೆ ಅವರನ್ನು ವರ್ಗಾಯಿಸಿದಲ್ಲಿ ಅಲ್ಲಿ ಅವರಿಗೆ ಜೀವನೋಪಾಯಕ್ಕೆ ಏನಾದರೂ ಮಾರ್ಗಗಳಿವೆಯೋ ಎಂಬುದನ್ನು ಖಚಿತ ಪಡಿಸಿಕೊಂಡೇ ನಾನು ಮುಂದುವರಿಯುತ್ತೇನೆ. ಹಾಗಾಗಿ ಈ ವಿಷಯದಲ್ಲಿ ಯಾರೂ ಆಕ್ಷೇಪ ಎತ್ತಲು ಎಡೆ ಇಲ್ಲ. ಆದರೆ ಎಲ್ಲ ಸಂದರ್ಭಗಳಲ್ಲೂ ಒಂದೆರಡು ಮೈಲುಗಳ ವ್ಯಾಪ್ತಿಯಲ್ಲೇ ವಸತಿ ಕಲ್ಪಿಸಿಕೊಡಲು ಸಾಧ್ಯವಾಗದು. ನಾನು ಬಹುತೇಕ ವಾರಕ್ಕೆ ಒಂದು ಸಲ ದೆಹಲಿಯ ಉದ್ದಗಲಕ್ಕೆ ಅಡ್ಡಾಡಿ ಜನರ ವಾಸ್ತವ್ಯದ ಪರಿಸ್ಥಿತಿಯನ್ನು ಸ್ವತಃ ಪರಾಮರ್ಶಿಸುತ್ತೇನೆ. ಬಹುಶಃ ದೆಹಲಿಯನ್ನು ಸಮಗ್ರವಾಗಿ ತಿಳಿದವರು ನನ್ನಂತೆ ಬೇರೊಬ್ಬರಿಲ್ಲ. ನಾನು ದೆಹಲಿ ನಗರದಲ್ಲಿನ ಅವ್ಯವಸ್ಥೆಯನ್ನು ನಿವಾರಿಸುವ ಸಲುವಾಗಿ ಶ್ರಮಿಸುವವಳೇ ಹೊರತು ಇನ್ನಷ್ಟು ಅವ್ಯವಸ್ಥೆಗೆ ಎಷ್ಟು ಮಾತ್ರವೂ ದಾರಿ ಮಾಡಿಕೊಡುವವಳಲ್ಲ. ದೆಹಲಿ ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಮಧ್ಯಂತರ ಯೋಜನೆಯೊಂದನ್ನು ರೂಪಿಸಲಾಗಿದೆ. ಇದನ್ನು ಸಂಸತ್ ಸದಸ್ಯರು ಸ್ವತಃ ಪರಿಶೀಲಿಸಬಹುದು. ಮುಂದಿನ ದಿನಗಳಲ್ಲಿ ದೆಹಲಿ ಯಾವ ರೀತಿ ಅಭಿವೃದ್ಧಿ ಹೊಂದಲಿದೆ, ನಗರದಲ್ಲಿ ಎಷ್ಟು ಕಡೆ ಬಯಲು ಪ್ರದೇಶಗಳನ್ನು ಬಿಡಲಾಗುವುದು, ಕೊಳಚೆ ಪ್ರದೇಶಗಳ ನಿರ್ಮೂಲನೆಗಾಗಿ ಏನೇನು ಕ್ರಮಗಳನ್ನು ಮತ್ತು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ ಎಂಬುದನ್ನು ತಿಳಿದುಕೊಳ್ಳಲು ಇದು ಅವರಿಗೆ ಸಹಾಯಕವಾಗಲಿದೆ.

ಈ ಸಂಬಂಧದಲ್ಲಿ ನಾನು ಎರಡು ನಿದರ್ಶನಗಳನ್ನು ನೀಡುತ್ತಿದ್ದೇನೆ. ದೆಹಲಿಯ ಅಜ್ಮೀರಿ ಗೇಟ್ ಪ್ರದೇಶದಲ್ಲಿನ ಕೊಳಗೇರಿಗಳಿಂದ ಒಕ್ಕಲೆಬ್ಬಿಸಿದವರನ್ನು ಅಂಧ ಮೊಘಲ್ ಮತ್ತು ಕರೋಲ್ ಬಾಗ್‌ಗಳಿಗ ಸ್ಥಳಾಂತರಿಸಲಾಗಿದೆ. ಅವರು ವಾಸವಾಗಿರುವ ಸ್ಥಳಗಳನ್ನು ನೀವು ನೋಡಿದರೆ ಅವರು ಮೊದಲಿಗಿಂತ ಈಗ ಎಷ್ಟು ಸುಖಿಗಳಾಗಿದ್ದಾರೆ ಎಂಬುದು ನಿಮಗೇ ತಿಳಿಯುವುದು. ಇನ್ನೊಂದು ಯೋಜನೆಯಲ್ಲಿ ಕೊಳಗೇರಿ ನಿವಾಸಿಗಳನ್ನು ತಿಲ್‌ಮಿಲಾ ತೆಹರ್‌ಪುರ್‌ಗೆ ಸ್ಥಳಾಂತರಿಸಲಾಗಿದೆ. ಅಲ್ಲಿ ವಸತಿ ಹೀನರಿಗಾಗಿ ಹೆಚ್ಚುವರಿ ವಸತಿಗಳನ್ನು ನಿರ್ಮಿಸಲಾಯಿತು. ಆ ಸ್ಥಳಕ್ಕೆ ಸಮೀಪದಲ್ಲೇ ಅವರಿಗೆ ಉದ್ಯೋಗ ಅವಕಾಶಗಳು ಲಭಿಸುವಂತೆ ವ್ಯವಸ್ಥೆ ಮಾಡಿದ್ದೇವೆ.

## ಆಹಾರ ನಿರ್ವಹಣೆ

## 34. ಆಹಾರ ಕಲಬೆರಕೆ ವಿಧೇಯಕ *

ಈ ಪ್ರಸ್ತಾಪವನ್ನು ಸದನದ ಮುಂದೆ ಮಂಡಿಸುವ ಸಂದರ್ಭದಲ್ಲಿ ಕೆಲವು ಮಾತುಗಳನ್ನು ಆಡಲು ನನಗೆ ಅವಕಾಶ ನೀಡಬೇಕೆಂದು ವಿನಂತಿಸುತ್ತೇನೆ. ಈ ವಿಧೇಯಕದ ಮಂಡನೆಯನ್ನು ಸ್ವಾಗತಿಸದಿರುವ ಸದಸ್ಯರಾರೂ ಈ ಸದನದಲ್ಲಿ ಇಲ್ಲವೆಂದು ನಾನು ನಂಬಿದ್ದೇನೆ. ಈ ವಿಧೇಯಕವನ್ನು ಇದಕ್ಕೆ ಮೊದಲು ಏಕೆ ತರಲಾಗಲಿಲ್ಲ ಎಂದು ಕಳೆದ ಅಧಿವೇಶನದಲ್ಲೂ ಮತ್ತು ಅದಕ್ಕೆ ಮುಂಚೆ ಕೂಡಾ ಹಲವು ಸಲ ನನ್ನನ್ನು ಪ್ರಶ್ನಿಸಲಾಗಿದೆ. ಆಹಾರ ಪದಾರ್ಥಗಳು ಮತ್ತು ಇತರ ವಸ್ತುಗಳ ಕಲಬೆರಕೆ ಉಭಯ ಸಾಮಾನ್ಯ ಯಾದಿಗೆ ಸೇರುವವರೆಗೆ ನಾನು ಅಂತಹ ಕ್ರಮಗಳನ್ನು ಕೈಗೊಳ್ಳುವುದು ಸಾಧ್ಯವಿರಲಿಲ್ಲ. ಆದರೆ ಅಂತಹ ಸಂದರ್ಭ ಒದಗಿಬಂದ ತಕ್ಷಣದಲ್ಲೇ ನಾನು ಇಂತಹ ವಿಧೇಯಕವನ್ನು ಸದನದ ಮುಂದಿಡಲು ಯೋಚಿಸಿ ಅದರ ಕರಡನ್ನು ಎಲ್ಲ ರಾಜ್ಯ ಸರ್ಕಾರಗಳಿಗೂ ರವಾನಿಸಿ, ಅವರ ಅಭಿಪ್ರಾಯ ತಿಳಿಸುವಂತೆ ಸೂಚಿಸಿದೆ. ಆಹಾರ ಕಲಬೆರಕೆ ವಿರುದ್ಧದ ಕಾಯ್ದೆಗಳು ಪಾರ್ಟ್ 'ಎ' ಶ್ರೇಣಿಯಲ್ಲಿ ಬರುವ ಎಲ್ಲ ರಾಜ್ಯಗಳಲ್ಲಿ ಮತ್ತು ಪಾರ್ಟ್ 'ಬಿ' ಶ್ರೇಣಿಗೆ ಸೇರಿದ ಕೆಲವು ರಾಜ್ಯಗಳಲ್ಲಿ ಮತ್ತು ಪಾರ್ಟ್ 'ಸಿ' ಶ್ರೇಣಿಗೆ ಬರುವ ಕೆಲವು ರಾಜ್ಯಗಳಲ್ಲಿ ಅಸ್ತಿತ್ವದಲ್ಲಿದೆ ಎಂಬುದು ಸದನದ ಸದಸ್ಯರೆಲ್ಲರಿಗೂ ಗೊತ್ತಿದೆ. ಆದರೆ ಅವುಗಳಲ್ಲಿ ಏಕರೂಪತೆ ಇಲ್ಲ. ಹೀಗಾಗಿ ಆಹಾರ ಕಲಬೆರಕೆ ತೀರಾ ಅಪಾಯಕಾರಿ ಮಟ್ಟಕ್ಕೆ ಬೆಳೆದಿರುವ ಇಂದಿನ ಸನ್ನಿವೇಶದಲ್ಲಿ ಇದನ್ನು ನಿಯಂತ್ರಿಸಲು ಏನನ್ನಾದರೂ ಮಾಡುವುದು ಅತ್ಯಾವಶ್ಯಕವಾಗಿದೆ ಎಂದು ನಾನು ಭಾವಿಸಿದ್ದೇನೆ. ಹಾಗಾಗಿ ಈ ನಿಟ್ಟಿನಲ್ಲಿ ಶಾಸನವೊಂದನ್ನು ರೂಪಿಸುವುದು ಕೇಂದ್ರ ಸರ್ಕಾರದ ಪಾಲಿಗೂ ಅತ್ಯಾವಶ್ಯಕವಾಗಿ ಪರಿಣಮಿಸಿದೆಯೆಂದೂ ನಾನು ಭಾವಿಸಿದ್ದೇನೆ.

ಈ ಎಲ್ಲ ರಾಜ್ಯಗಳಿಂದಲೂ ಈ ವಿಷಯದಲ್ಲಿ ನಮಗೆ ಅಭಿಪ್ರಾಯಗಳು ಬಂದಿವೆ. ಅವು ನೀಡಿರುವ ಎಲ್ಲ ಉಪಯುಕ್ತ ಸಲಹೆಗಳನ್ನು ಈ ವಿಧೇಯಕದಲ್ಲಿ ಅಳವಡಿಸಿಕೊಳ್ಳಲಾಗಿದೆ. ಆಹಾರ ಕಲಬೆರಕೆ ನಿಯಂತ್ರಣಕ್ಕೆ ಸಂಬಂಧಿಸಿದ ಕಾಯ್ದೆಗಳಿರುವಾಗ ಅದನ್ನು ನಿಯಂತ್ರಿಸಲು ಸಾಧ್ಯವಾಗದಿರುವುದಕ್ಕೆ ಸರ್ಕಾರಿ ಯಂತ್ರದ ಅಸಾಮರ್ಥ್ಯವೂ ಕಾರಣ. ಆಡಳಿತ ಯಂತ್ರ ಅಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿರುವುದೊಂದೇ ಅಲ್ಲ, ಪ್ರಾಮಾಣಿಕತೆ ಮತ್ತು ಸಮನ್ವಯದ ಕೊರತೆಯೂ ಅದಕ್ಕೆ ಕಾರಣವಾಗಿದೆ ಎಂಬುದನ್ನು ನಾನು ಅತ್ಯಂತ ವಿಷಾದದಿಂದ ಹೇಳಬೇಕಾಗುತ್ತದೆ. ಹಾಗಾಗಿ ನಾವು ಯಾವುದೇ ಕಾನೂನನ್ನು ಅಂಗೀಕರಿಸುವುದಕ್ಕೆ ಮೊದಲು ರಾಜ್ಯ ಸರ್ಕಾರಗಳು ತಮ್ಮ ಆಡಳಿತ ಯಂತ್ರದ ಲೋಪ ದೋಷಗಳನ್ನು ಸರಿಪಡಿಸಿಕೊಳ್ಳಬೇಕು. ಆಡಳಿತ ಯಂತ್ರದಲ್ಲಿ ಕ್ಷಮತೆ ಮತ್ತು ಪ್ರಾಮಾಣಿಕತೆಗಳೂ ಅತ್ಯಗತ್ಯ. ನನ್ನ ಕೆಲ ಮಿತ್ರರು ಈ ವಿಧೇಯಕವನ್ನು ಸಾರ್ವಜನಿಕರುಗಳ ಮುಂದಿಟ್ಟು ಅವರ ಅಭಿಪ್ರಾಯವನ್ನು ಪಡೆಯಬೇಕೆಂದು

---

* ಆಹಾರ ಕಲಬೆರಕೆ ತಡೆಗೆ ಅವಕಾಶ ಕಲ್ಪಿಸುವ ವಿಧೇಯಕವನ್ನು ಆಯ್ಕೆ ಸಮಿತಿಯ ಪರಿಶೀಲನೆಗೆ ಕಳುಹಿಸುವಂತೆ ರಾಷ್ಟ್ರಪತಿಗಳ ಶಿಫಾರಸಿನ ಮೇರೆಗೆ ನಿರ್ಣಯ ಕುರಿತು ಮಾತನಾಡುತ್ತಾ (ಲೋಕಸಭೆ ಚರ್ಚೆ, ನವೆಂಬರ್ 26, 1952, ಸಿಸಿ 1225 - 28 ಮತ್ತು 1292 - 93).

ಸೂಚಿಸಿದ್ದಾರೆ. ಆದರೆ ನಾನು ಈ ವಿಷಯದಲ್ಲಿ ಎಲ್ಲ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿರುವುದರಿಂದ ಮತ್ತು ಈ ಸಮಾಲೋಚನೆ ಬಹಳ ದೀರ್ಘಕಾಲದಿಂದ ನಡೆಯುತ್ತಿರುವುದರಿಂದ ಇನ್ನು ಹೆಚ್ಚಿನ ಚರ್ಚೆ ಅಗತ್ಯವಿಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಈ ವಿಷಯದಲ್ಲಿ ರಾಜ್ಯಗಳ ಅನುಭವವನ್ನು ಪಡೆಯಲು ಮತ್ತು ಅವರಿಂದ ವಿವೇಚನಾ ಪೂರ್ಣವಾದ ಅಭಿಪ್ರಾಯಗಳನ್ನು ಪಡೆಯುವ ಉದ್ದೇಶದಿಂದಲೇ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚನೆ ನಡೆಸಲಾಗಿತ್ತು. ಈ ವಿಧೇಯಕದ ಕರಡನ್ನು ಸಿದ್ಧಪಡಿಸುವ ಹಂತದಲ್ಲೂ ಮತ್ತೊಮ್ಮೆ ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ನಾವು ಅವುಗಳ ಜೊತೆ ಸಮಾಲೋಚಿಸಿದ್ದೇವೆ. ಈ ವಿಧೇಯಕದ ಪ್ರತಿಗಳನ್ನು ರಾಜ್ಯ ಸರ್ಕಾರಗಳಿಗೆ ಕಳುಹಿಸಿ ಡಿಸೆಂಬರ್ 22ರೊಳಗಾಗಿ ತಮ್ಮ ಅಭಿಪ್ರಾಯಗಳನ್ನು ನೀಡುವಂತೆ ಕೇಳಿಕೊಳ್ಳಲಾಗಿದೆ. ಆಯ್ಕೆ ಸಮಿತಿಗೆ ಹೆಚ್ಚಿನ ಕಾಲಾವಕಾಶ ಇರುವಂತೆ ಮತ್ತು ಅದು ಸಮಗ್ರ ಪರಾಮರ್ಶೆ ನಡೆಸಿ ಸಲಹೆ ಸೂಚನೆಗಳನ್ನು ನೀಡುವಂತೆ ಈ ಕ್ರಮ ಕೈಗೊಳ್ಳಲಾಗಿದೆ.

ಈ ಸಂಬಂಧದಲ್ಲಿ ನೀಡಲಾಗಿರುವ ಅ ್ಯಂತ ಪ್ರಮುಖ ಸೂಚನೆಗಳಲ್ಲಿ ಮೊತ್ತ ಮೊದಲನೆಯದೆಂದರೆ ಕೇಂದ್ರ ಆಹಾರ ಪ್ರಯೋಗಾಲಯವೊಂದನ್ನು ಸ್ಥಾಪಿಸಬೇಕೆಂಬುದು. ಈ ಕ್ರಮವನ್ನು ಸದನದ ಸದಸ್ಯರೆಲ್ಲರೂ ಸ್ವಾಗತಿಸುವರೆಂದು ನಾನು ನಂಬಿದ್ದೇನೆ. ಈಗಿರುವ ಕಾಯ್ದೆಯಂತೆ ಯಾವುದೇ ರಾಜ್ಯದ ಸಾರ್ವಜನಿಕ ಆಹಾರ ವಿಶ್ಲೇಷಕರು ಕಳುಹಿಸಿರುವ ಆಹಾರ ಪದಾರ್ಥದ ವಿಶ್ಲೇಷಣೆ ವರದಿ, ಆಹಾರ ತಪಾಸಣಾಧಿಕಾರಿ ಅಥವಾ ಮಾರಾಟಗಾರನಿಗೆ ಸಮಾಧಾನಕರವಾಗಿರದಿದ್ದಲ್ಲಿ ಅದನ್ನು ವಿಶ್ಲೇಷಣೆಗಾಗಿ ಮೇಲಾಧಿಕಾರಿಗಳಿಗೆ ಕಳುಹಿಸಲು ಈಗ ಅವಕಾಶವಿಲ್ಲ. ಈ ದೃಷ್ಟಿಯಿಂದ ಈಗ ಉದ್ದೇಶಿಸಿರುವ ಕೇಂದ್ರ ಆಹಾರ ಪ್ರಯೋಗಾಲಯವು ಹೆಚ್ಚಿನ ಮಹತ್ವ ಪಡೆಯಲಿದೆ. ಈ ಪ್ರಯೋಗಾಲಯವು, ಸಮಾಧಾನಕರವಾಗಿ ವಿಶ್ಲೇಷಿಸದಿರುವ ಆಹಾರ ಪದಾರ್ಥಗಳನ್ನು ಮರು ವಿಶ್ಲೇಷಣೆಗೆ ಒಳಪಡಿಸುವುದಷ್ಟೇ ಅಲ್ಲದೆ ಕಸ್ಟಮ್ಸ್ ಕಲೆಕ್ಟರ್‌ಗಳು ಮತ್ತು ಕೇಂದ್ರ ಸರ್ಕಾರದಿಂದ ಮನ್ನಣೆ ಪಡೆದಿರುವ ಇತರ ಅಧಿಕಾರಿಗಳು ಬಂದರುಗಳಿಂದ ಕಳುಹಿಸಿಕೊಡುವ ಆಮದು ಆಹಾರ ಪದಾರ್ಥಗಳ ಮಾದರಿಗಳನ್ನು ವಿಶ್ಲೇಷಿಸಲಿದೆ. ಆಹಾರ ಪದಾರ್ಥಗಳ ಗುಣಮಟ್ಟವನ್ನು ನಿಷ್ಕರ್ಷಿಸುವ ಉದ್ದೇಶದಿಂದ ಆಹಾರ ವಸ್ತುಗಳ ತಪಾಸಣೆಯನ್ನು ಅದು ನಡೆಸುತ್ತದೆ. ಅದು ಅತ್ಯಂತ ಪ್ರಮುಖ ಕಾರ್ಯಭಾರವಾಗಿದೆ. ಅವು ಸಾರ್ವಜನಿಕ ಉದ್ಯಮ ಸಂಸ್ಥೆಗಳ ಪ್ರಯೋಗಾಲಯಗಳೊಂದಿಗೂ ನಿಕಟ ಸಂಯೋಗದೊಂದಿಗೆ ಅನೇಕ ಪರಿಶೋಧನೆಗಳನ್ನು ನಡೆಸುತ್ತದೆ. ಬೇರೆ ಬೇರೆ ಆಹಾರ ಪದಾರ್ಥಗಳ ಗುಣಮಟ್ಟವನ್ನು ನಿಷ್ಕರ್ಷಿಸುವ ಮತ್ತು ಅವುಗಳ ಗುಣಮಟ್ಟವನ್ನು ಕಾಯುವ ಸಲುವಾಗಿ ಆಹಾರ ಪದಾರ್ಥಗಳ ವಿಶ್ಲೇಷಣೆಯಲ್ಲಿ ಏಕರೂಪದ ವಿಧಾನಗಳನ್ನು ಕಾಯ್ದುಕೊಳ್ಳುವ ಹೊಣೆಗಾರಿಕೆಯನ್ನು ಅದು ನಿರ್ವಹಿಸುತ್ತದೆ. ಆಹಾರ ಪದಾರ್ಥಗಳ ವಿಶ್ಲೇಷಣೆಯ ಮಾನದಂಡಗಳನ್ನು ಮತ್ತು ಅವುಗಳಲ್ಲಿ ಇರಬಹುದಾದ ತಾರತಮ್ಯವನ್ನು ಇದೀಗ ನೇಮಕಗೊಳ್ಳಲಿರುವ ಕೇಂದ್ರ ಸಮಿತಿಯು ನಿರ್ಧರಿಸುವುದು. ಅದೇ ರೀತಿ ರಾಜ್ಯ ಸರ್ಕಾರಗಳು ರಾಜ್ಯ ಮಟ್ಟದಲ್ಲಿ ಇಂತಹ ಸಮಿತಿಗಳನ್ನು ರಚಿಸಿಕೊಳ್ಳುವವು. ಹೀಗೆ ಕೇಂದ್ರ ಆಹಾರ ಪ್ರಯೋಗಾಲಯ, ಕೇಂದ್ರ ಸಮಿತಿ ಮತ್ತು ರಾಜ್ಯ ಸಮಿತಿಗಳ ಮೂಲಕ ಈ ಕ್ಷೇತ್ರದಲ್ಲಿ ಮಹತ್ತರವಾದ ಕಾರ್ಯಕ್ಷಮತೆಯನ್ನು ತರಲು ಸಾಧ್ಯವೆಂದು ನಾನು ಭಾವಿಸಿದ್ದೇನೆ.

ಆಹಾರ ವಸ್ತುಗಳಿಗೆ ಸಂಬಂಧಿಸಿದ ಕಾಯ್ದೆಗಳ ವಿರುದ್ಧ ಯಾವಾಗಲೂ ಕೇಳಿ ಬರುವ ದೂರುಗಳಲ್ಲಿ ಒಂದೆಂದರೆ ಈ ಅಪರಾಧಿಗಳಿಗೆ ನಿಗದಿಪಡಿಸಿರುವ ದಂಡನೆಯು ತೀರಾ ನಗಣ್ಯವಾಗಿದೆ ಎಂಬುದು. ಅಷ್ಟು ಮಾತ್ರವಲ್ಲ ನ್ಯಾಯಾಲಯಗಳು ಅನೇಕ ಸಲ ಈ ಅಲ್ಪಮೊತ್ತದ ದಂಡವನ್ನು ಕೂಡಾ ವಿಧಿಸುವುದಿಲ್ಲ ಎಂಬುದು. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ಇನ್ನಷ್ಟು ಬಿಗಿಯಾದ ವಿಧಿಗಳನ್ನು ಈ ವಿಧೇಯಕದಲ್ಲಿ ಸೇರಿಸಲಾಗಿದೆ. ಹೀಗಾಗಿ ಇದೀಗ ಈ ವಿಧೇಯಕಕ್ಕೆ ಹೊಸ ತಿದ್ದುಪಡಿಗಳನ್ನು ಸೂಚಿಸಿರುವ ಸದಸ್ಯರು ಅವುಗಳನ್ನು ಹಿಂತೆಗುದುಕೊಳ್ಳುವರೆಂದು ನಂಬಿದ್ದೇನೆ. ಈಗಾಗಲೇ ಈ ವಿಧೇಯಕದ ವಿಷಯದಲ್ಲಿ ಸಾರ್ವಜನಿಕರ ಅಭಿಪ್ರಾಯಗಳನ್ನು ಸಂಗ್ರಹಿಸಿರುವುದರಿಂದ ಮತ್ತು ಈ ವಿಧೇಯಕದ ಪ್ರತಿಗಳನ್ನು ರಾಜ್ಯ ಸರ್ಕಾರಗಳಿಗೆ ಕಳುಹಿಸಿಕೊಟ್ಟಿರುವುದರಿಂದ ಮಾನ್ಯ ಸದಸ್ಯರು ಈ ವಿಧೇಯಕಕ್ಕೆ ಸೂಚಿಸಿರುವ ತಮ್ಮ ತಿದ್ದುಪಡಿಗಳನ್ನು ಮಾನ್ಯ ಸದಸ್ಯರು ಹಿಂದಕ್ಕೆ ಪಡೆಯುವರೆಂದು ನಂಬಿದ್ದೇನೆ. ಹಾಗಾಗಿ ಈ ವಿಧೇಯಕದಲ್ಲಿ ಆಸಕ್ತಿ ಹೊಂದಿರುವ ಎಲ್ಲ ಸದಸ್ಯರು ತಾವು ನೀಡಲಿರುವ ಸಲಹೆಗಳನ್ನು ನೇರವಾಗಿ ಆಯ್ಕೆ ಸಮಿತಿಗೆ ಕಳುಹಿಸಿಕೊಡಬೇಕೆಂದು ನಾನು ಭಾವಿಸುತ್ತೇನೆ. ಇಂತಹ ಸಲಹೆಗಳನ್ನು ನೀಡಲು ಸಾಕಷ್ಟು ಕಾಲಾವಕಾಶವೂ ಇದ್ದು, ಸಂಸತ್ತಿನ ಮುಂದಿನ ಅಧಿವೇಶನದಲ್ಲಿ ಈ ವಿಧೇಯಕವು ಅಂಗೀಕಾರ ಪಡೆದು ಕಾಯ್ದೆಗಳ ಸಂಪುಟ ಸೇರುವುದೆಂದು ನಾನು ಅಚಲವಾದ ವಿಶ್ವಾಸವಿರಿಸಿದ್ದೇನೆ.

ಈ ವಿಷಯದಲ್ಲಿ ಇದಕ್ಕಿಂತ ಹೆಚ್ಚಿನದೇನನ್ನು ಹೇಳಲು ಇದೆ ಎಂದು ನಾನು ಭಾವಿಸುವುದಿಲ್ಲ. * ಸದನದಲ್ಲಿ ಈ ವಿಷಯದಲ್ಲಿ ಮಾತನಾಡಿದ ಹಲವಾರು ಮಂದಿ ಸದಸ್ಯರು ಮುಂದಿಟ್ಟ ಎಲ್ಲ ಸಲಹೆಗಳನ್ನು ನಾನು ಗಮನಿಸಿದ್ದೇನೆ ಮತ್ತು ಅವುಗಳೆಲ್ಲವನ್ನು ಆಸಕ್ತಿಯಿಂದ ಆಲಿಸಿದ್ದೇನೆ.

ಈ ವಿಧೇಯಕದ ವಿಷಯದಲ್ಲಿ ಸದಸ್ಯರು ನಡೆಸಿರುವ ಚರ್ಚೆ ಹಾಗೂ ಅವರು ನೀಡಿರುವ ಸಲಹೆ ಸೂಚನೆ ಮತ್ತು ಈ ಕ್ರಮದ ಬಗ್ಗೆ ವ್ಯಕ್ತಪಡಿಸಿರುವ ಸಂತೃಪ್ತಿಯಿಂದಾಗಿ ನಾನೂ ಕೂಡ ಅತ್ಯಂತ ಸಂತುಷ್ಟಳಾಗಿದ್ದೇನೆ. ತಾವು ನೀಡಿರುವ ಎಲ್ಲ ಸಲಹೆಗಳನ್ನು ಅತ್ಯಂತ ಎಚ್ಚರಿಕೆಯಿಂದ ಪರಿಶೀಲಿಸಿ ಅವುಗಳನ್ನು ಆಯ್ಕೆ ಸಮಿತಿಯ ಗಮನಕ್ಕೆ ತರುವುದಾಗಿ ಆಶ್ವಾಸನೆ ನೀಡುತ್ತೇನೆ. ಈ ಕಾಯ್ದೆಯು ಕೇವಲ ಕಾಗದದಲ್ಲಿ ಉಳಿಯದೆ ಕಟ್ಟುನಿಟ್ಟಾಗಿ ಜಾರಿಗೆ ತರುವಲ್ಲಿ ಸದಸ್ಯರಿಗೆ ಎಷ್ಟು ಕಳಕಳಿ ಇದೆಯೋ ಅಷ್ಟೇ ಕಳಕಳಿ ನನಗೂ ಇದೆ. ದಿನದಿಂದ ದಿನಕ್ಕೆ ಮಾರಕ ಹಾವಳಿಯಾಗಿರುವ ಈ ಪಿಡುಗನ್ನು ನಿವಾರಿಸಲು ನಿಮ್ಮಂತೆಯೇ ನಾನು ಆಸಕ್ತಳಾಗಿದ್ದೇನೆ. ಈ ವಿಧೇಯಕವನ್ನು ಆಯ್ಕೆ ಸಮಿತಿಗೆ ಕಳುಹಿಸಿಕೊಡಲು ಸಭೆಯು ತನ್ನ ಅಂಗೀಕಾರ ನೀಡುವುದೆಂದು ಮತ್ತು ಈ ವಿಧೇಯಕವು ಆದಷ್ಟು ತ್ವರಿತವಾಗಿ ಕಾಯ್ದೆಯ ರೂಪದಲ್ಲಿ ಅಸ್ತಿತ್ವಕ್ಕೆ ಬರಬೇಕೆಂದು ನಾನು ಆಶಿಸುತ್ತೇನೆ. *

---

* 1952 ನವೆಂಬರ್ 27ರಂದು ನಡೆದ ಚರ್ಚೆಯಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತ

** ನಂತರ ಉಪ ಸಭಾಪತಿಗಳು ಈ ನಿಲುವಳಿ ಮಂಡಿಸಿದರು. 1952 ನವೆಂಬರ್ 27ರಂದು ಈ ವಿಧೇಯಕವನ್ನು ಜಂಟಿ ಸಮಿತಿಗೆ ಒಪ್ಪಿಸಲಾಯಿತು.

## 35. ಆಹಾರ ಪರಿಸ್ಥಿತಿ *

ನನಗೆ ಸದಾ ತೀವ್ರ ಆತಂಕಕ್ಕೆ ಕಾರಣವಾಗಿರುವ ವಿಷಯವೊಂದರ ಮೇಲೆ ನಾನೀಗ ಕೆಲವು ಮಾತುಗಳನ್ನು ಆಡಲು ಇಲ್ಲಿ ನಿಂತಿದ್ದೇನೆ. ಜಗಳಗಂಟತನದ ಟೀಕೆ ಟಿಪ್ಪಣಿಗಳನ್ನು ಮಾಡಲು ನಾನು ಹೋಗುವುದಿಲ್ಲ. ಸಹಾಯಕ ಸಚಿವರುಗಳು ಮಾಡಿದ ತಪ್ಪು ಒಪ್ಪುಗಳಿಗೆ ಕೇಂದ್ರ ಸಂಪುಟ ಸಚಿವರೊಬ್ಬರನ್ನು ಹೊಣೆಗಾರರನ್ನಾಗಿ ಮಾಡುವುದು ಎಷ್ಟು ಸಮಂಜಸ ಎಂಬುದೂ ನನಗೆ ಗೊತ್ತಿಲ್ಲ. ಆಹಾರ ಮತ್ತು ಕೃಷಿಗೆ ಸಂಬಂಧಿಸಿದ ವಿಷಯದಲ್ಲಿ ಹೇಳುವುದಾದರೆ ಆಹಾರದ ಕೊರತೆಗೆ ಅನೇಕ ಸಂದರ್ಭಗಳಲ್ಲಿ ಫಸಲು ಕಡಿಮೆಯಾಗುವುದು ಮತ್ತು ಮನುಷ್ಯನ ನಿಯಂತ್ರಣಕ್ಕೆ ಮೀರಿದ ಅನೇಕ ಸಂಗತಿಗಳು ಕಾರಣವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ನಿರ್ದಿಷ್ಟ ಖಾತೆಗೆ ಸೇರಿದ ಸಚಿವರೊಬ್ಬರನ್ನು ಹೊಣೆಗಾರರನ್ನಾಗಿ ಮಾಡುವುದು ಮತ್ತು ಅವರಿಗೆ ಕಿರುಕುಳ ನೀಡುವುದು ಎಷ್ಟು ಮಾತ್ರಕ್ಕೂ ಸಮಂಜಸವಲ್ಲ. ಆದರೆ ಆಹಾರ ಪರಿಸ್ಥಿತಿಯು ಜನರ ನಿರೀಕ್ಷೆಗೆ ಸರಿಯಾಗಿ ಸುಧಾರಿಸದಿದ್ದರೆ ಆಗ ಜನರ ಮನಸ್ಸಿನಲ್ಲಿ ಗೊಂದಲ ಮೂಡುವುದು ಸ್ವಾಭಾವಿಕ. ಇಂತಹ ಪರಿಸ್ಥಿತಿಯಲ್ಲಿ ಆಹಾರ ಪದಾರ್ಥಗಳನ್ನು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಆಮದು ಮಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ. ದೇಶದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಆಹಾರ ಧಾನ್ಯಗಳ ದಾಸ್ತಾನು ಇದೆ ಎಂದು ಹೇಳಿದರೂ ಅದರಿಂದ ಜನರಲ್ಲಿ ನಂಬಿಕೆ ಮೂಡುವುದಿಲ್ಲ. ಒಟ್ಟಿನಲ್ಲಿ ಇಂತಹ ಸನ್ನಿವೇಶದಲ್ಲಿ ಗ್ರಾಹಕರಿಗಾಗಲಿ, ಉತ್ಪಾದಕರಿಗಾಗಲಿ ಸಮಾಧಾನ ಇರುವುದಿಲ್ಲ. ಆಹಾರ ಪದಾರ್ಥಗಳಲ್ಲಿ ಸ್ವಾವಲಂಬನೆ ಸಾಧಿಸುವುದು ಒಂದು ಜಟಿಲ ಪ್ರಶ್ನೆಯಾಗಿದೆ.

ದೇಶದಲ್ಲಿ ಆಹಾರ ಧಾನ್ಯಗಳ ಉತ್ಪಾದನೆ ಮತ್ತು ವಿತರಣೆಯಲ್ಲಿ ಸಮತೋಲನ ಇಲ್ಲದಿರುವುದು ಮೇಲ್ನೋಟಕ್ಕೆ ಗೊತ್ತಾಗುತ್ತದೆ. 1956-57ನೇ ವರ್ಷದಲ್ಲಿ ನಮ್ಮ ಆಹಾರ ಉತ್ಪಾದನೆ 68.5 ಮಿಲಿಯನ್ ಟನ್‌ಗಳಾಗಿತ್ತು. ನಮ್ಮ ಆಹಾರದ ಅವಶ್ಯಕತೆಯು ಅಂದಾಜು 55 ಮಿಲಿಯನ್ ಟನ್‌ಗಳಾಗಿತ್ತು. ಒಬ್ಬ ವಯಸ್ಕನಿಗೆ ದಿನವೊಂದಕ್ಕೆ 16 ಔನ್ಸ್ ಮತ್ತು 14 ವರ್ಷದೊಳಗಿನ ಒಂದು ಮಗುವಿಗೆ 12 ಔನ್ಸ್ ಅಂದರೆ ಅಂದಾಜು 60 ಮಿಲಿಯನ್ ಟನ್ ಆಹಾರದ ಅವಶ್ಯಕತೆ ಇತ್ತು. ಉತ್ಪಾದನೆಯ ಸರಾಸರಿ ಪ್ರಮಾಣವು 60 ಮಿಲಿಯನ್ ಟನ್‌ಗಳಷ್ಟಿದ್ದರೆ ಆಮದು ಪ್ರಮಾಣ ಸರಾಸರಿ 3.5 ಮಿಲಿಯನ್ ಟನ್‌ಗಳಷ್ಟಿತ್ತು. ಹೀಗಿದ್ದಾಗ ಬೆಲೆಗಳು ದಿನದಿಂದ ದಿನಕ್ಕೆ ಹೆಚ್ಚುತ್ತಿರುವುದಾದರೂ ಏಕೆ? ಹಾಗಿದ್ದಲ್ಲಿ ಉತ್ಪಾದನೆಗೆ ಸಂಬಂಧಿಸಿದಂತೆ ನೀಡಿರುವ ಅಂಕಿ - ಅಂಶಗಳು ದೋಷಪೂರ್ಣವಾಗಿವೆಯೇ?

ಬೆಳೆಗಳಿಗೆ ತಗಲುವ ಕೀಟಬಾಧೆಯನ್ನು ನಿವಾರಿಸಿ ರಕ್ಷಣೆ ಒದಗಿಸಿದರೆ ನಾವು ಹೆಚ್ಚಿನ ಪ್ರಮಾಣದಲ್ಲಿ ಆಹಾರ ಧಾನ್ಯಗಳನ್ನು ಸಂರಕ್ಷಿಸಿಡಬಹುದು. ಜೊತೆಗೆ ಹೆಚ್ಚಿನ ಲಾಭಗಳಿಸಬಹುದೆಂದು ರೈತರೊಬ್ಬರು ನನಗೆ ಹೇಳಿದರು. ಕೀಟಗಳ ಬಾಧೆಯಿಂದ ಆಗುವ

---

* ಆಹಾರ ಮತ್ತು ಕೃಷಿ ಸಚಿವ ಶ್ರೀ ಎ.ಪಿ.ಜೈನ್ ಅವರು ಆಹಾರ ಪರಿಸ್ಥಿತಿ ಕುರಿತು ನಿರ್ಣಯ ಮಂಡಿಸಿದ ಸಂದರ್ಭದಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತಾ (ರಾಜ್ಯಸಭೆ ಚರ್ಚೆ, ಡಿಸೆಂಬರ್ 18, 1957. ಸಿಸಿ 3011 - 17).

ನಷ್ಟ ಗಣನೀಯ ಮಟ್ಟದ್ದು. ಅಂದರೆ ಶೇ.20ರಷ್ಟು ಆಹಾರ ಧಾನ್ಯಗಳು ಇದರಿಂದ ನಾಶವಾಗುತ್ತದೆ. ಆದರೆ ಮೆಹತಾ ವರದಿಯು ಈ ಅಂಶಕ್ಕೆ ಯಾವುದೇ ರೀತಿಯ ಗಮನ ನೀಡಿಲ್ಲ ಎಂಬುದು ವಿಷಾದದ ಸಂಗತಿ. ಆದರೆ ಕನಿಷ್ಠ ಆಹಾರ ಖಾತೆಯಾದರೂ ಆ ಅಂಶಕ್ಕೆ ಗಮನ ನೀಡುತ್ತದೆಯೇ ಎಂಬುದನ್ನು ನಾನು ಆಹಾರ ಸಚಿವರಿಂದ ತಿಳಿಯಬಯಸುತ್ತೇನೆ. ಕೀಟ ಬಾಧೆಯಿಂದ ಆಗುವ ಆಹಾರ ಧಾನ್ಯಗಳ ನಾಶ ಇದೇ ರೀತಿ ಮುಂದುವರಿಯಬೇಕೇ? ಮೆಹ್ತಾ ಸಮಿತಿಯ ಶಿಫಾರಸುಗಳನ್ನು ಇಲ್ಲಿ ಪ್ರತಿಯೊಬ್ಬರು ಓದಿದ್ದಾರೆ. ಸರ್ಕಾರವು ಈ ಶಿಫಾರಸುಗಳನ್ನು ಅಂಗೀಕರಿಸುವುದು ಮತ್ತು ಅದರಿಂದಾಗಿ ಸರ್ವಾಂಗೀಣ ಸುಧಾರಣೆ ಸಾಧ್ಯವಾಗುವುದೆಂದು ನಾನು ನಂಬಿದ್ದೇನೆ. ಆದರೆ ಆಹಾರ ಸಚಿವರು ಸ್ವತಃ ಈ ವಿಷಯದಲ್ಲಿ ತಮ್ಮ ಅಸಹಾಯಕತೆಯನ್ನು ಒತ್ತಿ ಹೇಳಿದ್ದಾರೆ. ಈ ವರದಿಯ ಶಿಫಾರಸುಗಳಂತೆ ಆಹಾರ ಧಾನ್ಯಗಳ ಕ್ಷೇತ್ರದಲ್ಲಿ ಸ್ವಾವಲಂಬನೆ ಸಾಧಿಸುವ ದಿಕ್ಕಿನಲ್ಲಿ ಎಲ್ಲ ಪ್ರಯತ್ನಗಳನ್ನು ನಡೆಸಲಾಯಿತಾದರೂ ಪರಿಸ್ಥಿತಿಯಲ್ಲಿ ಯಾವುದೇ ಬದಲಾವಣೆ ಸಾಧ್ಯವಾಗಲಿಲ್ಲ. ಏನಿದ್ದರೂ ಮುಂದಿನ ಐದು ವರ್ಷಗಳ ಅವಧಿಯಲ್ಲಿ ವರ್ಷವೊಂದಕ್ಕೆ ಸರಿಯಾಗಿ ಎರಡರಿಂದ ಮೂರು ಟನ್‌ಗಳಷ್ಟು ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳುವ ಅನಿವಾರ್ಯ ಪರಿಸ್ಥಿತಿ ಎದುರಿಸುತ್ತಿದ್ದೇವೆ. ಇದರಿಂದ ವರ್ಷವೊಂದಕ್ಕೆ ನೂರರಿಂದ ನೂರಾ ಐವತ್ತು ಕೋಟಿ ರೂಪಾಯಿ ವೆಚ್ಚ ತಗುಲಲಿದೆ. ಇದು ಸಹಜವಾಗಿಯೇ ನಮ್ಮ ವಿದೇಶ ವಿನಿಮಯ ಸಂಪನ್ಮೂಲಗಳ ಮೇಲೆ ಭಾರಿ ದೊಡ್ಡ ಹೊರೆಯನ್ನು ಹೊರಿಸುವುದು.

ತಾವು ಮೆಹತಾ ಸಮಿತಿಯಂತೆ ನಿರಾಶವಾದಿಗಳಲ್ಲ ಎಂದು ಸಚಿವರು ಹೇಳಿದ್ದಾರೆ. ಈ ಆಶಾವಾದವನ್ನು ಅವರು ಮುಂಬರುವ ವರ್ಷಗಳಲ್ಲಿ ಕಾರ್ಯರೂಪದಲ್ಲಿ ತೋರಿಸುತ್ತಾರೆಂಬ ನಂಬಿಕೆ ನನಗಿದೆ. ಮೆಹತಾ ಸಮಿತಿಯು ಶಿಫಾರಸು ಮಾಡಿರುವ ಬೆಲೆ ಸ್ಥಿರೀಕರಣ ಸಂಸ್ಥೆಯು ಅತ್ಯಂತ ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸಿದರೆ ಮಾತ್ರ ಅದು ಉಪಯುಕ್ತ ಎನಿಸಬಹುದು. ಆದರೆ ಬೇಡಿಕೆ ಸರಬರಾಜಿಗಿಂತ ಬಹಳ ಎತ್ತರದಲ್ಲಿದ್ದರೆ ಬೆಲೆ ನಿಯಂತ್ರಣದಲ್ಲಿಡಲು ಸಾಧ್ಯವೇ ಇಲ್ಲ. ಒಟ್ಟಿನಲ್ಲಿ ಆಹಾರ ಉತ್ಪಾದನೆ ಹೆಚ್ಚಿಸುವ ಕಾರ್ಯಭಾರವೂ ನಿಜಕ್ಕೂ ಈ ಸಮಸ್ಯೆಗೆ ಇರುವ ಏಕೈಕ ಪರಿಹಾರವಾಗಿದೆ. ಈಚಿನ ವರ್ಷಗಳಲ್ಲಿ ಆಹಾರ ಉತ್ಪಾದನೆ ಹೆಚ್ಚಿಸುವ ವಿವಿಧ ಯೋಜನೆಗಳ ಮೇಲೆ ಗಣನೀಯ ಪ್ರಮಾಣದ ಮೊತ್ತವನ್ನು ವ್ಯಯಿಸಲಾಗಿದೆ. ಈ ಎಲ್ಲ ಕಾರ್ಯಕ್ರಮಗಳು ಯಶಸ್ವಿಯಾಗಿವೆಯೇ? ಸಹಕಾರ ವ್ಯವಸಾಯ ಪದ್ಧತಿ ಇಲ್ಲಿ ಅವಶ್ಯಕವಾಗಿದೆ. ಇದರಲ್ಲಿ ಸಂಶಯವಿಲ್ಲ. ಸಹಕಾರಿ ವ್ಯವಸಾಯವು ಹಣಕಾಸಿನ ದೃಷ್ಟಿಯಿಂದ ಒಂದು ಅಗಾಧ ಕಾರ್ಯಭಾರವಾಗಿದೆ. ಆದರೆ ಯಾವುದೇ ಒಂದು ಯೋಜನೆಯನ್ನಾದರೂ ಮೇಲಿನಿಂದ ಹೇರುವುದು ಎಷ್ಟರ ಮಟ್ಟಿಗೆ ಫಲಪ್ರದವಾದೀತು ಎಂದು ಹೇಳುವುದು ಕಷ್ಟ. ನಮ್ಮ ಸಾಮಾಜಿಕ ಮತ್ತು ವ್ಯವಸಾಯ ಪದ್ಧತಿಯು ಎಂದೂ ಸಹಕಾರ ಸಂಘದ ತತ್ವಗಳ ಮೇಲೆ ಅಥವಾ ಸಹಕಾರಿ ವ್ಯವಸಾಯ ತತ್ವಗಳ ಮೇಲೆ ಅವಲಂಬಿಸಿಯೇ ಇಲ್ಲ. ಹಾಗಾಗಿ ಸಹಕಾರಿ ವ್ಯವಸಾಯ ಪದ್ಧತಿಯಲ್ಲಿ ಯಶಸ್ಸು ಕಾಣಬೇಕಾದರೆ ಜನರ ಮನೋವೃತ್ತಿಯಲ್ಲೇ ಬದಲಾವಣೆ ಸಾಧಿಸಬೇಕು. ನಾವು ಯಾವುದೇ ಒಂದು ಹೊಸ ಬದಲಾವಣೆ ತರುವುದಿದ್ದರೂ ಅದು ಜನರ ಆಸಕ್ತಿ ಮತ್ತು ಸಹಭಾಗಿತ್ವದಿಂದ ನಡೆಯಬೇಕು. ಆಧುನಿಕ ಜಗತ್ತಿನಲ್ಲಿ ಎಲ್ಲೆಡೆ

ಜಮೀನ್ದಾರಿ ಪದ್ಧತಿ ಹಿಂದೆ ಸರಿಯುತ್ತಿದೆ. ನಮ್ಮಲ್ಲೂ ಈ ಪದ್ಧತಿ ಇಲ್ಲದಂತಾಗಬೇಕು. ಕೃಷಿ ಕ್ಷೇತ್ರದಲ್ಲಿ ನಿರೀಕ್ಷಿತ ಪರಿಣಾಮಗಳನ್ನು ಸಾಧಿಸಬೇಕಾದರೆ ಇದು ಅತ್ಯವಶ್ಯ. ಈ ಪದ್ಧತಿ ನಮ್ಮ ದೇಶದಿಂದ ತೊಲಗಬೇಕೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ಒಳ್ಳೆಯ ಭೂ ಮಾಲೀಕರು ಒಕ್ಕಲಿನವರ ಪ್ರೀತಿಗೆ ಪಾತ್ರರಾಗಿರುತ್ತಾರೆ. ಸಂಕಷ್ಟ ಕಾಲದಲ್ಲಿ ಸಲಹೆ, ಮಾರ್ಗದರ್ಶನ ಮತ್ತು ಸಹಕಾರವನ್ನು ಪಡೆಯುತ್ತಾರೆ. ಭೂ ಮಾಲೀಕರು ಅವರ ನೆರವಿಗೆ ಬರುತ್ತಾರೆ. ಆದರೆ ಇಂದು ರೈತನಿಗೆ ಇಂತಹ ಮಾನವೀಯ ಸಂಬಂಧದ ಸ್ಪರ್ಶವೇ ಇಲ್ಲ. ಅಂದರೆ ಈಗ ಭೂ ಮಾಲೀಕನ ಸ್ಥಾನದಲ್ಲಿ ನಿಂತಿರುವ ಸರ್ಕಾರ ಸರಿಯಾಗಿ ತನ್ನ ಪಾತ್ರ ನಿರ್ವಹಿಸುತ್ತಿಲ್ಲ. ಇದರಲ್ಲಿ ಇನ್ನೊಂದು ಆತಂಕಕಾರಿ ಅಂಶವೂ ಇದೆ. ಇಂತಹ ವ್ಯವಸ್ಥೆಯಲ್ಲಿ ಸಣ್ಣ ಹಿಡುವಳಿದಾರರು ತಮಗೆ ಬೇಕಾದಷ್ಟು ಮಾತ್ರ ಬೆಳೆಯುವ ಪ್ರವೃತ್ತಿಗೆ ಒಳಗಾಗುತ್ತಾರೆ. ಇದರಿಂದ ಆಹಾರ ಉತ್ಪಾದನೆಯನ್ನು ಹೆಚ್ಚಿಸುವ ಇಂದಿನ ಅಗತ್ಯಕ್ಕೆ ಯಾವುದೇ ರೀತಿಯ ಉತ್ತೇಜನ ಇಲ್ಲದಂತಾಗುತ್ತದೆ.

ಇನ್ನು ಯೋಜನೆಗಳ ವಿಷಯದಲ್ಲಿ ಹೇಳುವುದಾದರೆ ಓರಿಸ್ಸಾ ಸರ್ಕಾರದ ಧನ ವಿನಿಯೋಗ ಕುರಿತು ಈಚಿನ ಪರಿಶೋಧಿತ ವರದಿಯು ಈ ವಿಷಯದಲ್ಲಿ ಒಂದು ಎಚ್ಚರಿಕೆಯಂತಿದೆ. ಹಣಕಾಸು ತೀರಾ ಪರಿಮಿತವಾಗಿರುವಾಗ ಮತ್ತು ಇತರ ಸಂಪನ್ಮೂಲಗಳು ಸೀಮಿತವಾಗಿರುವಾಗ ಯಾವುದೇ ಯೋಜನೆಗಳನ್ನು ಕೈಗೆತ್ತಿಗೊಳ್ಳುವುದು ಸಮಂಜಸವಲ್ಲ.

ಮೆಹತಾ ಸಮಿತಿಯು ಸಣ್ಣ ನೀರಾವರಿ ಯೋಜನೆಗಳನ್ನು ಬೆಂಬಲಿಸಿರುವುದು ಮತ್ತು ನೀರಾವರಿ ಖಾತೆಯು ಈ ಯೋಜನೆಗಳನ್ನು ಅಂಗೀಕರಿಸಿರುವುದು ನನಗೆ ಅತ್ಯಂತ ಸಂತಸದ ವಿಷಯವಾಗಿದೆ. ನೀರಾವರಿ ಯೋಜನೆಗಳಿಗೆ ದೇಣಿಗೆ ನೀಡುವುದು ತಮ್ಮ ಸಾಮರ್ಥ್ಯಕ್ಕೆ ಮೀರಿದ ಸಂಗತಿಯಾಗಿದೆಯೆಂದು ಅನೇಕ ಕೃಷಿಕರು ದೂರಿತ್ತಿದ್ದಾರೆ. ಹಾಗಿದ್ದಲ್ಲಿ ಕೃಷಿಕರು ಆಹಾರ ಉತ್ಪಾದನೆಯನ್ನು ಹೆಚ್ಚಿಸುವುದಾದರೂ ಹೇಗೆ ಸಾಧ್ಯ? ಈ ವಿಷಯದಲ್ಲಿ ನಾನು ಸಚಿವರ ಗಮನ ಸೆಳೆಯ ಬಯಸುತ್ತೇನೆ. ರೈತರಿಗೆ ಉತ್ಪಾದನೆ ಹೆಚ್ಚಿಸಲು ಪ್ರೋತ್ಸಾಹ ನೀಡಬೇಕಾದಲ್ಲಿ ನೀವು ಅವರಿಗೆ ಸಹಾಯಧನ ನೀಡಬೇಕು ಮತ್ತು ಬೇಕಾದ ಸವಲತ್ತುಗಳನ್ನು ಕಲ್ಪಿಸಿಕೊಡಬೇಕು. ಹಾಗಾದಾಗ ಮಾತ್ರ ದೇಶ ತನ್ನಿಂದ ಅಪೇಕ್ಷಿಸುವುದನ್ನು ಕೊಡಲು ರೈತ ಸಮರ್ಥನಾಗುತ್ತಾನೆ.

ಸಾಂದ್ರ ಬೇಸಾಯದ ತಳಹದಿಯಲ್ಲಿ ಉತ್ಪಾದನೆ ಹೆಚ್ಚಿಸಲು ಮುಂದಾಗುವಾಗ ಕೃಷಿಯ ವೆಚ್ಚ ಅಧಿಕವಾಗುವುದು ಸ್ವಾಭಾವಿಕ. ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ನೀರಾವರಿ, ಗೊಬ್ಬರ, ಉತ್ತಮ ಬೀಜಗಳು ಮತ್ತು ಬೆಳೆಗಳ ರಕ್ಷಣೆಗೆ ಹೆಚ್ಚಿನ ಎಚ್ಚರ ವಹಿಸುವುದು ಅಗತ್ಯ. ಆಗ ತಾನಾಗಿಯೇ ಉತ್ಪಾದನೆಯ ವೆಚ್ಚ ಏರುವುದು. ಭತ್ತದ ವ್ಯವಸಾಯದಲ್ಲಿ ನಾವು ಈಗ ಅನುಸರಿಸುತ್ತಿರುವ ಜಪಾನಿ ಪದ್ಧತಿಗೆ ಇದು ಅನ್ವಯವಾಗುತ್ತದೆ. ಪ್ರಮಾಣಾನುಗುಣವಾಗಿ ಹೆಚ್ಚು ಪ್ರತಿಫಲ ಸಿಗುತ್ತದೆಯೆಂದಾಗಲಿ ಮಾತ್ರವೇ ರೈತರು ಇಂತಹ ವಿಧಾನಗಳಿಗೆ ಮುಂದಾಗುತ್ತಾರೆ. ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಪರಿಶೀಲನೆ ಆಗತ್ಯವಾಗಿದೆ. ರೈತನಿಗೆ ಹೊಸ ವಿಧಾನಗಳನ್ನು ಶಿಫಾರಸು ಮಾಡುವುದಕ್ಕೆ ಮೊದಲು ನಮ್ಮ ಇಲಾಖೆಗಳು ಎಂದಾದರೂ ಇಂತಹ ಬೆಳೆಗಳನ್ನು ಉತ್ಪಾದಿಸಿ ನೋಡಿವೆಯೇ? ನಾನು ಮೊದಲೇ ಹೇಳಿರುವಂತೆ ರೈತರು

ಹೆಚ್ಚು ಬೆಳೆಯ ಬೇಕಾದರೆ ಅವರಿಗೆ ಹೆಚ್ಚಿನ ಪ್ರೋತ್ಸಾಹ ನೀಡಲೇಬೇಕು. ಉತ್ಪಾದನಾ ವೆಚ್ಚ ಹೆಚ್ಚಿರುವುದರಿಂದ ಅದು ರೈತರಿಗೆ ಹೊರೆಯಾಗುತ್ತದೆ ಎಂದು ನಾವು ಎಂದಾದರೂ ಯೋಚಿಸಿದ್ದೇವೆಯೇ? ಜಪಾನಿ ಮಾದರಿಯ ಭತ್ತದ ವ್ಯವಸಾಯವನ್ನು ಅನೇಕರು ಬಿಟ್ಟೇ ಬಿಟ್ಟಿದ್ದಾರೆ. ಏಕೆಂದರೆ ಅದರಿಂದ ಅವರಿಗೆ ಏನೂ ಲಾಭವಾಗುವುದಿಲ್ಲ. ಹಾಗಾಗಿ ಹೆಚ್ಚು ಲಾಭದಾಯಕವಾದ ವಿಧಾನಗಳನ್ನು ರೈತರು ಆರಿಸಿಕೊಳ್ಳುತ್ತಾರೆ. ಕಡಿಮೆ ವೆಚ್ಚದಾಯಕ ಕೃಷಿ ವಿಧಾನಗಳನ್ನು ಅನ್ವಯಿಸಿ ಕೃಷಿ ವೆಚ್ಚಗಳನ್ನು ತಗ್ಗಿಸುವ ದಿಸೆಯಲ್ಲಿ ಕೃಷಿ ಇಲಾಖೆ ಯಾವುದಾದರೂ ಪ್ರಯೋಗ ನಡೆಸಿದೆಯೇ? ಅದೇ ರೀತಿ ರಸಗೊಬ್ಬರಗಳ ಬಳಕೆಯನ್ನೇ ನಾವು ಅವಲಂಬಿಸಿರಬಾರದು. ಚೀನಾದಲ್ಲಿ ಈಗ ಕಡಿಮೆ ವೆಚ್ಚದ ಗೊಬ್ಬರಗಳನ್ನೇ ಬಳಸಲು ಯೋಚಿಸುತ್ತಿದ್ದಾರೆಂದು ಸಚಿವರು ಹೇಳಿರುವುದನ್ನು ಕೇಳಿ ನನಗೆ ಹರ್ಷವಾಗಿದೆ. ಅಲ್ಲಿ ರಾಸಾಯನಿಕ ಗೊಬ್ಬರಗಳ ಬಳಕೆ ಕಡಿಮೆ. ಬದಲಾಗಿ ಕಡಿಮೆ ವೆಚ್ಚದ ರೂಢಿಯ ಗೊಬ್ಬರಗಳನ್ನು ಬಳಸುತ್ತಾರೆ. ಇದು ಲಾಭಾದಾಯಕವೂ ಆಗಿದೆ. ಅದೇ ರೀತಿ ನಾವು ಕಡಿಮೆ ವೆಚ್ಚದ ಗೊಬ್ಬರಗಳನ್ನು ಬಳಸಿಕೊಳ್ಳಬೇಕು ಮತ್ತು ಹೊಸ ಬಗೆಯ ಕಡಿಮೆ ಖರ್ಚಿನ ಸಾಧನ, ಸಲಕರಣೆಗಳನ್ನು ಬಳಸಿಕೊಳ್ಳಬೇಕು. ಈ ಮೂಲಕ ವ್ಯವಸಾಯ ವೆಚ್ಚವನ್ನು ಉಳಿಸಬೇಕು. ಮಹಾತ್ಮಾ ಗಾಂಧೀಜಿಯವರು ಯಾವಾಗಲೂ ಒತ್ತಿ ಹೇಳುತ್ತಿದ್ದ ಪ್ರಮುಖ ಅಂಶ ಇದಾಗಿದೆ. ಹೀಗಾಗಿ ಕೃಷಿ ಖಾತೆಯು ಈ ವಿಷಯಕ್ಕೆ ಹೆಚ್ಚಿನ ಗಮನ ನೀಡಬೇಕೆಂದು ನಾನು ಬಯಸುತ್ತೇನೆ. ಈ ವಿಷಯವಾಗಿ ಮಾನ್ಯ ಆಹಾರ ಸಚಿವರು ಗಾಂಧೀ ಸ್ಮಾರಕ ನಿಧಿಯ ಕಾರ್ಯಕ್ಕಾಗಿ ಈಗ ದೆಹಲಿಯಲ್ಲಿರುವ ರಿಚರ್ಡ್ ಹೇಗ್ ಅವರೊಂದಿಗೆ ಮಾತನಾಡಬೇಕೆಂದು ನಾನು ಸಲಹೆ ನೀಡುತ್ತಿದ್ದೇನೆ. ಗೊಬ್ಬರಗಳು, ಕೃಷಿ ಉಪಕರಣಗಳು ಮತ್ತು ಈ ಕ್ಷೇತ್ರಕ್ಕೆ ಸಂಬಂಧಿಸಿದ ಇತರ ಎಲ್ಲ ವಿಷಯಗಳಲ್ಲಿ ಅತ್ಯುಪಯುಕ್ತವಾದ ಮಾಹಿತಿಗಳನ್ನು ಅವರು ನೀಡಬಲ್ಲರು. ಹೇಗ್ ಅವರು ಮಹಾತ್ಮಾ ಗಾಂಧೀಜಿಯವರ ಅತ್ಯಂತ ಪ್ರೀತಿಪಾತ್ರ ಕೃಷಿಕರಲ್ಲಿ ಒಬ್ಬರಾಗಿದ್ದಾರೆ.

ಇದೀಗ ನಾನು ಇನ್ನೊಂದು ಪ್ರಶ್ನೆಯನ್ನು ಎತ್ತಿಕೊಳ್ಳುತ್ತಿದ್ದೇನೆ. ಸಂಪ್ರದಾಯವಾದಿಗಳು ನನ್ನ ಈ ಮಾತುಗಳನ್ನು ಕೇಳಿ ಮುಖ ಸಿಂಡರಿಸಲೂ ಬಹುದು ಎಂಬ ಅರಿವು ನನಗಿದೆ. ದೇಶದ ಏಳು ರಾಜ್ಯಗಳಲ್ಲಿ ಈಗ ಗೋಹತ್ಯೆಯ ಮೇಲೆ ಸಂಪೂರ್ಣ ನಿಷೇಧ ವಿಧಿಸಲಾಗಿದೆ. ಕೆಲ ರಾಜ್ಯಗಳಲ್ಲಿ ಈ ನಿಷೇಧ ಬಹಳ ಹಿಂದಿನಿಂದಲೂ ಇತ್ತು. ಇನ್ನೂ ಕೆಲ ರಾಜ್ಯಗಳಲ್ಲಿ ಉಪಯುಕ್ತ ಜಾನುವಾರುಗಳ ಹತ್ಯೆಯನ್ನು ಮಾತ್ರ ನಿಷೇಧಿಸಲಾಗಿದೆ. ಇನ್ನು ಕೆಲ ರಾಜ್ಯಗಳಲ್ಲಿ ಯಾವ ನಿಷೇಧವೂ ಇಲ್ಲ. ಓರಿಸ್ಸಾ ಅಂತಹ ರಾಜ್ಯವಾಗಿದೆ. ಹಿಂದಿನ ಕಾಲದಲ್ಲಿ ಕೆಲ ನಿರ್ದಿಷ್ಟ ಸ್ಥಳಗಳಲ್ಲಿ ಗೋಹತ್ಯೆಯ ಮೇಲೆ ನಿಷೇಧ ಇರುತ್ತಿತ್ತು. ಆದರೆ ಅದರಿಂದ ಅಂತಹ ಸಮಸ್ಯೆಯೇನೂ ಎದುರಾಗಲಿಲ್ಲ. ಇನ್ನೂ ಕೆಲ ಸಂದರ್ಭಗಳಲ್ಲಿ ಮುದಿ ಮತ್ತು ನಿರುಪಯುಕ್ತ ಜಾನುವಾರುಗಳನ್ನು ಅವುಗಳ ವಿಲೇವಾರಿಗಾಗಿ ಇತರ ರಾಜ್ಯಗಳಿಗೆ ರವಾನಿಸಲಾಗುತ್ತಿತ್ತು. ಈಗ ಬಹುತೇಕ ಎಲ್ಲೆಡೆ ಗೋಹತ್ಯೆ ಮೇಲೆ ನಿಷೇಧ ಹೇರಿರುವುದರಿಂದ ಪರಿಸ್ಥಿತಿ ಸುಧಾರಿಸುವುದಕ್ಕೆ ಬದಲಾಗಿ ಮತ್ತಷ್ಟು ಹದಗೆಟ್ಟಿದೆ. ಮುದಿ ಮತ್ತು ನಿಷ್ಪ್ರಯೋಜಕ ಜಾನುವಾರುಗಳ ಸಂಖ್ಯೆ ಅಗಾಧವಾಗಿ ಬೆಳೆದಿದ್ದು ಅದು ಹೀಗೆ ಮುಂದುವರಿಯಲಿದೆ. ಭಾರತದಲ್ಲಿ ಗೋಹತ್ಯೆಯನ್ನು ಪ್ರತಿಬಂಧಿಸುವ ಸಲುವಾಗಿ 1949ರಲ್ಲಿ ನೇಮಕಗೊಂಡ ತಜ್ಞರ ಸಮಿತಿ ಹೀಗೆ ಹೇಳಿದೆ:

"ಎಲ್ಲ ಜಾತಿಯ ಜಾನುವಾರುಗಳ ಹತ್ಯೆಯ ಮೇಲಿನ ಸಂಪೂರ್ಣ ನಿಷೇಧವು ಅವುಗಳ ಸಂಖ್ಯೆಯನ್ನು ಇನ್ನಷ್ಟು ಹಿಗ್ಗಿಸುವುದಲ್ಲದೆ ಪರಿಮಿತ ಸಂಖ್ಯೆಯಲ್ಲಿರುವ ಉತ್ತಮ ಜಾನುವಾರುಗಳ ಮೇಲೆ ಪ್ರತಿಕೂಲ ಪರಿಣಾಮ ಬೀರಲಿದೆ. ಹೀಗಾಗಿ ಜಾನುವಾರುಗಳ ಹತ್ಯೆಯ ಮೇಲಣ ಸಂಪೂರ್ಣ ನಿಷೇಧವು ಒಂದು ನಕರಾತ್ಮಕ ನಿಲುವಾಗಿದೆಯೇ ಹೊರತು ಅದು ಯಾವ ಕಾರಣಕ್ಕೂ ಒಂದು ವಿಧಾಯಕ ಪರಿಹಾರವಲ್ಲ".

ಇದರಿಂದ ಬೀಡಾಡಿ ಜಾನುವಾರುಗಳ ಸಂಖ್ಯೆ ಹೆಚ್ಚು ಬೆಳೆಗಳಿಗೂ ಅದು ಹಾನಿಕಾರವಾಗಿ ಪರಿಣಮಿಸುತ್ತದೆ. ಅದನ್ನೇ ಈ ವರದಿಯಲ್ಲಿ ತಜ್ಞರು ಈ ರೀತಿ ಹೇಳಿದ್ದಾರೆ. ಬೀಡಾಡಿ ಜಾನುವಾರುಗಳ ಸಂಖ್ಯೆ ಈ ತಜ್ಞರು ಮುನ್ನೆಚ್ಚರಿಕೆ ನೀಡಿದಂತೆಯೇ ಅಧಿಕವಾಗಿದೆ. ಕೆಲವು ರಾಜ್ಯಗಳಲ್ಲಿ ಅಪಾಯಕಾರಿ ಹಂತಕ್ಕೆ ಬೆಳೆದಿರುವ ಇಂತಹ ಜಾನುವಾರುಗಳನ್ನು ಹಿಡಿಯಲು ವರ್ಷಂಪ್ರತಿ ಭಾರಿ ದೊಡ್ಡ ಮೊತ್ತವನ್ನು ವ್ಯಯಿಸಲಾಗುತ್ತಿದೆ.

-----

1955ರಲ್ಲಿ ಉತ್ತರ ಪ್ರದೇಶದಲ್ಲಿ ಗೋ ಸಂವರ್ಧನ ಸಮಿತಿಯು ಈ ಕೆಳಗಿನಂತೆ ಹೇಳಿದೆ:

"ಸಮಿತಿಗೆ ಬರುತ್ತಿರುವ ಮಾಹಿತಿಗಳ ಪ್ರಕಾರ ಈಚಿನ ದಿನಗಳಲ್ಲಿ ಬೀಡಾಡಿ ಮತ್ತು ಕಾಡು ಪ್ರಾಣಿಗಳ ಸಂಖ್ಯೆ ಅಗಾಧವಾಗಿ ಹೆಚ್ಚಿದೆ. ರಾಜ್ಯದ ಅನೇಕ ಭಾಗಗಳಲ್ಲಿ ಕಾಡು ಪ್ರಾಣಿಗಳ ಹಾವಳಿ ಗಂಭೀರ ಹಂತವನ್ನು ತಲುಪಿದೆ. ಕೆಲವು ಜಿಲ್ಲೆಗಳಿಂದ ಬೆಳೆಗಳಿಗೆ ಅಪಾರ ಹಾನಿ ಉಂಟು ಮಾಡುತ್ತಿರುವ ಬೀಡಾಡಿ ಜಾನುವಾರುಗಳು ಮತ್ತು ಕಾಡು ಪ್ರಾಣಿಗಳನ್ನು ಹಿಡಿಯುವಂತೆ ಪದೇ ಪದೇ ಮನವಿಗಳು ಬರುತ್ತಿವೆ. ಈ ಗಂಭೀರ ಸಮಸ್ಯೆ ಕೃಷಿ ಉತ್ಪಾದನೆಯ ಮೇಲೆ ಮಾರಕ ಪರಿಣಾಮ ಬೀರುತ್ತದೆ ಹಾಗೂ ಅದು ಆತಂಕಕಾರಿಯಾದ ವಾತಾವರಣವನ್ನು ಸೃಷ್ಟಿಸಿದೆ".

ಈ ಸಮಸ್ಯೆಯನ್ನು ನಿವಾರಿಸುವ ದಿಸೆಯಲ್ಲಿ ಯೋಜನೆಗಳನ್ನು ರೂಪಿಸುವಂತೆ ಮತ್ತು ಈ ಯೋಜನೆಗಳನ್ನು ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸುವಂತೆ ಸೂಚಿಸಲಾಗಿದೆ. ಈ ಎಲ್ಲ ಯೋಜನೆಗಳ ಅನುಷ್ಠಾನಕ್ಕೆ ಬಾರಿ ದೊಡ್ಡ ಪ್ರಮಾಣದಲ್ಲಿ ವೆಚ್ಚ ಮಾಡಬೇಕಾಗುತ್ತದೆ. ಈಗ ಬಳಸಿಕೊಳ್ಳುತ್ತಿರುವ ವಿಧಾನಗಳಿಗೆ ಬಹಳಷ್ಟು ಹಣ ವೆಚ್ಚವಾಗುತ್ತಿದ್ದರೂ ಅವುಗಳು ಹೇಳಿಕೊಳ್ಳುವಷ್ಟು ಯಶಸ್ವಿಯಾಗಿಲ್ಲ. ಹಾಗಾಗಿ ಈ ವಿಷಯವನ್ನು ಹೆಚ್ಚು ವಾಸ್ತವಿಕ ದೃಷ್ಟಿಯಿಂದ ನೋಡಬೇಕು ಮತ್ತು ಭಾವುಕತೆಗೆ ಎಡೆ ಇಲ್ಲದ ವ್ಯಾವಹಾರಿಕ ದೃಷ್ಟಿಯ ನೆಲೆಯಿಂದ ಪರಿಹರಿಸಬೇಕು. ಸ್ಲೋಗನ್‌ಗಳಿಗೆ ಜೋತು ಬೀಳುವ ನಮ್ಮ ಪರಿಪಾಠವನ್ನು ಬಿಟ್ಟು ಬಿಡಲು ಇದು ಸಕಾಲವಾಗಿದೆ. ನಾವೀಗ ನಮ್ಮ ವಿವೇಕದ ದನಿಗೆ ಓಗೊಡಬೇಕಾಗಿದೆ. ಇಂದಿನ ಅತ್ಯಂತ ಚಲನಶೀಲ ವೈಜ್ಞಾನಿಕ ಯುಗದಲ್ಲಿ ನಾವು ಅವೈಜ್ಞಾನಿಕ ದೃಷ್ಟಿಕೋನದಿಂದ ಮುಂದುವರಿಯುವುದು ಸಾಧ್ಯವಿಲ್ಲ. ದೇಶದಲ್ಲಿ ಆರಣ್ಯಗಳನ್ನು ಬೆಳೆಸುವ ನಿಟ್ಟಿನಲ್ಲಿ ಮತ್ತು ಪರ್ವತ ಪ್ರದೇಶಗಳಲ್ಲಿ ಭೂ ಸವೆತವನ್ನೂ ತಡೆಗಟ್ಟಲು ನಾವು ಸಾಕಷ್ಟು ಗಮನ ಹರಿಸಿದ್ದೇವೆಯೇ? ಪರ್ವತ ಪ್ರಾಂತ್ಯಗಳ ಬಗ್ಗೆ ನನಗೆ ಸಾಕಷ್ಟು ಅರಿವಿದೆ. ಎಲ್ಲ ಕಡೆ ಅರಣ್ಯ ನಾಶ ಮುಂದುವರಿದಿದೆ.

ಅರಪರ್ವತ ಪ್ರಾಂತ್ಯಗಳ ಬಗ್ಗೆ ನನಗೆ ಸಾಕಷ್ಟು ಅರಿವಿದೆ. ಎಲ್ಲ ಕಡೆ ಅರಣ್ಯ ನಾಶ ಮುಂದುವರಿದಿದೆ. ಅರಣ್ಯಗಳನ್ನು ಬೆಳೆಸುವ ನಮ್ಮ ಪ್ರಯತ್ನ ಏನೇನೂ ಸಾಲದು. ವಿನಾಶದ ಗತಿಗೆ ಹೋಲಿಸಿದರೆ ಈ ನಿಟ್ಟಿನಲ್ಲಿ ನಮ್ಮ ಮುನ್ನಡೆ ಏನೇನೂ ಸಾಲದು. ಭೂ ಸವೆತವನ್ನು ತಡೆಗಟ್ಟುವಲ್ಲಿಯೂ ಅಷ್ಟೇ. ಇದರಿಂದಾಗಿ ಅಗಾಧ ಪ್ರಮಾಣದ ಕೃಷಿ ಭೂಮಿ ನಷ್ಟವಾಗುತ್ತಿದೆ.

ಇದೇ ರೀತಿ ಕುಟುಂಬ ಯೋಜನೆಗೆ ಸಂಬಂಧಿಸಿದಂತೆ ಮೆಹತಾ ಸಮಿತಿ ಮಾಡಿರುವ ಶಿಫಾರಸುಗಳನ್ನು ನಾವು ಅಲಕ್ಷಿಸುವಂತಿಲ್ಲ. ಈ ದಿಸೆಯಲ್ಲಿ ಈಗಾಗಲೇ ಮಾಡಿರುವ ಪ್ರಯತ್ನಗಳ ಹೊರತಾಗಿ ಸಾಮಾಜಿಕ ಶಾಸನವೊಂದನ್ನು ತರುವುದು ಅಗತ್ಯವಾಗಿದೆ. ದೇಶದ ಜನಸಂಖ್ಯೆ ನಮ್ಮ ಆಹಾರ ಉತ್ಪಾದನೆಯ ಗತಿಗಿಂತ ಹೆಚ್ಚು ವೇಗವಾಗಿ ಸಾಗಿದೆ. ಇದನ್ನು ತಾಳಿಕೊಳ್ಳುವ ಶಕ್ತಿ ನಮಗಿಲ್ಲ. ಹುಡುಗರು ಮತ್ತು ಹುಡುಗಿಯರ ವಿವಾಹದ ವಯೋಮಾನವನ್ನು ಹೆಚ್ಚಿಸುವುದು ಇದಕ್ಕೊಂದು ಪರಿಹಾರವಾದೀತು. ಇದನ್ನು ಅನುಷ್ಠಾನಗೊಳಿಸುವುದು ಕಷ್ಟವೇನಲ್ಲ. ಚೀನಾದಲ್ಲಿ ಈ ಪ್ರಯತ್ನ ಮಾಡಿದ್ದಾರೆ. ಹಾಗಿದ್ದಲ್ಲಿ ನಮ್ಮಲ್ಲಿ ಮಾತ್ರ ಅದು ಏಕೆ ಸಾಧ್ಯವಿಲ್ಲ. ಮೂರನೇಯ ಮಗುವಿಗೆ - ಎರಡು ಮಕ್ಕಳು ಜೀವಂತವಾಗಿದ್ದಲ್ಲಿ ತೆರಿಗೆ ವಿಧಿಸುವ ಪ್ರಸ್ತಾವವನ್ನು ನಾನು ಬೆಂಬಲಿಸುತ್ತೇನೆ. ಜನನ ನಿಯಂತ್ರಣಕ್ಕೆ ಸಂಬಂಧಿಸಿದಂತೆ ಮೆಹತಾ ಸಮಿತಿ ಹೇಳಿರುವುದನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಅದೇ ರೀತಿ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಬೇಕೆಂಬುದನ್ನು ನಾನು ಸಮರ್ಥಿಸುತ್ತೇನೆ. ಸರ್ಕಾರಿ ನೌಕರರ ವೇತನ ಹೆಚ್ಚಿಸುವುದಕ್ಕೆ ಬದಲಾಗಿ ಎಲ್ಲೆಡೆ ನ್ಯಾಯಬೆಲೆ ಅಂಗಡಿ ತೆರೆಯುವುದಕ್ಕೆ ನಾನು ಆದ್ಯತೆ ನೀಡುತ್ತೇನೆ. ಜನರಿಗೆ ತಮ್ಮ ಅವಶ್ಯಕತೆಗಳನ್ನು ಭರಿಸುವ ಸಾಮರ್ಥ್ಯ ಇಲ್ಲ ಎಂಬ ಕಾರಣಕ್ಕಾಗಿ ನಾವು ಅವರಿಗೆ ಹೆಚ್ಚು ವೇತನ ನೀಡುತ್ತೇವೆ. ಆದರೆ ನ್ಯಾಯಬೆಲೆ ಅಂಗಡಿಗಳನ್ನು ಪ್ರಾಮಾಣಿಕವಾಗಿ ನಡೆಸಿಕೊಂಡು ಹೋಗಬೇಕು ಮತ್ತು ಈ ನ್ಯಾಯಬೆಲೆ ಅಂಗಡಿಗಳನ್ನು ನಡೆಸುವ ಹೊಣೆಗಾರಿಕೆಯನ್ನು ಸ್ವಯಂ ಸೇವಾ ಸಂಸ್ಥೆಗಳಿಗೆ ವಹಿಸಿಕೊಡಬೇಕೆಂದು ನಾನು ಸಚಿವರಲ್ಲಿ ವಿನಂತಿಸುತ್ತೇನೆ. ಈ ನ್ಯಾಯಬೆಲೆ ಅಂಗಡಿಗಳನ್ನು ನಡೆಸಿಕೊಂಡು ಹೋಗುವಲ್ಲಿ ಮಹಿಳೆಯರು ಹೆಚ್ಚಿನ ಸಹಕಾರ ನೀಡಬಹುದೆಂದು ನಾನು ಭಾವಿಸಿದ್ದೇನೆ. ಮಹಿಳೆಯರೇ ನಡೆಸುವುದರಿಂದ ಬಡವರ ಶೋಷಣೆ ತಪ್ಪುತ್ತದೆ ಮತ್ತು ಅವರಿಗೆ ಜೀವನಾವಶ್ಯಕ ಸಾಮಗ್ರಿಗಳು ಸುಲಭವಾಗಿ ದೊರೆಯುತ್ತವೆ. ವೇತನಗಳನ್ನು ಹೆಚ್ಚಿಸುವುದರಿಂದ ದೇಶದ ಖಜಾನೆಗೆ ಅದು ಹೊರೆಯಾಗುವುದೇ ಹೊರತು ಜನ ಸಾಮಾನ್ಯರಿಗೆ ಅದರ ಪ್ರಯೋಜನ ಲಭಿಸುವುದಿಲ್ಲ. ಬದಲಾಗಿ ನ್ಯಾಯಬೆಲೆ ಅಂಗಡಿಗಳಿಗೆ ಹೆಚ್ಚಿನ ಸಹಾಯಧನ ನೀಡುವುದು ಉತ್ತಮ ವಿಧಾನವಾಗಿದೆ. ಇದರಿಂದ ಕೋಟ್ಯಾಂತರ ರೂಪಾಯಿಗಳ ವೆಚ್ಚ ತಗ್ಗುವುದಲ್ಲದೆ ಜೀವನಾವಶ್ಯಕ ಪದಾರ್ಥಗಳ ಪೂರೈಕೆಯಿಂದ ಜನರಲ್ಲಿ ಹೆಚ್ಚಿನ ಸಂತೃಪ್ತಿ ಮೂಡುತ್ತದೆ. ಹೀಗಾಗಿ ಇಂತಹ ಯೋಜನೆಗಳನ್ನು ಜಾರಿಗೊಳಿಸುವಲ್ಲಿ ಪ್ರತಿಯೊಬ್ಬರು ಅದಕ್ಕೆ ಹೆಗಲುಕೊಡಬೇಕು. ಈ ದಿಸೆಯಲ್ಲಿ ಸಾರ್ವಜನಿಕರ ವಿಶ್ವಾಸ ಮತ್ತು ಸಹಕಾರವನ್ನು ಪಡೆದುಕೊಳ್ಳುವುದು ಮುಖ್ಯ - ಅದರಲ್ಲೂ ವಿಶೇಷವಾಗಿ ಮಣ್ಣಿನ ಮಕ್ಕಳ ಸಹಕಾರ ಸರ್ಕಾರದೊಂದಿಗಿರಬೇಕು.

## ಆಹಾರ ಪದಾರ್ಥಗಳ ಕಲಬೆರಕೆಗೆ ಶಿಕ್ಷೆ ವಿಧಿಸುವ ವಿಧೇಯಕ *

ಈ ವಿಷಯ ಕುರಿತಂತೆ ಸದನದ ಮಾನ್ಯ ಸದಸ್ಯರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ನಾನು ಸಂಪೂರ್ಣವಾಗಿ ಸಮರ್ಥಿಸುತ್ತೇನೆ. ಇದು ಜನರ ಆರೋಗ್ಯದ ಮೇಲೆ ಪ್ರತಿಕೂಲ ಪರಿಣಾಮ ಬೀರುವ ಒಂದು ದೊಡ್ಡ ಸಮಸ್ಯೆಯಾಗಿದೆ. ನಮಗೆ ಆರೋಗ್ಯಕರವಾದ ಹಾಗೂ ಶುದ್ಧ ಆಹಾರ ದೊರಕದೆ ಇದ್ದಲ್ಲಿ ನಾವು ಎಷ್ಟೇ ಔಷಧಿಗಳನ್ನು ಸೇವಿಸಿದರೂ ಯಾವುದೇ ಪ್ರಯೋಜನವಾಗುವುದಿಲ್ಲ. ಹಾಗಾಗಿ ಈ ವಿಷಯದಲ್ಲಿ ಸದಸ್ಯರು ವ್ಯಕ್ತಪಡಿಸಿದ ಅಭಿಪ್ರಾಯದಲ್ಲಿ ನನಗೆ ಸಂಪೂರ್ಣ ಸಹಮತವಿದೆ. ಆದರೆ ಈ ಬಗ್ಗೆ ಕಾಯ್ದೆಯೊಂದನ್ನು ತರಲು ನನಗೆ ಅಧಿಕಾರ ಇಲ್ಲದ್ದರಿಂದ ಇಂತಹ ವಿಧೇಯಕವೊಂದನ್ನು ತರಲು ಸಾಧ್ಯವಾಗಲಿಲ್ಲ. ಆದರೆ ಆಹಾರ ಕಲಬೆರಕೆ ತಡೆಹಿಡಿಯಲು ಸೂಕ್ತ ವ್ಯವಸ್ಥೆಯನ್ನು ರೂಪಿಸಬೇಕು ಮತ್ತು ಸಮಾಜಘಾತುಕ ಶಕ್ತಿಗಳು ಈ ದಂಧೆಯಲ್ಲಿ ತೊಡಗುವುದನ್ನು ತಪ್ಪಿಸಲು ಶ್ರಮಿಸಬೇಕೆಂದು ನಾನು ಪ್ರತಿ ಎರಡು - ಮೂರು ತಿಂಗಳಿಗೊಮ್ಮೆ ರಾಜ್ಯಗಳ ಸಚಿವರುಗಳಿಗೆ ಪತ್ರಗಳನ್ನು ಬರೆಯುತ್ತಿದ್ದೆ. ಇದಕ್ಕಿಂತ ಹೆಚ್ಚಿನದೇನನ್ನೂ ಮಾಡಲು ನನಗೆ ಸಾಧ್ಯವಾಗಿಲ್ಲ. ನಾನು ಇಲ್ಲಿಗೆ ಬಂದಾಗ ದೆಹಲಿಯಲ್ಲಿ ಒಬ್ಬನೇ ಒಬ್ಬ ಅಧಿಕಾರಿ ಈ ಕಾರ್ಯಭಾರದಲ್ಲಿ ಆಸಕ್ತಿ ಹೊಂದಿರುವುದನ್ನು ನಾನು ಗಮನಿಸಿದೆ. ಈ ಸಮಸ್ಯೆಯ ಬಗ್ಗೆ ಇನ್ನು ಹೆಚ್ಚಿನ ಗಮನ ನೀಡುವಂತೆ ನಾನು ಅಂತಹ ಅಧಿಕಾರಿಗಳಿಗೆ ಇನ್ನು ಹೆಚ್ಚಿನ ಸಿಬ್ಬಂದಿ ನೀಡಲು ನಿರ್ಧರಿಸಿದೆ. ಈ ವಿಷಯದಲ್ಲಿ ಸಂಬಂಧಪಟ್ಟವರ ಗಮನ ಸೆಳೆಯಲು ಮತ್ತು ನನ್ನ ಅಭಿಪ್ರಾಯಗಳನ್ನು ಅವರಿಗೆ ತಿಳಿಯಹೇಳಿದೆ. ಈ ಸಂಬಂಧದಲ್ಲಿ ಅನೇಕ ಸಭೆಗಳನ್ನು ನಡೆಸಿದೆ. ಆದರೆ ಈ ಅಪ್ರಾಮಾಣಿಕತೆಯನ್ನು ಬೇರು ಸಹಿತ ಕಿತ್ತೊಗೆಯುವುದು ಸುಲಭವಲ್ಲ. ಇದಾದ ನಂತರ ಅಧಿಕಾರ ದೊರೆತ ತಕ್ಷಣದಲ್ಲೇ ನಾನು ಆಹಾರ ಕಲಬೆರಕೆ ವಿಧೇಯಕವನ್ನು ತಂದೆ. ಈ ವಿಧೇಯಕವನ್ನು ಅದಕ್ಕಾಗಿಯೇ ರಚಿತವಾದ ಆಯ್ಕೆ ಸಮಿತಿಯ ಪರಿಶಿಲನೆಗೆ ಒಪ್ಪಿಸಲಾಯಿತು. ಈಗ ಈ ವಿಧೇಯಕ ನಿಮ್ಮ ಮುಂದೆ ಮಂಡಿಸಲಾಗಿದೆ. ಸದನವು ಇತರ ಅನೇಕ ಕೆಲಸ ಕಾರ್ಯಗಳಲ್ಲಿ ಮುಳುಗಿದ್ದರಿಂದ ಇದಕ್ಕೆ ಮುಂಚಿತವಾಗಿ ವಿಧೇಯಕವನ್ನು ಮಂಡಿಸಲು ಸಾಧ್ಯವಾಗಿರಲಿಲ್ಲ. ಈ ವಿಷಯದಲ್ಲಿ ನಾನು ನನ್ನ ಪ್ರಾಮಾಣಿಕ ಪ್ರಯತ್ನಗಳನ್ನು ಸತತವಾಗಿ ಮುಂದುವರಿಸಿದ್ದೇನೆ. ಸಾಧ್ಯವಾದಷ್ಟು ಬೇಗನೆ ಈ ವಿಧೇಯಕ ಅಂಗೀಕಾರ ಪಡೆಯಬೇಕೆಂಬುದು ನನ್ನ ಹಂಬಲವಾಗಿದ್ದು, ಈ ನಿಟ್ಟಿನಲ್ಲಿ ನಿಮ್ಮ ಸಂಪೂರ್ಣ ಸಹಕಾರವನ್ನು ಯಾಚಿಸುತ್ತಿದ್ದೇನೆ. ಆದರ ಈ ದಿನದ ತನಕವೂ ಇದನ್ನು ಮಂಡಿಸಲು ಸಾಧ್ಯವಾಗಲಿಲ್ಲ. ಈ ಸಲವೂ ಈ ಉದ್ದೇಶಕ್ಕಾಗಿ ನಾನು ಸಂಸದೀಯ ವ್ಯವಹಾರಗಳ ಸಚಿವರನ್ನು ಭೇಟಿಯಾದಾಗ ಅವರು ಸದನದ ಮುಂದೆ ಬಹುದೊಡ್ಡ ಕಲಾಪ ಪಟ್ಟಿ ಇರುವುದರಿಂದ ಮತ್ತು ಈ ವಿಷಯದ ಬಗ್ಗೆ ಚರ್ಚಿಸಲು ಸದಸ್ಯರಿಗೆ ಮೂರು ದಿನಗಳ ಕಾಲಾವಕಾಶ ಬೇಕಿರುವುದರಿಂದ ವಿಧೇಯಕವನ್ನು ಮುಂಬರುವ ಅಧಿವೇಶನದ ಪ್ರಾರಂಭದಲ್ಲಿ ಮಂಡಿಸಲಾಗುವುದೆಂದು ತಿಳಿಸಿದರು.

---

* ಆಹಾರ ಪದಾರ್ಥಗಳ ಕಲಬೆರಕೆಗೆ ಶಿಕ್ಷೆ ವಿಧಿಸುವ ವಿಧೇಯಕ ಕುರಿತು ಶ್ರೀ ಜಂಜುನ್‌ವಾಲಾ ಅವರು ಮಂಡಿಸಿದ ಖಾಸಗಿ ವಿಧೇಯಕದ ಮೇಲೆ ಸದಸ್ಯರು ಎತ್ತಿದ ಆಕ್ಷೇಪಗಳಿಗೆ ಉತ್ತರಿಸುತ್ತ (ಲೋಕಸಭೆ ಚರ್ಚೆ, ಏಪ್ರಿಲ್ 28, 1954. ಸಿಸಿ 5548 - 5550).

ಇದು ಅತ್ಯವಶ್ಯ ಎಂದು ನಾನು ಭಾವಿಸಿದ್ದೇನೆ. ನಾನು ಐದು ದಿನಗಳನ್ನು ಇದಕ್ಕಾಗಿಯೇ ಮೊಸಲಾಗಿಟ್ಟು ಆಯ್ಕೆ ಸಮಿತಿ ಇದನ್ನು ಅನುಮೋದಿಸುವಂತೆ ಮಾಡಿದೆ. ಒಟ್ಟಿನಲ್ಲಿ ಈ ವಿಧೇಯಕ ಅತಿ ಬೇಗ ಅಂಗೀಕೃತವಾಗಬೇಕು ಎಂಬುದು ನನ್ನ ಇಂಗಿತವಾಗಿದೆ. ಆದರೂ ಇದುವರೆಗೂ ಈ ವಿಧೇಯಕವನ್ನು ಸದನ ಮುಂದೆ ತರಲಾಗಲಿಲ್ಲ. ಆದರೆ ಇದಕ್ಕಾಗಿ ನೀವು ನನ್ನನ್ನು ಹಳಿಯುವ ಹಾಗಿಲ್ಲ. ಈಗ ವಿಷಯ ನಿಮಗೂ ಗೊತ್ತಿದೆ. ನೀವು ಈ ವಿಷಯದಲ್ಲಿ ಹೆಚ್ಚಿನ ಆಸಕ್ತಿ ತೋರಿದ್ದರೆ ಸರಕಾರ ಸಾಧ್ಯವಾದಷ್ಟು ಬೇಗ ಈ ವಿಧೇಯಕವನ್ನು ಸದನದ ಮುಂದೆ ತರಬೇಕೆಂದು ಆಗ್ರಹ ಪಡಿಸಿದ್ದರೆ ಈ ವಿಧೇಯಕ ಈಗಾಗಲೇ ಅಂಗೀಕಾರ ಪಡೆಯುತ್ತಿತ್ತು. ಬದಲಾಗಿ ನೀವು ಈ ಹೊಣೆಯನ್ನು ನನ್ನೊಬ್ಬಳ ಮೇಲೆಯೇ ಹೊರಿಸುತ್ತಿದ್ದೀರಿ. ಆದರೆ ಈ ವಿಷಯದಲ್ಲಿ ನನ್ನ ಮೇಲೆ ತಪ್ಪು ಹೊರಿಸುವುದು ಸರಿಯಲ್ಲ. ಈ ವಿಧೇಯಕವು ಸಿದ್ಧಗೊಂಡು ಕಳೆದ ಒಂದು ವರ್ಷದಿಂದ ನಿಮ್ಮ ಪರಿಶೀಲನೆಗಾಗಿ ಕಾದು ಕೂತಿದೆ.

ಈಗ ಮಾನ್ಯ ಸದಸ್ಯರು ತಂದಿರುವ ವಿಧೇಯಕವು ಸಮಗ್ರ ಸ್ವರೂಪದ್ದಲ್ಲ, ಎಂಬ ಅಂಶವನ್ನು ನಾನಿಲ್ಲಿ ಸ್ಪಷ್ಟಪಡಿಸುತ್ತಿದ್ದೇನೆ. ಇದರಿಂದ ಯಾವುದೇ ಉದ್ದೇಶ ಈಡೇರುವುದಿಲ್ಲ, ಅಥವಾ ನಾನು ಉದ್ದೇಶಿಸಿರುವುದು ಈಡೇರುವುದಿಲ್ಲ. ಆದರೂ ಈ ವಿಷಯದ ಬಗ್ಗೆ ಸದನದ ಗಮನ ಸೆಳೆದ ಸದಸ್ಯರ ಪ್ರಯತ್ನವನ್ನು ಅಭಿನಂದಿಸುತ್ತೇನೆ. ಈ ವಿಷಯದಲ್ಲಿ ಸರ್ಕಾರ ಏನಾದರೂ ಮಾಡಬೇಕೆಂಬ ಅವರ ಒತ್ತಾಯವನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ನನ್ನ ಅಭಿಪ್ರಾಯದಲ್ಲಿ ಈ ವಿಧೇಯಕವು ತೀರಾ ಅಸಮರ್ಪಕವಾಗಿದೆ. ಉದಾಹರಣೆಗೆ ಈ ವಿಧೇಯಕವು ಆಹಾರದ ಗುಣಮಟ್ಟ ನಿಷ್ಕರ್ಷೆಯ ಮಾನದಂಡ ಹೇಗಿರಬೇಕು ಮತ್ತು ಕಲಬೆರಕೆ ಎಂದರೇನು ಎಂಬುದನ್ನು ಸರಿಯಾಗಿ ವಿಶ್ಲೇಷಿಸಿಲ್ಲ. ಆದರೆ ನಾನು ಮಂಡಿಸಿರುವ ವಿಧೇಯಕವು ಹೆಚ್ಚು ವಿವರವಾಗಿ ಮತ್ತು ಉಪಯುಕ್ತವಾಗಿ ಇದೆ. ಈ ವಿಧೇಯಕವು ಈಗಲೇ ಅಂಗೀಕಾರ ಪಡೆಯಬೇಕೆಂದು ನಾನು ಈ ಸಂದರ್ಭದಲ್ಲಿ ಮಾನ್ಯ ಸದಸ್ಯರಲ್ಲಿ ಮನವಿ ಮಾಡಿಕೊಳ್ಳುತ್ತಿದ್ದೇನೆ. ಈ ಸಂಬಂಧದಲ್ಲಿ ರಾಜ್ಯ ಸರ್ಕಾರಗಳು ಮತ್ತು ದೆಹಲಿ ಸರ್ಕಾರಗಳನ್ನು ಪದೇ ಪದೇ ವಿನಂತಿಸುತ್ತಲೇ ಬಂದಿದ್ದೇನೆ. ಮಾನ್ಯ ಸದಸ್ಯರು ಹೇಳಿರುವಂತೆ ಈ ವಿಷಯದಲ್ಲಿ ರಾಜ್ಯ ಸರ್ಕಾರಗಳು ಸಾಕಷ್ಟು ಎಚ್ಚರ ವಹಿಸಬೇಕು, ಮುಂಜಾಗ್ರತೆ ಕ್ರಮ ಕೈಗೊಳ್ಳಬೇಕು ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಆಹಾರದ ಕಲಬೆರಕೆ ತಡೆಗಟ್ಟಲು ಯತ್ನಿಸಬೇಕು. ಹಾಗಾಗಿ ಮಾನ್ಯ ಸದಸ್ಯರು ತಾವು ಮಂಡಿಸಿರುವ ವಿಧೇಯಕವನ್ನು ಹಿಂತೆಗೆದುಕೊಳ್ಳಬೇಕು ಎಂದು ನಾನು ವಿನಂತಿಸುತ್ತೇನೆ. ಇದಕ್ಕೆ ಬದಲಾಗಿ ನಾನು ರೂಪಿಸಿರುವ ವಿಧೇಯಕವನ್ನು ಸಾಧ್ಯವಾದಷ್ಟು ಬೇಗ ಸದನದ ಮುಂದಿರಿಸಲು ಯತ್ನಿಸುತ್ತೇನೆ.

## 37. ಆಹಾರ ಕಲಬೆರಕೆ ತಡೆ ವಿಧೇಯಕ 1954 *

ನಾವು ಎದುರಿಸುತ್ತಿರುವ ಆಹಾರ ಕಲಬೆರಕೆಯ ಭೀಕರ ಹಾವಳಿಯನ್ನು ಪರಿಣಾಮಕಾರಿಯಾಗಿ ತಡೆಗಟ್ಟುವ ತುರ್ತು ಅಗತ್ಯವನ್ನು ಕುರಿತಂತೆ ನಾನು ಇಲ್ಲಿ ವಿವರಿಸಿ ಹೇಳಬೇಕಾದ ಅಗತ್ಯವಿಲ್ಲವೆಂದು ಭಾವಿಸಿದ್ದೇನೆ. ಈ ಪಿಡುಗನ್ನು ಎದುರಿಸಲು ಬಹುತೇಕ ಎಲ್ಲ ರಾಜ್ಯಗಳೂ ಇಂತಹ ಕಾಯ್ದೆಯನ್ನು ಹೊಂದಿವೆ. ಆದರೆ ಅಸ್ತಿತ್ವದಲ್ಲಿರುವ ಈ ಕ್ರಮಗಳಲ್ಲಿ ಏಕರೂಪತೆಯಿಲ್ಲ. ಈ ಸಂಬಂಧದಲ್ಲಿನ ಅಪರಾಧಗಳಿಗೆ ಈಗ ನಾವು ವಿಧಿಸಲು ಅವಕಾಶವಿರುವ ದಂಡನೆ ಸಮರ್ಪಕವಾಗಿಲ್ಲ ಹಾಗೂ ಪ್ರಮಾಣ ಬದ್ಧವಾಗಿಲ್ಲ ಎಂಬುದು ಬಹುತೇಕ ಸಚಿವರ ಅಭಿಮತವಾಗಿದೆ. ಈ ಪ್ರಶ್ನೆಯನ್ನು ಅವರೊಂದಿಗೆ ಚರ್ಚಿಸಿದಾಗ ಅವರೆಲ್ಲರೂ ಈ ಅಭಿಪ್ರಾಯವನ್ನು ನನಗೆ ತಿಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅಖಿಲ ಭಾರತ ಮಟ್ಟದಲ್ಲಿ ಅನ್ವಯಿಸಬಹುದಾದ ಅಪರೂಪದ ವಿಧೇಯಕವೊಂದನ್ನು ನಾನೀಗ ಮಂಡಿಸುತ್ತಿದ್ದೇನೆ. 1952ರ ನವೆಂಬರ್‌ನಲ್ಲಿ ಲೋಕಸಭೆಯಲ್ಲಿ ಈ ಸಂಬಂಧದ ವಿಧೇಯಕವನ್ನು ಮಂಡಿಸಲಾಯಿತು ಮತ್ತು ಪರಿಶೀಲನೆಗಾಗಿ ಅದನ್ನು ಆಯ್ಕೆ ಸಮಿತಿಗೆ ಒಪ್ಪಿಸಲಾಯಿತು. ಆಯ್ಕೆ ಸಮಿತಿ ಸಭೆ ಸೇರಿ 1953ರ ಫೆಬ್ರವರಿಯಲ್ಲೇ ತನ್ನ ಅಭಿಪ್ರಾಯವನ್ನು ನೀಡಿತ್ತು. ಅಂದಿನಿಂದ ಈತನಕವೂ ಈ ವಿಧೇಯಕವು ಲೋಕಸಭೆಯಲ್ಲಿ ಮಂಡನೆಗಾಗಿ ಕಾದು ಕುಳಿತಿತ್ತು. ದುರಾದೃಷ್ಟವಶಾತ್ ಇನ್ನೂ ಹೆಚ್ಚಿನ ಪ್ರಾಮುಖ್ಯದ ಹಲವು ಕಲಾಪಗಳು ಪರಿಶೀಲನೆಗೆ ಬಾಕಿ ಇದ್ದುದ್ದರಿಂದ ಈತನಕವೂ ಈ ವಿಧೇಯಕವನ್ನು ಬದಿಗೆ ಸರಿಸಲಾಗಿತ್ತು. ಆಯ್ಕೆ ಸಮಿತಿ ತಿದ್ದುಪಡಿ ಸೂಚಿಸಿರುವ ಈ ವಿಧೇಯಕವನ್ನು ಈಗ ಲೋಕಸಭೆ ಮತ್ತೆ ಪರಿಶೀಲನೆಗೆ ತೆಗೆದುಕೊಂಡಿದೆ. ಲೋಕಸಭೆಯು ಅನುಮೋದನೆ ನೀಡಿದ ಬಳಿಕ ಇದನ್ನು ಮತ್ತೆ ನಾನು ರಾಜ್ಯಸಭೆಯಲ್ಲಿ ಮಂಡಿಸಬೇಕಾಗಿದೆ. ಈ ಸದನದ ಗೌರವಾನ್ವಿತ ಸದಸ್ಯರೆಲ್ಲರೂ ಈ ವಿಧೇಯಕಕ್ಕೆ ಬೆಂಬಲ ನೀಡುವರೆಂದು ನಾನು ದೃಢವಾಗಿ ನಂಬಿದ್ದೇನೆ. ಒಟ್ಟಿನಲ್ಲಿ ಈ ವಿಧೇಯಕವು ಶೀಘ್ರಾತಿ ಶೀಘ್ರ ಕಾಯಿದೆಗಳ ಸಂಪುಟವನ್ನು ಸೇರಬೇಕೆಂಬುದೇ ನನ್ನ ಕಾಳಜಿಯಾಗಿದೆ.

ಈ ವಿಧೇಯಕವನ್ನು ಅಭ್ಯಸಿಸಿರುವ ಸದಸ್ಯರು ಕಲಬೆರಕೆ ಅಪರಾಧ-ಒಂದು ಶಿಕ್ಷಾರ್ಹ ಅಪರಾಧ ಎಂದು ಗುರುತಿಸುವುದು ಕಠಿಣವಾಗಲಾರದು ಎಂದಿದ್ದಾರೆ. ಎಲ್ಲ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚನೆ ನಡೆಸಿ ಮತ್ತು ಬೇರೆ ಬೇರೆ ರಾಜ್ಯಗಳಲ್ಲಿ ಈಗ ಅಸ್ತಿತ್ವದಲ್ಲಿರುವ ಕ್ರಮಗಳನ್ನು ಸೂಕ್ಷ್ಮವಾಗಿ ಪರಾಮರ್ಶಿಸಿ ಈ ವಿಧೇಯಕಕ್ಕೆ ಹಲವಾರು ಖಂಡಗಳನ್ನು ಸೇರಿಸಿರುವುದನ್ನು ನೀವು ನೋಡಿದ್ದೀರಿ. ಆಹಾರ ಕಲಬೆರಕೆ ಮಾನವ ಸಮುದಾಯದ ವಿರುದ್ಧ ಮಾಡುವ ಒಂದು ಘೋರ ಅಪರಾಧವಾಗಿದ್ದು ಅದಕ್ಕೆ ಮುಂದಾಗುವ ಕಂಪನಿಗಳು ಅಥವಾ ವ್ಯಕ್ತಿಗಳನ್ನು ದಂಡಿಸಲು ರಾಜ್ಯ ಸರ್ಕಾರಗಳಿಗೆ ಅವಕಾಶ ಕಲ್ಪಿಸಿಕೊಡುವುದು ಈ ವಿಧೇಯಕದ ಉದ್ದೇಶವಾಗಿದೆ.

* ಲೋಕಸಭೆಯಲ್ಲಿ ಅಂಗೀಕರಿಸಲಾದ 1954ರ ಆಹಾರ ಕಲಬೆರಕೆ ತಡೆ ವಿಧೇಯಕಕ್ಕೆ ತಿದ್ದುಪಡಿ ಸೂಚಿಸಿ ನಿಲುವಳಿ ಮಂಡಿಸುತ್ತಾ (ರಾಜ್ಯ ಸಭೆ ಚರ್ಚೆ, ಸೆಪ್ಟೆಂಬರ್ 1, 1954, ಸಿಸಿ-1 008-1010, 2134-2135 ಮತ್ತು 2182-2193).

ಆಯ್ಕೆ ಸಮಿತಿಯು ಮಾಡಿರುವ ತಿದ್ದುಪಡಿಗಳು ಹಾಗೂ ಈ ನಿಟ್ಟಿನಲ್ಲಿ ಲೋಕಸಭೆಯಲ್ಲಿ ಸೂಚಿಸಲಾಗಿರುವ ತಿದ್ದುಪಡಿಗಳೊಂದಿಗೆ ಈ ವಿಧೇಯಕವು ಈ ಪಿಡುಗನ್ನು ತಡೆಹಿಡಿಯುವಲ್ಲಿ ಮಹತ್ವದ ಪರಿಣಾಮ ಬೀರಲಿದೆ ಎಂಬುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ. ಈ ವಿಧೇಯಕದಿಂದ ರಾಜ್ಯ ಸರ್ಕಾರಗಳಿಗೂ ಹೆಚ್ಚಿನ ಅನುಕೂಲವಾಗುವುದು ಎಂದು ನಾನು ಭಾವಿಸಿದ್ದೇನೆ. ಆದರೆ ಕಾಯ್ದೆಯೊಂದರಿಂದಲೇ ಅಪ್ರಾಮಾಣಿಕತೆಯನ್ನು ನಿವಾರಿಸುವುದು ಸಾಧ್ಯವಿಲ್ಲ. ಆದರೆ ಪ್ರತಿಬಂಧಕ ಕ್ರಮಗಳು ಸ್ವಲ್ಪಮಟ್ಟಿಗೆ ಪರಿಣಾಮ ಬೀರುತ್ತವೆಂಬುದೂ ವಾಸ್ತವವೇ ಆಗಿದೆ. ಒಟ್ಟಿನಲ್ಲಿ ಈ ವಿಧೇಯಕ ಅಂಗೀಕಾರ ಪಡೆದಾಗ ಈ ನಿಟ್ಟಿನಲ್ಲಿ ನಾವು ಗಮನಾರ್ಹ ಸಾಧನೆಯನ್ನು ಮಾಡಿದಂತಾಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

* * * * * *

ಅಪರಾಧ ಎಸಗಿದ ಯಾವನೇ ವ್ಯಕ್ತಿಯನ್ನು ವಿಚಾರಣೆಗೆ ಗುರಿಪಡಿಸುವುದನ್ನು ಯಾವ ಶಕ್ತಿಯೂ ತಡೆಯಲಾರದು. ಸರ್ಕಾರಿ ನೌಕರರಾಗಲಿ ಅಥವಾ ಇತರರಾಗಲಿ ಅಪರಾಧ ಎಸಗಿದಲ್ಲಿ ಅಂಥವರು ದಂಡನೆಗೆ ಒಳಗಾಗಿಯೇ ತೀರಬೇಕು. *

ಯಾವನೇ ಓರ್ವ ವ್ಯಕ್ತಿ ತಪ್ಪಿತಸ್ಥ ಎಂದು ಕಂಡು ಬಂದಲ್ಲಿ ಆತ ಸರ್ಕಾರಿ ನೌಕರನಾಗಿರಲಿ ಅಥವಾ ಅಲ್ಲದಿರಲಿ ಅಂತಹವರ ವಿರುದ್ಧ ಕಾನೂನು ಕ್ರಮ ಅನಿವಾರ್ಯ.

ಮಾನ್ಯ ಸಭಾಧ್ಯಕ್ಷರೇ ಕಾಯ್ದೆಗೆ ಸಂಬಂಧಿಸಿದಂತೆ ಸೂಕ್ತ ವಿಧಿಗಳನ್ನು ರೂಪಿಸಲಾಗುವುದು ಮತ್ತು ಸೂಕ್ತ ಖಂಡಗಳನ್ನು ಸೇರಿಸಲಾಗುವುದು. ಒಟ್ಟಾರೆಯಾಗಿ ಈ ಕಾಯ್ದೆಯ ನಿಯಂತ್ರಣವು ರಾಜ್ಯ ಸರ್ಕಾರದ ಕೈಯಲ್ಲಿ ಇರುವುದು. ಸಂವಿಧಾನದಲ್ಲಿ ನಿರ್ದಿಷ್ಟಪಡಿಸಿದ ಹೊರತಾಗಿ, ಕಾಯ್ದೆಯನ್ನು ರೂಪಿಸುವ ಹೊರತಾಗಿ ಉಭಯ ಸಾಮಾನ್ಯ ಯಾದಿಯಲ್ಲಿ ಬರುವ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಕಾರ್ಯ ನಿರ್ವಹಣೆಯ ಅಧಿಕಾರವು ರಾಜ್ಯ ಸರ್ಕಾರಗಳ ಕೈಯಲ್ಲಿ ಇರುತ್ತದೆ ಎಂಬ ಅಂಶವನ್ನು ಸಂವಿಧಾನದ 73ನೇ ವಿಧಿ ನಿಖರವಾಗಿ ಹೇಳುತ್ತದೆ. ಪ್ರಸಕ್ತ ವಿಧೇಯಕದಲ್ಲೂ ಸಾಕಷ್ಟು ಅಧಿಕಾರಗಳನ್ನು ಕೇಂದ್ರ ಸರ್ಕಾರಕ್ಕೆ ಮೀಸಲಿಡಲಾಗಿದೆ. ಇದನ್ನು ನೀವು 23, 3,4 ಮತ್ತಿತರ ಖಂಡಗಳಲ್ಲಿ ನೋಡಬಹುದು. **

ಮಾನ್ಯ ಉಪಸಭಾಪತಿಗಳೇ, ಮೊಟ್ಟ ಮೊದಲಲ್ಲಿ ಈ ವಿಧೇಯಕಕ್ಕೆ ಬೆಂಬಲ ನೀಡಿದ ಎಲ್ಲ ಸದಸ್ಯರಿಗೂ ಕೃತಜ್ಞತೆ ಸೂಚಿಸಲು ಬಯಸುತ್ತೇನೆ. ಆಹಾರದ ಕಲಬೆರಕೆಯಿಂದ ಸಾರ್ವಜನಿಕರ ಆರೋಗ್ಯಕ್ಕೆ ಎಂತಹ ಮಾರಕ ಪರಿಣಾಮ ಉಂಟಾಗುತ್ತದೆ ಎಂಬುದು ಈ ಸದನದಲ್ಲಿ ನನ್ನನ್ನು ಬಿಟ್ಟರೆ ಬೇರಾರಿಗೂ ತಿಳಿದಿರಲಾರದು ಎಂದು ನಾನು ಭಾವಿಸುತ್ತೇನೆ. ಹಾಗಾಗಿ ನನ್ನ ಕೈಗೆ ಅಧಿಕಾರ ಬಂದ ತಕ್ಷಣದಲ್ಲೇ ಅಖಿಲ ಭಾರತ ಮಟ್ಟದಲ್ಲಿ ಅನ್ವಯವಾಗುವ

* ಆಹಾರ ಕಲಬೆರಕೆಗೆ ಸಂಬಂಧಿಸಿದಂತೆ ದೇಶದಲ್ಲಿ ಏಕರೂಪದ ಕಾಯ್ದೆ ಇರಬೇಕು ಮತ್ತು ಕಂಪನಿಗಳು ಎಸಗುವ ಅಪರಾಧಗಳಿಗೆ ನಿರ್ದಿಷ್ಟ ವಿಧಿಗಳಿರಬೇಕು ಎಂದು ಶ್ರೀ ರಾಜಗೋಪಾಲನಾಯ್ಡು ಅವರು ಎತ್ತಿದ ಪ್ರಸ್ತಾಪಕ್ಕೆ ಸೆಪ್ಟೆಂಬರ್ 14, 1954 ರಂದು ನಡೆದ ಚರ್ಚೆಯಲ್ಲಿ ಮಧ್ಯಪ್ರವೇಶಿಸಿ ಮಾತನಾಡುತ್ತಾ.

** ಸರ್ಕಾರಿ ನೌಕರರು ಎಸಗುವ ಅಪರಾಧಗಳಿಗೆ ಸಂಬಂಧಿಸಿದಂತೆ ಶ್ರೀ ರಾಜಗೋಪಾಲ ನಾಯ್ಡು ಅವರು ಮಾಡಿದ ಪ್ರಸ್ತಾವಗಳಿಗೆ ಉತ್ತರ ನೀಡುತ್ತಾ.

ಏಕರೂಪದ ಕಾಯ್ದೆಯೊಂದನ್ನು ತರಲು ನಾನು ಈ ವಿಧೇಯಕವನ್ನು ಮಂಡಿಸಿದ್ದೇನೆ. ಭಾರತವು ಗಣರಾಜ್ಯವಾಗಿ ಪರಿವರ್ತನೆಗೊಂಡ ತಕ್ಷಣದಲ್ಲೇ ಕಾಲ ವಿಳಂಬ ಮಾಡದೇ ವಿಧೇಯಕವೊಂದನ್ನು ಮಂಡಿಸಲು ನಾನು ಮುಂದಾಗಿದ್ದೇನೆ. ನಾನು ಈ ವಿಷಯದಲ್ಲಿ ಎಲ್ಲ ರಾಜ್ಯಗಳೊಂದಿಗೆ ಸಮಾಲೋಚಿಸಿದ್ದೇನೆ. ಆಹಾರ ಕಲಬೆರಕೆ ಮತ್ತು ತತ್ಸಂಬಂಧಿ ಅಪರಾಧಗಳನ್ನು ನಿಯಂತ್ರಿಸುವಲ್ಲಿ ವಿವಿಧ ರಾಜ್ಯಗಳಲ್ಲಿ ಈಗ ಅಸ್ತಿತ್ವದಲ್ಲಿರುವ ಕ್ರಮಗಳನ್ನು ವಿವರವಾಗಿ ಪರಿಶೀಲಿಸಿದ್ದೇನೆ. ಹೀಗೆ ರಾಜ್ಯ ಸರ್ಕಾರಗಳ ಒಪ್ಪಿಗೆಯ ಮೇರೆಗೆ ಮತ್ತು ಈಗಿರುವ ಕಾಯ್ದೆಗಳ ಸಾರವನ್ನು ಗ್ರಹಿಸಿಕೊಂಡು ನಾನು ಈ ವಿಧೇಯಕವನ್ನು ತಂದಿದ್ದೇನೆ. ಈ ವಿಧೇಯಕವು 1952ರ ನವೆಂಬರ್ ತಿಂಗಳಲ್ಲಿ ಲೋಕಸಭೆಯಲ್ಲಿ ಮಂಡಿಸಲ್ಪಟ್ಟಿತು ಮತ್ತು 1953 ರಲ್ಲಿ ಅದು ಆಯ್ಕೆ ಸಮಿತಿಯ ಮುಂದೆ ಬಂದಿತು. ಆಯ್ಕೆ ಸಮಿತಿಯು ಭಾರೀ ಪರಿಶ್ರಮ ವಹಿಸಿ ಈ ವಿಧೇಯಕದ ಎಲ್ಲ ಅಂಶಗಳನ್ನು ಪರಿಶೀಲಿಸಿ 1953ರ ಏಪ್ರಿಲ್ ತಿಂಗಳಲ್ಲಿ ತಿದ್ದುಪಡಿಗಳನ್ನು ಸೂಚಿಸಿತು. ಅನಂತರ ಮತ್ತೆ ಅದನ್ನು ಸದನದಲ್ಲಿ ಮಂಡಿಸಲಾಯಿತು. ಲೋಕಸಭೆಯಲ್ಲಿ ಅದು ಅಷ್ಟು ದೀರ್ಘಕಾಲ ಹಾಗೆಯೇ ಉಳಿದುಕೊಂಡು ಬರಲು ನಾನೇ ಕಾರಣ ಎಂದು ಹಲವರು ದೂರಿದ್ದಾರೆ. ಆದರೆ ಪ್ರತಿ ಅಧಿವೇಶನದಲ್ಲಿ ಈ ವಿಧೇಯಕ ಮಂಡನೆಯಾಗಬೇಕೆಂದು ನಾನು ನನ್ನಿಂದಾದ ಎಲ್ಲ ಪ್ರಯತ್ನಗಳನ್ನು ಮಾಡುತ್ತಲೇ ಬಂದಿದ್ದೇನೆ. ಆದರೆ ಕಾರಣಾಂತರಗಳಿಂದ ಮಾನ್ಯ ಸದಸ್ಯರು ಇತರ ವಿಧೇಯಕಗಳಿಗೆ ಆದ್ಯತೆ ನೀಡಿದರು. ಹಾಗಾಗಿ ಅದನ್ನು ಮಂಡಿಸಲು ಇಷ್ಟು ವಿಳಂಬವಾಯಿತು. ನಾನು ನೇರವಾಗಿ ಪ್ರಧಾನಮಂತ್ರಿಗಳ ಬಳಿಗೆ ಹೋಗಿ ಈ ವಿಧೇಯಕಕ್ಕೆ ಇದೇ ಅಧಿವೇಶನದಲ್ಲಿ ಪ್ರಥಮ ಆದ್ಯತೆ ನೀಡುವಂತೆ ಕೇಳಿಕೊಂಡೆ. ಅದನ್ನು ಅವರು ಒಪ್ಪಿಕೊಂಡರು. ಹಾಗಾಗಿ ಈ ವಿಧೇಯಕ ಆಯ್ಕೆ ಸಮಿತಿಯ ಮುಂದೆ ಹೋಯಿತು. ಅನಂತರ ಅದು ಲೋಕಸಭೆಯಲ್ಲಿ ಪರಿಶೀಲಿಸಲ್ಪಟ್ಟಿತು. ಈಗ ಅದು ಈ ಸದನದ ಮುಂದಿದ್ದು ಪ್ರಸಕ್ತ ಅಧಿವೇಶನ ಮುಗಿಯುವುದರೊಳಗೆ ಭಾರತದ ಕಾನೂನು ಸಂಪುಟವನ್ನು ಸೇರುವುದೆಂದು ನಾನು ನಂಬಿದ್ದೇನೆ. ಇದು ತೀರಾ ಅತ್ಯಗತ್ಯ ಎಂದು ನಾನು ಪರಿಗಣಿಸಿದ್ದೇನೆ. ಕಲಬೆರಕೆಯನ್ನು ತಡೆಯಲು ತಕ್ಕ ಪ್ರತಿಬಂಧಕ ಕ್ರಮಗಳನ್ನು ಹೊಂದಿರುವುದು ಅತ್ಯಾವಶ್ಯಕವಾಗಿದೆ ಎಂದು ಪ್ರತಿಯೊಬ್ಬರೂ ಹೇಳಿದ್ದಾರೆ. ಅದೇ ವೇಳೆಗೆ ಅನೇಕ ಸದಸ್ಯರು ಈ ವಿಷಯಕ್ಕೆ ಸಂಬಂಧಿಸಿದಂತೆ ಕೆಲವೊಂದು ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ಅವರು ಪ್ರತಿಕ್ರಿಯೆಗಳನ್ನು ಆಲಿಸುವುದು ನನಗೆ ಅತ್ಯಂತ ಸಂತಸದ ವಿಷಯವಾಗಿದೆ. ಆದರೆ ಇದೇ ವೇಳೆಗೆ ಇಂತಹ ಒಂದು ಕ್ರಮ ಯಶಸ್ಸು ಕಂಡಿತೇ ಎಂಬ ಸಂದೇಹವನ್ನು ಅವರು ವ್ಯಕ್ತಪಡಿಸಿದ್ದಾರೆ. ಇದು ನನಗೆ ಎಲ್ಲಕ್ಕಿಂತ ಹೆಚ್ಚಿನ ನೋವುಂಟು ಮಾಡಿದ ಸಂಗತಿಯಾಗಿದೆ. ಯಾವುದೇ ಶಾಸನದಿಂದ ಸಮಾಜದಲ್ಲಿ ಸ್ಥಾಯಿಯಾಗಿರುವ ಯಾವುದೇ ಒಂದು ಪಿಡುಗನ್ನು ಸಂಪೂರ್ಣವಾಗಿ ನಿವಾರಿಸುವುದು ಅಸಾಧ್ಯ ಎಂಬುದು ನನಗೆ ಗೊತ್ತಿದೆ. ಆದರೆ ಕಾಯ್ದೆಯು ಸಮಾಜಕ್ಕೆ ತಿಳುವಳಿಕೆ ನೀಡುವ ಒಂದು ಸಾಧನವಾಗಿದೆ. ಸಮಾಜದ ಯಾವನೇ ಓರ್ವ ಸದಸ್ಯ ಅಪರಾಧ ಎಸಗಿದರೆ-ಆಹಾರದ ಕಲಬೆರಕೆ ಮಾನವ ಸಮುದಾಯದ ಮೇಲೆ ಎಸಗುವ ಒಂದು ಘೋರ ಅಪರಾಧವಾಗಿದೆ. ಅದರಲ್ಲೂ ಪೋಷಣೆ ಇಲ್ಲದೆ ಬಳಲುತ್ತಿರುವ ಮತ್ತು ಪೌಷ್ಠಿಕಾಂಶದ ಕೊರತೆಯಿಂದ ಬಳಲುತ್ತಿರುವ ಬಡದೇಶವೊಂದರಲ್ಲಿ ಅದೊಂದು ಘೋರ ಘಾತಕವಾಗಿದೆ. ಅಂಥವರನ್ನು ದಂಡನೆಗೆ

ಇರುತ್ತದೆಂದೂ ನಾನು ನಂಬಿದ್ದೇನೆ. ಸೌಕರ್ಯ ಸವಲತ್ತುಗಳ ಪೂರೈಕೆಯಿಂದಾಗಿ ನಮ್ಮ ವೈದ್ಯರಿಗೆ ಇದು ತನಕ ಸಾಧಿಸಲಾಗದ ಕಾರ್ಯಭಾರವನ್ನು ನಾವೀಗ ದೃಢ ಆತ್ಮ ವಿಶ್ವಾಸದಿಂದ ಮುಂದುವರೆಸಿಕೊಂಡು ಹೋಗಬಹುದಾಗಿದೆ. ದೇಶದ ವೈದ್ಯಕೀಯ ಸಂಸ್ಥೆಗಳಿಗೆ ಅಗತ್ಯವಿರುವ ಬೋಧಕ ಸಿಬ್ಬಂದಿಯನ್ನು ಒದಗಿಸುವ ಒಂದು ಪ್ರಮುಖ ಕಾರ್ಯಭಾರವನ್ನು ಈ ಸಂಸ್ಥೆ ಹೊಂದಿದೆ. ಇದೀಗ ಎಲ್ಲ ರಾಜ್ಯಗಳು ಯೋಜನಾ ಆಯೋಗಕ್ಕೆ ತಮ್ಮ ತಮ್ಮ ಆರೋಗ್ಯ ಕಾರ್ಯಕ್ರಮಗಳನ್ನು ಕಳುಹಿಸಿಕೊಟ್ಟಿವೆ. ಈ ಯೋಜನೆಗಳಿಗೆ ಹಣಕಾಸಿನ ನೆರವು ಒದಗಿಸುವಲ್ಲಿ ಅವರು ನನ್ನ ಸಹಾಯವನ್ನು ಕೇಳುತ್ತಲೇ ಬಂದಿದ್ದಾರೆ. ಇಂತಹ ಎಲ್ಲ ಸಂದರ್ಭಗಳಲ್ಲೂ ನಾನು ಅವರಿಗೆ ತಪ್ಪದೆ ಸಹಾಯ ಮಾಡಿದ್ದೇನೆ. ಅವು ಇನ್ನೊಂದು ವೈದ್ಯಕೀಯ ಕಾಲೇಜಿನ ಬೇಡಿಕೆಯನ್ನು ಮುಂದಿಟ್ಟಿವೆ. ಉತ್ತರ ಪ್ರದೇಶ ಇನ್ನೂ ಮೂರು ಕಾಲೇಜುಗಳನ್ನು ಹೊಂದಲುಬಯಸಿದೆ. ಅವರ ಬೇಡಿಕೆ ನ್ಯಾಯೋಚಿತವಾದದ್ದೇ. ಜನಸಂಖ್ಯೆಯ ಪ್ರಮಾಣಕ್ಕೆ ಅನುಗುಣವಾಗಿ ಅವರಿಗೆ ಇನ್ನೂ ಮೂರು ಕಾಲೇಜುಗಳು ಅಗತ್ಯವಿದೆ. ಆದರೆ ಈ ಕಾಲೇಜುಗಳಿಗೆ ಬೋಧಕ ಸಿಬ್ಬಂದಿಯನ್ನು ಅವರು ಎಲ್ಲಿಂದ ಪಡೆಯಬೇಕು? ವಾಸ್ತವವಾಗಿ ಬೋಧಕ ಸಿಬ್ಬಂದಿಯೇ ನಮ್ಮಲ್ಲಿಲ್ಲ. ಇಂದು ನಾವು ಆರಂಭಿಸುತ್ತಿರುವ ಅನೇಕ ವೈದ್ಯಕೀಯ ಕಾಲೇಜುಗಳಲ್ಲಿ ನಿವೃತ್ತ ಸಿಬ್ಬಂದಿಯನ್ನೇ ನಾವು ಅವಲಂಬಿಸಬೇಕಾಗಿದೆ. ಇದು ಒಳ್ಳೆಯದಲ್ಲ ನಾವು ಎಷ್ಟು ಕಾಲ ಈ ನಿವೃತ್ತ ಸಿಬ್ಬಂದಿಯನ್ನು ಬಳಸಿಕೊಳ್ಳಲು ಸಾಧ್ಯ? ಇನ್ನು ಮುಂದಿನ ಆರು ಅಥವಾ ಏಳು ವರ್ಷಗಳಲ್ಲಿ ಹೊಸ ವೈದ್ಯಕೀಯ ಕಾಲೇಜುಗಳಿಗೆ ನಮ್ಮ ಅಧ್ಯಯನ ಸಂಸ್ಥೆಯ ಸ್ನಾತಕೋತ್ತರ ವಿಭಾಗಗಳಲ್ಲಿ ತರಬೇತಿ ಪಡೆದ ಸಿಬ್ಬಂದಿಯನ್ನೇ ಒದಗಿಸಲು ನಾವು ಶಕ್ತರಾಗುತ್ತೇವೆ ಎಂಬ ದೃಢ ವಿಶ್ವಾಸವೂ ನನಗಿದೆ.

ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯಲ್ಲಿ ನಾವು ಪ್ರಾಧ್ಯಾಪಕರಿಗೆ ಖಾಸಗಿ ಪ್ರಾಕ್ಟೀಸ್ ಮಾಡಲು ಅನುಮತಿ ನೀಡುವುದಿಲ್ಲ ಎಂಬ ವಿಧೇಯಕದ ಇನ್ನೊಂದು ಅಂಶವನ್ನೂ ನಾನು ಇಲ್ಲಿ ಪ್ರಸ್ತಾಪಿಸಲು ಬಯಸುತ್ತೇನೆ. ಇದಕ್ಕೆ ಸದಸ್ಯರ ತೀವ್ರ ವಿರೋಧವಿದೆ. ಈ ವಿಷಯದಲ್ಲಿ ತೀವ್ರ ಭಿನ್ನಾಭಿಪ್ರಾಯವೂ ಇದೆ ಎಂಬ ಅಂಶವೂ ನನಗೆ ಗೊತ್ತು. ಖಾಸಗಿ ಪ್ರಾಕ್ಟೀಸ್‌ಗೆ ನಾನು ವಿರೋಧಿಯಲ್ಲವಾದರೂ ಕೂಡಾ ಸಂಬಳಕ್ಕೆ ತಕ್ಕಂತೆ ಕೆಲಸ ಎಂಬ ಸೂತ್ರವನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಸಿಬ್ಬಂದಿಯ ಕೊರತೆ ಒಂದು ದೊಡ್ಡ ಸಮಸ್ಯೆಯಾಗಿದೆ. ಅಗಾಧ ಸಂಖ್ಯೆಯಲ್ಲಿ ಜನರು ಆಸ್ಪತ್ರೆಗಳಿಗೆ ಬರುತ್ತಿದ್ದು. ಇವರಲ್ಲಿ ಬಹುತೇಕ ಮಂದಿ ಕಡು ಬಡವರೇ ಆಗಿರುತ್ತಾರೆ ಮತ್ತು ನಮ್ಮ ವೈದ್ಯರಿಗೆ ಈ ತನಕವೂ ನಾವು ನೀಡುತ್ತಾ ಬಂದಿರುವ ಸಂಬಳ ಕನಿಷ್ಠ ಮಟ್ಟದಲ್ಲಿರುವುದರಿಂದ ಈ ಪರಿಸ್ಥಿತಿ ಉದ್ಭವಿಸಿದೆ. ಓರ್ವ ವೈದ್ಯ ಖಾಸಗಿ ಪ್ರಾಕ್ಟೀಸ್‌ನಿಂದ ತನ್ನ ವರಮಾನವನ್ನು ಭರಿಸಿಕೊಳ್ಳಬೇಕಾದಾಗ ಸಹಜವಾಗಿಯೇ ಆತ ಹಣ ಕೊಡದಿರುವವರಿಗಿಂತ ಹಣ ನೀಡುವವರಿಗೆ ಹೆಚ್ಚಿನ ಗಮನ ನೀಡುತ್ತಾನೆ. ಇದು ಮಾನವ ಸಹಜ ಸ್ವಭಾವ. 'ವೈದ್ಯರು ಗ್ರಾಮಾಂತರ ಪ್ರದೇಶಗಳಿಗೆ ಹೋಗುವುದಿಲ್ಲ' ಎಂದು ಕೆಲವರು ವೈದ್ಯರನ್ನು ದೂಷಿಸುತ್ತಾರೆ. ಆದರೆ ನಾನು ಹಾಗೆ ಹೇಳುವುದಿಲ್ಲ. ನೀವು ಅವರಿಗೆ ಏನು ನೀಡುತ್ತೀರಿ? ನೀವು ಅವರಿಗೆ ಹಿಡಿಗೂಳಿಗಾಗುವಷ್ಟೇ ಸಂಬಳ ಕೊಡುತ್ತಿದ್ದೀರಿ. ಅವರ ವಾಸ್ತವ್ಯಕ್ಕೆ ಮನೆಗಳಿಲ್ಲ. ತಮ್ಮ ಸಾಮರ್ಥ್ಯವನ್ನು ತೋರಿಸಲು ಸರಿಯಾದ ಆಸ್ಪತ್ರೆಗಳಿಲ್ಲ. ಅದೇ ವೇಳೆಗೆ ಅವರಲ್ಲಿ ದೇಶಾಭಿಮಾನ ಇಲ್ಲ ಎಂದು ಹೇಳುತ್ತೀರಿ. ನಾವು ಯಾವಾಗಲೂ ಚಿತ್ರದ ಎರಡು ಬದಿಗಳನ್ನು ನೋಡಬೇಕು. ಇನ್ನೀಗ ವೈದ್ಯರಿಗೆ ಹೆಚ್ಚು ವೇತನ ನೀಡಲು ನಾವು ನಿರ್ಧರಿಸಿದ್ದೇವೆ.

ನಾವು ನೀಡಿರುವ ಜಾಹೀ ರಾತುಗಳಿಗೆ ಬಂದಿರುವ ಉತ್ತಮ ಪ್ರತಿಕ್ರಿಯೆಯಿಂದ ಇಲ್ಲಿಗೆ ಬರುವ ವೈದ್ಯರು ಸಂತೃಪ್ತಿಯಿಂದ ಕಾರ್ಯ ನಿರ್ವಹಿಸುತ್ತಾರೆ ಮತ್ತು ಅವರ ಎಲ್ಲ ಸಮಯವನ್ನು ಬೋಧನೆ ಮತ್ತು ಆಸ್ಪತ್ರೆಯಲ್ಲಿನ ರೋಗಿಗಳ ಶುಶ್ರೂಷೆಗೆ ಮಾತ್ರವೇ ಅಲ್ಲ ಆಧುನಿಕ ವೈದ್ಯ ಪದ್ಧತಿಯ ಪ್ರಗತಿಗೆ ಅತಿ ಅವಶ್ಯವಾಗಿರುವ ಸಂಶೋಧನೆಗೂ ಮೀಸಲಿಡುತ್ತಾರೆ ಎಂಬ ಭರವಸೆ ಮೂಡಿಸಿದೆ. ಖಾಸಗಿ ಪ್ರಾಕ್ಟೀಸ್‌ನ ದೆಸೆಯಿಂದಾಗಿ ನಮ್ಮ ವೈದ್ಯರಿಗೆ ಇಂದು ಸಂಶೋಧನೆಗೆ ಸಮಯವೇ ಇಲ್ಲವಾಗಿದೆ. ನಾಲ್ಕು-ಐದು ವರ್ಷಗಳ ಹಿಂದೆ ಬ್ರಿಟನ್‌ನಲ್ಲಿನ ಆರೋಗ್ಯ ಸೇವೆಗಳ ಕುರಿತು ನಾನು ಅಲ್ಲಿನ ಅತಿ ಗಣ್ಯ ವೈದ್ಯರಲ್ಲಿ ಒಬ್ಬರಾದ ಲಾರ್ಡ್ ಮೋರನ್ ಅವರೊಂದಿಗೆ ಮಾತನಾಡುತ್ತಿದ್ದಾಗ ಅಲ್ಲೂ ಕೂಡಾ ಖಾಸಗಿ ಪ್ರಾಕ್ಟೀಸ್‌ಗೆ ಭಾರೀ ವಿರೋಧವಿರುವುದಾಗಿಯೂ ಅದು ಇನ್ನೂ ಸಂಪೂರ್ಣವಾಗಿ ನಿಂತಿಲ್ಲವೆಂದೂ ಹೇಳಿದರು. ವೈದ್ಯಕೀಯ ವೃತ್ತಿಯ ಎಲ್ಲ ವಿಭಾಗಗಳಲ್ಲೂ ನಿಜವಾದ ನೈಪುಣ್ಯ ಹೊಂದಿರುವ ವೈದ್ಯರು ಈಗ ಹಿಂದಿಗಿಂತ ಹೆಚ್ಚು ಸಮಯವನ್ನು ಸಂಶೋಧನೆಗೆ ಮೀಸಲಿಡುವಂತಾಗಿರುವುದು ಸದ್ಯದ ಪರಿಸ್ಥಿತಿಯಲ್ಲಿ ಆಶಾದಾಯಕ ಅಂಶವಾಗಿದೆಯೆಂದು ಅವರು ನನ್ನೊಂದಿಗೆ ಹೇಳಿದರು. ಸರಿಯಾದ ದಿಕ್ಕಿನಲ್ಲಿ ಇಡುತ್ತಿರುವ ಇನ್ನೊಂದು ಸರಿಯಾದ ಹೆಜ್ಜೆ ಎಂದರೆ ಅಧ್ಯಯನ ಸಂಸ್ಥೆಯ ಎಲ್ಲ ಸಿಬ್ಬಂದಿ ಮತ್ತು ವಿದ್ಯಾರ್ಥಿಗಳಿಗೆ ಕ್ಯಾಂಪಸ್‌ನಲ್ಲೇ ವಾಸ್ತವ್ಯ ಕಲ್ಪಿಸಿರುವುದು. ನಾನು ಲೋಕ ಸಭೆಯಲ್ಲಿ ಹೇಳಿರುವಂತೆ ಈ ಹೆಜ್ಜೆಯಿಂದ ಪ್ರಾಚೀನ ಭಾರತದ ಗುರು - ಶಿಷ್ಯ ಪರಂಪರೆಯನ್ನು ಪುನರುಜ್ಜೀವನಗೊಳಿಸಿದಂತೆ ಆಗುತ್ತದೆ. ಯಾವನೇ ವಿದ್ಯಾರ್ಥಿಗೆ ಏನೇ ಸಮಸ್ಯೆ ಇದ್ದರೂ ಅಧ್ಯಾಪಕರ ಬಳಿಗೆ ಹೋಗಲು, ಅದೇ ರೀತಿ ವಿದ್ಯಾರ್ಥಿಗಳೊಂದಿಗೆ ಸಿಬ್ಬಂದಿ ನಿಕಟ ಸಂಪರ್ಕ ಹೊಂದಿರಲು ಈ ವ್ಯವಸ್ಥೆ ಸಹಾಯಕವಾಗುತ್ತದೆ. ಸದನದ ಮಾನ್ಯ ಸದಸ್ಯರು ಅಪೇಕ್ಷಿಸಿದಲ್ಲಿ ನನ್ನೊಂದಿಗೆ ಅಥವಾ ತಾವಾಗಿಯೇ ಸಫ್ದರ್‌ಜಂಗ್ ಆಸ್ಪತ್ರೆಗೆ ಬಂದು, ಡಾ|| ದೀಕ್ಷಿತ್ ಅವರ ಮಾರ್ಗ ದರ್ಶನದಲ್ಲಿ ಅಲ್ಲಿನ ಕ್ಯಾಂಪಸ್ ಮತ್ತು ಈ ಸಂಸ್ಥೆಯ ಯೋಜನೆಗಳನ್ನು ಖುದ್ದಾಗಿ ಪರಾಂಬರಿಸಬಹುದಾಗಿದೆ. ಜಗತ್ತಿನ ಈ ಭಾಗದಲ್ಲಿ ವೈದ್ಯಕೀಯ ವಿಜ್ಞಾನದಲ್ಲಿ ಭಾರತ ಈ ಒಂದು ಹೆಜ್ಜೆಯನ್ನು ಮುಂದಿಟ್ಟಿರುವುದು ನನಗೆ ಹೆಮ್ಮೆಯನ್ನುಂಟು ಮಾಡಿದೆ. ನಾವು ಇಂದು ಈ ಸಂಸ್ಥೆಯಲ್ಲಿ ವಿದೇಶಿಯರನ್ನೂ ತರಬೇತಿಗೊಳಿಸುತ್ತಿದ್ದೇವೆ. ಮಲೇರಿಯಾ ನಿವಾರಣೆ ಪ್ರಸೂತಿ ಮತ್ತು ಶಿಶು ಸಂರಕ್ಷಣೆ ಮತ್ತಿತರ ವಿಭಾಗಗಳಲ್ಲಿ ವಿದೇಶಿ ವಿದ್ಯಾರ್ಥಿಗಳಿಗೆ ತರಬೇತಿ ನೀಡುತ್ತಿದ್ದೇವೆ; ಗ್ರಾಮಾಂತರ ಪ್ರದೇಶಗಳ ಆರೋಗ್ಯ ಸಿಬ್ಬಂದಿ ನೈರ್ಮಲ್ಯ ತಪಾಸಕರು (ಸ್ಯಾನಿಟರಿ ಇನ್ಸ್‌ಪೆಕ್ಟರ್‌ಗಳು) ಮತ್ತು ಸಾರ್ವಜನಿಕ ಆರೋಗ್ಯ ಸಿಬ್ಬಂದಿಯನ್ನು ನಾವು ಇಲ್ಲಿ ತರಬೇತಿಗೊಳಿಸುತ್ತಿದ್ದೇವೆ. ನಮ್ಮ ಈ ಅಧ್ಯಯನ ಸಂಸ್ಥೆ ಪ್ರಾಯಶಃ ನಮ್ಮಷ್ಟು ಮುಂದುವರಿಯದೇ ಇರುವ ಇತರ ರಾಷ್ಟ್ರಗಳಿಗೂ ಮಾರ್ಗದರ್ಶನ ನೀಡುವಷ್ಟು ಸಾಮರ್ಥ್ಯ ಹೊಂದಲಿದೆವೆ ಎಂಬ ಅಚಲವಾದ ವಿಶ್ವಾಸ ನನ್ನಲ್ಲಿದೆ. ನಾವೀಗ ಕೈಗೆತ್ತಿಕೊಂಡಿರುವ ವೈದ್ಯಕೀಯ ಬೋಧನಾ ಕಾರ್ಯಕ್ರಮಗಳು ಮತ್ತು ಅದಕ್ಕಾಗಿ ರೂಪಿಸಲಾಗಿರುವ ಕಾರ್ಯಕ್ರಮ ಕಾರ್ಯರೂಪಕ್ಕೆ ಬಂದಾಗ ಇಲ್ಲಿ ನೀಡುತ್ತಿರುವ ಕೋರ್ಸ್‌ಗಳ ಅವಧಿಯನ್ನು ಮೊಟಕುಗೊಳಿಸಲೂ ಸಾಧ್ಯವಾದೀತು. ನಾನು ಅಮೆರಿಕಾದ ಡೆನ್ವರ್ ವಿಶ್ವವಿದ್ಯಾಲಯದಲ್ಲಿ ನೋಡಿರುವಂತೆ ನಮ್ಮ ಸಂಸ್ಥೆಯಲ್ಲೂ ಅಭ್ಯಾಸ ನಿರತವಾಗಿರುವ ವಿದ್ಯಾರ್ಥಿಗಳು ಹೆಚ್ಚಿನ ಹೊಣೆಗಾರಿಕೆಯನ್ನು ಹೊಂದುವಂತಾಗಬೇಕು ಎಂಬುದು ನನ್ನ ಆಕಾಂಕ್ಷೆಯಾಗಿದೆ. ಡೆನ್ವರ್ ವಿಶ್ವವಿದ್ಯಾಲಯದಲ್ಲಿ ವೈದ್ಯಕೀಯ ಪದವಿಯ ನಾಲ್ಕನೇ

ವರ್ಷದ ವಿದ್ಯಾರ್ಥಿ ತನ್ನ ಸುಪರ್ದಿಯಲ್ಲಿದ್ದ ರೋಗಿಯ ಬಗ್ಗೆ ಸಮಗ್ರ ವಿವರಣೆ ನೀಡಿದ್ದು, ನನ್ನ ಮನಸ್ಸಿನ ಮೇಲೆ ಗಾಢ ಪರಿಣಾಮ ಬೀರಿದ ಅಂಶವಾಗಿತ್ತು.

ಇದೀಗ ಈ ಸಂಸ್ಥೆಗೆ ವಿಶ್ವವಿದ್ಯಾಲಯುದ ಅಧಿಕಾರ ಮತ್ತು ಕಾರ್ಯಗಳು ವಹಿಸಿಕೊಡಲಾಗುತ್ತಿದೆ - ಇದು ಅತ್ಯಂತ ಪ್ರಮುಖ ಅಂಶವಾಗಿದೆ. ಇದು ಪಠ್ಯಕ್ರಮಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಮಾತ್ರವಲ್ಲ ಬೋಧನಾ ವಿಷಯಕ್ಕೆ ಸಂಬಂಧಿಸಿದಂತೆಯೂ ಅನೇಕ ವಿಷಯಗಳಲ್ಲಿ ಕ್ರಾಂತಿಕಾರ ಬದಲಾವಣೆ ತರಲಿದೆ. ಈ ವಿಧೇಯಕವು ಕೊಡಮಾಡಲಿರುವ ವಿಶ್ವವಿದ್ಯಾಲಯದ ಸ್ಥಾನಮಾನವು ಈ ಸಂಸ್ಥೆಗೆ ಇಂಗ್ಲೆಂಡಿನ ರಾಯಲ್ ಕಾಲೇಜ್ ಆಫ್ ಸರ್ಜನ್ಸ್, ರಾಯಲ್ ಕಾಲೇಜ್ ಆಫ್ ಫಿಸಿಷಿಯನ್ಸ್ ಮತ್ತಿತರ ಸಂಸ್ಥೆಗಳು ನೀಡುತ್ತಿರುವ ಮಾದರಿಯಲ್ಲೇ ಡಿಪ್ಲೊಮಾಗಳನ್ನು ನೀಡುವ ಅವಕಾಶ ಕಲ್ಪಿಸಿಕೊಡಲಿದೆ. ವಿದೇಶಿಗಳಿಗೆ ಹೋಗುವ ನಮ್ಮ ವಿದ್ಯಾರ್ಥಿಗಳಲ್ಲಿ ಬಹುತೇಕ ಮಂದಿ ಈ ಕೋರ್ಸ್‌ಗಳಲ್ಲಿ ಆಸಕ್ತರಾಗಿರುವುದಕ್ಕೆ ಅತ್ಯುಚ್ಚ ಮಟ್ಟ ಕಾಯ್ದುಕೊಂಡಿರುವುದೇ ಕಾರಣವಾಗಿದೆ. ಈ ಕೋರ್ಸ್‌ಗಳು ಮಾನ್ಯತೆ ಪಡೆದ ಕೋರ್ಸ್‌ಗಳಾಗಿದ್ದು, ಸದ್ಯದಲ್ಲೇ ಸದನದಲ್ಲಿ ಮಂಡಿಸಲ್ಪಡಲಿರುವ ವೈದ್ಯಕೀಯ ಮಂಡಳಿಯ ತಿದ್ದುಪಡಿ ಕಾಯ್ದೆಯಲ್ಲಿ ಈ ಅಂಶವನ್ನು ಸೇರಿಸಲಾಗುವುದು.

ಶಾಸನ ರೂಪಿಸುವ ಮೂಲಕ ಚಲಾಯಿಸಬಹುದಾದ-ಭಾರತ ಸರ್ಕಾರಕ್ಕೆ ಕನಿಷ್ಠ ನಿಯಂತ್ರಣವನ್ನು ಹೊರತುಪಡಿಸಿ - ಇತರ ಎಲ್ಲ ವಿಷಯಗಳಲ್ಲೂ ಅಧ್ಯಯನ ಸಂಸ್ಥೆಯು ಅತ್ಯಂತ ವ್ಯಾಪಕವಾದ ಸ್ವಾಯತ್ತತೆಯನ್ನು ಹೊಂದಲಿದೆ. ನನ್ನ ಈ ಸಂಕ್ಷಿಪ್ತ ಭಾಷಣದಲ್ಲಿ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ನಾನು ನಿಮ್ಮ ಮುಂದೆ ಇಟ್ಟಿದ್ದು, ಅದು ಸಂಸ್ಥೆಗೆ ಸ್ವಾಯತ್ತತೆ ತಂದುಕೊಡಲಿದೆ. *

* * *

ಏಕಾಏಕಿ ಈ ಪ್ರಶ್ನೆಗೆ ಉತ್ತರಿಸಲು ನನಗೆ ಸಾಧ್ಯವಾಗುವುದಿಲ್ಲ. ಇದೀಗ ನನ್ನ ಖಾತೆ ಈ ಸಂಸ್ಥೆಯ ಆಯವ್ಯಯವನ್ನು ತಯಾರಿಸುತ್ತಿದೆ. ಆದರೂ ವಿಶ್ವವಿದ್ಯಾಲಯದ ಅನುದಾನ ಆಯೋಗದ ಸಂವಿಧಾನ ನನ್ನ ಮುಂದಿಲ್ಲದಿರುವುದರಿಂದ ನಾನು ಅದಕ್ಕೆ ಉತ್ತರ ನೀಡುವುದು ಸಮಂಜಸವಾಗದು.

ಈ ಸಂಸ್ಥೆ ದೆಹಲಿ ವಿಶ್ವವಿದ್ಯಾಲಯದ ಅಧೀನಕ್ಕೆ ಬರುವುದಿಲ್ಲ. ಆದರೆ ವಿಶ್ವವಿದ್ಯಾಲಯದ ಸ್ಥಾನಮಾನ ಹೊಂದಿರುವುದರಿಂದ ತಾನೇ ನಿರ್ಣಯಗಳನ್ನು ತೆಗೆದುಕೊಳ್ಳಬಹುದಾಗಿದೆ. ಭಾರತ ಸರ್ಕಾರವೇ ಈ ಸಂಸ್ಥೆಯ ಎಲ್ಲ ಖರ್ಚು ವೆಚ್ಚಗಳ ಹೊಣೆ ಹೊತ್ತಿದೆ. ನಾನು ಸದಾ ಆಶಾವಾದಿ. ಇತರ ಎಲ್ಲ ವೈದ್ಯಕೀಯ ಕಾಲೇಜುಗಳು, ವೈದ್ಯಕೀಯ ಕಾಲೇಜು ಆಸ್ಪತ್ರೆಗಳು ಹಾಗೂ ಇತರ ಆಸ್ಪತ್ರೆಗಳಂತೆ ಈ ಸಂಸ್ಥೆಯು ಮಾನವ ಸೇವೆಯಲ್ಲಿ ನಿರತವಾಗಿರುವುದರಿಂದ ಉದಾರ ಹಾನಿಗಳು ಈ ಸಂಸ್ಥೆಗೆ ನೆರವಾಗಲು ಮುಂದೆ ಬರುತ್ತಾರೆ ಮತ್ತು ಈ ಸಂಸ್ಥೆಯ ಪ್ರಗತಿಗೆ ಸಹಾಯಕರಾಗುತ್ತಾರೆ. ಈ ಸಂಸ್ಥೆಯ ಭವಿಷ್ಯವು ಅದರ ನಿರ್ದೇಶಕರು, ಪ್ರಾಧ್ಯಾಪಕರು, ಬೋಧನಾ ಸಿಬ್ಬಂದಿಯ ಇತರ ಸದಸ್ಯರು ಮತ್ತು ವಿದ್ಯಾರ್ಥಿಗಳನ್ನು ಅವಲಂಬಿಸಿದೆ. ತಮ್ಮ ಕರ್ತವ್ಯದಲ್ಲಿ ಅವರು ತೋರುವ ಶ್ರದ್ಧೆ, ತಾವು ಆಯ್ದುಕೊಂಡ ಕ್ಷೇತ್ರದಲ್ಲಿ ಸಾಧನೆ ಮಾಡಬೇಕೆಂಬ ಅಭಿಲಾಷೆ ಮತ್ತು

* ಡಾ|| ಡಬ್ಲ್ಯೂ.ಎಸ್. ಬರ್ಲಿಂಗ್ ಅವರು ವಿವರಣೆ ಬಯಸಿದಾಗ, ಉತ್ತರಿಸುತ್ತಾ

ಅವರಲ್ಲಿರುವ ಪರೋಪಕಾರ ಬುದ್ಧಿ, ಅವರ ವೈಯಕ್ತಿಕ ಹಿತಾಸಕ್ತಿಗಳನ್ನು ಗೌಣವಾಗಿಸಿ ಈ ಮಹಾನ್ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ಸಾಧಿಸಲು ಅವರಿಗೆ ಸಾಧ್ಯವಾಗುವುದು ಎಂದು ನಾನು ನಂಬಿದ್ದೇನೆ. ಇಂತಹ ಸಂಸ್ಥೆಗಳು ಇದಕ್ಕೆ ಅತ್ಯವಶ್ಯವಾದ ವಾತಾವರಣವನ್ನು ನಿರ್ಮಿಸುವುದು. ಇಂದೀಗ ರಾಜ್ಯಸಭೆಯ ಅಂಗೀಕಾರಕ್ಕಾಗಿ ಮಂಡಿಸಲ್ಪಡುತ್ತಿರುವ ಈ ವಿಧೇಯಕವು ಈ ಅಧ್ಯಯನ ಸಂಸ್ಥೆಯ ವೈದ್ಯಕೀಯ ಶಿಕ್ಷಣದ ಸುಧಾರಣೆಗೆ ಹಾಗೂ ಈ ಕ್ಷೇತ್ರದ ಅಭಿವೃದ್ಧಿ ಸಾಧನೆಗೆ ಕಾರಣವಾಗುವುದೆಂದು ನಾನು ನಂಬಿದ್ದೇನೆ. ಇದರಿಂದ ದೇಶಾದ್ಯಂತ ಆರೋಗ್ಯ ಕ್ಷೇತ್ರದಲ್ಲಿನ ವೃತ್ತಿಪರ ತರಬೇತಿ ಕೋರ್ಸ್‌ಗಳ ಗುಣಮಟ್ಟ ಸುಧಾರಿಸುವುದೆಂದೂ ನಾನು ನಂಬಿದ್ದೇನೆ.

ಈ ಸಂಸ್ಥೆಯಲ್ಲಿ ಭಾರತೀಯ ವೈದ್ಯ ಪದ್ಧತಿಗಳನ್ನು ಪ್ರತಿನಿಧಿಸುವ ವ್ಯಕ್ತಿಗಳಿಗೆ ಪ್ರಾತಿನಿಧ್ಯ ಕಲ್ಪಿಸಬೇಕೆಂಬ ಒಂದೆರೆಡು ತಿದ್ದುಪಡಿಗಳೂ ನನಗೆ ಬಂದಿವೆ. ಈ ಸಂಸ್ಥೆಯಲ್ಲಿ ಆಯುರ್ವೇದ, ಯುನಾನಿ ಮತ್ತು ಹೋಮಿಯೋಪಥಿ ಪದ್ಧತಿಗಳನ್ನು ಸೇರಿಸದಿರುವುದು ಅವುಗಳಿಗೆ ಅವಮಾನ ಮಾಡುವ ಉದ್ದೇಶದಿಂದಲ್ಲ ಎಂಬ ಅಂಶವನ್ನು ನಾನು ಸದನದ ಮಾನ್ಯ ಸದಸ್ಯರಿಗೆ ಈ ಸಂದರ್ಭದಲ್ಲಿ ಸ್ಪಷ್ಟಪಡಿಸಬಯಸುತ್ತೇನೆ. ಆದರೆ ಇಲ್ಲಿ ಅಂಥವರ ಸೇರ್ಪಡೆ ಒಂದಿಷ್ಟು ಹೊಂದಿಕೆಯಾಗುವುದಿಲ್ಲ. ಈ ಸಂಸ್ಥೆಯಲ್ಲಿ ವೈದ್ಯಶಾಸ್ತ್ರ ಇತಿಹಾಸದ ಅಧ್ಯಯನಕ್ಕಾಗಿ ಒಂದು ಪ್ರತ್ಯೇಕ ಪೀಠವನ್ನು ಸ್ಥಾಪಿಸುವ ಆಶಯವಿದೆ. ಅದರಲ್ಲೂ ಮಾನವಿಕ ಶಾಸ್ತ್ರ ಮತ್ತು ಆಯುರ್ವೇದ ವೈದ್ಯ ಪದ್ಧತಿಯ ಬೋಧನೆಯೂ ಒಳಗೊಂಡಿರುತ್ತದೆ. ಇಂತಹ ಸಂದರ್ಭದಲ್ಲಿ ಆಯುರ್ವೇದ, ಹೋಮಿಯೋಪಥಿ ಮತ್ತು ಯುನಾನಿ ಈ ಮೂರು ವೈದ್ಯ ಪದ್ಧತಿಗಳಿಗೆ ಪ್ರಾತಿನಿಧ್ಯ ಲಭ್ಯವಾಗಲಿದೆ. ಆದರೆ ಈ ಭಾರತೀಯ ವೈದ್ಯ ಪದ್ಧತಿಗಳ ಬೋಧನೆಯನ್ನು ಈ ಸಂಸ್ಥೆಯಲ್ಲಿ ನಡೆಸುವುದು ಸಾಧ್ಯವಾಗುವುದಿಲ್ಲ. ಇನ್ನು ಆಯುರ್ವೇದ ವೈದ್ಯ ಪದ್ಧತಿಯ ಸ್ನಾತಕೋತ್ತರ ಕೋರ್ಸ್‌ನ ವಿಷಯದಲ್ಲಿ ನಾನು ಯಾವುದೇ ಕಾರಣಕ್ಕೆ ವಿಳಂಬ ಮಾಡುವುದಿಲ್ಲ. ಈ ವರ್ಷದ ಜುಲೈ ತಿಂಗಳಲ್ಲಿ ಜಾಮ್ ನಗರದಲ್ಲಿ ಆಯುರ್ವೇದದ ಸ್ನಾತಕೋತ್ತರ ಅಧ್ಯಯನ ಕೇಂದ್ರವನ್ನು ಪ್ರಾರಂಭಿಸಲಾಗುವುದು. ಈ ದಿಸೆಯಲ್ಲಿ ಹೆಚ್ಚಿನ ಸಂಶೋಧನೆ ನಡೆದಾಗ ಮತ್ತು ನಮ್ಮ ವ್ಯಾಪ್ತಿ ಹೆಚ್ಚುತ್ತಾ ಹೋದಂತೆ ಭಾರತದಲ್ಲಿ ಲಭ್ಯವಿರುವ ಎಲ್ಲ ಔಷಧಿಗಳ ಬಗೆಗೆ ಸಾಕಷ್ಟು ಜ್ಞಾನವನ್ನು ಸಂಚಯಿಸಲು ನಾವು ಸಮರ್ಥರಾಗುವೆವು. ಮೇಲಾಗಿ ಈಗಾಗಲೇ ಲಕ್ನೋದಲ್ಲಿ ನಾವು ಔಷಧ ಸಂಶೋಧನ ಸಂಸ್ಥೆಯೊಂದನ್ನು ಹೊಂದಿದ್ದೇವೆ. ಡಾ|| ಭಟ್ನಾಗರ್ ಅವರು ದೇಶಾದ್ಯಂತ ವೈಜ್ಞಾನಿಕ ಪ್ರಯೋಗಾಲಯಗಳನ್ನು ಸ್ಥಾಪಿಸುತ್ತಿದ್ದಾಗ "ಭಾರತದಲ್ಲಿ ಔಷಧಗಳ ಸಂಶೋಧನೆಗಾಗಿ ದಯವಿಟ್ಟು ಸಾಧ್ಯವಾದಷ್ಟು ಬೇಗ ಸಂಶೋಧನಾ ಕೇಂದ್ರವೊಂದನ್ನು ಪ್ರಾರಂಭಿಸಿ" ಎಂದು ನಾನು ಒತ್ತಾಯಿಸಿದ್ದೆ. ಈ ಪ್ರಯೋಗಾಲಯವು ಲಕ್ನೋದಲ್ಲಿದ್ದು, ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸುತ್ತಿದೆ. ಇದರೊಂದಿಗೆ ಅಲ್ಲೀಗ ವನಸ್ಪತಿಗಳ ತೋಟವೊಂದನ್ನು ಅಭಿವೃದ್ಧಿಪಡಿಸಲಾಗುತ್ತಿದ್ದು ಅದು ಈ ಕೇಂದ್ರವನ್ನು ಸಾಕಷ್ಟು ಬಲಪಡಿಸಲಿದೆ. ಮೊನ್ನೆ ಅಲ್ಲಿಗೆ ಭೇಟಿ ನೀಡಿದ ಪ್ರಧಾನ ಮಂತ್ರಿಗಳವರೇ ಈ ಪ್ರಯೋಗಾಲಯ ಅತ್ಯಂತ ಚೆನ್ನಾಗಿ ಕಾರ್ಯ ನಿರ್ವಹಿಸುತ್ತಿದೆ, ಅದನ್ನು ವೀಕ್ಷಿಸುವುದೇ ಒಂದು ಆಹ್ಲಾದಕರ ಅನುಭವವಾಗಿದೆ ಎಂದು ಹೇಳಿದ್ದಾರೆ. ಆ ಕೇಂದ್ರದಲ್ಲೂ ನಾವು ಸ್ನಾತಕೋತ್ತರ ಅಧ್ಯಯನ ಕೇಂದ್ರಗಳನ್ನು ಪ್ರಾರಂಭಿಸಲಿದ್ದೇವೆ. ಈಚಿನ ದಿನಗಳಲ್ಲಿ ನಮ್ಮ ಔಷಧಗಳ ಭಂಡಾರಕ್ಕೆ ಹೆಚ್ಚು ಹೆಚ್ಚು ಭಾರತೀಯ

ಔಷಧಿಗಳನ್ನು ಸೇರಿಸುತ್ತಿದ್ದೇವೆ. ಈ ಸದನದ ಗ್ರಂಥಾಲಯದಲ್ಲಿ ಭಾರತೀಯ ಔಷಧಗಳ ಕೋಶವೊಂದನ್ನು ಇರಿಸಿದ್ದೇವೆ. ಅದು ಆಯುರ್ವೇದ ವೈದ್ಯರು ಸಿದ್ಧಪಡಿಸಿದ ಕೋಶವಲ್ಲ. ಆಧುನಿಕ ವೈದ್ಯ ಪದ್ಧತಿಗಳಲ್ಲಿ ಪ್ರಾಜ್ಞರೆನಿಸಿದವರು ರಚಿಸಿದ ಸಂಪುಟವಾಗಿದೆ. ಆಧುನಿಕ ವೈದ್ಯ ವಿಜ್ಞಾನದ ಅಧ್ಯಯನಕ್ಕೆ ಮುಂದಾಗುವವರು ಆಯುರ್ವೇದದ ಚಿಕಿತ್ಸಾ ಶಾಸ್ತ್ರವನ್ನು ಹೆಚ್ಚು ಹೆಚ್ಚಾಗಿ ಗಮನಿಸಬೇಕಾಗಿದೆ. ಆಯುರ್ವೇದ ವೈದ್ಯ ಪದ್ಧತಿಯನ್ನು ಸಮೃದ್ಧಗೊಳಿಸುವ ದಿಸೆಯಲ್ಲಿ ಅಥವಾ ಆಯುರ್ವೇದದಿಂದ ಆಧುನಿಕ ವೈದ್ಯ ವಿಜ್ಞಾನವನ್ನು ಅಭಿವೃದ್ಧಿ ಪಡಿಸುವುದಕ್ಕಾಗಲಿ ಇದು ಸರಿಯಾದ ದಾರಿಯಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಏಕೆಂದರೆ ಆಯುರ್ವೇದ ವಿದ್ಯಾಲಯಗಳಿಂದ ಹೊರಬರುವ ಎಲ್ಲರೂ ಇಂದು ಆಧುನಿಕ ವೈದ್ಯ ಪದ್ಧತಿಯಲ್ಲಿ ಚಿಕಿತ್ಸೆ ನೀಡುತ್ತಿದ್ದಾರೆ. ಆದರೆ ಆಯುರ್ವೇದ ಬದುಕಬೇಕಿದ್ದರೆ ನಮಗೆ ಬೇಕಾಗಿರುವುದು ಇದಲ್ಲ. ಆಯುರ್ವೇದ ಉಳಿಯಬೇಕೆಂಬುದು ನನ್ನ ಆಕಾಂಕ್ಷೆಯಾಗಿದೆ. ಆಯುರ್ವೇದ ವೈದ್ಯರೇ ಆಂಟಿ ಬಯೋಟಿಕ್‌ಗಳಿಂದ, ಪೆನ್ಸಿಲಿನ್, ಸಲ್ಫಾಡ್ರಗ್‌ಗಳು ಮತ್ತು ಲಭ್ಯವಿರುವ ಮಿಕ್ಕೆಲ್ಲ ಔಷಧಿಗಳಿಂದ ಆಯುರ್ವೇದವನ್ನು ಕೊಲ್ಲುತ್ತಿದ್ದಾರೆ. ಈ ಸದನದ ಅಥವಾ ಲೋಕಸಭೆಯ ಅನೇಕ ಸದಸ್ಯರು ಭಾವಿಸಿರುವುದಕ್ಕಿಂತ ನಾನೇ ಆಯುರ್ವೇದದ ನಿಜವಾದ ಸ್ನೇಹಿತೆಯಾಗಿದ್ದೇವೆ. ಸಂಕ್ಷಿಪ್ತವಾದ ಆದರೆ ನಾನು ಉದ್ದೇಶಿಸಿದ್ದಕ್ಕಿಂತ ಬಹುಶಃ ಹೆಚ್ಚು ದೀರ್ಘವಾದ ಈ ಸಮೀಕ್ಷೆಯಿಂದ ಈ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ಅತ್ಯಂತ ಸ್ಪಷ್ಟವಾಗಿ ನಾನು ಸದನದ ಮುಂದೆ ಮಂಡಿಸಿದ್ದೇನೆ ಮತ್ತು ಈ ಕ್ರಮಕ್ಕೆ ಸದನವು ತನ್ನ ಸಂಪೂರ್ಣ ಬೆಂಬಲ ನೀಡುತ್ತದೆ ಎಂದು ನಾನು ಭಾವಿಸಿದ್ದೇನೆ.*

ಕಳೆದ ಮೂರು ದಿನಗಳಿಂದ ಈ ವಿಧೇಯಕದ ಮೇಲೆ ಸದಸ್ಯರು ಹೇಳಿರುವ ಪ್ರತಿಯೊಂದು ವಿಷಯವನ್ನೂ ನಾನು ಅತ್ಯಂತ ಸಾವಧಾನದಿಂದ ಆಲಿಸಿದ್ದೇನೆ. ಆದರೆ ಈ ವಿಧೇಯಕವನ್ನು ಓದುವ ಮತ್ತು ಅದರ ಧ್ಯೇಯೋದ್ದೇಶಗಳ ಪರಾಮರ್ಶೆಗೆ ಮೀಸಲಾಗಬೇಕಾಗಿದ್ದ ಚರ್ಚೆ ಆಯುರ್ವೇದ ಮತ್ತು ಆಧುನಿಕ ವೈದ್ಯ ಪದ್ದತಿಗಳ ರಣರಂಗವಾಗಿ ಪರಿವರ್ತಿತವಾದುದು ನನ್ನ ಮಾನ್ಯ ಮಿತ್ರರಾದ ಡಾ|| ಸುಬ್ಬರಾಯರಂತೆ ನನಗೂ ಬಹಳಷ್ಟು ವಿಷಾದವನ್ನು ಉಂಟುಮಾಡಿದೆ. ಆದರೆ ಭಾರತ ಸರ್ಕಾರದ ಆಶ್ರಯ ಮತ್ತು ಬೆಂಬಲದಿಂದ ಅಸ್ತಿತ್ವಕ್ಕೆ ಬಂದಿರುವ ಅಖಿಲ ಭಾರತೀಯ ವೈದ್ಯಕೀಯ ವಿಜ್ಞಾನ ಸಂಸ್ಥೆಯ ಉದ್ದೇಶ ಎಂದೂ ಆಯುರ್ವೇದ, ಯುನಾನಿ, ಹೋಮಿಯೋಪಥಿ, ನಿಸರ್ಗ ಚಿಕಿತ್ಸೆ ಅಥವಾ ನಾಳೆ ಅಸ್ತಿತ್ವಕ್ಕೆ ಬರಬಹುದಾದ ಇನ್ನಾವುದೇ ವೈದ್ಯ ಪದ್ಧತಿಯೊಂದಿಗೆ ಸಂಘರ್ಷಕ್ಕೆ ನಿಲ್ಲುವುದಿಲ್ಲ.

* * * *

ಸದನದ ಮಾನ್ಯ ಸದಸ್ಯರು * ನನಗೆ ಅವಕಾಶ ಕೊಟ್ಟರೆ ಅವರು ಎತ್ತಿದ ಪ್ರಶ್ನೆಗಳು ಮತ್ತು ಅವರು ಎತ್ತಿರುವ ಆಕ್ಷೇಪಗಳಿಗೆ ಅನು ಕ್ರಮವಾಗಿ ಉತ್ತರಿಸುತ್ತೇನೆ.

ಅಖಿಲ ಭಾರತ ವೈದ್ಯ ವಿಜ್ಞಾನ ಸಂಸ್ಥೆಯು ಬಹಳ ಹಿಂದೆ ಬೋರೆ ಸಮಿತಿ ನೀಡಿದ್ದ ಶಿಫಾರಸಿನ ಮೇರೆಗೆ ಅಸ್ತಿತ್ವಕ್ಕೆ ಬರುತ್ತಿದೆ. ಈ ವಿಧೇಯಕವನ್ನು ಸದನದ ಅಂಗೀಕಾರಕ್ಕಾಗಿ ಮಂಡಿಸುವ ಈ ಸಂದರ್ಭದಲ್ಲಿ ಸಮಿತಿಯ ಸದಸ್ಯರೊಬ್ಬರು ಇಲ್ಲಿರುವುದು ಮತ್ತು ಅವರೇ ಚರ್ಚೆಯನ್ನು ಪ್ರಾರಂಭಿಸಿರುವುದು ನನಗೆ ಅತ್ಯಂತ ಸಂತಸವನ್ನು ಉಂಟು ಮಾಡಿದೆ.

---

* 1956ರ ಮೇ 8 ರಂದು ನಡೆದ ಚರ್ಚೆಯಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತಾ.

ಮಾನ್ಯ ಸದಸ್ಯರಿಗೆ ನಾನು ಆಭಾರಿಯಾಗಿದ್ದೇನೆ. ನಾನು ಇದೀಗ ಈ ಸಂಸ್ಥೆಯ ಧ್ಯೇಯೋದ್ದೇಶಗಳತ್ತ ನಿಮ್ಮ ಗಮನ ಸೆಳೆಯಲು ಬಯಸುತ್ತೇನೆ. "ಈ ಸಂಸ್ಥೆಯು 1933ರ ಭಾರತೀಯ ವೈದ್ಯಕೀಯ ಮಂಡಳಿ ಕಾಯ್ದೆ ಪ್ರಕಾರ ವೈದ್ಯಕೀಯ ಪದವಿಗಳನ್ನು ನೀಡುವ ಮತ್ತು ಮಾನ್ಯತೆ ಪಡೆದ ಡಿಪ್ಲೊಮಾ ಹಾಗೂ ಇತರ ಶೈಕ್ಷಣಿಕ ಕೋರ್ಸ್‌ಗಳಿಗೆ ಅನುಮತಿ ನೀಡುವ ಅಧಿಕಾರ ಹೊಂದಿದೆ" ಎಂದು ಈ ವಿವರಣೆಯ ಕೊನೆಯ ಪ್ಯಾರಾದಲ್ಲಿ ಹೇಳಲಾಗಿದೆ. ಹೀಗಾಗಿ ಈ ವೈದ್ಯಕೀಯ ಪದವಿಗಳು ಆಯುರ್ವೇದ, ಯುನಾನಿ ಅಥವಾ ಹೋಮಿಯೋಪಥಿ ಪದ್ಧತಿಗಳೊಂದಿಗೆ ಯಾವುದೇ ಸಂಬಂಧ ಹೊಂದಿಲ್ಲ ಎಂಬ ಅನುಮಾನ ಮೂಡಲು ಅವಕಾಶವೇ ಇಲ್ಲವಾಗಿದೆ.

ವಿಧೇಯಕದ 5ನೇ ಪುಟದಲ್ಲಿ 14(ಎ) ಖಂಡದಲ್ಲಿ ಹೇಳಿರುವ ಈ ವಾಕ್ಯವನ್ನು ಗಮನಿಸಿ "13ನೇ ಪರಿಚ್ಛೇದದಲ್ಲಿ ನಿರ್ದಿಷ್ಟವಾಗಿ ಹೇಳಿರುವ ಧ್ಯೇಯೋದ್ದೇಶಗಳ ಸಾಧನೆಗಾಗಿ ಅಧ್ಯಯನ ಸಂಸ್ಥೆಯು ಆಧುನಿಕ ವೈದ್ಯ ವಿಜ್ಞಾನದಲ್ಲಿ ಪದವಿಪೂರ್ವ ಹಾಗೂ ಸ್ನಾತಕೋತ್ತರ ತರಬೇತಿಯನ್ನು ಒದಗಿಸಬಹುದಾಗಿದೆ". ಮತ್ತೆ ಪುಟ 8 ರಲ್ಲಿ 23 ಮತ್ತು 24ನೇ ಖಂಡಗಳಲ್ಲಿ "1933ರ ಭಾರತೀಯ ವೈದ್ಯಕೀಯ ಮಂಡಳಿ ಕಾಯ್ದೆಯಲ್ಲಿ ಒಳಗೊಂಡಿರುವಂತೆ ಈ ಕಾಯ್ದೆ ಯನ್ವಯ ನೀಡಲಾದ ವೈದ್ಯಕೀಯ ಪದವಿಗಳು ಮತ್ತು ಡಿಪ್ಲೊಮಾಗಳು ಮಾನ್ಯತೆ ಪಡೆದ ವೈದ್ಯಕೀಯ ಪದವಿಗಳಾಗಿರುವುದಲ್ಲದೆ ಇವು ಈ ಕಾಯ್ದೆಯ ಮೊದಲನೆ ಷೆಡ್ಯೂಲ್‌ನಲ್ಲಿ ಸೇರ್ಪಡೆಗೆ ಅರ್ಹತೆ ಹೊಂದಿವೆ" ಎಂದು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. "ಇದೀಗ ಜಾರಿಯಲ್ಲಿರುವ ಯಾವುದೇ ಕಾಯ್ದೆಯ ವಿಧಿಗಳನ್ನು ಪರಿಗಣಿಸದೆ ಅಧ್ಯಯನ ಸಂಸ್ಥೆಯು ವೈದ್ಯಕೀಯ ಪದವಿ, ಡಿಪ್ಲೊಮಾ ಮತ್ತು ಇತರ ಶೈಕ್ಷಣಿಕ ಕೋರ್ಸ್‌ಗಳನ್ನು ನಡೆಸಲು ಎಲ್ಲ ಅರ್ಹತೆಗಳನ್ನು ಹೊಂದಿರುತ್ತದೆ" ಎಂಬುದನ್ನು ಅದರಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ.

ಹೀಗೆ ಈ ಅಧ್ಯಯನ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ವಿಧೇಯಕದಲ್ಲಿ ಅತ್ಯಂತ ಸ್ಪಷ್ಟವಾಗಿ ವಿಷದೀಕರಿಸಲಾಗಿದೆ. ಸಹಜವಾಗಿಯೇ ಅದು ಆಧುನಿಕ ವೈದ್ಯಕೀಯ ವಿಜ್ಞಾನದ ಅಭಿವೃದ್ಧಿಯನ್ನೇ ಗುರಿಯಾಗಿಸಿಕೊಂಡಿದೆ. ನಾನು ಆರೋಗ್ಯ ಖಾತೆಯನ್ನು ವಹಿಸಿಕೊಂಡಾಗ ನಮ್ಮ ದೇಶದಲ್ಲಿ ವೈದ್ಯಕೀಯ ವಿದ್ಯಾರ್ಥಿಗಳಿಗೆ ಸ್ನಾತಕೋತ್ತರ ತರಬೇತಿಗೆ ಯಾವುದೇ ವ್ಯವಸ್ಥೆ ಇಲ್ಲದಿದ್ದುದು ನನಗೆ ತೀವ್ರ ಆತಂಕ ಮೂಡಿಸಿತ್ತು.

ನಮ್ಮ ದೇಶದ ವೈದ್ಯಕೀಯ ವಿದ್ಯಾರ್ಥಿಗಳು ಅದರಲ್ಲೂ ವೈದ್ಯಕೀಯ ವಿದ್ಯಾಲಯಗಳಲ್ಲಿ ಬೋಧನಾ ವೃತ್ತಿಯನ್ನು ಅವಲಂಬಿಸಿದವರು ಸ್ನಾತಕೋತ್ತರ ಅಧ್ಯಯನಕ್ಕೆ ತಮ್ಮ ಊರನ್ನು ಬಿಟ್ಟು ವಿದೇಶಗಳಿಗೆ ಹೋಗಬೇಕಾದ ಅನಿವಾರ್ಯ ಪರಿಸ್ಥಿತಿ ಇತ್ತು. ಅಲ್ಲಿಂದ ಬಂದ ಮೇಲೆ ಇಲ್ಲಿಯೂ ಅವರಿಗೆ ಸರಿಯಾದ ವ್ಯವಸ್ಥೆ ಇರಲಿಲ್ಲ. ಯಾವುದೇ ಚಿಕಿತ್ಸಾಲಯದ ಸೌಲಭ್ಯವಿರಲಿಲ್ಲ. ನಮ್ಮ ದೇಶ ಉಷ್ಣವಲಯಕ್ಕೆ ಸೇರಿದ ದೇಶವಾಗಿದ್ದು, ಪಶ್ಚಿಮ ಭೂಖಂಡದಲ್ಲಿ ಕಾಣದಿರುವ ಅನೇಕ ವ್ಯಾಧಿಗಳು ಇಲ್ಲಿವೆ. ಇಂತಹ ಪರಿಸ್ಥಿತಿಯಲ್ಲಿ ನಮ್ಮ ದೇಶದ ಜನರಿಗೆ ನಮ್ಮಲ್ಲಿಯೇ ಸ್ನಾತಕೋತ್ತರ ಅಧ್ಯಯನದ ಅವಕಾಶವಿರುವ ವೈದ್ಯಕೀಯ ಸಂಸ್ಥೆಯೊಂದನ್ನು ಕಟ್ಟಿದರೆ ಅದರಿಂದ

* ಆಯುರ್ವೇದ, ಯುನಾನಿ, ಹೋಮಿಯೋಪಥಿ ಮುಂತಾದ ವೈದ್ಯ ಪದ್ಧತಿಗಳು ವೈದ್ಯಕೀಯ ವಿಜ್ಞಾನದ ವ್ಯಾಪ್ತಿಯೊಳಗೆ ಬರುತ್ತಿವೆಯೇ ಎಂಬ ಬಿಸ್ವನಾಥರಾಸ್ ಅವರ ಪ್ರಶ್ನೆಗೆ ಉತ್ತರಿಸುತ್ತಾ.

ಅವರಿಗೆ ಬಹಳಷ್ಟು ಪ್ರಯೋಜನವಾಗುತ್ತದೆ ಎಂದು ನನಗನಿಸಿತು. ಆದರಿಂದ ಹಣದ ಉಳಿತಾಯ ಮಾತ್ರವಲ್ಲ. ದೇಶಕ್ಕೆ, ಇಲ್ಲಿನ ಪರಿಸರಕ್ಕೆ ಅಗತ್ಯವಾಗಿರುವ ಜ್ಞಾನವನ್ನು ಅವರಿಗೆ ನೀಡಲು ಅದು ಸಹಕಾರಿಯಾಗುವುದು. ಇಂತಹ ಹಿನ್ನಲೆಯಲ್ಲಿ ಈ ಅಧ್ಯಯನ ಸಂಸ್ಥೆ ಅಸ್ತಿತ್ವಕ್ಕೆ ಬರುತ್ತಿರುವುದು ನನಗೆ ಹೆಮ್ಮೆ ಮೂಡಿಸಿದೆ.

ಎರಡನೆಯದಾಗಿ ವಿದೇಶಗಳಿಗೆ ಹೋದಾಗಲೆಲ್ಲ ಅಲ್ಲಿ ವೈದ್ಯಕೀಯ ಕ್ಷೇತ್ರದಲ್ಲಿ ಗಮನಾರ್ಹವಾದ ಹೊಸ ಬದಲಾವಣೆಗಳು ಬರುತ್ತಿರುವುದನ್ನು ನಾನು ಕಂಡಿದ್ದೇನೆ. ಅಂತಹ ಹೊಸ ಬದಲಾವಣೆಗಳನ್ನು ಇಲ್ಲಿಯೂ ಅಳವಡಿಸಬೇಕೆಂಬುದು ನನ್ನ ಉದ್ದೇಶವಾಗಿದೆ. ಉದಾಹರಣೆಗೆ ಈ ಉದ್ದೇಶಕ್ಕಾಗಿಯೇ ವೈದ್ಯಕೀಯ ಶಿಕ್ಷಣ ಕುರಿತ ವಿಶೇಷ ಅಧಿವೇಶನವೊಂದನ್ನು ಸಂಘಟಿಸಿದೆವು. ಅಲ್ಲಿ ವೈದ್ಯಕೀಯ ಕ್ಷೇತ್ರದ ಸುಧಾರಣೆಗಳ ಬಗೆಗೆ ಅನೇಕ ಸಲಹೆ ಸೂಚನೆಗಳು ಬಂದವು. ನಮ್ಮ ವೈದ್ಯಕೀಯ ಕಾಲೇಜುಗಳಲ್ಲಿ ಈಗಿರುವ ಪಠ್ಯಕ್ರಮದಲ್ಲಿ ಮಾಡಬೇಕಾಗಿರುವ ಬದಲಾವಣೆಗಳ ಬಗ್ಗೆಯೂ ಸಲಹೆ - ಸೂಚನೆಗಳು ಬಂದವು. ವೈದ್ಯಕೀಯ ಕ್ಷೇತ್ರದಲ್ಲಿ ನಾವು ನಮ್ಮ ಅಸ್ತಿತ್ವವನ್ನು ತೋರಿಸಿಕೊಡಬೇಕು ಮತ್ತು ಇತರ ರಾಷ್ಟ್ರಗಳು ನಮ್ಮಿಂದ ಕಲಿತುಕೊಳ್ಳುವಂತಾಗಬೇಕು. ಆ ದಿಸೆಯಲ್ಲಿ ಇದು ಮೊದಲ ಹೆಜ್ಜೆಯಾಗಿದೆ. ಆಧುನಿಕ ವೈದ್ಯಕೀಯ ವಿಜ್ಞಾನಕ್ಕೆ ಸಂಬಂಧಿಸಿದಂತೆ ಪ್ರಧಾನ ಮಂತ್ರಿಯವರ ನೇತೃತ್ವದಲ್ಲಿ ಹಲವು ದಿನಗಳ ಗಂಭೀರ ಚರ್ಚೆ - ಸಮಾಲೋಚನೆ ನಂತರ ಸಚಿವ ಸಂಪುಟ ತೆಗೆದುಕೊಂಡ ನಿರ್ಧಾರವನ್ನು ನಾನು ನಿಮಗಾಗಿ ಓದಿ ಹೇಳುತ್ತಿದ್ದೇನೆ:

"ಆಧುನಿಕ ವೈದ್ಯ ವಿಜ್ಞಾನವು ರಾಷ್ಟ್ರೀಯ ಸೇವೆಗಳ ಅಭಿವೃದ್ಧಿಗೆ ತಳಹದಿಯಾಗಿ ಮುಂದುವರಿಯುವುದು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಇದನ್ನು ಕಾರ್ಯರೂಪಕ್ಕೆ ತರಬೇಕು" ಎಂಬುದು ಅದರ ಸಾರಾಂಶ.

ಅದೇ ವೇಳೆಯಲ್ಲಿ ಇತರ ಕೆಲವು ಶಿಫಾರಸುಗಳನ್ನು ಮಾಡಲಾಯಿತು. ಅವುಗಳಲ್ಲಿ ನಾನು ನೀಡಿದ ಸಲಹೆಗಳು-

"ಆಯುರ್ವೇದ ಮತ್ತು ಯುನಾನಿ ವೈದ್ಯ ಪದ್ಧತಿಗಳಲ್ಲೂ ವೈಜ್ಞಾನಿಕ ತಳಹದಿಯ ಸಂಶೋಧನೆಗೆ ಬೇಕಾದ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕು. ಅವು ಸಾಧ್ಯವಾದಷ್ಟು ಮಟ್ಟಿಗೆ ಚೋಪ್ರಾ ಸಮಿತಿಯ ವರದಿಯ ಶಿಫಾರಸುಗಳಿಗೆ ಅನುಗುಣವಾಗಿರಬೇಕು. ಇಂತಹ ಸಂಶೋಧನೆಗೆ ಉದ್ದೇಶ ಆಯುರ್ವೇದ ಮತ್ತು ಯುನಾನಿ ಪದ್ಧತಿಗಳನ್ನು ಸಮೃದ್ಧಗೊಳಿಸುವುದಷ್ಟೇ ಅಲ್ಲ ಆಧುನಿಕ ವೈದ್ಯ ವಿಜ್ಞಾನಕ್ಕೂ ಬಹು ಮೌಲಿಕ ಕೊಡುಗೆಯನ್ನು ನೀಡುವುದು ಅದರ ಗುರಿಯಾಗಿದೆ. ಕಾಲಕ್ರಮದಲ್ಲಿ ಎಲ್ಲ ವೈದ್ಯ ಪದ್ಧತಿಗಳು ಒಂದುಗೂಡಿ ಸಮಗ್ರವಾದ ಒಂದೇ ವೈದ್ಯ ಪದ್ಧತಿ ರೂಪುಗೊಳ್ಳುವ ಅವಕಾಶ ಕಲ್ಪಿಸಬೇಕು".

ಕೇಂದ್ರ ಸಚಿವ ಸಂಪುಟವು ಅಂಗೀಕರಿಸಿರುವ ಈ ಗೊತ್ತುವಳಿಯನ್ನು ಅಕ್ಷರಶಃ ಪಾಲಿಸುವುದು ಮತ್ತು ಅದರ ಆಶಯವನ್ನು ಕಾರ್ಯರೂಪಕ್ಕೆ ತರುವುದು ದೇಶದ ಓರ್ವ ಸೇವಕಿಯಾಗಿ, ಕೇಂದ್ರ ಆರೋಗ್ಯ ಸಚಿವೆಯಾಗಿ ನನ್ನ ಕರ್ತವ್ಯವಾಗಿದೆ ಎಂದು ನಾನು ಈ ಸಂದರ್ಭದಲ್ಲಿ ಅತ್ಯಂತ ನಮ್ರತೆಯಿಂದ ನಿವೇದಿಸಿಕೊಳ್ಳುತ್ತಿದ್ದೇನೆ. ಅದೇ ವೇಳೆಗೆ ಆಯುರ್ವೇದವನ್ನು ವೈಜ್ಞಾನಿಕವಾಗಿ ಅಭಿವೃದ್ಧಿಪಡಿಸುವ ನಿಟ್ಟಿನಲ್ಲೂ ನಾನು ಶಕ್ತಿಮೀರಿ ಶ್ರಮಿಸಿದ್ದೇನೆ

ಮತ್ತು ಅದಕ್ಕೆ ನ್ಯಾಯ ಒದಗಿಸಿದ್ದೇನೆ ಎಂದು ಈ ಸಂದರ್ಭದಲ್ಲಿ ಹೇಳಲು ಬಯಸುತ್ತೇನೆ. ಆಯುರ್ವೇದ ಕುರಿತ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ನಾನು ಅನಂತರ ವಿವರವಾಗಿ ಮಾತನಾಡಲಿದ್ದೇನೆ. ಎಲ್ಲಕ್ಕಿಂತ ಮೊದಲಲ್ಲಿ ನಾನು ನಿಜವಾಗಿಯೂ ಈ ಮಸೂದೆಗೆ ಹೆಚ್ಚು ಸಂಬಂಧಪಾಗಿರುವ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಕೆಲವೊಂದು ವಿವರಗಳನ್ನು ನೀಡಲಿದ್ದೇನೆ.

ಎಲ್ಲಕ್ಕಿಂತ ಮುಖ್ಯವಾಗಿ ಕೆಲ ಸದಸ್ಯರು 'ಈ ಸಂಸ್ಥೆಯನ್ನು ನೀವು ದೆಹಲಿಯಲ್ಲೇ ಏಕೆ ಸ್ಥಾಪಿಸಿದಿರಿ?' ಎಂದು ಕೇಳಿದ್ದಾರೆ. ಹೌದು, ನಾವು ಬಹಳಷ್ಟು ಯೋಚಿಸಿಯೇ ಈ ನಿರ್ಧಾರಕ್ಕೆ ಬಂದಿದ್ದೇವೆ. ಇದೊಂದು ಹೊಸ ಪ್ರಯತ್ನ ಎಂಬ ಕಾರಣದಿಂದ ದೆಹಲಿಯನ್ನೇ ಆಯ್ದುಕೊಳ್ಳಲಾಯಿತು. ಇದು ಸಂಬಂಧಪಟ್ಟ ಖಾತೆಯ ಕಣ್ಗಾವಲಿನಲ್ಲೇ ಇರಬೇಕು ಮತ್ತು ಹಾಗಿದ್ದಲ್ಲಿ ಮಾತ್ರ ಇದು ಸರಿಯಾದ ರೀತಿಯಲ್ಲೇ ಅಭಿವೃದ್ಧಿ ಹೊಂದಬಹುದು ಎಂಬ ಅಭಿಪ್ರಾಯ ನಮ್ಮದಾಗಿದೆ.

ಈ ಅಧ್ಯಯನ ಸಂಸ್ಥೆಯ ಸ್ಥಳ ಸ್ವಾಧೀನತೆಗೆ ಸಂಬಂಧಿಸಿದಂತೆ ನೀವು ಎತ್ತಿದ ಪ್ರಶ್ನೆಗೆ ನನಗೆ ಉತ್ತರ ಗೊತ್ತಿಲ್ಲ. ಅದಕ್ಕೆ ನೀವು ಕಾನೂನು ಖಾತೆಯನ್ನೇ ಕೇಳಬೇಕು. ಶಾಸನಾತ್ಮಕವಾಗಿ* ಅದಕ್ಕೆ ಅವಕಾಶವಿದೆಯೋ ಇಲ್ಲವೊ ಎಂಬ ವಿಷಯ ಗಣ್ಯವಾಗಿದೆ. ಆದರೆ ಈ ಸ್ಥಳವನ್ನು ಈಗಾಗಲೇ ಸ್ವಾಧೀನ ಪಡಿಸಿಕೊಳ್ಳಲಾಗಿದೆ ಮತ್ತು ನಾನೀಗಾಗಲೇ ಹೇಳಿರುವಂತೆ ಮಾನ್ಯ ಸದಸ್ಯರು ಅಲ್ಲಿಗೆ ಹೋಗಿ ಏನೆಲ್ಲ ಕೆಲಸ ಆಗಿದೆ ಎಂಬುದನ್ನು ಯಾವುದೇ ಸಮಯದಲ್ಲಿ ಬೇಕಾದರೂ ನೋಡಿಬರಬಹುದು. ಹೀಗಾಗಿ ಸ್ಥಳದ ಪ್ರಶ್ನೆ ಈಗ ಉದ್ಭವಿಸುವುದಿಲ್ಲ. ವೈದ್ಯಕೀಯ ಔಷದೋಪಕರಣಗಳು ದೆಹಲಿಯಲ್ಲಿ ವಿಪುಲವಾಗಿ ಸಿಗುತ್ತವೆ. ಅದಕ್ಕೆ ಮುಂಬೈ, ಕಲ್ಕತ್ತಾ ಅಥವಾ ಮದ್ರಾಸ್‌ಗೆ ಹೋಗಬೇಕಾದ ಅವಶ್ಯಕತೆ ಇಲ್ಲ.

ಇನ್ನು, ತಾನು ನೀಡಿರುವ ಅನುದಾನಕ್ಕೆ ನ್ಯೂಜಿಲ್ಯಾಂಡ್ ಸರ್ಕಾರ ಷರತ್ತುಗಳನ್ನೇನಾದರೂ ವಿಧಿಸಿದೆಯೇ ಎಂದೂ ಸದಸ್ಯರು ಕೇಳಿದ್ದಾರೆ. ಆದರೆ ನಾನು ಈಗಾಗಲೇ ಹೇಳಿರುವಂತೆ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯ ಪರಿಕಲ್ಪನೆಯನ್ನು ನೀಡಿದ್ದು ಬೋರೆ ಸಮಿತಿ. ನಾನು ಅಧಿಕಾರ ವಹಿಸಿಕೊಂಡ ತಕ್ಷಣವೇ ಈ ಶಿಫಾರಸನ್ನು ಅಂಗೀಕರಿಸಿದೆ. ನಾನು ಆರೋಗ್ಯ ಖಾತೆಯ ಹೊಣೆ ಹೊತ್ತುಕೊಂಡ ಮೊದಲ ವರ್ಷದಲ್ಲೇ ಅದಕ್ಕಾಗಿ ಒತ್ತಾಯಿಸಿದೆ. ಆದರೆ ನನಗೆ ಹಣ ಸಿಗಲಿಲ್ಲ. ಹೀಗಾಗಿ ಕೊಲಂಬೋ ಯೋಜನೆ ಬಂದಾಗ ನಾನು ಯೋಜನೆಯೊಂದನ್ನು ಸಿದ್ಧಪಡಿಸಿ ಅದನ್ನು ಸರ್ಕಾರಕ್ಕೆ ಸಲ್ಲಿಸಿದೆ. ನ್ಯೂಜಿಲ್ಯಾಂಡ್ ಸರ್ಕಾರ ಅದನ್ನು ಅಂಗೀಕರಿಸಿತು. ಈ ಅನುದಾನಕ್ಕೆ ಯಾವ ರೀತಿಯ ಷರತ್ತುಗಳೂ ಇಲ್ಲ. ಆಧುನಿಕ ವೈದ್ಯ ಪದ್ಧತಿಯಲ್ಲಿ ಪದವಿಪೂರ್ವ ಮತ್ತು ಸ್ನಾತಕೋತ್ತರ ಅಧ್ಯಯನ ತರಬೇತಿ ಹಾಗೂ ಸಂಶೋಧನೆಗಾಗಿ ರೂಪಿಸಲಾದ ಅಖಿಲ ಭಾರತ ಅಧ್ಯಯನ ಸಂಸ್ಥೆ ಇದೆಂಬುದನ್ನು ಪರಿಗಣಿಸಿ ಸರ್ಕಾರ ಅನುದಾನ ನೀಡಲು ಮುಂದಾಯಿತು.

ಇತರ ಕೆಲ ಸದಸ್ಯರು ದಂತ ವೈದ್ಯಕೀಯ ಕಾಲೇಜ್ ಮತ್ತು ನರ್ಸಿಂಗ್ ಕಾಲೇಜುಗಳೇ ಏಕಿರಬೇಕು? ಬೇರೆ ಕಾಲೇಜುಗಳು ಏಕಿರಬಾರದು? ಎಂದು ಕೇಳಿದರು. ಇನ್ನು ಕೆಲವರು

* ದೆಹಲಿಯಲ್ಲೇ ಈ ಸಂಸ್ಥೆ ಸ್ಥಾಪನೆಗೆ ಶಾಸನಾತ್ಮಕವಾಗಿ ಅವಕಾಶವಿದೆಯೇ ಎಂಬ ಡಾ|| ಡಬ್ಲ್ಯೂ.ಎಸ್. ಬರ್ಲಿಂಗೆ ಅವರ ಪ್ರಶ್ನೆಗೆ ಉತ್ತರಿಸುತ್ತಾ.

ಕಾಲೇಜುಗಳೇ ಏಕಿರಬೇಕು? ಎಂದರು. ನಮ್ಮ ದೇಶದಲ್ಲಿ ದಂತ ವೈದ್ಯಕೀಯ ಅತ್ಯಂತ ಅಲಕ್ಷಿತ ವೈದ್ಯ ಶಾಖೆಗಳಲ್ಲಿ ಒಂದಾಗಿದೆ. ನಮ್ಮ ದೇಶದಲ್ಲಿಂದು ಸ್ನಾತಕ ಪದವಿಯ ದಂತ ವೈದ್ಯಕೀಯ ಕಾಲೇಜು ಇಲ್ಲ. ಹಾಗಾಗಿ ನಮ್ಮ ದೇಶದಲ್ಲೇ ದಂತ ವೈದ್ಯಕೀಯದ ಅಧ್ಯಯನಕ್ಕೆ ಎಲ್ಲ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕೆಂದು ನಾನು ದೃಢ ನಿಶ್ಚಯ ಮಾಡಿದ್ದೇನೆ. ಪ್ರಥಮ ಶ್ರೇಣಿಯ ಅರ್ಹತೆ ಹೊಂದಲು ನಮ್ಮ ದಂತ ವೈದ್ಯರು ವಿದೇಶಗಳಿಗೆ ಹೋಗಬೇಕಾಗಿದೆ. ಹೀಗಾಗಿ ಈ ಅಧ್ಯಯನ ಸಂಸ್ಥೆ ದಂತ ವೈದ್ಯಕೀಯ ಕಾಲೇಜೊಂದನ್ನು ಹೊಂದಿರಬೇಕೆಂದು ಬಯಸಿದೆ. ಅದೇ ರೀತಿ ವೈದ್ಯಕೀಯ ವೃತ್ತಿಯ ಪ್ರಮುಖ ಅಂಗವಾಗಿರುವ ಶುಶ್ರೂಷೆ (ನರ್ಸಿಂಗ್) ವಿಭಾಗ ಅತ್ಯಂತ ಅಲಕ್ಷಿತವಾಗಿದೆ. ಇಡೀ ದೇಶದಲ್ಲಿ ಎರಡೇ ಎರಡು-ಒಂದು ದೆಹಲಿಯಲ್ಲಿ, ಇನ್ನೊಂದು ದಕ್ಷಿಣ ಭಾರತದಲ್ಲಿ ನರ್ಸಿಂಗ್ ಕಾಲೇಜುಗಳಿವೆ. ಈ ಕಾಲೇಜುಗಳ ನರ್ಸಿಂಗ್ ಶಿಕ್ಷಕರಿಗೆ ಈಗ ಇಲ್ಲಿ ತರಬೇತಿ ನೀಡುತ್ತಿದ್ದು ಆನಂತರ ಅವರು ವಿವಿಧ ರಾಜ್ಯಗಳಲ್ಲಿ ನರ್ಸಿಂಗ್ ತರಬೇತಿಯನ್ನು ಕೈಗೆತ್ತಿಕೊಳ್ಳುವರು. ಇದೇ ವೇಳೆಗೆ ಇತರ ಕಾಲೇಜುಗಳು ರಾಶಿ ರಾಶಿಯಾಗಿ ಈ ಕ್ಯಾಂಪಸ್‌ನಲ್ಲಿ ತುಂಬುವುದನ್ನೂ ನಾನು ಬಯಸುವುದಿಲ್ಲ. ಆದರೆ ಸಾಮಾಜಿಕ ಮತ್ತು ಪ್ರತಿಬಂಧಕ ವೈದ್ಯಕೀಯ ವಿಭಾಗವೊಂದು ಇಲ್ಲಿರಬೇಕೆಂದು ನಿರೀಕ್ಷಿಸುತ್ತಿದ್ದೇನೆ. ಸಾಮಾಜಿಕ ಮತ್ತು ಪ್ರತಿಬಂಧಕ ವೈದ್ಯಕೀಯ ತರಬೇತಿಯ ಸೌಕರ್ಯಗಳನ್ನು ಹೊಂದಿರದೇ ಇದ್ದಲ್ಲಿ ಪ್ರಗತಿ ಹೊಂದುತ್ತಿರುವ ಆಧುನಿಕ ವೈದ್ಯಕೀಯ ವಿಜ್ಞಾನದೊಂದಿಗೆ ನಾವು ಹೆಜ್ಜೆ ಹಾಕಲಾರೆವು.

ಮಾನ್ಯ ಸದಸ್ಯರಾದ ಡಾ|| ರಘುಬೀರ್ ಸಿಂಗ್ ಅವರು ಒಂದೇ ಮಾದರಿಯ ಕಾಲೇಜುಗಳ ಎಲ್.ಎಂ.ಪಿ. ಕೋರ್ಸ್‌ಗಳು ಮತ್ತು ಗ್ರಾಮೀಣ ಸೇವೆಗಳ ಅಗತ್ಯಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಈ ಕಾಲೇಜು ಮಾಮೂಲಿ ಕಾಲೇಜಾಗಿರದೆ ವಿಭಿನ್ನ ರೀತಿಯ ಕಾಲೇಜಾಗಿರುತ್ತದೆ ಎಂಬ ವಿಷಯದಲ್ಲಿ ನನಗೆ ಎಳ್ಳಷ್ಟೂ ಅನುಮಾನವಿಲ್ಲ. ಇದೊಂದು ಹೊಸ ಪ್ರಯತ್ನ. ಇತರರಿಗೆ ಮೇಲ್ಪಂಕ್ತಿಯಾಗುವಂತಹ ಯೋಜನೆ. ಅದು ಎಲ್ಲ ವಿಷಯಗಳ ಮತ್ತು ಎಲ್ಲ ಸಮಯಗಳಲ್ಲಿಯೂ ಹೊಸದಾರಿಯನ್ನೇ ತುಳಿಯುತ್ತದೆ. ಚುನಾಯಿತ ಜನಪ್ರತಿನಿಧಿಗಳ ಬೆಂಬಲದಿಂದ ಈ ಸಂಸ್ಥೆಯು ದೇಶದಲ್ಲೇ ಅತ್ಯುತ್ತಮ ಸಂಸ್ಥೆಯಾಗಿ ರೂಪುಗೊಳ್ಳಲಿದೆ. ಅದು ಭಾರತಕ್ಕೆ ಮಾತ್ರವೇ ಅಲ್ಲ ಇಡೀ ಜಗತ್ತಿಗೇ ಬಹು ಮೌಲಿಕವಾದ ಕೊಡುಗೆಯನ್ನು ನೀಡಲಿದೆ ಎಂದು ನಾನು ದೃಢವಾಗಿ ನಂಬಿದ್ದೇನೆ. ನಮ್ಮ ದೇಶದ ಯುವಕರು ಬುದ್ಧಿಮತ್ತೆಯಲ್ಲಿ ಇತರರಿಗಿಂತ ಯಾರಿಂದಲೂ ಕಡಿಮೆ ಇಲ್ಲ ಎಂಬ ಮಾನ್ಯ ಸದಸ್ಯರ ಅಭಿಪ್ರಾಯವನ್ನು ನಾನು ಒಪ್ಪುತ್ತೇನೆ. ಅವರಲ್ಲಿ ಅನೇಕರು ಶಸ್ತ್ರ ಚಿಕಿತ್ಸೆಯ ಕ್ಷೇತ್ರದಲ್ಲಿ, ವೈದ್ಯಕೀಯ ಕ್ಷೇತ್ರದಲ್ಲಿ, ರೋಗ ನಿದಾನ ಕ್ಷೇತ್ರದಲ್ಲಿ ಹಾಗೂ ಈ ಮಹಾನ್ ವಿಜ್ಞಾನದ ಇತರ ಶಾಖೆಗಳಲ್ಲಿ ಹೆಸರು ಮಾಡಿದವರಾಗಿದ್ದಾರೆ.

'ವೈದ್ಯರ ನೇಮಕಾತಿಯನ್ನು ಯು.ಪಿ.ಎಸ್.ಸಿ.ಗೆ ವಹಿಸಿಕೊಡಬಾರದೇಕೆ?' ಎಂದು ಕೆಲವರು ಕೇಳಿದ್ದಾರೆ. ನಾವು ಈ ವಿಷಯವನ್ನು ಯು.ಪಿ.ಎಸ್.ಸಿ. ಯೊಂದಿಗೆ ಸಮಾಲೋಚಿಸಿದ್ದೇವೆ. ವಿಧೇಯಕಕ್ಕೆ ಅಂಗೀಕಾರ ದೊರೆಯುವವರೆಗೆ ನೇಮಕಾತಿ ಮಾಡಲು ಯುಪಿಎಸ್‌ಸಿ ಒಪ್ಪಿಕೊಂಡಿದೆ. ಆದರೆ ವಿದೇಯಕ ಅಂಗೀಕಾರ ಪಡೆದ ನಂತರ ಸರಕಾರೇತರ ಶಾಸನಾತ್ಮಕ ಸಂಸ್ಥೆಯಾಗುವುದರಿಂದ ನೇಮಕಾತಿ ಪ್ರಕ್ರಿಯೆ ಯುಪಿಎಸ್‌ಸಿಯ ವ್ಯಾಪ್ತಿಗೆ ಒಳಪಡುವುದಿಲ್ಲ. ಇದು ಕಾನೂನಿನ ಕಟ್ಟಳೆ.

ನಿಯಮ, ನಿಬಂಧನೆಗಳ ಕುರಿತು ಮಾತನಾಡುತ್ತಾ, ಕೆಲವರು ಅವು ಮಿತಿಯನ್ನು ಮೀರಿವೆ ಎಂಬರೆ, ಇನ್ನು ಕೆಲವರು ಅವು ಸಂಸತ್ತಿನ ಅಧಿಕಾರವನ್ನೇ ಕಸಿದುಕೊಂಡಿವೆ ಎಂದಿದ್ದಾರೆ. ಕಾಯ್ದೆಯ 28ನೇ ವಿಧಿ ಕೇಂದ್ರ ಸರ್ಕಾರಕ್ಕೆ ಕಾನೂನುಗಳನ್ನು ರೂಪಿಸುವ ಅಧಿಕಾರ ನೀಡಿದರೆ, 29ನೇ ವಿಧಿ ನಿಬಂಧನೆಗಳನ್ನು ಮಾಡಲು ಈ ಸಂಸ್ಥೆಗೆ ಅಧಿಕಾರ ಕೊಡುತ್ತದೆ. 6 ರಿಂದ 10ರ ತನಕದ ವಿಧಿಗಳು ಈ ನಿಯಮ, ನಿಬಂಧನೆಗಳಿಗೆ ಸಂಬಂಧಿಸಿದ ವಿಷಯಗಳನ್ನು ನಿರ್ದಿಷ್ಟಪಡಿಸುತ್ತವೆ. ಈ ವಿಷಯಗಳು 28 ಮತ್ತು 29ನೇ ವಿಧಿಗಳಲ್ಲಿ ಪ್ರಸ್ತಾಪಿತವಾಗಿದ್ದು, ಅವು ಇನ್ನಷ್ಟು ಸ್ಪಷ್ಟನೆ ನೀಡಲು ಇರುವಂತದ್ದು. 6 ರಿಂದ 10ರವರೆಗಿನ ವಿಧಿಗಳಿಂದ ನಿಬಂಧನೆಗಳನ್ನು ತೆಗೆದುಹಾಕಬೇಕಾದರೆ ವಿಧೇಯಕದ ಭಾಷೆ ತೀರಾ ತೊಡಕಿನದಾಗುತ್ತದೆ. ಹಾಗಾಗಿ ಇತರರಿಗೆ ಮೇಲ್ಪಂಕ್ತಿಯಾಗಬಲ್ಲ ಈ ಸಂಸ್ಥೆಗೆ ಸಾಧ್ಯವಾದಷ್ಟು ಸ್ವಾಯತ್ತತೆ ಕೊಡಬೇಕು ಎಂದು ಪ್ರತಿಪಾದಿಸುತ್ತೇನೆ. ಪ್ರತಿಯೊಂದು ವಿಷಯದಲ್ಲಿ ಹೊಂದಾಣಿಕೆಗೆ ಅವಕಾಶವಿರಲಿ, ಅದೇ ರೀತಿ ಸ್ವಾಯತ್ತತೆಯೂ ಇರಲಿ ಮತ್ತು ಪ್ರತಿಯೊಂದು ಸಣ್ಣಪುಟ್ಟ ವಿಷಯಕ್ಕೂ ನಾವು ಚಿಂತಿತರಾಗಬೇಕಾದ ಅಗತ್ಯವಿಲ್ಲ. ನಿಯಮ, ನಿಬಂಧನೆ ವಿಷಯದಲ್ಲೂ ಈ ಸೂತ್ರ ಅನ್ವಯವಾಗುತ್ತದೆ. ಅದೇನೆ ಇದ್ದರೂ ಈ ಸಂಸ್ಥೆಗಾಗಿ ಅತ್ಯುತ್ತಮವಾದ ಆಡಳಿತ ಮಂಡಳಿಯೊಂದನ್ನು ನಾವು ಹೊಂದಲಿದ್ದೇವೆ. ಸಂಸ್ಥೆಯು ಅನುಸರಿಸಬೇಕಾದ ಧೋರಣೆಗಳನ್ನು ಈ ಆಡಳಿತ ಮಂಡಳಿಯೇ ರೂಪಿಸುವುದು. ಹಾಗಾಗಿ ನಿಯಮ, ನಿಬಂಧನೆಗಳನ್ನು ರೂಪಿಸುವ ಅಧಿಕಾರವನ್ನೂ ಈ ಸಂಸ್ಥೆಗೆ ನೀಡಬೇಕು.

* * * *

ಆಡಳಿತ ಮಂಡಳಿಗೆ * ಅಂಗೀಕಾರಾರ್ಹವಲ್ಲದ ಯಾವುದೇ ಕಾಯ್ದೆಯನ್ನು ಸರ್ಕಾರ ರೂಪಿಸಲು ಹೋಗುವುದಿಲ್ಲ. ಆದರೆ ಸರ್ಕಾರವು ಆಡಳಿತ ಮಂಡಳಿಯೊಂದಿಗೆ ನಿಕಟ ಸಂಪರ್ಕ ಇಟ್ಟುಕೊಳ್ಳುವುದು. ದಯವಿಟ್ಟು ಸರ್ಕಾರವನ್ನು ನಂಬಿ. ವೈದ್ಯಕೀಯ ಕ್ಷೇತ್ರದ ತಜ್ಞರಲ್ಲಿ ವಿಶ್ವಾಸವಿಡಿ. ಅದೇ ವೇಳೆಗೆ ಬುದ್ಧಿಮತ್ತೆ ಎಂಬುದು ನಮ್ಮ ಎರಡು ಸದನಗಳಲ್ಲಿ ಮಾತ್ರವೇ ಇದೆ ಎಂದೂ ತಿಳಿಯಬೇಡಿ.

ವಿಶ್ವವಿದ್ಯಾಲಯ ಅನುದಾನ ಆಯೋಗದ ವಿಷಯದಲ್ಲಿ ಹೇಳುವುದಾದರೆ ವಿಶ್ವವಿದ್ಯಾಲಯ ಅನುದಾನ ಆಯೋಗದ ಕಾಯ್ದೆಯ 3ನೇ ಪರಿಚ್ಛೇದವು ವಿಶ್ವವಿದ್ಯಾಲಯಕ್ಕೆ ಹೊರತಾದ ಯಾವುದೇ ಸಂಸ್ಥೆಯನ್ನು ವಿಶ್ವವಿದ್ಯಾಲಯದ ಅಂಗವಾಗಿ ಪರಿಗಣಿಸಲು ಅವಕಾಶ ಕಲ್ಪಿಸುತ್ತದೆ.

ಮಾನ್ಯ ಸಪ್ರು ಅವರು ಸಮಿತಿಯ ವಿಷಯದಲ್ಲಿ ವಿವರಣೆ ಬಯಸಿದ್ದಾರೆ. ಈ ವಿಷಯದಲ್ಲಿ 10(5) ವಿಧಿಯ ಕಡೆಗೆ ನಾನು ಅವರ ಗಮನ ಸೆಳೆಯಲು ಬಯಸುತ್ತೇನೆ. ಈ ವಿಧಿಯಂತೆ ಅಧ್ಯಯನ ಸಂಸ್ಥೆಯು ನಿರ್ದಿಷ್ಟ ಉದ್ದೇಶಗಳಿಗಾಗಿ ಮತ್ತು ಸಲಹೆ ನೀಡುವ ಸಲುವಾಗಿ ಅಗತ್ಯವಾಗಿರುವಷ್ಟು ಸ್ಥಾಯಿ ಸಮಿತಿಗಳನ್ನು ಮತ್ತು ಆಡ್‌ಹಾಕ್ ಸಮಿತಿಗಳನ್ನು ರಚಿಸಬಹುದಾಗಿದೆ. ಈ ಉಪ ಸಮಿತಿಗಳು ಕಾರ್ಯ ನಿರ್ವಾಹಕ ಸಮಿತಿಗಳಾಗಿರಬಹುದು

---

* ಸಂಸ್ಥೆಗೆ ಸ್ವಾಯತ್ತತೆ ನೀಡುವ ಕುರಿತು ಜಸ್ವಂತ್ ರಾಯ್ ಕಪೂರ್ ಅವರು ಕೇಳಿದ ಪ್ರಶ್ನೆಗೆ ಉತ್ತರಿಸುತ್ತಾ.

ಅಥವಾ ಸಲಹಾ ಸಮಿತಿಗಳಾಗಿರಬಹುದು. ಅಧ್ಯಯನ ಸಂಸ್ಥೆ ಮತ್ತು ಇತರ ವೈದ್ಯಕೀಯ ಕಾಲೇಜುಗಳ ನಡುವಣ ಸಂಪರ್ಕವನ್ನು ಅಧಿಕಾರೇತರ ಪ್ರತಿನಿಧಿಗಳು ನಿರ್ವಹಿಸುವರು. ಕಾಯ್ದೆಯ 4 (ಎ), 4 (ಇ) ಮತ್ತು 4 (ಎಫ್) ವಿಧಿಗಳನ್ನು ನೀವು ಗಮನಿಸಿದಲ್ಲಿ ಈ ಸಂಸ್ಥೆಯಲ್ಲಿ ಅಧಿಕಾರೇತರ ಪ್ರಾತಿನಿಧ್ಯಕ್ಕೆ ಬಹಳ, ಬಹಳ ಅವಕಾಶ ಇರುವುದನ್ನು ಕಾಣುವಿರಿ.

ಈ ಅಧ್ಯಯನ ಸಂಸ್ಥೆಯಲ್ಲಿ ಭಾರತೀಯ ವೈದ್ಯಕೀಯ ಮಂಡಳಿಗಳಿಗೆ ಏಕೆ ಪ್ರಾತಿನಿಧ್ಯ ಕೊಟ್ಟಿಲ್ಲ? ಎಂದು ಮತ್ತೆ ಕೆಲವರು ನನ್ನನ್ನು ಪ್ರಶ್ನಿಸಿದ್ದಾರೆ. ಬೋಲೆ ಸಮಿತಿಯು ಭಾರತೀಯ ವೈದ್ಯಕೀಯ ಮಂಡಳಿ ಅಧ್ಯಕ್ಷರು ಮತ್ತು ಇನ್ನೋರ್ವ ಸದಸ್ಯರ ಸೇರ್ಪಡೆಯನ್ನು ಶಿಫಾರಸು ಮಾಡಿದಾಗ ಅಧ್ಯಯನ ಸಂಸ್ಥೆಯ ಪದವಿಪೂರ್ವ ವಿಭಾಗದ ಉಸ್ತುವಾರಿಯನ್ನು ಮಂಡಳಿಗೆ ವಹಿಸಿಕೊಡಲು ಉದ್ದೇಶಿಸಲಾಗಿತ್ತು. ಆದಾದ ಮೇಲೆ ಈ ಸಂಬಂಧದ ಸಮಗ್ರ ಪರಿಕಲ್ಪನೆಯೇ ಬದಲಾಯಿತು. ಏಕೆಂದರೆ ಅಧ್ಯಯನ ಸಂಸ್ಥೆಯನ್ನು ಒಂದು ಸ್ವತಂತ್ರ ಸಂಸ್ಥೆಯಾಗಿ ಪರಿವರ್ತಿಸಲು ಯೋಚಿಸಿದ್ದೆವು. ಪದವಿ ಪೂರ್ವ ಕ್ಷೇತ್ರದಲ್ಲಿ ನಾವು ಕೆಲವೊಂದು ಪ್ರಯೋಗಗಳನ್ನು ಮಾಡಲು ಬಯಸಿದ್ದೇವೆ. ನಾವು ಅದರ ಅವಧಿಯನ್ನು ಕಿರಿದುಗೊಳಿಸಲು ಅಥವಾ ನಮಗೆ ಬೇಕಾದ ರೀತಿಯಲ್ಲಿ ಅದರ ವ್ಯಾಪ್ತಿಯನ್ನು ಹಿಗ್ಗಿಸಲು ಉದ್ದೇಶಿಸಿದ್ದೇವೆ. ಅಷ್ಟನ್ನು ನಾವು ಸಾಧಿಸಲೇಬೇಕು. ಅದಕ್ಕಾಗಿ ನಾವು ಎಲ್ಲ ಪ್ರಯತ್ನಗಳನ್ನು ಮಾಡುತ್ತೇವೆ. ವೈದ್ಯಕೀಯ ಮಂಡಳಿಯ ಕೈಕೆಳಗೆ ಬರುವ ಸಂಸ್ಥೆ ಒಂದು ಸಾಮಾನ್ಯ ದರ್ಜೆಯ ಕಾಲೇಜಾಗಿ ಉಳಿಯುವುದು ನಮಗಿಷ್ಟವಿಲ್ಲ. ಕಾಲಾಂತರದಲ್ಲಿ ಬೇಕಿದ್ದರೆ ಬದಲಾವಣೆಗಳನ್ನು ಮಾಡಲು ಅವಕಾಶ ಇದ್ದೇ ಇದೆ. ಅದು ಬೇರೆ ವಿಷಯ. ಆದರೆ ಸದ್ಯದ ಮಟ್ಟಿಗೆ ನಮ್ಮ ಸಂಸ್ಥೆಗೆ ಪ್ರಾಯೋಗಿಕ ಅಧ್ಯಯನಕ್ಕಾಗಿ ಪೂರ್ಣ ಸ್ವಾತಂತ್ರ್ಯ ಬೇಕಾಗಿದೆ.

ಯಾವುದೇ ವಿಶ್ವವಿದ್ಯಾಲಯಕ್ಕೆ ಸೇರ್ಪಡೆ ಹೊಂದದೆ ಈ ಸಂಸ್ಥೆಗೆ ವಿಶೇಷ ಸ್ಥಾನಮಾನ ನೀಡುವ ನಮ್ಮ ಉದ್ದೇಶಕ್ಕೂ ಇದೇ ಕಾರಣಗಳು ಅನ್ವಯವಾಗುತ್ತವೆ. ನಮಗೆ ಯಾವುದೇ ವಿಶ್ವವಿದ್ಯಾಲಯವನ್ನೂ ಅತಿಕ್ರಮಿಸುವ ಉದ್ದೇಶವಿಲ್ಲ. ಅದೇ ರೀತಿ ಈಗಿರುವ ವಿಶ್ವವಿದ್ಯಾಲಯಗಳಿಗೆ ನೀಡುತ್ತಿರುವ ಸಹಾಯವನ್ನು ನಿಲ್ಲಿಸುವ ಇಂಗಿತವೂ ಇಲ್ಲ. ಅವು ಅಪೇಕ್ಷಿಸಿಪಟ್ಟಲ್ಲಿ ನಮ್ಮ ಯಾವುದೇ ಸಂಸ್ಥೆ ಅಥವಾ ವಿಭಾಗಗಳನ್ನು ಮೇಲ್ದರ್ಜೆಗೆ ಏರಿಸುವ ಅವಕಾಶವುಂಟು. ಆದರೆ ನಮ್ಮ ಈ ಅಧ್ಯಯನ ಸಂಸ್ಥೆಯು ನಮ್ಮ ಎಲ್ಲ ತರಬೇತಿ ಸಂಸ್ಥೆಗಳಿಗೆ ಒಂದು ಮಾರ್ಗದರ್ಶಿ ಕೇಂದ್ರವಾಗಿ ನಿಲ್ಲಬೇಕು. ಇದು ಅಖಿಲ ಭಾರತ ಎಂಬ ಪರಿಭಾಷೆಗೆ ಸರಿಯಾಗಿ ದೇಶಕ್ಕೆ ಮಾರ್ಗದರ್ಶಕ ಕೇಂದ್ರವಾಗಬೇಕು. ಅಖಿಲ ಭಾರತ ವ್ಯಾಪ್ತಿಯ ಈ ಸ್ಫೂರ್ತಿ ದೇಶದ ಗತ ಇತಿಹಾಸ ಯಾವುದೇ ಸಂದರ್ಭಕ್ಕಿಂತಲೂ ಇಂದು ಹೆಚ್ಚು ಅಗತ್ಯವಾಗಿದೆ. ಇಂತಹ ಸ್ಫೂರ್ತಿ ಇಲ್ಲದೆ ಹೋದರೆ ಅದು ನಮ್ಮನ್ನು ಸಂಕುಚಿತತೆ ಮತ್ತು ಪ್ರಾಂತೀಯ ದುರಭಿಮಾನಕ್ಕೆ ಈಡು ಮಾಡುವ ಅಪಾಯವಿದೆ. ನಮ್ಮ ಶತಮಾನದ ಸತ್ಪುರುಷ ರಾಷ್ಟ್ರಪಿತ ಗಾಂಧೀಜಿಯವರು ನಮಗೆ ಹೇಳಿಕೊಟ್ಟ ಧ್ಯೇಯೋದ್ದೇಶಗಳನ್ನು ಬೇರು ಸಹಿತ ಕಿತ್ತು ಹಾಕುವ ಅಪಾಯ ಇಲ್ಲಿ ಕಾದಿದೆ. ವಿಧೇಯಕದ 4 (ಇ) ಮತ್ತು 4 (ಎಫ್) ವಿಧಿಗಳನ್ವಯ ಭಾರತೀಯ ವೈದ್ಯಕೀಯ ಮಂಡಳಿಯ ಸದಸ್ಯರಿಗೆ ಪ್ರಾತಿನಿಧ್ಯ ಇದ್ದೇ ಇದೆ. ಇದು ಸದನದ ಮಾನ್ಯ ಸದಸ್ಯರನ್ನು

ಸಮಾಧಾನ ಪಡಿಸುತ್ತದೆಂದು ನಾನು ನಂಬಿದ್ದೇನೆ. ಈ ಸಂಸ್ಥೆಯಲ್ಲಿ ಪದವಿಪೂರ್ವ ಕಾಲೇಜು ಇರಬೇಕು ಎಂದು ನಾನು ಈಗಾಗಲೇ ಹೇಳಿದ್ದೇನೆ. ಈ ಸಂಬಂಧ ನಾನು ಮುಂದಿಟ್ಟ ವಾದವನ್ನು ಪುನರುಚ್ಚರಿಸುವುದಿಲ್ಲ. ಪದವಿಪೂರ್ವ ಅಧ್ಯಯನದಲ್ಲಿ ನಿಚ್ಚಳ ಹೊಸ ಹೊಸ ಆವಿಷ್ಕಾರಗಳು ಆಗುತ್ತಿದ್ದು, ಈ ವಿಭಾಗದಲ್ಲೂ ಸುಧಾರಣೆ ಆಗಬೇಕಾಗಿದೆ. ಆಧುನಿಕ ಶಿಕ್ಷಣದಲ್ಲಿ ಸ್ನಾತಕೋತ್ತರ ಅಧ್ಯಯನ ಒಂದು ಪ್ರತ್ಯೇಕ ವ್ಯವಸ್ಥೆಯಾಗಿ ಉಳಿಯಲು ಸಾಧ್ಯವಿಲ್ಲ. ...... ಅವು ಪದವಿಪೂರ್ವ ಕೋರ್ಸ್‌ಗಳೊಂದಿಗೆ ನಿಕಟವಾಗಿ ಹೊಂದಿಕೊಂಡಿರುವುದರಿಂದ ಅವು ಪ್ರತ್ಯೇಕವಾಗಿ ಉಳಿಯುವುದು ತರವಲ್ಲ. ಅದು ನಮ್ಮ ಪ್ರಗತಿಗೆ ಅತ್ಯವಶ್ಯಕವಾಗಿದೆ.

ಈ ಮಸೂದೆಯ 23 ಮತ್ತು 24ನೇ ವಿಧಿಗಳ ಬಗೆಗೂ ಕೆಲವರು ಆಕ್ಷೇಪಗಳನ್ನು ಎತ್ತಿದ್ದಾರೆ. ವೈದ್ಯಕೀಯ ಶಿಕ್ಷಣ ಕ್ಷೇತ್ರದಲ್ಲಿ ಹೊಸ ಹೊಸ ಪ್ರಯೋಗಗಳನ್ನು ನಡೆಸುವುದು ಅಧ್ಯಯನ ಸಂಸ್ಥೆಯ ಪ್ರಮುಖ ಉದ್ದೇಶಗಳಲ್ಲಿ ಒಂದಾಗಿರುವುದರಿಂದ ಈ ವಿಧಿಗಳು ಅತ್ಯಗತ್ಯವಾಗಿವೆ ಮತ್ತು ಅವು ಅದಕ್ಕೆ ಅಗತ್ಯವಾಗಿರುವ ಸ್ವಾತಂತ್ರ್ಯವನ್ನು ನೀಡುತ್ತವೆ ಎಂಬ ಅಂಶವನ್ನು ನಾನು ವಿನಮ್ರತೆಯಿಂದ ಹೇಳಬಯಸುತ್ತೇನೆ. ಇಲ್ಲಿ ಡಿಪ್ಲೊಮಾಗಳು ಮತ್ತು ಪದವಿಗಳಿಗೆ ಮಾನ್ಯತೆ ನೀಡಲಾಗುವುದು. ನಮ್ಮ ಕಾಯ್ದೆಗೆ ಅನುಗುಣವಾಗಿ, ಈ ಮಾನ್ಯತೆ ದೊರೆಯಲಿದೆ. ಅವುಗಳ ಮೇಲೆ ಭಾರತ ಸರ್ಕಾರದ ಮುದ್ರೆಯೂ ಇರುತ್ತದೆ. ಬ್ರಿಟನ್‌ನ ಎಫ್.ಆರ್.ಸಿ.ಎಸ್., ಎಂ.ಆರ್.ಸಿ.ಪಿ ಮತ್ತು ಎಫ್.ಆರ್.ಸಿ.ಪಿ ಹಾಗೂ ಅಮೆರಿಕದ ಎಂ.ಡಿ.ಎಸ್. ಪದವಿಗಳಂತೆಯೇ ನಮ್ಮ ಪದವಿಗಳೂ ಜಗತ್ತಿನಾದ್ಯಂತ ಮಾನ್ಯತೆ ಪಡೆಯಲಿದೆಯೆಂಬ ಬಗೆಗೂ ನಾನು ಆಶಾವಾದಿಯಾಗಿದ್ದೇನೆ. ಈ ಸಂಸ್ಥೆಯಲ್ಲಿ ನಮ್ಮವರು ಪಡೆದ ಪದವಿಗಳು ಮತ್ತು ಡಿಪ್ಲೊಮಾಗಳಿಗೆ ಜಾಗತಿಕ ಮನ್ನಣೆ ಮತ್ತು ಶ್ಲಾಘನೆ ಲಭಿಸುವುದು ನಿಶ್ಚಿತ.

ಈ ಅಧ್ಯಯನ ಸಂಸ್ಥೆಯ ಮುಂಗಡಪತ್ರದ ಬಗ್ಗೆ ಹೇಳುವುದಾದರೆ ಆದು ಏಕಾಏಕಿಯಾಗಿ ಬಂದಿಲ್ಲ. ಕಳೆದ ನಾಲ್ಕು ವರ್ಷಗಳಿಂದ ಪ್ರತಿವರ್ಷವೂ ಎರಡೂ ಸದನಗಳಲ್ಲೂ ವೈದ್ಯಕೀಯ ಅಧ್ಯಯನ ಸಂಸ್ಥೆಯ ಮುಂಗಡ ಪತ್ರ ಅಂಗೀಕಾರ ಪಡೆಯುತ್ತಿದೆ. ಹಾಗಾಗಿ ಈ ಬಗ್ಗೆ ಚಿಂತೆಪಡಬೇಕಾಗಿಲ್ಲ. ಈಗ ಮಂಡಿಸುತ್ತಿರುವ ವಿಧೇಯಕವು ಈ ಅಧ್ಯಯನ ಸಂಸ್ಥೆಯ ಅಸ್ತಿತ್ವ ಮತ್ತು ಕಾರ್ಯ ನಿರ್ವಹಣೆಗೆ ಅಗತ್ಯವಿರುವ ಅಧಿಕಾರವನ್ನು ನೀಡಲು ಇರುವಂತಹುದ್ದಾಗಿದೆ.

ಇಲ್ಲಿ ಅಧ್ಯಾಪಕರು ಮತ್ತು ಆಡಳಿತ ಮಂಡಳಿಯ ಮಧ್ಯೆ ಸಂಘರ್ಷ ಸಂಭವಿಸುವ ಸಾಧ್ಯತೆಗಳ ಬಗ್ಗೆ ಕೆಲವರು ಪ್ರಸ್ತಾಪಿಸಿದ್ದಾರೆ. ಅಂತಹ ಸಂಘರ್ಷಕ್ಕೆ ಯಾವುದೇ ಕಾರಣಗಳು ನನಗೆ ಕಂಡುಬರುತ್ತಿಲ್ಲ. ಆಡಳಿತ ಮಂಡಳಿಯು ಸಂಸ್ಥೆಯ ನೀತಿಯನ್ನು ನಿರೂಪಿಸುತ್ತದೆ. ಸಂಸ್ಥೆಯ ಆಡಳಿತ ನಿರ್ವಹಣೆ ನಿರ್ದೇಶಕರು ಮತ್ತು ಆದರ ಕೈಕೆಳಗಿರುವ ಸಿಬ್ಬಂದಿಯ ಹೊಣೆಗಾರಿಕೆಯಾಗಿದೆ. "ನಮ್ಮಲ್ಲಿ ಆಡಳಿತಕ್ಕಾಗಿ ದೊಡ್ಡ ದೊಡ್ಡ ಕಟ್ಟಡಗಳಿವೆ. ಆದರೆ ಅಲ್ಲಿ ಕೆಲಸ ನಡೆಯುತ್ತಿರುವುದು ತೀರಾ ಕಡಿಮೆ" ಎಂದು ಯಾರೋ ಒಬ್ಬರು ಹೇಳಿದರು. ಆದರೆ ಇಲ್ಲಿ ಹಾಗಾಗುವುದಿಲ್ಲ ಎಂದು ನಾನು ಅವರಿಗೆ ಭರವಸೆ ಕೊಡುತ್ತೇನೆ. ಇಲ್ಲಿ ಈಗಾಗಲೇ ಮೂಳೆ ಶಸ್ತ್ರ ಕ್ರಿಯೆ ವಿಭಾಗದಲ್ಲಿ ಸ್ನಾತಕೋತ್ತರ ಅಧ್ಯಯನ ಪ್ರಾರಂಭವಾಗಿದೆ. ತತ್ಕಾಲಕ್ಕೆ ಈಗ ಜೋಪಡಿಗಳಲ್ಲಿ ಈ ತರಗತಿಗಳು ಆರಂಭವಾಗಿವೆ.

'ಆಧುನಿಕ ವೈದ್ಯ ವಿಜ್ಞಾನ' (ಮಾಡರ್ನ್ ಮೆಡಿಸಿನ್)* ಎಂಬುದು ಅಮೇರಿಕದ ಪರಭಾಷೆ ಎಂದು ಯಾರೋ ಒಬ್ಬರು ಹೇಳಿದರು. ಇದನ್ನು ಕೇಳಿ ನನಗೆ ನಿಜವಾಗಿಯೂ ಆಶ್ಚರ್ಯವಾಯಿತು. ಇದನ್ನು ಹೇಳಿದ ಮಾನ್ಯ ಮಹಿಳಾ ಸದಸ್ಯರು ಅಮೇರಿಕಕ್ಕೆ ಹೋಗಿದ್ದಾರೋ ಇಲ್ಲವೋ ನನಗೆ ಗೊತ್ತಿಲ್ಲ. ಆದರೆ ನನಗೆ ತಿಳಿದಿರುವಂತೆ ಅಮೆರಿಕಾದಲ್ಲಾಗಲಿ, ಇಂಗ್ಲೆಂಡ್‌ನಲ್ಲಾಗಲಿ 'ಆಧುನಿಕ ವೈದ್ಯ ವಿಜ್ಞಾನ' ಎಂಬ ಪರಿಭಾಷೆ ಬಳಕೆಯಲ್ಲೇ ಇಲ್ಲ. ಕಳೆದ ವರ್ಷ ನಾನು ಬ್ರಿಟನ್ನಿನ ಆರೋಗ್ಯ ಸಚಿವರೊಂದಿಗೆ ಮಾತನಾಡುತ್ತಿದ್ದಾಗ ಅವರು 'ಸಾಂಪ್ರದಾಯಿಕ ವೈದ್ಯ ವಿಜ್ಞಾನ' (ಆರ್ಥೋಡಾಕ್ಸ್ ಮೆಡಿಸಿನ್) ಎಂಬ ಪರಿಭಾಷೆಯನ್ನೇ ಬಳಸಿದರು. ಮೊನ್ನೆ ಮೊನ್ನೆ ಅಮೇರಿಕದ ಪ್ರಾಧ್ಯಾಪಕರೊಂದಿಗೆ ಮಾತನಾಡಿದಾಗ ಅವರು 'ರೂಢಿಗತ ವೈದ್ಯ ವಿಜ್ಞಾನ' (ಕನ್‌ವೆನ್‌ಷನಲ್ ಮೆಡಿಸಿನ್) ಎಂಬ ಪರಿಭಾಷೆಯನ್ನೇ ಬಳಸಿದರು. ಬಹುಶಃ ನಾವೇ 'ಆಧುನಿಕ ವೈದ್ಯ ವಿಜ್ಞಾನ' (ಮಾಡರ್ನ್ ಮೆಡಿಸಿನ್) ಎಂಬ ಪದ ಬಳಸಿಕೊಂಡಿದ್ದೇವೆ. ಈಗ ಇಂಗ್ಲೆಂಡ್ ಮತ್ತು ಜಗತ್ತಿನ ಇತರ ದೇಶಗಳ ವೈದ್ಯರು ಅದನ್ನು ಅಂಗೀಕರಿಸಿದ್ದಾರೆಂದು ನಾವು ಹೇಳಬಹುದು. ಹೆಸರಿನಲ್ಲಿ ಏನಿದೆ? ಯಾವುದೇ ಸಂದರ್ಭದಲ್ಲಿ ಅಲೋಪಥಿ ಎಂದರೆ ಆಧುನಿಕ ವೈದ್ಯ ವಿಜ್ಞಾನವಲ್ಲ. ಇದು ಹೋಮಿಯೋಪಥಿಯವರು ವಿನ್ಯಾಸಗೊಳಿಸಿದ ಹೆಸರು ಎಂದು ನಿಮಗೆ ಇದುವರೆಗೆ ತಿಳಿದಿಲ್ಲವಾದರೆ ಅದನ್ನು ಈ ಸಂದರ್ಭದಲ್ಲಿ ನಾನು ಮಾನ್ಯ ಸದಸ್ಯರಿಗೆ ಅರಿಕೆ ಮಾಡಿಕೊಳ್ಳುತ್ತಿದ್ದೇನೆ. ಆಧುನಿಕ ವೈದ್ಯ ವಿಜ್ಞಾನವನ್ನು ಯಾವುದೇ 'ಪತಿ' ಗಿಂತ ಎಷ್ಟೆಷ್ಟೋ ಪಟ್ಟು ಹೆಚ್ಚಿನದು. ಅದು ಮಾನವ ಸಮುದಾಯ ಅಸ್ತಿತ್ವಕ್ಕೆ ಬಂದಾಗಿನಿಂದ ಇತಿಹಾಸದುದ್ದಕ್ಕೂ ನಾವು ಈ ಕ್ಷೇತ್ರದಲ್ಲಿ ಗಳಿಸಿರುವ ಪರಿಜ್ಞಾನದ ಒಟ್ಟು ಮೊತ್ತವಾಗಿದೆ. ಆಧುನಿಕ ವೈದ್ಯ ವಿಜ್ಞಾನದಲ್ಲಿ ನಾವು ಪದೇ ಪದೇ ಹೇಳಿರುವಂತೆ ಆಯುರ್ವೇದ ಮತ್ತು ಯುನಾನಿ ಕೊಡುಗೆಯೂ ಇದ್ದೇ ಇದೆ.

* * *

ಇಲ್ಲ. ಈಗಿರುವ ರೂಪದಲ್ಲಿ ಖಂಡಿತವಾಗಿಯೂ ಅವುಗಳನ್ನು ಹೊರತುಪಡಿಸಲಾಗಿದೆ. ಆಯುರ್ವೇದ ವೈದ್ಯ ಪದ್ಧತಿಯು ಉತ್ತುಂಗ ಸ್ಥಿತಿಯಲ್ಲಿದ್ದಾಗಿನ ಮಾತು ಬೇರೆ. ಆದರೆ ಇಂದು ಆಯುರ್ವೇದ ಸರಿಯಾದ ರೀತಿಯಲ್ಲಿ ಬಳಕೆಯಾಗುತ್ತಿಲ್ಲ. ಈ ಮಾತನ್ನು ನಾನು ಹಲವಾರು ಬಾರಿ ಸದನದಲ್ಲಿ ಹೇಳಿದ್ದೇನೆ. ಅದರ ಬೆಳವಣಿಗೆ ಸ್ಥಗಿತಗೊಂಡಿದೆ. ಯಾವುದೇ ಒಂದು ಕ್ಷೇತ್ರದಲ್ಲಿ ನಾವು ಈ ರೀತಿ ಜಡಾವಸ್ಥೆಯಲ್ಲಿ ಉಳಿಯುವುದು ಸಾಧ್ಯವೇ? ವಿಜ್ಞಾನದ ಪ್ರಮುಖ ಶಾಖೆಯೊಂದರಲ್ಲಿ ಭಾರತ ಮುಂದುವರಿಯಬೇಡವೇ? ಜೀವನದ ಇತರ ಎಲ್ಲ ಕ್ಷೇತ್ರಗಳ ವೈಜ್ಞಾನಿಕವಾದುದೆಲ್ಲವನ್ನು ನಾವು ಸ್ವೀಕರಿಸುತ್ತಿರುವಾಗ ನಮ್ಮ ದೇಶ ಇದೊಂದು ಕ್ಷೇತ್ರದಲ್ಲಿ ಮಾತ್ರ ಹಿಂದುಳಿದರೆ ಅದಕ್ಕಿಂತ ದುಃಖ ಕರವಾದ ವಿಷಯ ಯಾವುದಿದೆ ? ಎಂಜಿನ್‌ಗಳ ಬಳಕೆಯಲ್ಲಿ, ಮೋಟಾರು ಕಾರು, ವಿಮಾನಗಳ ಬಳಕೆಯಲ್ಲಿ, ನದಿಕಣಿವೆ ಯೋಜನೆಗಳಲ್ಲಿ, ಪರಮಾಣು ಕ್ಷೇತ್ರದಲ್ಲಿ ನಾವು ಹೊಸ ಹೊಸ ವೈಜ್ಞಾನಿಕ ಅಂಶಗಳನ್ನು ಅಳವಡಿಸಿಕೊಳ್ಳುತ್ತಿದ್ದೇವೆ. ಇನ್ನೀಗ ಪರಮಾಣು ಶಕ್ತಿಯನ್ನು ವೈದ್ಯಕೀಯ ಉದ್ದೇಶಗಳಿಗೆ ಬಳಸಿಕೊಳ್ಳುವ ದಿನಗಳು ಕೂಡಾ

---

ಆಧುನಿಕ ವೈದ್ಯ ವಿಜ್ಞಾನದ ಪರಿಕಲ್ಪನೆಯಿಂದ ಆಯುರ್ವೇದ ಮತ್ತು ಯುನಾನಿ ವೈದ್ಯ ಪದ್ಧತಿಗಳನ್ನು ಹೊರಗಿರಿಸಲಾಗಿದೆ ಎಂದು ಹೆಚ್.ಪಿ. ಸಕ್ಸೇನಾ ಅವರು ಎತ್ತಿದ ಆಕ್ಷೇಪಕ್ಕೆ ಉತ್ತರಿಸುತ್ತಾ,

ಬರಲಿವೆ. ಅಲ್ಲಿಯೂ ನೀವು ಆಯುರ್ವೇದವನ್ನು ತಳ್ಳುತ್ತೀರಾ? ಹೀಗೆ ಎಲ್ಲ ವಿಷಯಗಳನ್ನು ಒಂದೆಡೆ ಸೇರಿಸಲು ಬರುವುದಿಲ್ಲ.

* * *

ಗಾಂಧೀಜಿಯವರ ಜೊತೆಗೆ ಇದ್ದಾಗ ಅವರೊಂದಿಗೆ ಹರಟೆ ಹೊಡೆಯುತ್ತಿದ್ದೆವು. ಮಾತಿಗೆ ಆರಂಭಿಸಿದಾಗಲೆಲ್ಲ ಆ ದಿನದ 'ಟೈಮ್ಸ್ ಆಫ್ ಇಂಡಿಯಾ' ದ 'ಥಾಟ್ ಫಾರ್ ದಿ ಡೇ' ಕಾಲಂನಲ್ಲಿ ಏನಿದೆ ಹೇಳು? ಎಂದು ಕೇಳುತ್ತಿದ್ದರು. ಅಂತಹ ಸಂದರ್ಭಗಳಲೆಲ್ಲ ನಾನು ಅಂಕಣವನ್ನು ಅವರಿಗೆ ಓದಿ ಹೇಳುತ್ತಿದ್ದೆ. ಅದು ಅವರಿಗೆ ಹಿಡಿಸಿದರೆ ಅದಕ್ಕಾಗಿ ಮೀಸಲಿಟ್ಟಿದ್ದ ಒಂದು ಪುಸ್ತಕದಲ್ಲಿ ಬರೆದಿಡಲು ಹೇಳುತ್ತಿದ್ದರು. ಅಗಿನಿಂದ ನಾನು 'ಟೈಮ್ಸ್ ಆಫ್ ಇಂಡಿಯಾ' ದ 'ಥಾಟ್ ಫಾರ್ ದಿ ಡೇ' ಕಾಲಂನ್ನು ತಪ್ಪದೆ ಓದತೊಡಗಿದೆ. ಒಂದು ಸಲ ಈ ಅಂಕಣದಲ್ಲಿ ಹೀಗೆ ಬರೆದಿತ್ತು. "ಸಮಾಜದ ಹಿತಾಸಕ್ತಿಗಳು ಕೆಲವೊಂದು ಸಲ ಪೂರ್ಣ ಸತ್ಯವನ್ನು ಹೇಳಲು ಬಿಡುವುದಿಲ್ಲ. ಆದರೆ ವಿಜ್ಞಾನದಲ್ಲಿ ಮಾತ್ರ ಎಂದೂ ಹಾಗಾಗುವುದಿಲ್ಲ. ಇಲ್ಲಿ ಸತ್ಯವನ್ನು ಮರೆ ಮಾಡುವ ಪ್ರಶ್ನೆಯೇ ಏಳುವುದಿಲ್ಲ. ಇದು ನನ್ನ ಮನಸ್ಸಿನ ಮೇಲೆ ಗಾಢ ಪರಿಣಾಮ ಬೀರಿತು. ಈ ಮಾತುಗಳು ಈ ಪ್ರಶ್ನೆಗೆ ಸಂಬಂಧಿಸಿದಂತೆ ನನ್ನ ಮನಸ್ಸಿನಲ್ಲಿರುವ ಭಾವನೆಗಳನ್ನೇ ಹೇಳುತ್ತಿವೆ. ವಿಜ್ಞಾನ ಎಂಬುದು ಸತ್ಯದ ಅನ್ವೇಷಣೆ. ವೈದ್ಯಕೀಯ ವಿಜ್ಞಾನವು ಅದಕ್ಕೆ ಹೊರತಲ್ಲ. ಇತರ ಎಲ್ಲ ವಿಜ್ಞಾನಗಳಂತೆ ಅದು ಸತ್ಯವನ್ನೇ ಅನ್ವೇಷಿಸುತ್ತಿದೆ. ವಾಸ್ತವವಾಗಿ ಇದು ಹೆಚ್ಚು ವೈಜ್ಞಾನಿಕವಾಗಿದೆ. ಅದು ಮನುಷ್ಯನನ್ನು ವಿಶೇಷ ರೀತಿಯಲ್ಲಿ ಸ್ಪರ್ಶಿಸುತ್ತದೆ. ಏಕೆಂದರೆ ಅದು ಬದುಕು ಅಥವಾ ಸಾವಿನ, ಸುಖ ಅಥವಾ ಯಾತನೆಗೆ ಸಂಬಂಧಿಸಿದೆ" ಅದು ಸ್ವಾಸ್ಥ್ಯ ಅಥವಾ ಅಸ್ವಸ್ಥತೆಗೆ ಸಂಬಂಧಿಸಿದ್ದಾಗಿದೆ. ಹೀಗಾಗಿ ವೈದ್ಯಕೀಯ ಶಿಕ್ಷಣ ಕುರಿತು ನಮ್ಮ ದೃಷ್ಟಿಕೋನ ಹೆಚ್ಚು ಹೆಚ್ಚು ವೈಜ್ಞಾನಿಕವಾಗಿರಬೇಕು. ನಾನು ಇಲ್ಲಿ ಈ ವಿಷಯದಲ್ಲಿ ಸದಸ್ಯರು ಮಾಡಿದ ಭಾಷಣಗಳನ್ನು ಕೇಳಿದ್ದೇನೆ. ಅವುಗಳನ್ನು ಕೇಳಿ ಅಚ್ಚರಿಪಟ್ಟಿದ್ದೂ ಇದೆ. ಹಾಗೆ ಮಾತನಾಡಿದವರೂ ಔಚಿತ್ಯ ಪ್ರಜ್ಞೆಯಿಂದ ಈ ಮಾತುಗಳನ್ನು ಆಡಿರುವರೇ? ಅಥವಾ ಸತ್ಯಾನ್ವೇಷಣೆಯ ಉದ್ದೇಶದಿಂದ ಅವರು ಈ ವಾದವನ್ನು ಮಂಡಿಸಿರುವರೇ? ಎಂಬುದು ನನಗೆ ಗೊತ್ತಿಲ್ಲ. 1951ರಲ್ಲಿ ನಾನು ಚುನಾವಣೆಗೆ ಸ್ಪರ್ಧಿಸಿದಾಗ ನನ್ನ ಮತ ಕ್ಷೇತ್ರದ ಕೆಲವು ಮಂದಿ ವೈದ್ಯರು ನನ್ನ ಬಳಿಗೆ ಬಂದು "ಇಲ್ಲಿ 3500-4000 ಗಳಷ್ಟು ಮತಗಳಿವೆ. ನೀವು ಆಯುರ್ವೇದಕ್ಕೆ ಮಾನ್ಯತೆ ನೀಡಿದರೆ ಆ ಮತಗಳು ನಿಮಗೆ ಬರುತ್ತವೆ" ಎಂದರು. ಆಗ ನಾನು "ನಿಮ್ಮ ಮತಗಳನ್ನು ಚರಂಡಿಗೆ ಎಸೆಯಿರಿ. ನಿಮ್ಮ ಬೇಡಿಕೆಯನ್ನು ಈಡೇರಿಸಲು ನನಗೆ ಸಾಧ್ಯವಿಲ್ಲ. ಅಂತಹ ಆಮಿಷಕ್ಕೆ ಬಲಿಯಾಗುವವಳು ನಾನಲ್ಲ". ನಿರೀಕ್ಷೆಯಂತೆ ಆ ಮತಗಳು ನಮ್ಮ ವಿರುದ್ಧ ಬಿದ್ದವು. "ಯಾವುದೇ ವಿಷಯವನ್ನೂ ದುಡ್ಡಿನಿಂದ ಅಳೆಯಬೇಡಿ: ವಿಜ್ಞಾನದ ದೃಷ್ಟಿಯಿಂದ ಯೋಚಿಸಿ". ನಾನು ನಿಮಗೆ ಹೇಳುವುದು ಇದನ್ನೇ. ಈಗ ಸದನದಲ್ಲಿ ಮಾಡಿರುವ ಭಾಷಣಗಳಲ್ಲಿ ಮೂಲಭೂತ ಸಂಶೋಧನೆ ಮತ್ತು ಔಷಧ ಸಂಶೋದನೆಗಳ ನಡುವಣ ವ್ಯತ್ಯಾಸವನ್ನೇ ಗಣನೆಗೆ ತೆಗೆದುಕೊಂಡಂತಿಲ್ಲ. "ಆಯುರ್ವೇದದ ಔಷಧಿಗಳು ಹಾಗಿವೆ, ಹೀಗಿವೆ" ಎಂದು ಅನೇಕರು ಹೇಳಿದ್ದಾರೆ. ಅದನ್ನು ನಾನು ಅಲ್ಲಗಳೆಯುವುದಿಲ್ಲ. ಆಯುರ್ವೇದ ಯುನಾನಿ ಹಾಗೂ ಹೋಮಿಯೋಪಥಿ ವೈದ್ಯರು ಬಳಸುವ ಔಷಧಗಳ ಬಗೆಗೆ ಗಾಢ ಸಂಶೋಧನೆ ನಡೆಯಬೇಕು. ಆದರೆ ಮೂಲಭೂತ ಸಂಶೋಧನೆ ತುಸು ಭಿನ್ನವಾಗಿದ್ದು, ಅದು ಅತ್ಯಂತ ಕಠಿಣವಾಗಿದೆ.

ಆರೋಗ್ಯ ಖಾತೆಯ ವರದಿಯನ್ನು ನೀವು ಓದಿದ್ದರೆ ಅದು ನಿಮಗೆ ಗೊತ್ತಾಗುತ್ತದೆ. ಚರ್ಚೆಯಲ್ಲಿ ಭಾಗವಹಿಸಿದ ಸದಸ್ಯರೊಬ್ಬರು ಈ ವರದಿಯಲ್ಲಿನ ಅಂಶಗಳ ಬಗ್ಗೆ ಈಗಾಗಲೇ ಪ್ರಸ್ತಾಪಿಸಿದ್ದಾರೆ. ಜಾಮ್ ನಗರದಲ್ಲಿ ನಡೆಸುತ್ತಿರುವ ಮೂಲಭೂತ ಸಂಶೋಧನೆಯ ಜೊತೆಗೆ ಪಾಂಡುರೋಗ (ತೊನ್ನು) ಗೃಹಿಣಿ ಮತ್ತು ಕಾಮಾಲೆ ರೋಗಗಳ ಕುರಿತು ಸಂಶೋಧನೆಯನ್ನು ನಡೆಸಲಾಗುತ್ತಿದೆ. "ಅದಲ್ಲದೆ ಆಯುರ್ವೇದ ನಿರ್ದೇಶನಾಲಯದ ಸಹಯೋಗದೊಂದಿಗೆ ನಾರು ಹುಣ್ಣಿನ ಸೋಂಕು ರೋಗಗಳ ಕುರಿತು ಸಂಶೋಧನೆ ಮತ್ತು ಈ ರೋಗಗಳಿಗೆ ಆಯುರ್ವೇದದಲ್ಲಿ ಬಳಸಲಾಗುವ ಔಷಧಗಳನ್ನು ಗುರುತು ಹಚ್ಚುವ ಕಾರ್ಯವನ್ನು ಅಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಇದರೊಂದಿಗೆ ವೇದಗಳು, ಉಪನಿಷತ್ ಮತ್ತು ಪುರಾಣ - ಕಾವ್ಯಗಳಲ್ಲಿ ಮತ್ತು ಇತರ ಮೂಲಗ್ರಂಥಗಳಲ್ಲಿ ರಕ್ತ ಹೀನತೆ ಕುರಿತು ಮಾಹಿತಿ ಸಂಗ್ರಹಿಸುವ ಸಾಹಿತ್ಯಿಕ ಸಂಶೋಧನೆಯ ಕಾರ್ಯವೂ ನಾಗಿದೆ. ಅಧ್ಯಯನ ಸಂಸ್ಥೆಯ ಔಷಧ ವಿಭಾಗವಿದ್ದು ಕೆಲವೊಂದು ಪ್ರಮುಖ ಔಷಧಗಳನ್ನು ತಯಾರಿಸಿದೆ". ಅವುಗಳಲ್ಲಿ 20 ಔಷಧಿಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ. ಇದರೊಂದಿಗೆ ಅಧ್ಯಯನ ಸಂಸ್ಥೆಯು ಏನೇನು ಕೆಲಸಗಳನ್ನು ಮಾಡುತ್ತಿದೆ ಎಂಬ ಬಗೆಗಿನ ಮಾಹಿತಿಯನ್ನು ನೀಡಲಾಗಿದೆ. ನೀವು ವರದಿಯ 45ನೇ ಪುಟವನ್ನು ನೋಡಿದರೆ ಅವರು ಮನವಿನಿಶ್ಚಯ, ದ್ರವ್ಯ ವಿನಿಶ್ಚಯ ಮತ್ತು ಚರ್ಮ ವಿನಿಶ್ಚಯ ಕುರಿತು ಸಂಶೋಧನೆ ನಡೆಯುತ್ತಿರುವುದೂ ನಿಮ್ಮ ಗಮನಕ್ಕೆ ಬರುವುದು. ಈ ಸಂಬಂಧದ ಉಲ್ಲೇಖಗಳನ್ನು ಪ್ರಾಚೀನ ಆಯುರ್ವೇದ ಗ್ರಂಥಗಳಿಂದ ಸಂಗ್ರಹಿಸುವ ಕಾರ್ಯವೂ ಅಲ್ಲಿ ನಡೆಯುತ್ತಿದೆ. ಅದು ಅಲ್ಲದೆ ಔಷಧಿಗಳಲ್ಲಿ ಬಳಸುವ ವನಸ್ಪತಿಗಳನ್ನು ಗುರುತಿಸುವ, ಔಷಧಿ ಸಸ್ಯಗಳನ್ನು ಗಿಡ ಮೂಲಿಕೆಗಳನ್ನು ಬೆಳೆಸುವುದೇ ಮೊದಲಾದ ಕಾರ್ಯವು ಅಲ್ಲಿ ಪ್ರಗತಿಯಲ್ಲಿದೆ. ಅಧ್ಯಯನ ಸಂಸ್ಥೆಯ ಭಾವಿ ಕಾರ್ಯಭಾರದ ರೂಪುರೇಷೆಗಳು ಈ ಕೆಳಕಂಡಂತಿವೆ:-

1) ಸಿದ್ಧ ವೈದ್ಯ ಪದ್ಧತಿಯನ್ನು ಅಭಿವೃದ್ಧಿಪಡಿಸುವುದು.

2) ಚಿಕಿತ್ಸೆಗೆ ಸಂಬಂಧಿಸಿದ ಹೊರಾಂಗಣ ಸಂಶೋಧನೆ ನಡೆಸುವುದು.

3) ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಸ್ತಾಪಿಸಿರುವ ಯೋಜನೆಗಳು

ಅ) ಯುನಾನಿ ವಿಭಾಗದ ಸ್ಥಾಪನೆ

ಆ) ಪ್ರಾಣಿಗಳ ಪ್ರಯೋಗಾಲಯ

ಲಭ್ಯವಿರುವ ಔಷಧಿಗಳ ಪರಿಣಾಮವನ್ನು ಪ್ರಾಯೋಗಿಕವಾಗಿ ಪರೀಕ್ಷಿಸಬೇಕಾದರೆ ನೀವು ಆಧುನಿಕ ವೈದ್ಯ ಪದ್ಧತಿಗಳ ಚಿಕಿತ್ಸಾ ವಿಧಾನಗಳ ಸಹಾಯವನ್ನು ಪಡೆಯಲೇಬೇಕು. ಅವುಗಳೆಂದರೆ:-

ಇ) ಪಂಚಕರ್ಮ ಮತ್ತು ನೈಸರ್ಗಿಕ ಚಿಕಿತ್ಸೆ

ಈ) ಹಸ್ತಪ್ರತಿಗಳು ಮತ್ತು ಪ್ರಕಟಣೆ ವಿಭಾಗ

ಉ) ಔಷಧಗಳ ಇತಿಹಾಸ ಮತ್ತಿತರ ವಿಷಯಗಳು

* * * *

ಹಾಗಾಗಿ ಜಾಮ್ ನಗರಕ್ಕೆ ಹೋಗಿ ಅಲ್ಲಿ ಏನು ನಡೆಯುತ್ತಿದೆ ಎಂಬುದನ್ನು ಸ್ವತಃ ನೋಡಿ ಬರಬೇಕೆಂದು ಮಾನ್ಯ ಸದಸ್ಯರನ್ನು ನಾನು ವಿನಂತಿಸುತ್ತೇನೆ.* ಆಗ ಮಾನ್ಯ ಪ್ರಧಾನಮಂತ್ರಿಯವರು ಈ ಅಧ್ಯಯನ ಸಂಸ್ಥೆಯ ಬಗ್ಗೆ ವ್ಯಕ್ತಪಡಿಸಿದ ಪ್ರಶಂಸೆಯ ಮಾತುಗಳ ಅರ್ಥ ಅವರಿಗೆ ತಾನೇ ತಾನಾಗಿ ಆಗುತ್ತದೆ ಎಂದು ನಾನು ಭಾವಿಸಿದ್ದೇನೆ.

"ಈ ಸಂಸ್ಥೆಗೆ ನೀಡಿದ ಭೇಟಿ ಒಂದು ಚೇತೋಹಾರಿ ಅನುಭವವಾಗಿದೆ. ಅದು ಮುಂದೊಂದು ದಿನ ಅತ್ಯಂತ ಫಲಪ್ರದ ಫಲಿತಾಂಶವನ್ನು ತಂದುಕೊಡುತ್ತದೆ ಎಂಬ ಪೂರ್ಣ ಭರವಸೆ ನನಗಿದೆ".

ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಆಯುರ್ವೇದ ಮತ್ತು ಇತರ ಪ್ರಾಚೀನ ವೈದ್ಯ ಪದ್ಧತಿಗಳಿಗಾಗಿ ನಿಧಿಗಳನ್ನು ನಿಗದಿಪಡಿಸಿದ್ದರೂ ಅವುಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳಲು ಸಾಧ್ಯವಾಗಲಿಲ್ಲ. ಅವುಗಳ ಬಳಕೆ ಏಕೆ ಸಾಧ್ಯವಾಗಲಿಲ್ಲವೆಂದು ಕೇಳಿ? ಪ್ರತಿಯೊಂದು ರಾಜ್ಯಕ್ಕೂ ನಾನು ಈ ಸಂಶೋಧನೆಗಳಿಗೆ ಸಂಬಂಧಿಸಿದ ಯೋಜನೆಗಳನ್ನು ಕಳುಹಿಸಿ ಎಂದು ಬರೆಯುತ್ತಿದ್ದೆ. ಅವರು ಅಂತಹ ಯೋಜನೆಗಳನ್ನು ಕಳುಹಿಸುತ್ತಿದ್ದರು. ವೈದ್ಯರು ಆಧುನಿಕ ವೈದ್ಯ ವಿಜ್ಞಾನದಲ್ಲಿ ಶಿಕ್ಷಣ ಹೊಂದಿದವರಲ್ಲ. ನಮ್ಮಲ್ಲಿ ಕೆಲವರಿಗೆ ಆಧುನಿಕ ವೈದ್ಯ ಪದ್ಧತಿಯ ಬಗ್ಗೆಯೇ ವೈರ ಭಾವನೆ ಇದ್ದಂತಿದೆ. ಆದರೆ ಅವರಲ್ಲಿ ಹೆಚ್ಚಿನವರು ಕಾಯಿಲೆ ಬಿದ್ದಾಗ ನಮ್ಮ ಆಸ್ಪತ್ರೆಗಳಿಗೇ ಬರುತ್ತಾರೆ.

ಆಯುರ್ವೇದಕ್ಕೆ ಸಂಬಂಧಿಸಿದಂತೆ ವಿಷಯಗಳ ಪರಾಮರ್ಶೆಗೆ ನಾವು ಸಲಹೆಗಾರರ ಒಂದು ತಂಡವನ್ನೇ ಹೊಂದಿದ್ದೇವೆ. ಈ ಸಲಹೆಗಾರರೆಂದರೆ:-

1) ಡಾ|| ಗೋಖಲೆ, ಪ್ರಿನ್ಸಿಪಾಲ್, ಆಯುರ್ವೇದ ಕಾಲೇಜ್, ಪುಣೆ
2) ಡಾ|| ಶ್ರೀನಿವಾಸ ಮೂರ್ತಿ, ಸ್ಕೂಲ್ ಆಫ್ ಇಂಡಿಯನ್ ಮೆಡಿಸಿನ್‌ನ ಮಾಜಿ ಅಧ್ಯಕ್ಷ, ಮದ್ರಾಸ್.
3) ಶ್ರೀ ರಾಮಪ್ರಸಾದ್ ಶರ್ಮ, ಆಯುರ್ವೇದ ನಿರ್ದೇಶಕ ಪಿ.ಇ.ಪಿ.ಎಸ್.ಯು.

ಹೋಮಿಯೋಪಥಿ ವೈದ್ಯ ಪದ್ಧತಿಯ ಬಗ್ಗೆ ಸಲಹೆ ನೀಡಲು ಡಾ|| ಮುಜುಮದಾರ್, ಡಾ|| ದಿವಾನ್ ಜಯಚಂದ್, ಡಾ|| ದಾಮ್ಲೆ, ಡಾ|| ಸಕ್ಸೇನಾ ಮತ್ತಿತರರಿದ್ದಾರೆ. ಯುನಾನಿ ವೈದ್ಯ ಪದ್ಧತಿಯ ವಿಷಯದಲ್ಲಿ ನಾನು ಹಕೀಮರೊಂದಿಗೆ ಸಮಾಲೋಚನೆ ನಡೆಸುತ್ತೇನೆ. ಯೋಜನೆಗಳನ್ನು ಕಳುಹಿಸಿಕೊಡುವಂತೆ ನಾನು ಅವರಲ್ಲಿ ಹಲವು ಸಲ ಕೇಳಿದ್ದೇನ. ಮೂರು ಬಾರಿ ಅವರನ್ನು ಸ್ವತಃ ಭೇಟಿಯಾಗಿ ಯೋಜನೆಗಳನ್ನು ಕಳುಹಿಸಿಕೊಡುವಂತೆ ಕೇಳಿದ್ದೇನೆ. ಆದರೆ ಇನ್ನೂ ಕೈಗೆ ಬಂದಿಲ್ಲ. ನಮ್ಮ ಸಂಸ್ಥೆಯ ವಿಷಯದಲ್ಲಿ ಆಸಕ್ತಿ ಹೊಂದಿರುವ ನನ್ನ ಮಿತ್ರ ಶ್ರೀಮಾನ್ ಜಯದೇವ್ ಅವರು ಯುನಾನಿ ವೈದ್ಯ ಪದ್ಧತಿಗೆ ಸಂಬಂಧಿಸಿದಂತೆ ಯೋಜನೆಯೊಂದನ್ನು ಕೊಡಬಹುದೆಂದು ನಾನು ಆಶಿಸಿದ್ದೇನೆ. ಇದಲ್ಲದೆ ದೇಶದ ವಿವಿಧ ಸಂಸ್ಥೆಗಳಲ್ಲಿ ದೇಶಿಯ ವೈದ್ಯ ಪದ್ಧತಿಗಳ ಸಂಶೋಧನೆಗಳಿಗಾಗಿಯೇ ಒಂದು ಕೋಟಿ ರೂಪಾಯಿಗಳನ್ನು ಒದಗಿಸಲಾಗಿದೆ.

* ಸ್ವಂತ್ ರಾಯ್ ಕಪೂರ್ ಅವರು ಮಾತನಾಡುವಾಗ ಮಧ್ಯ ಪ್ರವೇಶಿಸಿ ಮಾತನಾಡುತ್ತಾ

ಅವರು ಈ ಹಣವನ್ನು ಯೋಜನೆಗಳಿಗಾಗಿ ಖರ್ಚು ಮಾಡಬೇಕೆಂದು ಹಾರೈಸುವುದಷ್ಟೇ ನನ್ನಿಂದ ಸಾಧ್ಯ. ಯುನಾನಿ ಮತ್ತು ಹೋಮಿಯೋಪಥಿ ವೈದ್ಯರು ಈಗ ಅವರಿಗೆ ಒದಗಿಸಿರುವ ಹಣವನ್ನು ಸೂಕ್ತವಾಗಿ ಬಳಸಿಕೊಂಡರೆ ಅವರಿಗೆ ಇನ್ನೂ ಹೆಚ್ಚಿನ ನೆರವು ಒದಗಿಸಲು ನಾವು ಸಿದ್ಧರಾಗಿರುತ್ತೇವೆ. ಇಲ್ಲಿ ಹಣದ ಕೊರತೆಯ ಪ್ರಶ್ನೆಯೇ ಬರುವುದಿಲ್ಲ. ಇಲ್ಲಿರುವ ಪ್ರಶ್ನೆ ಒಂದೇ ಅವರಿಗೆ ಒದಗಿಸಿರುವ ಹಣವನ್ನು ಸೂಕ್ತ ರೀತಿಯಿಂದ ವಿನಿಯೋಗಿಸಲು ಅವರಿಗೆ ಸಾಧ್ಯವೇ ಎಂಬುದೇ ಆಗಿದೆ. ಇದಲ್ಲದೆ ಸ್ವತಃ ನಾನೇ ಅಧ್ಯಕ್ಷಳಾಗಿರುವ ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ದೇಶಿಯ ಔಷಧಗಳ ಶೋಧನೆಗಾಗಿ ಇನ್ನು 20 ಲಕ್ಷ ರೂಪಾಯಿಗಳನ್ನು ತೆಗೆದಿರಿಸಿದೆ. ಈಗ ನಿಜವಾಗಿಯೂ ಆಯುರ್ವೇದ ವೈದ್ಯ ಪದ್ಧತಿಯ ಅಭಿವೃದ್ಧಿಗಾಗಿ ಹೆಚ್ಚಿನ ಕೆಲಸ ಮಾಡಬೇಕಾದದ್ದು ರಾಜ್ಯ ಸರ್ಕಾರಗಳ ಸರದಿಯಾಗಿದೆ. ಆಯುರ್ವೇದದ ಅಭಿವೃದ್ಧಿಗಾಗಿ ಅವರು ಏನನ್ನು ಮಾಡುತ್ತಿದ್ದಾರೆ? ಇದು ಅವುಗಳ ಹೊಣೆಗಾರಿಕೆಯಾಗಿದೆ. ಅವು ಆಯುರ್ವೇದಕ್ಕೆ ಉತ್ತೇಜನ ನೀಡುವುದಿಲ್ಲವೆಂದಾದಲ್ಲಿ ನೀವು ಅವರನ್ನು ವಿಚಾರಿಸಬೇಕು. ದಂಡ ವಿಧಿಸಬೇಕು. ಜನತ ಸೇವೆಗಾಗಿ ಇರುವ ರಾಜ್ಯ ಸರ್ಕಾರದ ಹೊಣೆಗಾರಿಕೆ ಇದಾಗಿದೆ. ನಾನು ಒಂದೊಂದು ರಾಜ್ಯದ ಆರೋಗ್ಯ ಸಚಿವರನ್ನು ಭೇಟಿಯಾಗಿ ಚರ್ಚಿಸಿದ್ದೇನೆ. ಹೀಗಾಗಿ ನಿನ್ನೆ ಸದನದಲ್ಲಿ ಡಾ|| ಗಿಲ್ಡರ್ ಅವರು ನೀಡಿದ ಹೇಳಿಕೆಯನ್ನು ನಾನು ಆಕ್ಷೇಪಿಸುತ್ತೇನೆ. ಆಯುರ್ವೇದ ಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಹೊರಟಾಗಲೆಲ್ಲ ಜನರು ಆಧುನಿಕ ಚಿಕಿತ್ಸಾಲಯಗಳಿಗಾಗಿ ಬೇಡಿಕೆ ಮುಂದಿಡುತ್ತಾರೆಂದು ಅವರು ನನಗೆ ಹೇಳಿದರು. ಇದು ವಾಸ್ತವ ಸಂಗತಿ. ಡಾ|| ಗಿಲ್ಡರ್ ಅವರು ಮುಂಬೈ ರಾಜ್ಯದ ಗ್ರಾಮವೊಂದರಲ್ಲಿ ಆಯುರ್ವೇದ ಚಿಕಿತ್ಸಾಲಯವನ್ನು ಸ್ಥಾಪಿಸಲು ಹೊರಟಾಗ ಅದಕ್ಕೆ ಬದಲಾಗಿ ಆಧುನಿಕ ಚಿಕಿತ್ಸಾಲಯವೊಂದನ್ನು ತೆರೆಯುವಂತೆ ತಂತಿಗಳ ಮೇಲೆ ತಂತಿಗಳು, ಮನವಿಗಳ ಮೇಲೆ ಮನವಿಗಳು ಬಂದದ್ದು ನನಗೆ ನೆನಪಿದೆ. ಡಾ|| ಗಿಲ್ಡರ್ ಅವರು ಮುಂಬೈ ಸರ್ಕಾರದಲ್ಲಿ ಐದು ವರ್ಷಗಳ ಕಾಲ ಆರೋಗ್ಯ ಸಚಿವರಾಗಿದ್ದರು. ಆಗ ಅವರು ಆಯುರ್ವೇದಕ್ಕಾಗಿ ಏನು ಮಾಡಿದರು? ಆಯುರ್ವೇದಕ್ಕಾಗಿ ಅವರು ಕೆಲ ಹೊಸ ಕೋರ್ಸ್‌ಗಳನ್ನು ಆರಂಭಿಸಿದರು. ಆದರೆ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. "ಆಯುರ್ವೇದ ವೈದ್ಯ ಪದ್ಧತಿಗಳಲ್ಲಿ ನಾವು ತರಬೇತಿಯನ್ನೇನೋ ನೀಡುತ್ತೇವೆ. ಆದರೆ ವಾಸ್ತವದಲ್ಲಿ ಅವರು ಅನುಸರಿಸುವುದು .... ಆಧುನಿಕ ವೈದ್ಯ ಪದ್ಧತಿಯನ್ನು".

ಆಯುರ್ವೇದ ವೈದ್ಯರಿಗೆ * ಐದೋ, ಹತ್ತೋ ರೂಪಾಯಿಗಳನ್ನು ಕೊಡುವುದು ಸರಿಯಲ್ಲ. ಅವರಿಗೆ ಹೆಚ್ಚು ಹಣ ಕೊಡಬೇಕು ಎಂದು ಪ್ರತಿಪಾದಿಸುವವಳು ನಾನು. ಆಯುರ್ವೇದವು ನಿಜವಾಗಿಯೂ ಬದುಕಬೇಕೆಂದಾದರೆ ಮತ್ತು ಆಯುರ್ವೇದ ವೈದ್ಯರು ಬೇರೆ ಪದ್ಧತಿಗಳನ್ನು ಅನುಸರಿಸುವುದನ್ನು ತಡೆಹಿಡಿಯಬೇಕಾದರೆ ನೀವು ಅವರಿಗೆ ಅಂಗರಚನಾ, ಶಾಸ್ತ್ರ, ಶರೀರ ವಿಜ್ಞಾನ, ರೋಗವಿಜ್ಞಾನ ಶಾಸ್ತ್ರ ಮತ್ತು ಇತರ ವಿಷಯಗಳಲ್ಲಿ ಅವರಿಗೆ ತರಬೇತಿ ನೀಡಿ, ಎಕ್ಸ್‌ರೇಗಳನ್ನು ಪರಿಶೀಲಿಸಲು ಕಲಿಸಿಕೊಡಿ. ಇದಾದ ಮೇಲೆ ಅವರಿಂದ ಆಯುರ್ವೇದ ವೈದ್ಯ ಪದ್ಧತಿಯ ಚಿಕಿತ್ಸೆಯನ್ನು ನಿರೀಕ್ಷಿಸಿ. ಆದರೆ ಅವರು ಆಯುರ್ವೇದ ಪದ್ಧತಿಯಲ್ಲಿ ಚಿಕಿತ್ಸೆ ನೀಡುವವರಲ್ಲ. ಅವರು ಆಧುನಿಕ ವೈದ್ಯ ಪದ್ಧತಿಯನ್ನೇ ಬಳಸುತ್ತಾರೆ. ಲಕ್ನೋದಲ್ಲಿನ ಕಾಲೇಜಿನ ವಿದ್ಯಾರ್ಥಿಗಳು, ತಿರುವನಂತಪುರದ ವಿದ್ಯಾರ್ಥಿಗಳು ಮುಷ್ಕರ ಹೂಡಿರುವುದು ಇದೇ ಕಾರಣಕ್ಕೆ.

ಅವರು ಆಧುನಿಕ ವೈದ್ಯ ವಿಜ್ಞಾನವನ್ನು ಕಲಿಯಲು ಅಪೇಕ್ಷಿಸುತ್ತಾರೆ. ರಾಜ್ಯಗಳು ಈ ಸಂಬಂಧದಲ್ಲಿ ಏನನ್ನೂ ಮಾಡುತ್ತಿಲ್ಲ ಎಂದು ನೀವು ಭಾವಿಸುವುದಾದರೆ ನಾನು ರಾಜ್ಯಗಳಿಗೆ ಪತ್ರ ಬರೆಯಲು ಸಿದ್ಧಳಿದ್ದೇನೆ. ಆಯುರ್ವೇದ ವೈದ್ಯರಿಗೆ ಆರೋಗ್ಯದ ಬಗ್ಗೆ, ನೈರ್ಮಲ್ಯದ ಬಗ್ಗೆ ತಿಳುವಳಿಕೆ ನೀಡಿ, ಲಸಿಕೆಗಳನ್ನು ಚುಚ್ಚು ಮದ್ದುಗಳನ್ನು ನೀಡುವುದನ್ನು ಕಲಿಸಿಕೊಡಿ ಮತ್ತು ಗ್ರಾಮಾಂತರ ಪ್ರದೇಶಗಳಿಗೆ ಹೋಗಿ ಅವರದೇ ಆದ ರೀತಿಯಲ್ಲಿ ಅವರದೇ ಆದ ಔಷಧಿಗಳನ್ನು ನೀಡುವಂತೆ ಕೇಳಿಕೊಳ್ಳಿ ಎಂದು ಎಲ್ಲ ಆರೋಗ್ಯ ಸಚಿವರಿಗೆ ನಾನು ಸಲಹೆ ನೀಡಿದ್ದೇನೆ. ಹಾಗಿದ್ದರೆ ಮಾತ್ರ ಆಯುರ್ವೇದವನ್ನು ಉಳಿಸಿಕೊಳ್ಳಬಹುದು. ಅದಲ್ಲದೆ ಆಯುರ್ವೇದ ಮತ್ತು ಯುನಾನಿ ವೈದ್ಯ ಪದ್ಧತಿಗಳ ಚಿಕಿತ್ಸಾ ಶಾಸ್ತ್ರವನ್ನು ಸ್ನಾತಕೋತ್ತರ ಅಧ್ಯಯನ ವಿಷಯವನ್ನಾಗಿ ಮಾಡಿದರೆ ಮಾತ್ರವೇ ಅದರಿಂದ ಪ್ರಯೋಜನ ಎಂದು ನಾನು ಹೇಳಿದ್ದೇನೆ. ಹಾಗಾದಾಗ ಮಾತ್ರ ಈ ಪದ್ಧತಿಗಳ ನಿಜವಾದ ಸಾರ, ಸತ್ವ ಮತ್ತು ಜೀವ ರಕ್ಷಕ ಔಷಧಗಳು ನಮಗೆ ಸಿಗಲು ಸಾಧ್ಯ. ಎಲ್ಲ ವೈದ್ಯ ಶಾಖೆಗಳ ಜ್ಞಾನವನ್ನು ಆಧುನಿಕ ವೈದ್ಯ ವಿಜ್ಞಾನದ ವಾಹಿನಿಗೆ ತರಬಹುದಾಗಿದೆ. ಆದರೆ ನನ್ನ ಸಲಹೆಯನ್ನು ಯಾವ ಸಚಿವರೂ ಸ್ವೀಕರಿಸಲಿಲ್ಲ. ಎಂ.ಬಿ.ಬಿ.ಎಸ್. ಪದವಿ ವಿದ್ಯಾರ್ಥಿಗಳಿಗೆ ಗಣನೀಯ ಪ್ರಮಾಣದ ಸ್ಟೈಫಂಡ್ ನೀಡಬೇಕು. ಆಯುರ್ವೇದವನ್ನು ಅವರು ಅಭ್ಯಾಸ ಮಾಡಬೇಕು. ಅನಂತರ ಅದರಲ್ಲಿ ಚಿಕಿತ್ಸೆ ನೀಡಬೇಕು ಎಂಬುದು ನನ್ನ ಆಶಯ. ಸದ್ಯದ ಪರಿಸ್ಥಿತಿಯಲ್ಲಿ ಪರಿಸ್ಥಿತಿಯನ್ನು ಸುಧಾರಿಸಲು ಇದೇ ಅತ್ಯುತ್ತಮ ಮಾರ್ಗವಾಗಿದೆ. ಪ್ರಥಮ ಹಂತದಲ್ಲಿ ಒಂದೆರಡು ಕಾಲೇಜುಗಳನ್ನು, ಆಯುರ್ವೇದ ಪೀಠಗಳನ್ನು ಸ್ಥಾಪಿಸಲು ಅನುಮತಿ ನೀಡಲು ನಾನು ಸಿದ್ಧಳಿದ್ದೇನೆ. ಇದರಿಂದ ಆಧುನಿಕ ವೈದ್ಯ ಪದ್ಧತಿಯಲ್ಲಿ ಪದವಿಗಳನ್ನು ಗಳಿಸಲು, ಈ ಶಾಖೆಯನ್ನು ಅಭ್ಯಸಿಸಲು ಅವಕಾಶವಾಗುವುದು. ಆಯುರ್ವೇದದ ಪುನರುಜ್ಜೀವನ ಈ ರೀತಿ ನಡೆಯಬೇಕು. 'ಆಯುರ್ವೇದ ಪುನರುತ್ಥಾನಕ್ಕೆ ಏನನ್ನಾದರೂ ಮಾಡಿ' ಎಂದು ಮನವಿ ಮಾಡಿಕೊಂಡಿರುವ ಬಿಹಾರದ ನನ್ನ ಮಿತ್ರರ ಅಭಿಪ್ರಾಯಗಳನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ನಾನು ಆಯುರ್ವೇದವನ್ನು ಪುನರುಜ್ಜೀವನಗೊಳಿಸಲು ಅಭಿಲಾಷೆ ಹೊಂದಿದ್ದೇನೆ. ಈ ವೈದ್ಯ ಶಾಖೆಯ ಎಲ್ಲ ಒಳ್ಳೆಯ ಅಂಶಗಳನ್ನು ತೆಗೆದುಕೊಳ್ಳಲು ಸಿದ್ಧಳಿದ್ದೇನೆ. ನಮಗೆ ಬೇಕಾಗಿರುವುದು ಅದೇ. ದೇಶದಲ್ಲಿರುವ ಆಸ್ಪತ್ರೆಗಳನ್ನು ನಡೆಸುವವಳು ನಾನಲ್ಲ. ನಾನು ಕೇಂದ್ರ ಸರ್ಕಾರದ ಆರೋಗ್ಯ ಸಚಿವೆಯಾಗಿದ್ದೇನೆ. ನಾನು ಸಲಹೆಗಳನ್ನು ಮಾತ್ರ ನೀಡಬಹುದು. ಆದರೆ ಆಯುರ್ವೇದ ವೈದ್ಯ ಪದ್ಧತಿಯಲ್ಲಿನ ಸಂಶೋಧನೆಗಾಗಿ ಈ ಹಿಂದೆ ಯಾರೂ ಮಾಡದಷ್ಟು ಕೆಲಸವನ್ನು ನಾನು ಮಾಡಿದ್ದೇನೆ ಎಂದು ಧೈರ್ಯವಾಗಿ ಹೇಳಬಲ್ಲೆ. ನಾವು ಭಾರತೀಯ ವೈದ್ಯ ಪದ್ಧತಿಯ ಔಷಧಿಗಳ ಸಮಗ್ರ ವಿವರಗಳನ್ನು ಹೊಂದಿದ ಭಾರತೀಯ ಔಷಧ ಮಾಹಿತಿ ಕೋಶವೊಂದನ್ನು ಹೊರತಂದಿದ್ದೇವೆ. ದೇಶದಲ್ಲಿನ ವೈದ್ಯರು ಮತ್ತು ಹಕೀಮರು ವೈಜ್ಞಾನಿಕ ವಿಧಾನವನ್ನು ಅನುಸರಿಸಿ ಔಷಧಿಗಳನ್ನು ಉತ್ಪಾದಿಸಬೇಕೆಂದು ಅವರನ್ನು ಕೇಳಿಕೊಳ್ಳುತ್ತೇನೆ. ಮೂಲಭೂತ ಸಂಶೋಧನಾ ಕ್ಷೇತ್ರದಲ್ಲಿ ಕೊರತೆಗಳು ಇದ್ದೇ ಇವೆ. ಮೂಲಭೂತ ಸಂಶೋಧನೆ ನಡೆಯುತ್ತಿರುವ ಸ್ಥಳವೊಂದಕ್ಕೆ ಹೋಗಿದ್ದಾಗ ನಾನು ಅಲ್ಲಿ ಆಯುರ್ವೇದ ಪಂಡಿತರು ಮತ್ತು ಆಧುನಿಕ ವೈದ್ಯರಿಂದ ಚಿಕಿತ್ಸೆ ಪಡೆಯುತ್ತಿದ್ದ ರೋಗಿಗಳನ್ನು ನೋಡಿದೆ. ಅಲ್ಲಿ ಆಧುನಿಕ ವೈದ್ಯ ಪದ್ಧತಿಯಲ್ಲಿ ಶೀಘ್ರ ಗುಣಮುಖರಾಗುವುದನ್ನು ನೋಡಿದೆ. ಆಯುರ್ವೇದ ಚಿಕಿತ್ಸೆ ಪಡೆಯುತ್ತಿದ್ದ ಇತರ ರೋಗಿಗಳು ತಮ್ಮನ್ನು ಆಧುನಿಕ ಚಿಕಿತ್ಸೆಗೆ

ಗೋವಿಂದ ರೆಡ್ಡಿಯವರ ಪ್ರಶ್ನೆಗೆ ಉತ್ತರಿಸುತ್ತಾ

ವರ್ಗಾಯಿಸಬೇಕೆಂದು ಕೇಳಿಕೊಳ್ಳುತ್ತಿದ್ದುದನ್ನು ನಾನು ಕಂಡೆ. ಆದಷ್ಟು ತ್ವರಿತವಾಗಿ ಗುಣಮುಖರಾಗಬೇಕೆಂಬುದು ಅವರ ಬಯಕೆಯಾಗಿತ್ತು. ಆದರೆ ಈ ಕ್ಷೇತ್ರದಲ್ಲಿ ಸಂಶೋಧನೆ ಮುಂದುವರಿಯಲೇಬೇಕು. ಏಕೆಂದರೆ ವೇಗ ಮತ್ತು ಕ್ಷಿಪ್ರ ಪರಿಣಾಮವೇ ಸರ್ವಸ್ವವಲ್ಲ. ಡಾ॥ ಗಿಲ್ಡರ್ ಅವರು ಹೇಳಿರುವಂತೆ ಅನೇಕ ಮಂದಿ ಔಷಧಿಗಳು ಇಲ್ಲದೆಯೇ ಆರೋಗ್ಯವಂತರಾಗಿರುತ್ತಾರೆ. ಎಲ್ಲ ವೈದ್ಯ ಶಾಖೆಗಳಿಗೂ ಈ ಮಾತು ಸಮಾನವಾಗಿ ಅನ್ವಯಿಸುತ್ತದೆ. ಕಲ್ಕತ್ತಾದಲ್ಲಿ ಮೂರು ಹೋಮಿಯೋಪಥಿ ಕಾಲೇಜುಗಳನ್ನು ಸ್ಥಾಪಿಸಬೇಕೆಂದು ಪ್ರಯತ್ನಿಸುತ್ತಿದ್ದೇನೆ. ಹೋಮಿಯೋಪಥಿ ಒಂದು ಅತ್ಯುತ್ತಮ ಕಾಲೇಜನ್ನು ಹೊಂದಿರಬೇಕೆಂಬುದೇ ನನ್ನ ಆಸೆ. ಆದರೆ ಅವರಿನ್ನೂ ಈ ವಿಷಯದಲ್ಲಿ ಒಮ್ಮತಕ್ಕೆ ಬಂದಿಲ್ಲ. ಅವರವರೇ ಇನ್ನು ಜಗಳವಾಡುತ್ತಿದ್ದಾರೆ. ಅವುಗಳಲ್ಲಿ ಒಂದು ಕಾಲೇಜನ್ನು ನಾನು ಆಯ್ಕೆ ಮಾಡಿಕೊಂಡಿದ್ದು, ಮುಂದಿನ ಪಂಚವಾರ್ಷಿಕ ಯೋಜನೆಯಲ್ಲಿ ಯುನಾನಿ ಹೋಮಿಯೋಪಥಿ ಮತ್ತು ಸಾಧ್ಯವಾದರೆ ನಿಸರ್ಗ ಚಿಕಿತ್ಸೆ ವೈದ್ಯ ಪದ್ಧತಿಗಳಿಗಾಗಿ 14 ಲಕ್ಷ ರೂಪಾಯಿಗಳನ್ನು ಒದಗಿಸಲಿದ್ದೇವೆ. ಮಹಾತ್ಮ ಗಾಂಧೀಜಿಯವರು ಹೇಳಿರುವಂತೆ ಭಾರತದಲ್ಲಿ ಯಾರೂ ನಿಸರ್ಗ ಚಿಕಿತ್ಸೆಯ ವಿಜ್ಞಾನವನ್ನೇ ಅರಿತಿಲ್ಲ.

ಇನ್ನು ಆಧುನಿಕ ವೈದ್ಯ ಪದ್ಧತಿಯ ಬಗ್ಗೆ ಕೆಲವರಲ್ಲಿ ಇರುವ ಪೂರ್ವಾಗ್ರಹದ ಬಗ್ಗೆ ಒಂದೆರಡು ಮಾತು. ಯಾವುದೇ ವ್ಯಾಧಿಗೆ ಶಸ್ತ್ರ ಕ್ರಿಯೆ ಅಗತ್ಯವಾದಾಗ ನೀವು ಎಲ್ಲಿಗೆ ಹೋಗುತ್ತೀರಿ? ಸ್ತ್ರೀರೋಗಗಳು ಮತ್ತು ಪ್ರಸೂತಿ ಶಾಸ್ತ್ರದ ಬಗ್ಗೆ ಅಗತ್ಯವೆನಿಸಿದಾಗ ನೀವು ಎಲ್ಲಿಗೆ ಹೋಗುತ್ತೀರಿ? ರೋಗ ನಿದಾನದ ಅಗತ್ಯವಿದ್ದಾಗ ಎಲ್ಲಿಗೆ ಹೋಗುತ್ತೀರಿ? ರೇಡಿಯೋಲಾಜಿಯ ಅಗತ್ಯ ಬಿದ್ದರೆ ಎಲ್ಲಿಗೆ ಹೋಗುತ್ತೀರಿ? ದಂತ ಚಿಕಿತ್ಸೆ ಅಗತ್ಯವಾದಾಗ ಎಲ್ಲಿಗೆ ಹೋಗುತ್ತೀರಿ? ನೇತ್ರ ರೋಗಗಳ ಚಿಕಿತ್ಸೆಗೆ ಎಲ್ಲಿ ಹೋಗುತ್ತೀರಿ? ಆಧುನಿಕ ವೈದ್ಯ ವಿಜ್ಞಾನ ಈಗ ಗ್ರಾಮ ಗ್ರಾಮಗಳಿಗೂ ಹೋಗಿದೆ. ತಾಯಂದಿರ ಮತ್ತು ಶಿಶು ಸಂರಕ್ಷಣೆ ನಿಮಗೆ ಕೇವಲ ಆಧುನಿಕ ವೈದ್ಯ ವಿಜ್ಞಾನದಲ್ಲಿ ಮಾತ್ರ ಲಭ್ಯವೇ ಹೊರತು ಆಯುರ್ವೇದದಲ್ಲಲ್ಲ. ನಮ್ಮ ಜನರು ಆಯುರ್ವೇದ ವೈದ್ಯ ಪದ್ಧತಿಯಿಂದಲೇ ಬದುಕಿದ್ದಾರೆ ಎಂದು ಹೇಳುವುದು ಕೇಳುವುದರಷ್ಟೇ ಒಳ್ಳೆಯದು. ಜನರು ಹೇಗಾದರೂ ಬದುಕಿಯೇ ಬದುಕುತ್ತಾರೆ. ಎಂಥ ಕಠಿಣತೆಗಳಿದ್ದಾಗಲೂ ಮನುಷ್ಯ ಹೇಗೋ ಬದುಕುತ್ತಾನೆ. ಆದರೆ ನಮ್ಮ ದೇಶದಲ್ಲಿ ರೋಗಗಳು ಅತ್ಯಧಿಕ ಪ್ರಮಾಣದಲ್ಲಿ ಇರಲು ಕಾರಣವೇನು? ಯಾರು ಬಲಿಷ್ಠರೋ ಅವರಷ್ಟೇ ಬದುಕುಳಿಯುತ್ತಾರೆ. ಈ ಸಿದ್ಧಾಂತ ಈಗಲೂ ಅನ್ವಯವಾಗುತ್ತದೆ. ಜೀವರಸಾಯನ ಶಾಸ್ತ್ರ, ಪ್ರತಿಬಂಧಕ ಔಷಧಗಳು ಮತ್ತಿತರ ಕ್ಷೇತ್ರಗಳಲ್ಲಿ ಆಧುನಿಕ ವೈದ್ಯ ವಿಜ್ಞಾನದ ತಜ್ಞರಿಂದ ಮಾತ್ರ ಸಂಶೋಧನೆ ಸಾಧ್ಯ ಎಂಬುದು ನನ್ನ ಅಭಿಪ್ರಾಯವಾಗಿದೆ. ನನ್ನ ಮಾನ್ಯ ಮಿತ್ರರಾದ ಎಂ. ಗೋವಿಂದ ರೆಡ್ಡಿಯವರು ಸಂಶೋಧನೆಗಳನ್ನು ಆಧುನಿಕ ವಿಜ್ಞಾನದಲ್ಲಿ ತಜ್ಞರಾದವರಿಂದಲೇ ಮಾಡಿಸಬೇಕೆಂದು ನೀಡಿರುವ ಸಲಹೆಯನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಆಯುರ್ವೇದ ವೈದ್ಯ ಪದ್ಧತಿಯಲ್ಲಿ ಸಂಶೋಧನೆಗಳಿಗೆ ನನ್ನಿಂದ ಸಾಧ್ಯವಿರುವ ಎಲ್ಲ ಸಹಾಯವನ್ನು ನಾನು

ನೀಡಲು ಸಿದ್ಧ. ಆದರೆ ಈ ಸಂಶೋಧನೆಗಳು ಆಧುನಿಕ ವೈದ್ಯ ವಿಜ್ಞಾನದ ತಜ್ಞರಿಂದ ನಡೆಯಬೇಕು. ಆಯುರ್ವೇದದಲ್ಲೂ ಕೂಡಾ ಎರಡು ತದ್ವಿರುದ್ಧ ದೃಷ್ಟಿಕೋನಗಳಿವೆ. ಆಯುರ್ವೇದದಲ್ಲಿ ಆಧುನಿಕ ವೈದ್ಯ ಪದ್ಧತಿಗೆ ಅವಕಾಶವೇ ಇರಬಾರದು ಎಂಬುದು ಒಂದು ವಾದವಾದರೆ "ಆಯುರ್ವೇದ ವೈದ್ಯರು ಆಧುನಿಕ ವೈದ್ಯ ಪದ್ಧತಿಯನ್ನು ಅನುಸರಿಸಲಿ" ಎಂಬುದು ಇನ್ನೊಂದು ವಾದವಾಗಿದೆ.

* * * * *

ಆಯುರ್ವೇದ ವೈದ್ಯ ಪದ್ಧತಿಯ ಅಭಿವೃದ್ಧಿಗಾಗಿ 60 ಲಕ್ಷ ರೂಪಾಯಿಗಳನ್ನು ನೀಡಿರುವುದಾಗಿ ನಾನು ಈಗಾಗಲೇ ಸದನಕ್ಕೆ ತಿಳಿಸಿದ್ದೇನೆ. ಇದರೊಂದಿಗೆ * ವಿವಿಧ ರಾಜ್ಯಗಳಲ್ಲಿ ಮೂರ ರಿಂದ ಆರು ಕೋಟಿ ರೂಪಾಯಿ ಅದಕ್ಕಾಗಿ ವ್ಯಯಿಸಲಾಗುತ್ತಿದೆ. ವಾಸ್ತವವಾಗಿ ಆಧುನಿಕ ವೈದ್ಯ ವಿಜ್ಞಾನಕ್ಕೆ ರಾಜ್ಯಗಳೇ ಹೆಚ್ಚಿನ ಪ್ರಮಾಣದಲ್ಲಿ ಖರ್ಚು ಮಾಡುತ್ತಿವೆ. ಕೇಂದ್ರದ ಪಾಲು ಇದರಲ್ಲಿ ತೀರಾ ಕಡಿಮೆ. ಇನ್ನೂ ಕಾರ್ಯಾರಂಭಿಸಬೇಕಾದ ಅಖಿಲ ಭಾರತೀಯ ವೈದ್ಯಕೀಯ ವಿಜ್ಞಾನ ಸಂಸ್ಥೆಗೆ ಒಂದಷ್ಟು ನಿಧಿಯನ್ನು ನಾನು ಒದಗಿಸುತ್ತಿದ್ದೇನೆ. ದೇಶೀಯ ವೈದ್ಯ ಪದ್ಧತಿಗಳ ಅಭಿವೃದ್ಧಿಗೆ, ಈ ಕ್ಷೇತ್ರಗಳಲ್ಲಿನ ಸಂಶೋಧನೆಗೆ ನಾನು ಒಂದು ಕೋಟಿ ರೂಪಾಯಿಗಳನ್ನು ಒದಗಿಸುತ್ತಿದ್ದೇನೆ. ನಮ್ಮ ಖಾತೆ ಅಖಿಲ ಭಾರತ ಆರೋಗ್ಯ ಸಂಸ್ಥೆ, ಪೌಷ್ಟಿಕಾಹಾರ ಪ್ರಯೋಗಾಲಯ ಇಂತಹ ಸಂಸ್ಥೆಗಳಿಗೆ ಮಾತ್ರವೇ ಹಣಕಾಸು ಒದಗಿಸುತ್ತದೆ. ಆಧುನಿಕ ವೈದ್ಯ ವಿಜ್ಞಾನದಲ್ಲಿ ಸಂಶೋಧನೆಗಳಿಗಾಗಿ ಭಾರೀ ಮೊತ್ತದ ಹಣವನ್ನು ವ್ಯಯಿಸಲಾಗುತ್ತಿದೆ. ದೇಶೀಯ ವೈದ್ಯ ಪದ್ಧತಿಗಳ ಅಭಿವೃದ್ಧಿಗಾಗಿ ಒಂದು ಕೋಟಿ ರೂಪಾಯಿ ನೀಡಲಾಗುತ್ತಿದೆ. ಒಳ್ಳೆಯ ಯೋಜನೆಗಳಿಗೆ ಹಣ ನೀಡುವ ವಿಚಾರದಲ್ಲಿ ನಾನೆಂದೂ ಜಿಪುಣಳಲ್ಲ. ನೀವೀಗ ನನ್ನ ಖಾತೆಯ ಮನೋವೃತ್ತಿಯ ಬಗ್ಗೆ ಮಾತನಾಡಿದ್ದೀರಿ. ನಮ್ಮ ಮನೋವೃತ್ತಿಯಲ್ಲಿ ಯಾವುದೇ ದೋಷವಿಲ್ಲ. ಜನರಿಗೆ ಅತ್ಯುತ್ತಮವಾದುದನ್ನು ನೀಡಬೇಕೆಂಬುದು ನನ್ನ ಇಚ್ಛೆಯಾಗಿದೆ. ಈ ಸದನದ ಸದಸ್ಯರು ನನ್ನ ಸಲಹೆಗಾರರ ವಿರುದ್ಧ ಮಾಡಿರುವ ಕಟು ಟೀಕೆಗಳನ್ನು ನಾನು ಅಷ್ಟೇ ಕಟುವಾದ ಭಾಷೆಯಿಂದ ಇಲ್ಲಿ ಈಗಲೇ ಖಂಡಿಸ ಬಯಸುತ್ತೇನೆ. ಹೀಗೆ ಮಾತನಾಡುವ ಸದಸ್ಯರು ಹೆಚ್ಚು ಹೊಣೆಗಾರಿಕೆಯಿಂದ ಮಾತನಾಡಬೇಕು ಎಂದು ನಾನು ನಿರೀಕ್ಷಿಸುತ್ತೇನೆ. ಈ ಸದನದಲ್ಲಿ ಬಂದು ತಮ್ಮನ್ನು ರಕ್ಷಿಸಿಕೊಳ್ಳುವ ಅವಕಾಶ ನನ್ನ ಸಲಹೆಗಾರರಿಗಿಲ್ಲ. ಇಂತಹ ಮರ್ಮಘಾತಕ ಟೀಕೆ ಸರಿಯಲ್ಲ. ನನ್ನ ಎಲ್ಲ ಯೋಜನೆಗಳಲ್ಲಿ ದೇಶೀಯ ವೈದ್ಯ ಪದ್ಧತಿಗಳಿಗೆ ನಾನು ನೀಡುತ್ತಿರುವ ಎಲ್ಲ ವಿಧದ ಸಹಾಯದ ಹೆಗ್ಗಳಿಕೆ ಅವರಿಗೆ ಸಲ್ಲಬೇಕು. ಈ ವಿಷಯದಲ್ಲಿ ಅವರು ನನಗೆ ಸಂಪೂರ್ಣ ನೂರಕ್ಕೆ ನೂರರಷ್ಟು ಸಹಕಾರ ನೀಡಿದ್ದಾರೆ. ಅವರ ವಿರುದ್ಧ ಇಂತಹ ಟೀಕೆಗಳನ್ನು ಮಾಡುವುದು ಸರಿಯಲ್ಲ. ಅದು ತುಂಬಾ ಕ್ರೂರವಾದುದು ಮತ್ತು ಅದು ಯಾವ ದೃಷ್ಟಿಯಿಂದಲೂ ಸಮರ್ಥನೀಯವಲ್ಲ. ಹಾಗಾಗಿ ಮಾನ್ಯ ಸದಸ್ಯರು ಆಡಿದ ಮಾತುಗಳನ್ನು ಹಿಂತೆಗೆದುಕೊಳ್ಳಬೇಕೆಂದು ನಾನು ಆಗ್ರಹಿಸುತ್ತೇನೆ.

ವೈದ್ಯಕೀಯ ಇತಿಹಾಸದ ಪೀಠದ ಬಗ್ಗೆ ಹೇಳುವುದಾದರೆ ಅದು ಅತ್ಯಂತ ಅವಶ್ಯಕವಾಗಿದೆ. ಆಯುರ್ವೇದ ಇತಿಹಾಸವನ್ನು ನಮ್ಮ ಜನರು ಆಮೂಲಾಗ್ರವಾಗಿ ತಿಳಿದುಕೊಳ್ಳಲೇಬೇಕು. ಡಾ|| ರಾಧಾಕುಮುದ್ ಮುಖರ್ಜಿ ಈ ವಿಷಯದಲ್ಲಿ ತಮ್ಮ ಸಂಸ್ಕೃತ ಭಾಷೆಯ ಪಾಂಡಿತ್ಯವನ್ನು

* ಆಧುನಿಕ ವೈದ್ಯ ವಿಜ್ಞಾನಕ್ಕೆ ಎಷ್ಟು ಹಣವನ್ನು ನೀಡಲಾಗಿದೆ ಎಂಬ ಶ್ರೀ ಹೆಚ್. ಸಿ. ಸಕ್ಸೇನಾ ಅವರ ಪ್ರಶ್ನೆಗೆ ಉತ್ತರಿಸುತ್ತಾ.

ಬಳಸಿಕೊಂಡು ಸವಿಸ್ತಾರವಾಗಿ ಹೇಳಿದ್ದಾರೆ. ಬೆಂಗಳೂರಿನ ಮಾನಸಿಕ ರೋಗಗಳ ಸಂಶೋಧನಾ ಸಂಸ್ಥೆಯಲ್ಲಿ ನಾನು ಈಗಾಗಲೇ ಸಂಸ್ಕೃತ ವಿದ್ವಾಂಸರನ್ನು ನೇಮಕ ಮಾಡಿದ್ದು ಪುರಾತನ ಕಾಲದಲ್ಲಿ ನಮ್ಮಲ್ಲಿ ಮಾನಸಿಕ ರೋಗಗಳಿಗೆ ಯಾವ ರೀತಿ ಚಿಕಿತ್ಸೆ ನೀಡುತ್ತಿದ್ದರು ಎಂಬುದನ್ನು ತಿಳಿಯಲು ಇದು ಸಹಾಯಕವಾಗಲಿದೆ. ಇಲ್ಲಿನ ಅಧ್ಯಯನ ಎಂಬುದನ್ನು ತಿಳಿಯಲು ಇದು ಸಹಾಯಕವಾಗಲಿದೆ. ಇಲ್ಲಿ ಅಧ್ಯಯನ ಸಂಸ್ಥೆಯಲ್ಲಿ ಅದೇ ರೀತಿ ಮಾಡಬೇಕೆಂದು ನಿರ್ಧರಿಸಿದ್ದೇನೆ. ಸಂಸ್ಥೆ ಅಭಿವೃದ್ಧಿ ಸಾಧಿಸಿದಂತೆ ಪ್ರಕೃತ ಈ ಸಂಸ್ಥೆಯಲ್ಲಿ ಪದವಿಪೂರ್ವ ಅಧ್ಯಯನಕ್ಕೆ ಮಾತ್ರವೇ ಅವಕಾಶವಿದ್ದು ಕೆಲವು ವಿಭಾಗಗಳಲ್ಲಷ್ಟೇ ಸ್ನಾತಕೋತ್ತರ ಅಧ್ಯಯನ ಪ್ರಾರಂಭವಾಗಿದೆ. ಜಾಮ್ ನಗರದ ಅಧ್ಯಯನ ಸಂಸ್ಥೆಯೊಂದಿಗೆ ನಿಕಟ ಸಂಬಂಧ ಹೊಂದಲಿದೆ. ಜಾಮ್‌ನಗರ ಅಧ್ಯಯನ ಸಂಸ್ಥೆಯೂ ಅಖಿಲ ಭಾರತ ಮಟ್ಟದ ಅಧ್ಯಯನ ಸಂಸ್ಥೆಯಾಗಿ ಪರಿವರ್ತಿತವಾಗಬೇಕೆಂದು ನಾನು ಬಯಸುತ್ತೇನೆ. ಇದು ಆಯುರ್ವೇದಕ್ಕೆ ಅಖಿಲ ಭಾರತ ಮಟ್ಟದ ಅಧ್ಯಯನ ಸಂಸ್ಥೆಯಾಗಬೇಕು ಎಂಬುದು ನನ್ನ ಮಹದಾಸೆಯಾಗಿದೆ. ಯುನಾನಿ ವೈದ್ಯ ಪದ್ಧತಿಗೊಂದು ಅಧ್ಯಯನ ಸಂಸ್ಥೆ, ಅಖಿಲ ಭಾರತ ಹೋಮಿಯೋಪಥಿ ಅಧ್ಯಯನ ಸಂಸ್ಥೆ ಸ್ಥಾಪನೆಯಾಗಬೇಕಾಗಿದೆ. ಸಕಾಲದಲ್ಲಿ ಅವು ಸ್ಥಾಪಿತವಾಗಲಿದೆ. ಈ ವಿಷಯದಲ್ಲಿ ತಾಳ್ಮೆಗೆಡಬೇಡಿ. ಎಲ್ಲ ವಿಷಯಗಳನ್ನು ಸೇರಿಸಿಕೊಂಡರೆ ಗೊಂದಲವೇ ಜಾಸ್ತಿ. ಅದರಿಂದ ವಿಧೇಯಕದ ಮೂಲ ಉದ್ದೇಶವೇ ವಿಫಲವಾಗುವುದು. ವೈದ್ಯವಿಜ್ಞಾನ ಇತಿಹಾಸ ಪೀಠವು ಅಮೂಲ್ಯವಾದ ಒಂದು ಆಸ್ತಿಯಾಗಿದ್ದು ಅದರಿಂದ ಈ ಕ್ಷೇತ್ರಕ್ಕೆ ಮಹತ್ತರ ಸಹಾಯ ಲಭಿಸಲಿದೆ. ದೇಶೀಯ ವೈದ್ಯ ಪದ್ಧತಿಗಳಲ್ಲಿನ ಸಂಶೋಧನೆಗೆ ಸಹಾಯ ಮಾಡಲು ನಾನು ಹಿಂದೆ ಸರಿಯುವುದಿಲ್ಲ ಎಂಬ ಆಶ್ವಾಸನೆಯನ್ನು ಇದೇ ಸಮಯದಲ್ಲಿ ನಾನು ಮಾನ್ಯ ಸದಸ್ಯರಿಗೆ ನೀಡಬಯಸುತ್ತೇನೆ.

* * * *

ಇನ್ನೇನಿದ್ದರೂ ಸ್ನಾತಕೋತ್ತರ ಅಧ್ಯಯನಕ್ಕೆ ಹೆಚ್ಚಿನ ಒತ್ತು ಕೊಡಲಾಗುವುದು. ನಾನೀಗಾಗಲೇ ಹೇಳಿರುವಂತೆ ಪದವಿಪೂರ್ವ ಶಿಕ್ಷಣ * ಸ್ನಾತಕೋತ್ತರ ಅಧ್ಯಯನಕ್ಕೆ ಪೂರಕವಾಗು ಈ ಹಂತದಲ್ಲಿ ಅದಕ್ಕೆ ಚಾಲನೆ ನೀಡುವ ಉದ್ದೇಶವೂ ನಮಗಿದೆ. ಇದರಿಂದ ಲಕ್ನೋದಲ್ಲಿನ ವಿಶ್ವವಿದ್ಯಾಲಯ ಮತ್ತು ಇತರೆ ಸಂಸ್ಥೆಗಳಿಗೂ ಪ್ರಯೋಜನವಾಗಲಿದೆ. ಪದವಿಪೂರ್ವ ಹಂತದಲ್ಲಿನ ಈ ಪ್ರಯೋಗವು ಎಲ್ಲ ವೈದ್ಯಕೀಯ ಕಾಲೇಜುಗಳಿಗೂ ಅಧ್ಯಯನದ ಹೊಸ ದಿಕ್ಕುಗಳನ್ನು ತೋರಿಸಿಕೊಡಲಿದೆ. ಇಲ್ಲಿ ವ್ಯಾಸಂಗ ನಡೆಸಿದ ವಿದ್ಯಾರ್ಥಿಗಳು ಅಧ್ಯಾಪಕರಾಗುವರು ವೈದ್ಯಕೀಯ ಕಾಲೇಜುಗಳಲ್ಲಿ ನಾವು ಸಿಬ್ಬಂದಿಗಳ ತೀವ್ರ ಕೊರತೆಯನ್ನು ಅನುಭವಿಸುತ್ತಿದ್ದೇವೆ. ಈ ಅಭಾವವನ್ನು ನೀಗಲು ಎಲ್ಲ ಯುವಕ - ಯುವತಿಯರು ಇಲ್ಲಿ ಹೆಚ್ಚಿನ ತರಬೇತಿ ಪಡೆದು ಅಧ್ಯಯನ ಸಂಸ್ಥೆಗಳಿಗೆ ಹೋಗಬೇಕೆಂದು ನಾನು ಅಪೇಕ್ಷಿಸುತ್ತೇನೆ. ಹೀಗಾಗಿ ಶಿಕ್ಷಣ ಸಂಸ್ಥೆಗಳ ಅಭ್ಯಾಸ ಶಾಲೆ (ಪ್ರಾಕ್ಟೀಸಿಂಗ್ ಸ್ಕೂಲ್‌ಗಳು) ಹೊಂದಿರಬೇಕು. ಅವು ಅತ್ಯಂತ ಸಣ್ಣ ಪದವಿಪೂರ್ವ ಕಾಲೇಜುಗಳಾಗಿರಬೇಕು. ದೇಶಾದ್ಯಂತದಿಂದ ಅತ್ಯುತ್ತಮ ವಿದ್ಯಾರ್ಥಿಗಳು

ಇಲ್ಲಿಗೆ ಬರಬೇಕೆಂದು ನಮ್ಮ ಆಸೆಯಾಗಿದೆ. ಸ್ನಾತಕೋತ್ತರ ಶಿಕ್ಷಣದಲ್ಲಿ ಸ್ವಯಂಪೂರ್ಣತೆ ಸಾಧಿಸುವುದೆಂದರೆ ಎಲ್ಲ ರೀತಿಯ ಸ್ನಾತಕೋತ್ತರ ಶಿಕ್ಷಣ ನಮ್ಮ ದೇಶದಲ್ಲಿಯೇ ಲಭ್ಯವಾಗುವಂತೆ ಮಾಡುವುದು ಪದವಿಪೂರ್ವ ಶಿಕ್ಷಣದಲ್ಲಿ ಸ್ವಯಂ ಪರಿಪೂರ್ಣತೆ ಸಾಧಿಸುವ ಅಗತ್ಯವಿಲ್ಲ. ಈಗಾಗಲೇ ನಾವು ಅದನ್ನು ಸಾಧಿಸಿದ್ದೇವೆ. ಅನೇಕ ಸದಸ್ಯರು ಈ ವಿಷಯವನ್ನು ಪ್ರಸ್ತಾಪಿಸಿದ್ದಾರೆ-ಈ ವಿಷಯದಲ್ಲಿ ಹೆಚ್ಚೇನೂ ಹೇಳುವುದಕ್ಕೆ ಇಲ್ಲ. ಮಧ್ಯದಲ್ಲಿ ಮಾತು ನಿಲ್ಲಿಸುವುದು ಕಷ್ಟವಾಗಿರುವುದರಿಂದ ನನಗೆ ಇನ್ನೂ ಕೆಲವು ನಿಮಿಷಗಳ ಕಾಲ ಮಾತನಾಡಲು ಅವಕಾಶ ಕೊಡಬೇಕು. ಅನೇಕರು ಚೀನಾ ಕುರಿತು ಮಾತನಾಡಿದ್ದಾರೆ. ನಾನು ಮೊನ್ನೆ ಮೊನ್ನೆ ಚೀನಾಕ್ಕೆ ಭೇಟಿ ನೀಡಿ ಬಂದಿದ್ದೇನೆ. ನಾನು ಅಲ್ಲಿನ ಪರಂಪರಾಗತ ವೈದ್ಯ ಪದ್ಧತಿಗಳ ಎಲ್ಲ ಸೂಕ್ಷ್ಮ ವಿವರಗಳನ್ನು ಸಂಗ್ರಹಿಸಿಕೊಂಡು ಬಂದಿದ್ದೇನೆ. ಈ ಸಂದರ್ಭದಲ್ಲಿ ಚೀನಾದ ಪ್ರಧಾನ ಮಂತ್ರಿಯವರು "ವೈದ್ಯಕೀಯ ಕ್ಷೇತ್ರದಲ್ಲಿ ನಾವು ಪಾಶ್ಚಾತ್ಯ ರಾಷ್ಟ್ರಗಳೊಂದಿಗೆ ಸರಿಸಮನಾಗಿ ನಿಲ್ಲಬೇಕು" ಎಂಬುದು ನಮ್ಮ ಆಕಾಂಕ್ಷೆಯಾಗಿದೆ ಎಂದು ನನ್ನೊಡನೆ ಹೇಳಿದರು. ಸದನದ ಮಾತು ಸದಸ್ಯರೂ ಈ ವಿಷಯದಲ್ಲಿ ಆಸಕ್ತಿಹೊಂದಿರಬಹುದೆಂದು ನಾನು ಭಾವಿಸಿದ್ದೇನೆ. "ನಿಮ್ಮ ಪರಂಪರಾಗತ ವೈದ್ಯಕೀಯ ಪದ್ಧತಿಗಳು ಸಮೃದ್ಧವಾಗಿಲ್ಲವೇ"? ಎಂದು ನಾನು ಅವರನ್ನು ಕೇಳಿದೆ. 'ಅದು ನಿಜ' ಎಂದು ಅವರು ಹೇಳಿದರು. ಆದರೆ ಚೀನಾದಲ್ಲಿ ಸಾಂಪ್ರದಾಯಿಕ ವೈದ್ಯ ಪದ್ಧತಿಗಳಲ್ಲಿ ತರಬೇತಿ ನೀಡಲಾಗುತ್ತಿಲ್ಲ. ಅಂತಹ ತರಬೇತಿ ಹೊಂದಿದ ಒಬ್ಬನೇ ಒಬ್ಬ ವೈದ್ಯನೂ ಈ ಕ್ಷೇತ್ರದಲ್ಲಿ ಅಲ್ಲಿ ಏನು ನಡೆಯುತ್ತಿದೆ ಎಂಬುದನ್ನು ತಿಳಿದುಕೊಳ್ಳುವ ಸಲುವಾಗಿ ಅಲ್ಲಿ ಪರಂಪರಾಗತ ವೈದ್ಯ ಪದ್ಧತಿಗಳನ್ನು ಅನುಸರಿಸುತ್ತಿದ್ದ ಇಬ್ಬರು ವೈದ್ಯರನ್ನು ನಾನು ಭೇಟಿಮಾಡಿದೆ. ಅಲ್ಲಿ ಪರಂಪರಾಗತ ವೈದ್ಯ ಪದ್ಧತಿಯನ್ನು ಅನುಸರಿಸುತ್ತಿರುವ ಯಾವೊಬ್ಬ ವೈದ್ಯನಿಗೂ ನಾಲ್ಕೈದು ಬಗೆಯ ದೀರ್ಘಕಾಲದ ರೋಗಗಳನ್ನು ಬಿಟ್ಟರೆ ಬೇಕಾದ ರೋಗಕ್ಕೂ ಚಿಕಿತ್ಸೆ ನೀಡಲು ಅನುಮತಿ ನೀಡಲಾಗುವುದಿಲ್ಲ. ದೀರ್ಘಕಾಲದ ರಕ್ತದೊತ್ತಡ (ಹೈಪರ್‌ಟೆನ್‌ಷನ್) ದಂತಹ ಕೆಲವೊಂದು ರೋಗಗಳಿಗೆ ಅವರು ಆಕ್ಯುಪಂಕ್ಚರ್ ಚಿಕಿತ್ಸೆ ನೀಡುತ್ತಾರೆ. ಈ ಕುರಿತು ಅವರು ಸಂಶೋಧನೆಯನ್ನು ನಡೆಸುತ್ತಿದ್ದಾರೆ. ಅದೇ ರೀತಿ ದೀರ್ಘಕಾಲದ ಕೀಲು ನೋವು, ಸಂಧಿವಾತ, ಕರುಳಿಗೆ ಸಂಬಂಧಿಸಿದ ಬೇನೆಗಳಿಗೆ ಹಾಗೂ ಇತರ ಕೆಲ ವ್ಯಾಧಿಗಳಿಗೆ ಅವರು ನಾಟಿ ವೈದ್ಯ ಪದ್ಧತಿಯನ್ನು ಬಳಸುತ್ತಾರೆ. ಅದಲ್ಲದೆ ಕೆಲವೊಂದು ಮಕ್ಕಳ ರೋಗಗಳಿಗೂ ಅವರು ಔಷಧ ನೀಡುತ್ತಾರೆ. ಮುಖ್ಯವಾಗಿ ಮಕ್ಕಳಲ್ಲಿ ಕಾಣಿಸಿಕೊಳ್ಳುವ ಮೂತ್ರಕೋಶದ ಕೆಲವು ತೊಂದರೆಗಳಿಗೆ ಅವರು ಚಿಕಿತ್ಸೆ ನೀಡುತ್ತಾರೆ. ಇಷ್ಟನ್ನು ಬಿಟ್ಟರೆ ಬೇರಾವ ರೋಗ ಚಿಕಿತ್ಸೆಗೂ ಮಾನ್ಯತೆ ನೀಡಿಲ್ಲ. ಯಾವುದೇ ಸಾಂಕ್ರಾಮಿಕ ರೋಗಗಳ ಚಿಕಿತ್ಸೆಗೂ ದೇಶೀಯ ವೈದ್ಯ ಪದ್ಧತಿಗಳನ್ನು ಅನುಸರಿಸುತ್ತಿರುವ ವೈದ್ಯರಿಗೆ ಅಲ್ಲಿ ಅನುಮತಿ ನೀಡುವುದಿಲ್ಲ. ಆಧುನಿಕ ವೈದ್ಯ ವಿಜ್ಞಾನದಲ್ಲಿ ಅವರು ಸಾಕಷ್ಟು ಸಂಖ್ಯೆಯಲ್ಲಿ ಪದವೀಧರರನ್ನು

* ಇದೇ ಹಂತದಲ್ಲಿ ಪದವಿಪೂರ್ವ ಶಿಕ್ಷಣವನ್ನು ಸೇರ್ಪಡೆ ಮಾಡಲಾಗುವುದೇ ಎಂಬ ಡಾ|| ರಾಧಾ ಕುಮುದ್ ಮುಖರ್ಜಿ ಅವರ ಪ್ರಶ್ನೆಗೆ ಉತ್ತರಿಸುತ್ತಾ.

ಹೊಂದಿದ್ದಾರೆ. ತರಬೇತಿ ಹೊಂದಿದ ಸಿಬ್ಬಂದಿಯನ್ನು ಹೊಂದಿದ್ದಾರೆ. ಸಂಪೂರ್ಣವಾಗಿ ಆಧುನಿಕ ರೀತಿಯಲ್ಲೇ ಅವರಿಗೆ ಶಿಕ್ಷಣ ನೀಡಲಾಗುತ್ತಿದೆ ಹಾಗೂ ಅವರ ಸಹಾಯಕ ಸಿಬ್ಬಂದಿಗೆ ರೋಗ ನಿರ್ಣಯ ಶಾಸ್ತ್ರ, ಅಂಗರಚನಾಶಾಸ್ತ್ರ ಮತ್ತು ಶರೀರ ವಿಜ್ಞಾನಗಳಲ್ಲಿ ತರಬೇತಿ ನೀಡಿರುತ್ತಾರೆ. ಇದು ಅವರು ಅನುಸರಿಸುತ್ತಿರುವ ವಿಧಾನ. ವೈದ್ಯಕೀಯ ಕ್ಷೇತ್ರದಲ್ಲಿ ಕೆಲಸ ಮಾಡುವ ಪ್ರತಿಯೊಬ್ಬರಿಗೂ ತರಬೇತಿ ನೀಡುತ್ತಾರೆ. ಪರಂಪರಾಗತ ವೈದ್ಯ ಪದ್ಧತಿಗಳನ್ನು ಅನುಸರಿಸುತ್ತಿರುವ ವೈದ್ಯರಿಗೆ ಅವರು ಕಿರಿಯರಾಗಿರಲಿ, ಹಿರಿಯರಾಗಿರಲಿ ಆಧುನಿಕ ವೈದ್ಯ ವಿಜ್ಞಾನದ ಪರಿಜ್ಞಾನ ನೀಡುತ್ತಾರೆ. ಓರ್ವ ವೃದ್ಧ ಪಂಡಿತರು ತಮ್ಮ ಕತ್ತಿನಲ್ಲಿ ಸ್ಟೆತಾಸ್ಕೋಪ್ ಹಾಕಿಕೊಂಡಿರುವುದನ್ನು ನಾನು ನೋಡಿ "ನೀವು ಇದನ್ನು ಬಳಸುತ್ತೀರಾ"? ಎಂದು ಕೇಳಿದೆ 'ಹೌದು ಮೇಡಂ" ಎಂದು ಅವರು ಉತ್ತರಿಸಿದರು. ಅಷ್ಟು ಮಾತ್ರವಲ್ಲ, "ನಾನು ಇದನ್ನು ಬಳಸಿಕೊಳ್ಳುತ್ತಿದ್ದೇನೆ, ಮತ್ತು ಇದನ್ನು ಬಳಸಲು ನನಗೆ ಖುಷಿಯಾಗುತ್ತದೆ ನಾಡಿ ಹಿಡಿದು ನೋಡುವುದಕ್ಕಿಂತ ಸ್ಟೆತಾಸ್ಕೋಪ್‌ನಿಂದ ರೋಗವನ್ನು ಪತ್ತೆ ಹಚ್ಚುವುದು ಹೆಚ್ಚು ಸುಲಭ" ಎಂದು ಅವರು ಹೇಳಿದರು. ಇದು ಚೀನಾದಲ್ಲಿನ ಪರಿಸ್ಥಿತಿ. ಪಾಶ್ಚಾತ್ಯ ರಾಷ್ಟ್ರಗಳಿಗಿಂತ ಹಿಂದುಳಿಯಲು ಅದು ಇಚ್ಛಿಸುತ್ತಿಲ್ಲ. ಅವರು ಆಧುನಿಕ ವೈದ್ಯ ಪದ್ಧತಿಯನ್ನೇ ಅವಲಂಬಿಸಿದ್ದಾರೆ. ಹಾಗಾಗಿ ಸುಮ್ಮನೆ ಊಹಾಪೋಹ ಮಾಡಬೇಡಿ. ನಾನು ಕೂಡಾ ಚೀನಾದಲ್ಲಿಯಂತೆಯೇ ವೈದ್ಯರಿಗೆ ಅವರಿಗೆ ಬೇಕಾದ ಸಹಾಯಕ ಸಿಬ್ಬಂದಿಗೆ ಅದೇ ಮಟ್ಟದ ಅಥವಾ ಅದಕ್ಕಿಂತ ತುಸು ಹೆಚ್ಚಿನ ಮಟ್ಟದ ತರಬೇತಿ ನೀಡಲು ಪ್ರಯತ್ನಿಸುತ್ತಿದ್ದೇನೆ.

"ಆಧುನಿಕ ಸಂಶೋಧನೆಯಲ್ಲಿ ಬೆಸುಗೆ ಹಾಕುವ ವಿಚಾರ ಮಾಡಬೇಡಿ" ಎಂದು ಯಾರೋ ಒಬ್ಬರೂ ಹೇಳಿದ್ದಾರೆ. ಅವರು ಇದೇ ಶಬ್ದವನ್ನು ಬಳಸಿದರು. ಸಂಶೋಧನೆಯನ್ನು ಈ ರೀತಿ ಮಾಡುವುದು ಹೇಗೆ ಸಾಧ್ಯ? ಎಂಬುದು ನನಗೆ ಅರ್ಥವಾಗುತ್ತಿಲ್ಲ. ಸಂಶೋಧನೆಯಲ್ಲಿ ತೇಪೆಯ ಪ್ರಶ್ನೆಯೇ ಇಲ್ಲ. ಆದರೆ ಆಧುನಿಕ ವೈದ್ಯ ಪದ್ಧತಿಯಲ್ಲಿ ದೇಶದಲ್ಲಿ ಲಭ್ಯವಿರುವ ಅನುಭವದ ಹೊರತಾಗಿ ಆಯುರ್ವೇದ ವೈದ್ಯ ಪದ್ಧತಿಯಲ್ಲಿ ಸಂಶೋಧನೆ ನಡೆಸುವುದು ಎಂದರೆ ಸಂಶೋಧನೆಯನ್ನೇ ನಿರಾಕರಿಸಿದಂತೆ. ಅದು ಯಾವ ರೀತಿಯ ಸಂಶೋಧನೆ ಎಂಬುದು ನನಗೆ ಅರ್ಥವಾಗುತ್ತಿಲ್ಲ. ಅದರಿಂದ ಏನು ಪ್ರಯೋಜನ ಎಂಬುದು ನನಗೆ ಗೊತ್ತಿಲ್ಲ. ಸಂಶೋಧನೆ ಎಂಬುದು ಸರ್ವಗ್ರಾಹಿಯಾಗಿರಬೇಕು ಮತ್ತು ಅದು ಎಲ್ಲವನ್ನು ಒಳಗೊಂಡಿರಬೇಕು. ಹೀಗೆ ಹೇಳುವ ಮೂಲಕ ನಾನು ಪ್ರತಿಯೊಬ್ಬರಿಗೂ ಸಮಾಧಾನವಾಗುವ ರೀತಿಯಲ್ಲಿ ಎಲ್ಲವನ್ನು ವಿವರಿಸಿದ್ದೇನೆ ಮತ್ತು ನಾನು ಆಯುರ್ವೇದದ ವಿರೋಧಿಯಲ್ಲ ಎಂಬುದನ್ನು ಸದನಕ್ಕೆ ಮನವರಿಕೆ ಮಾಡಿಕೊಟ್ಟಿದ್ದೇನೆ ಎಂದು ಭಾವಿಸಿದ್ದೇನೆ. ಆಯುರ್ವೇದ ವೈದ್ಯಕೀಯ ಕ್ಷೇತ್ರಕ್ಕೆ ನಾನು ಎಲ್ಲ ರೀತಿಯ ಸಹಾಯ ನೀಡಲು ಸಿದ್ಧಳಿದ್ದೇನೆ. ಈ ಕ್ಷೇತ್ರಕ್ಕೆ ಪರಿಪೂರ್ಣ ತರಬೇತಿ ಹೊಂದಿದ ವೈದ್ಯರನ್ನು ಮತ್ತು ಸಿಬ್ಬಂದಿಯನ್ನು ಒದಗಿಸುವುದು ನನ್ನ ಗುರಿಯಾಗಿದೆ. ವೈದ್ಯರು ಈ ಕ್ಷೇತ್ರಕ್ಕೆ

ಹೋಗಬೇಕು ಮತ್ತು ಸಂಶೋಧನೆಗೆ ಎಲ್ಲ ರೀತಿಯ ಅವಕಾಶವು ಅವರಿಗಿರಬೇಕು ಎಂದೂ ನಾನು ಬಯಸುತ್ತೇನೆ. ದೇಶದ ಎಲ್ಲ ಜನರಿಗೆ ಗ್ರಾಮಾಂತರ ಪ್ರದೇಶಗಳಲ್ಲಿ ಮಾತ್ರವಲ್ಲ ಪ್ರತಿಯೊಂದು ಕಡೆಯಲ್ಲೂ ಸೇವೆ ಸಲ್ಲಿಸುವಂತಹ ಅವಕಾಶ ಅವರಿಗೆ ಇರಬೇಕು. ನಮ್ಮ ಗ್ರಾಮಗಳಿಗೆ ಮಾತ್ರ ಪರಿಮಿತ ಸೌಲಭ್ಯ ಇದ್ದರೆ ಸಾಕೆಂಬ ಮನೋಭಾವ ಏಕೆ? ಗ್ರಾಮಗಳಿಗೆ ಅತ್ಯಂತ ಶ್ರೇಷ್ಠವಾದುದೇ ಲಭ್ಯವಾಗಬೇಕು. ವಾಸ್ತವವಾಗಿ ಗ್ರಾಮಗಳಿಗೆ ನಗರಗಳಲ್ಲಿ ನಮಗೆ ಸಿಗುವುದಕ್ಕಿಂತಲೂ ಹೆಚ್ಚಿನ ಉತ್ತಮ ಸೌಲಭ್ಯ ಸಿಗಬೇಕು. ಏಕೆಂದರೆ ನಮಗಿಂತ ಅವರು ಕಾಯಿಲೆ ಬೀಳುವ ಸಾಧ್ಯತೆಗಳು ಹೆಚ್ಚಾಗಿವೆ. ಹಾಗಾಗಿ ಈ ಜನರಿಗೆ ಹೆಚ್ಚಿನ ಪ್ರಮಾಣದಲ್ಲಿ ವೈದ್ಯರು ಹಾಗೂ ಸಿಬ್ಬಂದಿ ಆಸ್ಪತ್ರೆಗಳಲ್ಲಿ ಹೆಚ್ಚಿನ ಸೇವೆ ಲಭ್ಯವಾಗಬೇಕು. ಅವರಿಗೆ ಅತ್ಯುತ್ತಮ ಸೌಲಭ್ಯ ಕಲ್ಪಿಸಿಕೊಡುವ ವಿಷಯದಲ್ಲಿ ನನಗೆ ಯಾವ ಆಕ್ಷೇಪವೂ ಇಲ್ಲ. ಜಾಮ್‌ನಗರ ಅಧ್ಯಯನ ಸಂಸ್ಥೆಯಿಂದ ನಾವೀಗ ಉತ್ತಮ ದರ್ಜೆಯ ಪದವಿಪೂರ್ವ ತರಬೇತಿ ಪಡೆದ ಸಿಬ್ಬಂದಿ ಮತ್ತು ಸ್ನಾತಕೋತ್ತರ ಪದವೀಧರರನ್ನು ಹೊರತರುತ್ತಿದ್ದೇವೆ. ಪರಿಪೂರ್ಣ ಅರ್ಹತೆ ಹೊಂದಿದ ಸ್ನಾತಕೋತ್ತರ ಪದವೀಧರರು ಇಲ್ಲಿಂದ ಹೊರಬರ ತೊಡಗಿದರೆ ಈ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ ಸಹಯೋಗಕ್ಕೆ ಅವಕಾಶವಾಗುವುದು ಮತ್ತು ನಮ್ಮ ಕಾರ್ಯ ಯೋಜನೆಗಳಲ್ಲಿ ಸಮನ್ವಯ ಸಾಧಿಸಲು ಸಾಧ್ಯವಾಗುವುದು. ಹಾಗಾದಾಗ ಆಯುರ್ವೇದದಲ್ಲಿ ಲಭ್ಯವಿರುವ ಎಲ್ಲ ಸಾಧಕ ಅಂಶಗಳು ವೈದ್ಯಕೀಯ ವಿಜ್ಞಾನದ ವಿಶಾಲವಾಹಿನಿಯನ್ನು ಸೇರಿಸಿಕೊಳ್ಳುವುವು.

ನಾನು ಹೇಳಿದ ಇಷ್ಟೆಲ್ಲವನ್ನು ಕೇಳಿದ ಮೇಲೆ ಈ ಸಂಸ್ಥೆಯ ಬಗೆಗೆ ಸದಸ್ಯರು ಸೂಚಿಸಿರುವ ತಿದ್ದುಪಡಿಗಳನ್ನು ಅಂಗೀಕರಿಸುವುದು ಸಾಧ್ಯವಿಲ್ಲ ಎಂಬುದು ಎಲ್ಲರಿಗೂ ಮನದಟ್ಟಾಗಿರಬೇಕೆಂದು ನಾನು ಭಾವಿಸುತ್ತೇನೆ. ಆದರೆ ಸದನದಲ್ಲಿ ನೀಡಿದ ಒಂದೊಂದು ಆಶ್ವಾಸನೆಯನ್ನು ನಾನು ಕಾರ್ಯರೂಪಕ್ಕೆ ತರುತ್ತೇನೆ ಮತ್ತು ಆಯುರ್ವೇದವಾಗಲಿ, ಯುನಾನಿಯಾಗಲಿ ಅಥವಾ ಹೋಮಿಯೋಪಥಿ ಪದ್ಧತಿಯಾಗಲಿ ಹಣಕಾಸಿನ ಕೊರತೆಗೆ ಎರವಾಗದಂತೆ, ಸಂಶೋಧನೆಗೆ ಅಗತ್ಯವಿರುವ ಸೌಕರ್ಯ ಸವಲತ್ತುಗಳ ಕೊರತೆಯಿಂದ ಬಳಲದಂತೆ ನಾನು ನೋಡಿಕೊಳ್ಳುತ್ತೇನೆ. ಆದರೆ ಅದಕ್ಕೆ ಸಂಬಂಧಿಸಿದಂತೆ ಯೋಜನೆಗಳನ್ನು ಸಲ್ಲಿಸುವುದು ಹಾಗೂ ಹಣಕಾಸು ಪಡೆದುಕೊಳ್ಳುವುದು ಈ ವೈದ್ಯ ಪದ್ಧತಿಗಳ ಪ್ರತಿಪಾದಕರಿಗೆ ಮತ್ತು ಈ ಕ್ಷೇತ್ರದ ತಜ್ಞರಿಗೆ ಸೇರಿದ ವಿಚಾರ. ವೈದ್ಯರಿಗೆ ಒಂದಿಷ್ಟು ಹಣ ನೀಡಿ ಸಮಾಧಾನ ಪಟ್ಟುಕೊಳ್ಳುವುದಕ್ಕೆ ಬದಲಾಗಿ ಸಾರ್ವಜನಿಕರ ಸೇವೆಗೆ ಮುಂದಾಗುವಂತೆ ಮತ್ತು ಸಂಶೋಧನೆ ನಡೆಸುವಂತೆ ಅವರಿಗೆ ಉತ್ತೇಜನ ನೀಡಬೇಕೆಂದು ಈ ಸಂದರ್ಭದಲ್ಲಿ ಎಲ್ಲ ರಾಜ್ಯ ಸರ್ಕಾರಗಳನ್ನು ನಾನು ಕೇಳಿಕೊಳ್ಳುತ್ತೇನೆ.

* ನಂತರ ಈ ವಿಧೇಯಕ ಅಂಗೀಕೃತಗೊಂಡಿತು.

## 11. ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯ ವರದಿ*

ಮಾನ್ಯ ಉಪಸಭಾಪತಿಗಳೇ, ನನ್ನ ಮಾನ್ಯ ಮಿತ್ರರಾದ ಶ್ರೀ ಎಂ.ಪಿ.ಭಾರ್ಗವ ಅವರು ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯ ಈ ವರದಿಯನ್ನು ಸದನದಲ್ಲಿ ಮಂಡಿಸಿರುವುದು ನನಗೆ ಅತ್ಯಂತ ಹರ್ಷವನ್ನುಂಟು ಮಾಡಿದೆ. ಏಕೆಂದರೆ ಈ ಸಂಸ್ಥೆಯು ನಮ್ಮ ದೇಶದಲ್ಲಷ್ಟೇ ಅಲ್ಲ ಏಷ್ಯಾದಲ್ಲೇ ಈ ಮಾದರಿಯ ಒಂದು ಅಪೂರ್ವ ಸಂಸ್ಥೆಯಾಗಿದೆ. ಈ ಸಂಸ್ಥೆಗೆ ಭೇಟಿ ನೀಡುವಂತೆ ನಾನು ಸಂಸತ್ತಿನ ಉಭಯ ಸದನಗಳ ಸದಸ್ಯರನ್ನು ಪದೇ ಪದೇ ಕೇಳಿಕೊಂಡಿದ್ದೇನೆ. ಆದರೂ ದುರಾದೃಷ್ಟವಶಾತ್ ಯಾರೊಬ್ಬರೂ ಅಲ್ಲಿಗೆ ಭೇಟಿ ನೀಡಲಿಲ್ಲ. ಬಹುಶಃ ಅವರಿಗೆ ಅಂತಹ ಆಸಕ್ತಿಯೇ ಇಲ್ಲ ಎಂದು ನಾನು ಹೇಳಬಹುದೇನೋ? ಈ ಸಂಸ್ಥೆಯ ಆರಂಭದಿಂದಲೇ ನಾನು ಅದರೊಂದಿಗೆ ಅತ್ಯಂತ ನಿಕಟ ಸಂಬಂಧವನ್ನು ಹೊಂದಿದ್ದೇನೆ. ನಾನೇ ಅದನ್ನು ಸ್ಥಾಪಿಸಿದೆ ಮತ್ತು ಇಂದಿನವರೆಗೂ ಅದು ನನ್ನ ಜೀವನದ ಒಂದು ಅಂಗವಾಗಿದೆ. ಈ ಸಂಸ್ಥೆಯ ಆಡಳಿತ ಮಂಡಲಿಯ ಅಧ್ಯಕ್ಷೆಯಾಗಿ ಕಳೆದ ಐದು ವರ್ಷಗಳ ಅವಧಿಯಲ್ಲಿ ಎಂತಹ ಇತಿಮಿತಿ ಮತ್ತು ಕಠಿಣತೆಗಳ ನಡುವೆ ನಾನು ಕಾರ್ಯನಿರ್ವಹಿಸಿದೆ ಎಂಬುದನ್ನು ಸದನದ ಮಾನ್ಯ ಸದಸ್ಯರಿಗೆ ಮನವರಿಕೆ ಮಾಡಿಕೊಡಲು ಬಯಸುತ್ತೇನೆ. ಇಂತಹ ಸನ್ನಿವೇಶದಲ್ಲಿ ಈ ಮಾದರಿಯ ಸಂಸ್ಥೆಯೊಂದರಿಂದ ನಾವು ಬಹಳಷ್ಟನ್ನು ನಿರೀಕ್ಷಿಸಿದರೆ ಅದು ತೀರಾ ಸಹಜ ಮತ್ತು ಅದನ್ನು ನಿರೀಕ್ಷಿಸುವ ಹಕ್ಕು ನಮಗಿದೆ. ಡಾ॥ ಗೌರ್ ಅವರು ಸೂಚಿಸಿರುವಂತೆ ಈ ಸಂಸ್ಥೆಯಲ್ಲಿ ಅಗತ್ಯವಿರುವ ಎಲ್ಲ ಸೌಲಭ್ಯಗಳನ್ನು ಕಲ್ಪಿಸಿಕೊಡುವುದು ಅತ್ಯಗತ್ಯವಾಗಿದೆ. ಆದರೆ ಇಂತಹ ಒಂದು ದೊಡ್ಡ ಸಂಸ್ಥೆಯ ಆಸ್ಪತ್ರೆಯಲ್ಲಿ 400 ಹಾಸಿಗೆಗಳು ಕೂಡಾ ಇಲ್ಲ ಎಂಬುದು ಮಾನ್ಯ ಸದಸ್ಯರಿಗೆ ತಿಳಿದಿಲ್ಲ. ನಮ್ಮ ಸಂಪನ್ಮೂಲಗಳು ತೀರಾ ಪರಿಮಿತವಾಗಿರುವಾಗ ವಿವಿಧ ರೋಗಗಳ ಬಗ್ಗೆ ಸಂಶೋಧನೆಗಳನ್ನು ನಾವು ನಡೆಸುವುದಾದರೂ ಹೇಗೆ? ಪ್ರತಿ ಸಲವೂ ಸ್ಥಳ ಇಲ್ಲ, ವಸತಿ ಸೌಕರ್ಯ ಇಲ್ಲ, ಎಂಬ ಕಾರಣಕ್ಕಾಗಿಯೇ ನಮಗೆ ಸಿಬ್ಬಂದಿಯನ್ನು ನೇಮಿಸಲು ಸಾಧ್ಯವಾಗಿಲ್ಲ. ಈ ಸಂಸ್ಥೆಯು ಅನುಭವಿಸಿದ ಅತಿ ದೊಡ್ಡ ಸಮಸ್ಯೆಗಳಲ್ಲಿ ಒಂದೆಂದರೆ ಸಫ್ದರ್‌ಜಂಗ್ ಆಸ್ಪತ್ರೆಯ ಅಸಹಕಾರ. ಅವರು ನಮಗಿಲ್ಲಿ ಹಾಸಿಗೆಗಳನ್ನು ನೀಡುವ ಭರವಸೆ ನೀಡಿದ್ದರೂ ಅವು ಎಂದೂ ನಮಗೆ ಸಿಗಲಿಲ್ಲ. ಅದೇ ರೀತಿ ಆರೋಗ್ಯ ಖಾತೆಯಿಂದಲೂ ಕೂಡಾ ಸ್ವಲ್ಪಮಟ್ಟಿನ ಅಸಹಕಾರವನ್ನು ಎದುರಿಸಬೇಕಾಯಿತೆಂದು ನಾನಿಲ್ಲಿ ಹೇಳಬೇಕಾಗಿ ಬಂದಿರುವುದೇ ವಿಷಾದದ ಸಂಗತಿ. ಈಗ ಈ ಸಂಬಂಧದಲ್ಲಿ ಎತ್ತಲಾಗಿರುವ ಎಲ್ಲ ಪ್ರಶ್ನೆಗಳಿಗೆ ಮಾನ್ಯ ಸಚಿವರು ಉತ್ತರ ನೀಡುತ್ತಾರೆಂಬ ಭರವಸೆ ನನಗಿದೆ. ಹಾಗಾಗಿ ಈ ವಿಷಯದಲ್ಲಿ ನಾನು ಹೆಚ್ಚೇನೂ ಮಾತನಾಡುವುದಿಲ್ಲ.

ಜೀವ ರಸಾಯನ ಶಾಸ್ತ್ರದ ಪ್ರಾಧ್ಯಾಪಕ ಹುದ್ದೆಗೆ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿದ್ದ ಅಭ್ಯರ್ಥಿಯೊಬ್ಬರನ್ನು ನೇಮಿಸಲಾಗಿತ್ತು. ಆದರೆ ಸರ್ಕಾರ ಅವರ ಸೇವೆಯನ್ನು ಹಠಾತ್ತಾಗಿ ಹಿಂತೆಗೆದುಕೊಂಡಿತು. ಕೆಲವೊಂದು ಷರತ್ತುಗಳ ಮೇಲೆ ನೇಮಕಗೊಂಡಿದ್ದ ಈ ಪ್ರಾಧ್ಯಾಪಕರನ್ನು ಉಳಿಸಿಕೊಳ್ಳಲು ಸಂಸ್ಥೆ ಕಠಿಣ ಹೋರಾಟ ನಡೆಸಿತು. ಸಹಜವಾಗಿಯೇ ಪ್ರಾಧ್ಯಾಪಕರು

---

*1961ರ ಆಗಸ್ಟ್ 16 ರಂದು ರಾಜ್ಯಸಭೆಯಲ್ಲಿ ಶ್ರೀ ಎಂ.ಪಿ.ಭಾರ್ಗವ್ ಅವರು ಮಂಡಿಸಿದ 1960-61 ರ ಸಾಲಿನ ದೆಹಲಿಯ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯ 5ನೇ ವಾರ್ಷಿಕ ವರದಿ ಕುರಿತು ಮಾತನಾಡುತ್ತಾ (ರಾಜ್ಯಸಭೆ, 1961ರ ನವೆಂಬರ್ 28, ಸಿಸಿ 338-341).

ಶುಶ್ರೂಷಾಲಯಗಳು, ನರ್ಸಿಂಗ್ ಹೋಂಗಳು ಸಂಪೂರ್ಣ ಪ್ರತ್ಯೇಕವಾಗಿರಬೇಕೆಂಬ ಡಾ॥ ಗೌರ್ ಅವರ ಅಭಿಪ್ರಾಯವನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಸದ್ಯ ಅವೆರಡನ್ನೂ ನಾವು ಒಂದೇ ಕಟ್ಟಡದಲ್ಲಿ ನಿರ್ವಹಿಸಬೇಕಾಗಿದೆ. ಆದೇ ಕಟ್ಟಡದಲ್ಲಿ ಸಾಧ್ಯವಾದಷ್ಟು ಉತ್ತಮ ರೀತಿಯಲ್ಲಿ ನಾವು ಕಾರ್ಯ ನಿರ್ವಹಿಸಬೇಕಾಗಿದೆ. ಈಗ ನಿರ್ಮಿಸಿರುವ ಕಟ್ಟಡವು ನರ್ಸಿಂಗ್ ಕಾಲೇಜಿಗಾಗಿ ಇರುವಂತಹುದು. ನಾವು ಬಹಳ ಕಠಿಣತೆಗಳನ್ನು ಎದುರಿಸುತ್ತಿದ್ದೇವೆ. ಇಲ್ಲಿ ನಡೆದಿರುವ ಕೆಲಸ ಕಾರ್ಯಗಳಿಗಾಗಿ ಸಂಸ್ಥೆಯ ನಿರ್ದೇಶಕರು ಮತ್ತು ಸಿಬ್ಬಂದಿ ವರ್ಗವನ್ನು ನಾನು ಅಭಿನಂದಿಸಬೇಕಾಗಿದೆ. ಆರೋಗ್ಯ ಸಚಿವರು ಇಲ್ಲಿರುವುದರಿಂದ ಅವರು ಆಗಾಗ ಈ ಸಂಸ್ಥೆಗೆ ಬಂದು ನಾವು ಎದುರಿಸುತ್ತಿರುವ ಕಠಿಣತೆಗಳನ್ನು ಸ್ವತಃ ಪರಾಮರ್ಶಿಸಬೇಕೆಂದು ನಾನು ಅವರನ್ನು ಆಗ್ರಹಪೂರ್ವಕವಾಗಿ ಕೇಳಿಕೊಳ್ಳುತ್ತೇನೆ. ಅವರೊಂದಿಗೆ ಕಳೆದ ನಾಲ್ಕು ವರ್ಷಗಳಿಂದ ಸಾಗಿರುವ ಮಾತುಕತೆಗಳ ನಂತರದಲ್ಲೂ ಸಫ್ದರ್ ಜಂಗ್ ಆಸ್ಪತ್ರೆ ನಿರಾಕರಿಸುತ್ತಿರುವ ಸೌಲಭ್ಯಗಳನ್ನು ನಮಗೆ ಒದಗಿಸಬೇಕೆಂದೂ ನಾನು ಈ ಸಂದರ್ಭದಲ್ಲಿ ಸಚಿವರನ್ನು ಕೇಳಿಕೊಳ್ಳುತ್ತೇನೆ. ಅಲ್ಲಿನ ಕಟ್ಟಡಗಳು ನಮಗಾಗಿಯೇ ನಿರ್ಮಾಣಗೊಂಡವುಗಳಾಗಿವೆ. ಆದರೂ ಅವನ್ನು ನಮಗೆ ನೀಡುತ್ತಿಲ್ಲ. ಅವರು ಅಲ್ಲಿ ವಾರ್ಡ್‌ಗಳನ್ನು ನಿರ್ಮಿಸುತ್ತಿದ್ದಾರೆಯೇ ಹೊರತು ಆ ಕಟ್ಟಡಗಳನ್ನು ಮರಳಿಸುವ ವಿಚಾರವನ್ನೇ ಪ್ರಸ್ತಾಪಿಸುತ್ತಿಲ್ಲ. ಇದು ನ್ಯಾಯಬಾಹಿರ ನಡವಳಿಕೆಯಾಗಿದ್ದು, ಆದಷ್ಟು ಬೇಗನೆ ಇದನ್ನು ಸರಿಪಡಿಸಬೇಕು.

## 12. ಭಾರತೀಯ ವೈದ್ಯಕೀಯ ಮಂಡಳಿ ವಿಧೇಯಕ*

ಭಾರತೀಯ ವೈದ್ಯಕೀಯ ಮಂಡಳಿ ಕಾಯ್ದೆ (1933) ತೀರಾ ಕಾಲದೂಷಿತವಾಗಿರುವುದರಿಂದ ಮತ್ತು ಈ ಕಾಯ್ದೆಗೆ ಅನೇಕ ತಿದ್ದುಪಡಿಗಳು ಅವಶ್ಯವಾಗಿರುವುದರಿಂದ ಕಳೆದ ಕೆಲ ಸಮಯದಿಂದ ಈ ವಿಷಯ ಸರ್ಕಾರದ ತೀವ್ರ ಪರಿಶೀಲನೆಯಲ್ಲಿದೆ.

ಎಲ್ಲಕ್ಕಿಂತ ಮೊದಲಲ್ಲಿ ನಮ್ಮ ದೇಶದಲ್ಲಿ ಇನ್ನೂ ಚಾಲ್ತಿಯಲ್ಲಿರುವ ಪರವಾನಗಿ ಆಧಾರದಲ್ಲಿ ವೈದ್ಯಕೀಯ ವೃತ್ತಿ ನಿರ್ವಹಿಸುತ್ತಿರುವ ಸದಸ್ಯರಿಗೆ ಪ್ರಾತಿನಿಧ್ಯ ಕಲ್ಪಿಸಲು ಈ ತಿದ್ದುಪಡಿ ಅಗತ್ಯವಾಗಿದೆ. ಎರಡನೆಯದಾಗಿ ಈಗ ಅಸ್ತಿತ್ವದಲ್ಲಿರುವ ಕಾಯಿದೆಯಡಿ ಮಾನ್ಯತೆ ಇಲ್ಲದ ವಿದೇಶಗಳ ವೈದ್ಯಕೀಯ ಪದವಿಗಳನ್ನು ಪಡೆದಿರುವ ಭಾರತೀಯ ಪೌರರ ಹೆಸರುಗಳ ನೋಂದಣಿಗೂ ಇದು ಅಗತ್ಯವಾಗಿದೆ. ಮೂರನೆಯದಾಗಿ ವಿದೇಶಗಳ ವೈದ್ಯಕೀಯ ಸಂಸ್ಥೆಗಳಿಂದ ವೈದ್ಯ ಪದವಿ ಪಡೆದವರಿಗೆ ತಾತ್ಕಾಲಿಕವಾಗಿ ಮಾನ್ಯತೆ ನೀಡಲು ಈ ತಿದ್ದುಪಡಿ ಅವಶ್ಯವಾಗಿದೆ. ತರಬೇತಿ ಅಥವಾ ಸಂಶೋಧನೆಯ ಉದ್ದೇಶಕ್ಕಾಗಿ ನಮ್ಮಲ್ಲಿನ ಯಾವುದೇ ವೈದ್ಯಕೀಯ ಸಂಸ್ಥೆಗಳು ಅಥವಾ ಯಾವುದೇ ದತ್ತಿ ಸಂಸ್ಥೆಗಳೊಂದಿಗೆ ಸೇರ್ಪಡೆಗೊಂಡಿರುವ ವೈದ್ಯಕೀಯ ಸಿಬ್ಬಂದಿಗೂ ಇದು ಅನ್ವಯವಾಗುತ್ತದೆ. ನಾಲ್ಕನೆಯದಾಗಿ ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣಕ್ಕಾಗಿ ಸಮಿತಿಯೊಂದನ್ನು ರಚಿಸಲೂ ಇದು ಅತ್ಯವಶ್ಯಕವಾಗಿದೆ. ವಿಶ್ವ ವಿದ್ಯಾನಿಲಯಗಳಿಗೆ ಮಾರ್ಗದರ್ಶನ ನೀಡಲು, ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣದ ಮಟ್ಟವನ್ನು ನಿರ್ಧರಿಸಲು ಹಾಗೂ ದೇಶಾದ್ಯಂತ ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣದಲ್ಲಿ ಏಕರೂಪತೆ ಕಾಯ್ದುಕೊಳ್ಳುವ ನಿಟ್ಟಿನಲ್ಲಿ ವಿಶ್ವವಿದ್ಯಾಲಯಗಳಿಗೆ ಸಲಹೆ ನೀಡಲೂ ಇದು ಸಹಾಯಕವಾಗಲಿದೆ. ಭಾರತೀಯ ವೈದ್ಯಕೀಯ ಮಂಡಳಿ ಮಾನ್ಯತೆ ಪಡೆದ ವೈದ್ಯಕೀಯ ಪದವಿಗಳನ್ನು ಹೊಂದಿರುವ ಎಲ್ಲ ವೈದ್ಯರ ಹೆಸರುಗಳನ್ನು ಒಳಗೊಂಡಿರುವ ಅಖಿಲ ಭಾರತ ದಾಖಲಾತಿಗೂ ಈ ಕಾಯ್ದೆ ಅಗತ್ಯವಾಗುತ್ತದೆ.

ನಾನೀಗಾಗಲೇ ಹೇಳಿರುವಂತೆ ಬಹಳ ಸಮಯದಿಂದ ಈ ಕಾಯ್ದೆಗೆ ತಿದ್ದುಪಡಿ ತರುವ ವಿಚಾರ ನಮ್ಮ ಮುಂದಿತ್ತು. ಸಹಜವಾಗಿಯೇ ಈ ವಿಷಯದಲ್ಲಿ ಎಲ್ಲ ರಾಜ್ಯಗಳೊಂದಿಗೆ ವಿಚಾರ [illegible] ಮಾಡಬೇಕಾಗಿತ್ತು. ಅವರ ಶಿಫಾರಸುಗಳನ್ನು ಪಡೆಯಲು ನಾನು ಸ್ವಲ್ಪ ಸಮಯ [illegible] ಅಖಿಲ ಭಾರತ ವೈದ್ಯಕೀಯ ಮಂಡಳಿಯೊಂದಿಗೆ ನಾನು [illegible] ಬೇಕಿತ್ತು. [illegible] ನಾನು ಭಾರತೀಯ ವೈದ್ಯಕೀಯ ಸಂಸ್ಥೆಯೊಂದಿಗೆ ಮತ್ತು ದೇಶದಲ್ಲಿನ ವೈದ್ಯಕೀಯ [illegible] ಸಂಸ್ಥೆಗಳೊಂದಿಗೆ ಸಮಾಲೋಚಿಸಬೇಕಿತ್ತು.

ಪರವಾನಗಿ ಪದ್ಧತಿಯಲ್ಲಿ ವೈದ್ಯಕೀಯ ವೃತ್ತಿಯನ್ನು ನಡೆಸುತ್ತಿದ್ದ ವೈದ್ಯರು ತಮಗೆ ಭಾರತೀಯ ವೈದ್ಯಕೀಯ ಮಂಡಳಿ ಕಾಯ್ದೆ ಮೇರೆಗೆ ಮಾನ್ಯತೆ ದೊರಕಬೇಕೆಂದು ಚಳವಳಿಯನ್ನು ಹೂಡಿದ್ದರು. ಈಗ ಅವರಿಗೆ ವಿವಿಧ ರಾಜ್ಯಗಳ ವೈದ್ಯಕೀಯ ಕಾಯ್ದೆಗಳ ಮಾನ್ಯತೆ ಮಾತ್ರವೇ ಇರುವುದರಿಂದ ಅವರ ಮನವಿ ನ್ಯಾಯಯುತವಾಗಿದೆ ಎಂದು ನಾನು ಭಾವಿಸುತ್ತೇನೆ. ಹೀಗಾಗಿ

---

*" ರಾಜ್ಯಸಭೆ ಅಂಗೀಕರಿಸಿರುವ ಭಾರತೀಯ ವೈದ್ಯಕೀಯ ಮಂಡಲಿ ವಿಧೇಯಕವನ್ನು ಪರಿಶೀಲಿಸಬೇಕೆಂದು" ಕೋರಿ ನಿರ್ಣಯ ಮಂಡಿಸುತ್ತಾ (ಲೋಕಸಭೆ ಚರ್ಚೆ 1956ರ ಡಿಸೆಂಬರ್ 10, ಸಿಸಿ 2329-35, 2351-52, 2365-77 ಮತ್ತು 2404-17).

ನಾವು ಇದೀಗ ಸದನದ ಮುಂದಿಟ್ಟಿರುವ ತಿದ್ದುಪಡಿ ವಿಧೇಯಕದನ್ವಯ ಇಂತಹ ವೈದ್ಯರ ವಿದ್ಯಾರ್ಹತೆಗಳಿಗೆ ಮಾನ್ಯತೆ ನೀಡಲು ಉದ್ದೇಶಿಸಿದ್ದೇವೆ.

ಇದೀಗ ಅಸ್ತಿತ್ವದಲ್ಲಿರುವ ಕಾಯ್ದೆಯನ್ವಯ ಮಾನ್ಯತೆ ಇಲ್ಲದಿರುವ ವಿದೇಶೀ ವೈದ್ಯಕೀಯ ಪದವಿಗಳು ನಮ್ಮಲ್ಲಿ ಭಾರೀ ದೊಡ್ಡ ಸಂಖ್ಯೆಯಲ್ಲಿವೆ. ಈ ಪದವಿಗಳಿಗೆ ಪರಸ್ಪರ ಒಡಂಬಡಿಕೆ ಆಧಾರದಲ್ಲಿ ಮಾನ್ಯತೆ ನೀಡುವ ಸಂಬಂಧದಲ್ಲಿ ಭಾರತೀಯ ವೈದ್ಯ ಮಂಡಳಿ ಯಶಸ್ಸು ಕಾಣದಿರುವುದರಿಂದ ಭಾರತೀಯ ಪೌರರಲ್ಲಿ ಅಥವಾ ವಿದೇಶಿಯರಲ್ಲಿ ಅಂತಹವರ ವಿದ್ಯಾರ್ಹತೆಗಳಿಗೆ ಮಾನ್ಯತೆ ನೀಡುವುದು ಅಗತ್ಯ ಎಂಬ ಅಭಿಪ್ರಾಯಕ್ಕೆ ಬರಲಾಯಿತು. ಬೋಧನೆ, ಸಂಶೋಧನೆ ಮತ್ತು ಸೇವಾ ಯೋಜನೆಗಳಿಗೆ ಮೀಸಲಾದ ದೇಶದಲ್ಲಿನ ಯಾವುದೇ ವೈದ್ಯಕೀಯ ಸಂಸ್ಥೆಗಳಲ್ಲಿ ಹುದ್ದೆಗಳಿಗೆ ನೇಮಕ ಮಾಡುವಾಗ ಇಂತಹ ಮಾನ್ಯತೆ ಬೇಕಾಗುತ್ತದೆ. ವಿಶೇಷ ವಿದ್ಯಾರ್ಹತೆಗಳನ್ನು ಹೊಂದಿರುವ ವಿದೇಶಿಯರ ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ-ಬೋಧನೆಗಾಗಿ, ಸಂಶೋಧನೆಗಾಗಿ-ಅಥವಾ ಯಾವುದೇ ಸೇವಾ ಸಂಸ್ಥೆಯಲ್ಲಿ ಕೆಲಸ ಮಾಡಲು-ಭಾರತಕ್ಕೆ ಕರೆತಂದಾಗ ನಾವು ಅವರಿಗೆ ಕೆಲವೊಂದು ಷರತ್ತುಗಳನ್ನು ವಿಧಿಸುತ್ತೇವೆ. ಖಾಸಗಿ ವರಮಾನಕ್ಕಾಗಿ ಪ್ರಾಕ್ಟೀಸ್ ಮಾಡಲು ಅವರಿಗೆ ಅನುಮತಿ ನೀಡುವುದಿಲ್ಲ ಮತ್ತು ಭಾರತೀಯ ವೈದ್ಯಕೀಯ ಮಂಡಳಿಯ ಜೊತೆ ಸಮಾಲೋಚನೆ ನಡೆಸಿ ಭಾರತ ಸರ್ಕಾರ ನಿರ್ದಿಷ್ಟಪಡಿಸಿದ ಅವಧಿಗೆ ಮಾತ್ರ ಅವರು ಇಲ್ಲಿ ನೆಲೆಸುವರು. ಅಂಥವರ ಸೇವೆಯು ಅವರವರ ಸಂಸ್ಥೆಗಳಿಗೆ ಮಾತ್ರವೆ ಸೀಮಿತವಾಗಿರುವುದು ಮತ್ತು ಅವರು ಆಯಾ ಸಂಸ್ಥೆಗಳ ಉದ್ಯೋಗಿಗಳಾಗಿ ಇರುವವರೆಗೆ ಮಾತ್ರವೆ ಅದು ಮುಂದುವರಿಯುವುದು.

ಇದೀಗ ಅಸ್ತಿತ್ವದಲ್ಲಿರುವ ಪ್ರಸಕ್ತ ಕಾಯ್ದೆಯು ಭಾರತೀಯ ವೈದ್ಯ ಮಂಡಳಿಗೆ ಸ್ನಾತಕೋತ್ತರ ಪದವಿ ಶಿಕ್ಷಣ ಮಟ್ಟವನ್ನು ನಿರ್ದಿಷ್ಟವಾಗಿ ಸೂಚಿಸಲು ಅವಕಾಶ ನೀಡುವುದಿಲ್ಲ. ಈ ಉದ್ದೇಶಕ್ಕಾಗಿ ಭಾರತ ಸರ್ಕಾರವು ಕಾರ್ಯಾಂಗದ ಆದೇಶವೊಂದರ ಮೂಲಕ ಸ್ನಾತಕೋತ್ತರ ಶಿಕ್ಷಣಕ್ಕಾಗಿ ಅಖಿಲ ಭಾರತ ಮಂಡಳಿಯೊಂದನ್ನು ರಚಿಸಿತು ಮತ್ತು ಅದು ಕೆಲಕಾಲ ಈ ಕಾರ್ಯವನ್ನು ನಿರ್ವಹಿಸಿತು. ಆದರೆ ಸ್ನಾತಕೋತ್ತರ ಸಮಿತಿ ಮತ್ತು ಭಾರತೀಯ ವೈದ್ಯಕೀಯ ಮಂಡಳಿಗಳೆರಡೂ ಏಕಕಾಲದಲ್ಲಿ ಸಂಸ್ಥೆಗಳ ತಪಾಸಣೆ ನಡೆಸುತ್ತಿದ್ದರಿಂದ ಅವುಗಳ ಕಾರ್ಯನಿರ್ವಹಣೆಯಲ್ಲಿ ಪುನರಾವರ್ತನೆಯಾಗುತ್ತಿತ್ತು. ಅದಕ್ಕಾಗಿ ಇದೀಗ ತರುತ್ತಿರುವ ತಿದ್ದುಪಡಿ ವಿಧೇಯಕದಲ್ಲಿ ಅಖಿಲ ಭಾರತ ವೈದ್ಯಕೀಯ ಮಂಡಳಿಯ ಸಂಪೂರ್ಣ ಸಹಮತದೊಂದಿಗೆ ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣದ ಮಟ್ಟವನ್ನು ಸೂಚಿಸುವ ಕಾರ್ಯವನ್ನೂ ಮತ್ತು ಅಂತಹ ಏಕರೂಪದ ಶಿಕ್ಷಣ ಮಟ್ಟವನ್ನು ನಿಷೇಧಿಸುವ ಕಾರ್ಯಭಾರವನ್ನು ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣ ಸಮಿತಿಗೆ ಒಪ್ಪಿಸಲು ಸೂಚಿಸಲಾಗಿದೆ. ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣ ಸಮಿತಿಯು ಸ್ನಾತಕೋತ್ತರ ವೈದ್ಯಕೀಯ ಅರ್ಹತೆ ಹೊಂದಿರುವ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಪರಿಣತಿ ಸಾಧಿಸಿರುವವರು ಹಾಗೂ ಸ್ನಾತಕೋತ್ತರ ವೈದ್ಯಕೀಯ ವಿದ್ಯಾರ್ಥಿಗಳನ್ನು ಪರೀಕ್ಷಿಸುವುದರಲ್ಲಿ ಅನುಭವ ಗಳಿಸಿರುವ ಭಾರತೀಯ ವೈದ್ಯಕೀಯ ಮಂಡಳಿಯ ಸದಸ್ಯರನ್ನು ಒಳಗೊಂಡಿರುವುದು. ವೈದ್ಯಕೀಯ ವೃತ್ತಿಯಲ್ಲಿ ಇರುವವರ ಮತ್ತು ಅದರಲ್ಲೂ ಕುರಿತಾಗಿ ಪರವಾನಗಿ ಪದ್ಧತಿಯಲ್ಲಿ ವೈದ್ಯಕೀಯ ವೃತ್ತಿ ನಿರ್ವಹಿಸುವವರ ಪ್ರಮುಖ ದೂರುಗಳಲ್ಲಿ ಒಂದೆಂದರೆ ಅಖಿಲ ಭಾರತ ವೈದ್ಯಕೀಯ ದಾಖಲಾತಿ

ಇದ್ದುದರಿಂದ ಮತ್ತು ಅಂತಹ ವಿದ್ಯಾರ್ಥಿಯ ದಾಖಲಾತಿಯನ್ನು ಸಿದ್ಧಪಡಿಸಿ ಇಟ್ಟುಕೊಳ್ಳುವ ಅಗತ್ಯ. ನಮ್ಮ ವೈದ್ಯಕೀಯ ದಾಖಲಾತಿ ಪುಸ್ತಕದಲ್ಲಿ ನೋಂದಣಿ ಹೊಂದಿರುವ ಎಲ್ಲ ವೈದ್ಯರ ಹೆಸರುಗಳನ್ನು ಈ ರಿಜಿಸ್ಟರ್ ದಾಖಲಿಸಬೇಕೆಂಬುದು ಅವರ ಬೇಡಿಕೆಯಾಗಿತ್ತು. ನಾನು ಈಗಾಗಲೇ ಹೇಳಿರುವಂತೆ ರಾಜ್ಯಗಳು ತಮ್ಮದೇ ಆದ ರಿಜಿಸ್ಟರ್‌ಗಳನ್ನು ಹೊಂದಿವೆ. ಆದರೆ ಅಂತಹ ಅಖಿಲ ಭಾರತ ದಾಖಲಾತಿ ಇಲ್ಲವಾಗಿದೆ. ಈದಿಗ ಅಖಿಲ ಭಾರತ ವೈದ್ಯಕೀಯ ಮಂಡಳಿಯು ಅಂತಹ ಅಖಿಲ ಭಾರತ ರಿಜಿಸ್ಟರ್‌ನ್ನೊಂದನ್ನು ಸಿದ್ಧಗೊಳಿಸಿ ಅದನ್ನು ಕಾಯ್ದುಕೊಂಡು ಬಂದಿದೆ. ಇದು ಸರಿಯಾದ ದಿಕ್ಕಿನಲ್ಲಿ ಇಡುತ್ತಿರುವ ಹೆಜ್ಜೆ ಎಂಬುದು ನನ್ನ ದೃಢ ನಂಬಿಕೆಯಾಗಿದೆ. ಅದೇ ವೇಳೆಗೆ ಈ ಕಾಯ್ದೆಗೆ ಇದ್ದ ಹಲ ತಿದ್ದುಪಡಿಗಳನ್ನು ತಂದು ಈ ಅವಕಾಶಗಳನ್ನು ಬಳಸಿಕೊಳ್ಳಲಾಗಿದೆ. ಸುಧಾರಣೆಗೆ ರಾಜ್ಯಗಳ ಕೌನ್ಸಿಲ್ ಸಂಘಟನೆಯ ಕಾರಣದಿಂದಾಗಿ ಕೆಲವೊಂದು ತಿದ್ದುಪಡಿಗಳನ್ನು ಸೂಚಿಸಲಾಗಿದೆ. ಅವುಗಳ ರಾಜ್ಯಸಭೆಯಲ್ಲಿ ಅಂಗೀಕಾರ ಪಡೆದಿರುವ ಕೆಲವೊಂದು ತಿದ್ದುಪಡಿಗಳನ್ನು ಸ್ವೀಕರಿಸಲಾಗಿದೆ. ಈ ತಿದ್ದುಪಡಿಗಳಲ್ಲಿ ಕೆಲವನ್ನು ನಾನೇ ಇಂದು ಅಧಿಕೃತವಾಗಿ ಮಂಡಿಸುತ್ತಿದ್ದೇನೆ.

ಪರಂಪರಾಗತ ಆಧಾರದಲ್ಲಿ ವೈದ್ಯ ವೃತ್ತಿಯನ್ನು ನಡೆಸುತ್ತಿರುವ ವೈದ್ಯರಲ್ಲಿ ತಮಗೆ ನ್ಯಾಯಯುತವಾಗಿ ಸಲ್ಲಬೇಕಾಗಿರುವುದು ಸಂದಿಲ್ಲ ಎಂಬ ಕಲ್ಪನೆ ಹುಟ್ಟಿದ ಅಸಮಾಧಾನ ಇದೆ-ಅಂದರೆ ವೈದ್ಯಕೀಯ ಪದವೀಧರರಿಗೆ ಸರಿಯಾದ ಸ್ಥಾನಮಾನ- ಎಂ.ಬಿ.ಬಿ.ಎಸ್.ಪದವಿ ಇತರ ವೈದ್ಯಕೀಯ ಪದವಿಗಳಿಗಿಂತ ಪರಂಪರಾಗತ ವೈದ್ಯರ ವಿದ್ಯಾರ್ಹತೆ ಕಡಿಮೆ ಎಂಬ ಅಂಶವನ್ನು ನಾನು ಸದನದ ಗಮನಕ್ಕೆ ತರಲು ಬಯಸುತ್ತೇನೆ. ವೈದ್ಯಕೀಯ ಪದವಿ ಶಿಕ್ಷಣದ ಮಟ್ಟವನ್ನು ನಿರ್ಧರಿಸಲು ವೈದ್ಯಕೀಯ ಮಂಡಳಿಯನ್ನು ರಚಿಸಲಾಗಿದೆ. ಹೀಗಿರುವಾಗ ಈ ಮಂಡಳಿಯನ್ನು ವೈದ್ಯಕೀಯ ಪದವೀಧರರಷ್ಟೇ ಸಂಖ್ಯೆಯ ಪರಂಪರಾಗತ ಪದ್ಧತಿಯ ವೈದ್ಯರು ಇರಬೇಕೆಂದು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ ಪರಂಪರಾಗತ ಪದ್ಧತಿಯ ವೈದ್ಯರಿಗೆ ಬೋಧನೆಯಲ್ಲಾಗಲಿ, ವೈದ್ಯಕೀಯ ಪರೀಕ್ಷೆಯಲ್ಲಾಗಲಿ ಯಾವುದೇ ರೀತಿಯ ಅನುಭವ ಇರುವುದಿಲ್ಲ ಮತ್ತು ಆ ಮಟ್ಟದ ಶಿಕ್ಷಣ ಇರುವುದಿಲ್ಲ. ಆದರೂ ವೈದ್ಯಕೀಯ ಮಂಡಳಿಯಲ್ಲಿ ನಾವು ಅವರಿಗೆ ಏಳು ಸ್ಥಾನಗಳನ್ನು ನೀಡಿದ್ದು, ಅದರಿಂದ ಅವರಿಗೆ ಸಮಾಧಾನವಾಗಿರಬೇಕೆಂದು ಭಾವಿಸಿದ್ದೇನೆ. ಈಚೆಗೆ ನಾನು ಅವರನ್ನು ಭೇಟಿಯಾಗಿ ಮಾತನಾಡಿದಾಗ ಈ ವ್ಯವಸ್ಥೆ ಮಾಡಿರುವುದಕ್ಕಾಗಿ ಅವರು ಕೃತಜ್ಞತೆ ಸೂಚಿಸಿದ್ದಾರೆ.

ವೈದ್ಯಕೀಯ ಪದವೀಧರರಿಗಾಗಿ ಇರುವ ದಾಖಲಾತಿ ಪುಸ್ತಕದಲ್ಲಿ ತಮ್ಮ ಹೆಸರುಗಳನ್ನು ಸೇರಿಸಿಲ್ಲ ಎಂಬುದು ಅವರ ಇನ್ನೊಂದು ದೂರಾಗಿದೆ. ನನಗೆ ಇರುವುದು ಇಷ್ಟೇ. ನಮ್ಮ ವೈದ್ಯಕೀಯ ಪದವೀಧರರು ಸ್ನಾತಕೋತ್ತರ ಅಧ್ಯಯನಗಳಿಗಾಗಿ ವಿದೇಶಗಳಿಗೆ ಹೋಗಬಯಸುತ್ತಾರೆ. ಆದರೆ ಪರಂಪರಾಗತ ವೈದ್ಯ ವೃತ್ತಿಗಾಗಿ ಪಡೆದುಕೊಳ್ಳುವ ಪದವಿಗಳಿಗೆ ವಿದೇಶಗಳಲ್ಲಿ ಮಾನ್ಯತೆ ಇಲ್ಲ. ಹಾಗಾಗಿ ಸ್ನಾತಕೋತ್ತರ ಅಧ್ಯಯನಕ್ಕಾಗಿ ವಿದೇಶಗಳಿಗೆ ಹೋಗುವ ವೈದ್ಯಕೀಯ ಪದವೀಧರರಿಗೆ ತೊಂದರೆಯಾಗದಂತೆ ವೈದ್ಯಕೀಯ ಪದವೀಧರರು ಮತ್ತು ಪರಂಪರಾಗತ ವೈದ್ಯರನ್ನು ಪ್ರತ್ಯೇಕ ಯಾದಿಗಳಲ್ಲಿ ವರ್ಗೀಕರಿಸಲಾಗಿದೆ. ಆದರೆ ಅಖಿಲ ಭಾರತ ಮಟ್ಟದಲ್ಲಿ ವೈದ್ಯರಿಗಾಗಿ ಒಂದೇ ದಾಖಲಾತಿ ವ್ಯವಸ್ಥೆಯನ್ನು ಹೊಂದಿರಲು ಉದ್ದೇಶಿಸಲಾಗಿದ್ದು, ಅದರಲ್ಲಿ ಪದವೀಧರರ ಹೆಸರಿನ ಜೊತೆಯಲ್ಲೇ ಪರಂಪರಾಗತ ವೈದ್ಯರ ಹೆಸರುಗಳನ್ನು

ಸೇರಿಸಲಾಗುವುದೆಂದು ನಾವು ಪರವಾನಗಿ ವೈದ್ಯರಿಗೆ ಭರವಸೆ ನೀಡಿದ್ದೇವೆ. ಈ ಎಲ್ಲಾ ರಿಯಾಯ್ತಿಗಳಿಂದ ಪರವಾನಗಿ ವೈದ್ಯರು ಸಂಪೂರ್ಣ ಸಂತೃಪ್ತರಾಗಿದ್ದಾರೆಂದು ನಾನು ನಂಬುತ್ತೇನೆ.

ವೈದ್ಯಕೀಯ ಪದವಿಗಳಿಗೆ ಮಾನ್ಯತೆ ನೀಡುವ ವಿಷಯದಲ್ಲಿ ವಿದೇಶಗಳಲ್ಲಿನ ಅನೇಕ ವೈದ್ಯಕೀಯ ಸಂಸ್ಥೆಗಳೊಂದಿಗೆ ಪರಸ್ಪರ ಒಡಂಬಡಿಕೆ ಇಲ್ಲದಿರುವುದರಿಂದ ಪದವೀಧರ ಅಥವಾ ಸ್ನಾತಕೋತ್ತರ ವೈದ್ಯಕೀಯ ವ್ಯಾಸಂಗಕ್ಕಾಗಿ ವಿದೇಶಗಳಿಗೆ ಹೋಗುವ ನಮ್ಮ ಯುವಕ-ಯುವತಿಯರ ಹೆಸರುಗಳನ್ನು ಈ ದಾಖಲೆ ಪುಸ್ತಕದಲ್ಲಿ ನಮೂದಿಸಲು ನಮಗೆ ಸಾಧ್ಯವಾಗುತ್ತಿಲ್ಲ. ನನ್ನ ನೆನಪು ಸರಿಯಾಗಿದ್ದರೆ, ಕಾಮನ್‌ವೆಲ್ತ್ ರಾಷ್ಟ್ರಗಳನ್ನು ಬಿಟ್ಟರೆ ಇತರೆ ಯಾವ ರಾಷ್ಟ್ರಗಳೊಂದಿಗೂ ನಾವು ಇಂತಹ ಒಡಂಬಡಿಕೆಗಳನ್ನು ಹೊಂದಿಲ್ಲ. ಆದರೂ ಈ ವಿಷಯದಲ್ಲಿ ಪದವೀಧರರಿಗೆ ಅನ್ಯಾಯವಾಗುವುದು ಸರಿಯಲ್ಲ. ವಿದೇಶಿ ಪದವಿಗಳನ್ನು ಪಡೆದ ಭಾರತೀಯರ ಮೇಲೆ ಈ ನಿಷೇಧ ಇರಬಾರದು. ಈ ಪದವೀಧರರು ಭಾರತೀಯ ಪೌರರೇ ಆಗಿದ್ದು, ನಮ್ಮ ದೇಶದ ದಾಖಲಾತಿ ವ್ಯವಸ್ಥೆಯಲ್ಲಿ ಅವರ ಹೆಸರುಗಳ ನೋಂದಾವಣೆಗೆ ನಿಷೇಧ ಹೇರುವುದು ನ್ಯಾಯಬಾಹಿರವಾಗಿದೆ. ಈ ಸಂಬಂಧದಲ್ಲಿಯೂ ಕಾಯ್ದೆಯಲ್ಲಿ ತಿದ್ದುಪಡಿಗೆ ಅವಕಾಶ ಕಲ್ಪಿಸಲಾಗಿದೆ. ಮಾನ್ಯ ಸದಸ್ಯರು ಈ ತಿದ್ದುಪಡಿಗಳನ್ನು ಅನುಮೋದಿಸುತ್ತಾರೆ ಎಂದು ನಾನು ಭಾವಿಸುತ್ತೇನೆ. ಇನ್ನು ವಿದೇಶಗಳ ವೈದ್ಯಕೀಯ ಸಂಸ್ಥೆಗಳು ನೀಡುವ ವೈದ್ಯ ಪದವಿಗಳಿಗೆ ತಾತ್ಕಾಲಿಕ ಮಾನ್ಯತೆ ನೀಡುವ ವಿಷಯಕ್ಕೆ ಬರೋಣ. ನಮ್ಮ ದೇಶದ ವೈದ್ಯಕೀಯ ಸಂಸ್ಥೆಗಳಿಗೆ ಬೋಧಕರಾಗಿ ಬರುವ ಅಥವಾ ಸಂಶೋಧಕರಾಗಿ ಬರುವ ಅಥವಾ ಸೇವಾ ಯೋಜನೆಗಳಲ್ಲಿ ಕಾರ್ಯ ನಿರ್ವಹಿಸುವ ಸಲುವಾಗಿ ಬರುವ ವಿದೇಶಿಯರಿಗಷ್ಟೇ ಈ ತಾತ್ಕಾಲಿಕ ಮಾನ್ಯತೆಯ ವಿಧಿ ಅನ್ವಯಿಸುತ್ತದೆ ಎಂದು ನಾವು ಅವರಿಗೆ ಹೇಳಿದ್ದೇವೆ. ಅದರಲ್ಲೂ ಅಖಿಲ ಭಾರತ ವೈದ್ಯಕೀಯ ಮಂಡಳಿಯೊಂದಿಗೆ ಸಮಾಲೋಚಿಸಿ ಸರಕಾರವು ನಿಯಮಿತ ಅವಧಿಗೆ ಬರಮಾಡಿಕೊಳ್ಳುವ ವಿದೇಶಿಯರಿಗಷ್ಟೇ ಈ ನಿಬಂಧನೆ ಅನ್ವಯವಾಗುವುದು. ಅಂತಹ ವಿದೇಶಿಯರು ಮತ್ತು ನಮ್ಮಲ್ಲಿನ ವೈದ್ಯರುಗಳ ನಡುವೆ ಯಾವುದೇ ರೀತಿಯ ಸ್ಪರ್ಧೆ ಏರ್ಪಡುವುದನ್ನು ತಪ್ಪಿಸುವ ಸಲುವಾಗಿ ಅಂಥವರು ಖಾಸಗಿ ಪ್ರಾಕ್ಟೀಸ್ ಮಾಡದಂತೆ ಅಥವಾ ಯಾವುದೇ ಖಾಸಗಿ ವರಮಾನ ಬರುವ ಕೆಲಸದಲ್ಲಿ ತೊಡಗದಂತೆ ಅವರ ಮೇಲೆ ನಿರ್ಬಂಧ ವಿಧಿಸುವ ನಿಬಂಧನೆಗಳನ್ನು ಕಾಯ್ದೆಯಲ್ಲಿ ನಾವು ಸೇರಿಸಲಿದ್ದೇವೆ.

ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣದ ಮಟ್ಟವನ್ನು ನಿರ್ಧರಿಸಲು ಸಮಿತಿಯೊಂದನ್ನು ರಚಿಸುವ ಬಗ್ಗೆ ನಾನು ಈಗಾಗಲೇ ಮಾತನಾಡಿದ್ದೇನೆ. ತಿದ್ದುಪಡಿಗಳ ವಿಷಯದಲ್ಲಿ ಹೇಳುವುದಾದರೆ ನಾನು ಈ ವಿಧೇಯಕವನ್ನು ಅಖಿಲ ಭಾರತ ವೈದ್ಯಕೀಯ ಮಂಡಳಿಯ ಅಭಿಪ್ರಾಯ ಪಡೆಯುವ ಸಲುವಾಗಿ ಸದಸ್ಯರಿಗೆ ರವಾನಿಸಿದ ನಂತರದಲ್ಲಿ ಶೇ. 98ರಷ್ಟು ತಿದ್ದುಪಡಿಗಳು ಬಂದಿವೆ ಎಂಬುದನ್ನು ಸದನದ ಗಮನಕ್ಕೆ ತರಲು ಬಯಸುತ್ತೇನೆ. ನಮ್ಮಲ್ಲಿ ಅಭಿಪ್ರಾಯ ಭೇದವಿದ್ದು ಮತ್ತು ಸರಕಾರವು ಸುಲಭವಾಗಿ ಒಪ್ಪಲು ಸಾಧ್ಯವಿಲ್ಲದ ಒಂದೇ ಒಂದು ಪ್ರಶ್ನೆ ಎಂದರೆ ಮೇಲ್ಮನವಿಗಳಿಗೆ ಸಂಬಂಧಿಸಿದ್ದು ಮನವಿಗಳು ರಾಜ್ಯ ಮಂಡಳಿಗಳಿಂದ ರಾಜ್ಯ ಸರ್ಕಾರಕ್ಕೆ ಬರಬೇಕು. ರಾಜ್ಯ ಸರ್ಕಾರಗಳಿಂದ ಅದು ಕೇಂದ್ರ ಸರ್ಕಾರಕ್ಕೆ ಬರಬೇಕು. ಅನಂತರ ಕೇಂದ್ರ ಸರ್ಕಾರವು ಅಖಿಲ ಭಾರತ ವೈದ್ಯಕೀಯ ಮಂಡಳಿಯೊಂದಿಗೆ

ಸಮಾಲೋಚಿಸಬೇಕು. ಈ ವಿಷಯದಲ್ಲಿ ಕೇಂದ್ರ ಸರ್ಕಾರವು ಯಾವುದೇ ನಿರ್ಧಾರಕ್ಕೆ ಬರುವ ಮೊದಲು ಕಾನೂನು ತಜ್ಞರೊಡನೆ ಸಮಾಲೋಚನೆ ನಡೆಸುವುದು ಎಂದು ನಾನು ಈಗಾಗಲೇ ರಾಜ್ಯ ಸಭೆಗೆ ತಿಳಿಸಿದ್ದೇನೆ.

ಇವಿಷ್ಟು ಮುಖ್ಯಾಂಶಗಳು. ಈ ವಿಷಯದಲ್ಲಿ ನಾವು ಭಾರತೀಯ ವೈದ್ಯಕೀಯ ಸಂಸ್ಥೆಯೊಂದಿಗೆ ಸಮಾಲೋಚನೆ ನಡೆಸಿದ್ದೇವೆ. ರಾಜ್ಯಗಳಿಗೆ ಸಂಬಂಧಪಟ್ಟಂತೆ ಹೇಳುವುದಾದರೆ ವಿಧೇಯಕ ಕುರಿತು ಈಗಾಗಲೇ ಅವುಗಳ ಅಭಿಪ್ರಾಯಗಳನ್ನು ಪಡೆದುಕೊಂಡಿದ್ದೇವೆ. ಈ ವಿಧೇಯಕವನ್ನು ಮೊಟ್ಟಮೊದಲಿಗೆ 1955ರ ಮೇ ತಿಂಗಳಲ್ಲಿ ಮಂಡಿಸಲಾಯಿತು. ಅದನ್ನು ಅಭ್ಯಸಿಸಲು ಸದಸ್ಯರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಲಾಯಿತು. ಆದರೆ ಯಾವೊಂದು ತಿದ್ದುಪಡಿಯೂ ಸೂಚಿಸಲ್ಪಟ್ಟಿಲ್ಲ. ರಾಜ್ಯಸಭೆಯಲ್ಲಿ ಸೂಚಿಸಲ್ಪಟ್ಟು ಅಂಗೀಕೃತವಾದ ಕೆಲವು ತಿದ್ದುಪಡಿಗಳು ಇದೀಗ ಮಂಡಿಸಿರುವ ವಿಧೇಯಕದಲ್ಲಿ ಒಳಗೊಂಡಿವೆ. ನವೆಂಬರ್ ತಿಂಗಳ ಆರಂಭದಲ್ಲಿ ವೈದ್ಯಕೀಯ ಮಂಡಳಿ ಮತ್ತೆ ಕೆಲವು ಅಂಶಗಳನ್ನು ಮುಂದಿಟ್ಟಿತು. ಈ ಆಕ್ಷೇಪಗಳು ಬಹಳ, ಬಹಳ ತಡವಾಗಿ ಬಂದಿದ್ದರೂ ಕೂಡಾ ನಾವು ಈ ವಿಷಯವನ್ನು ಕೈಗೆತ್ತಿಕೊಂಡು ವೈದ್ಯಕೀಯ ಮಂಡಳಿಯ ಅಧ್ಯಕ್ಷ ಡಾ|| ಬಿ.ಸಿ.ರಾಯ್ ಅವರನ್ನು ಕರೆದು ಸಭೆಯೊಂದನ್ನು ಏರ್ಪಡಿಸಿದೆವು. ಪ್ರಧಾನ ಮಂತ್ರಿಯವರೂ ಸಭೆಯಲ್ಲಿ ಉಪಸ್ಥಿತರಿದ್ದರು. ಈ ಸಭೆಯಲ್ಲಿ ನಾವು ವಿಧೇಯಕದ ಒಂದೊಂದು ವಿಧಿಯನ್ನೂ ಸಮಗ್ರವಾಗಿ ಪರಾಮರ್ಶಿಸಿದೆವು. ನಂತರ ಒಂದು ಒಪ್ಪಂದಕ್ಕೆ ಬಂದು ಇದೀಗ ಈ ಅಧಿಕೃತ ತಿದ್ದುಪಡಿಗಳನ್ನು ಮಂಡಿಸುತ್ತಿದ್ದೇವೆ. ಇದು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಮತ್ತು ಅಖಿಲ ಭಾರತ ವೈದ್ಯಕೀಯ ಮಂಡಳಿಗಳ ನಡುವಣ ಏಕಾಭಿಪ್ರಾಯದ ಒಪ್ಪಂದವಾಗಿದೆ. ಅಧಿಕೃತ ತಿದ್ದುಪಡಿಗಳೊಂದಿಗೆ ಇದೀಗ ನಾವು ಮಂಡಿಸಿರುವ ಈ ವಿಧೇಯಕವನ್ನು ಸದನ ಸಂಪೂರ್ಣವಾಗಿ ಅಂಗೀಕರಿಸುತ್ತಿದೆ ಎಂದು ನಂಬಿದ್ದೇನೆ.

ಈ ವಿಧೇಯಕದ ಬಗ್ಗೆ ಸಾಕಷ್ಟು ಸುದೀರ್ಘ ಚರ್ಚೆ ನಡೆದಿರುವುದಕ್ಕೆ ನನಗೆ ಸಂತಸವಾಗಿದೆ. ವೈದ್ಯಕೀಯ ಶಿಕ್ಷಣದಲ್ಲಿ ಆಸಕ್ತಿ ವಹಿಸುತ್ತಿರುವ ಸದನದ ಮಾನ್ಯ ಸದಸ್ಯರು ನೀಡಿರುವ ಎಲ್ಲ ಸಲಹೆಗಳಿಗೆ ನಾನು ಕೃತಜ್ಞಳಾಗಿದ್ದೇನೆ. ದೇಶದಲ್ಲಿ ವೈದ್ಯಕೀಯ ಶಿಕ್ಷಣದ ಉನ್ನತ ಮಟ್ಟವನ್ನು ಸದಾ ಕಾಯ್ದುಕೊಳ್ಳಬೇಕೆಂಬುದು ನನ್ನ ಹೆಬ್ಬಯಕೆಯಾಗಿದೆ. ಆದರೆ ಈ ವಿಧೇಯಕಕ್ಕೆ ಯಾವುದೇ ರೀತಿಯಲ್ಲಿ ಸಂಬಂಧಪಡದ ವಿಷಯಗಳ ಬಗ್ಗೆ ನಾವು ಬಹಳಷ್ಟು ಮಾತನಾಡಿದ್ದೇವೆ. ಹಾಗಾಗಿ ಆಯುರ್ವೇದ, ಯುನಾನಿ ಮತ್ತು ಹೋಮಿಯೋಪಥಿ ವೈದ್ಯ ಪದ್ಧತಿಗಳ ಕುರಿತು ಯಾವುದೇ ವಿಷಯವನ್ನು ಪ್ರಸ್ತಾಪಿಸಲು ಹೋಗುವುದಿಲ್ಲ. ಏಕೆಂದರೆ ಇದೀಗ ಸದನದಲ್ಲಿ ಮಂಡಿಸಿರುವ ತಿದ್ದುಪಡಿ ವಿಧೇಯಕಕ್ಕೂ ಯಾವುದೇ ರೀತಿಯಲ್ಲಿ ಅದು ಸಂಬಂದಿಸಿದ್ದಲ್ಲ. ನನ್ನ ಸ್ನೇಹಿತರು ಕೆಲವು ಪ್ರಮುಖ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ಅವರಲ್ಲಿ ಒಬ್ಬರಾದ ಡಾ|| ಜಯಸೂರ್ಯ ಅವರು ಈಗ ಸದನದಲ್ಲಿ ಹಾಜರಿಲ್ಲ. ಈ ವಿಧೇಯಕದಲ್ಲಿ ಸಂಬಂಧಪಟ್ಟ ವಿಧಿಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇನ್ನೂ ಒಂದಿಬ್ಬರು ಸದಸ್ಯರು ವೈದ್ಯಕೀಯ ಪದವಿಗಳಲ್ಲಿ ತಾರತಮ್ಯ ತೋರಿಸದೆ ಎಲ್ಲ ಪದವಿಗಳಿಗ ಮಾನ್ಯತೆ ನೀಡಬೇಕೆಂದೂ ಸೂಚಿಸಿದ್ದಾರೆ. ಈ ಸಂಬಂಧದಲ್ಲಿ ಅಖಿಲ ಭಾರತ ವೈದ್ಯಕೀಯ ಮಂಡಳಿಯ ಶಿಫಾರಸುಗಳನ್ನು ಸರಕಾರ ಅಂಗೀಕರಿಸುತ್ತದೆ ಮತ್ತು ವಿಧೇಯಕದಲ್ಲಿ ಈ ಅವಕಾಶವನ್ನು ಕಲ್ಪಿಸಲಾಗುವುದು ಎಂಬುದು ಇದಕ್ಕೆ ನನ್ನ ಉತ್ತರವಾಗಿದೆ. ಬ್ರಿಟಿಷ್

ವಿಶ್ವವಿದ್ಯಾಲಯವಿರಲಿ, ಜರ್ಮನ್ ವಿಶ್ವವಿದ್ಯಾಲಯವಿರಲಿ, ರಷ್ಯಾದ ವಿಶ್ವವಿದ್ಯಾಲಯವಾಗಿರಲಿ ಅಥವಾ ಚೀನಾದ ವಿಶ್ವವಿದ್ಯಾಲಯವಾಗಿರಲಿ ನಮ್ಮ ರಾಷ್ಟ್ರದ ವಿದ್ಯಾರ್ಥಿಗಳು ವಿದ್ಯಾಭ್ಯಾಸಕ್ಕೆ ಹೋಗುವ ಯಾವುದೇ ವಿಶ್ವವಿದ್ಯಾಲಯವನ್ನಾದರೂ ವಿಧೇಯಕದ ಮೂರನೇ ಷೆಡ್ಯೂಲ್‌ನ ಎರಡನೇ ಭಾಗದಲ್ಲಿ ಸೇರಿಸಬಹುದೆಂಬುದು ನನ್ನ ಸ್ಪಷ್ಟವಾದ ಅಭಿಪ್ರಾಯವಾಗಿದೆ. ಈ ವಿಶ್ವವಿದ್ಯಾಲಯಗಳಲ್ಲಿನ ಪದವಿಗಳ ಮಟ್ಟವು ತೃಪ್ತಿಕರವಾಗಿದೆ ಎಂದು ಭಾರತೀಯ ವೈದ್ಯಕೀಯ ಮಂಡಳಿಯ ಶಿಫಾರಸಿನ ಅನ್ವಯ ಅವುಗಳಿಗೆ ಮಾನ್ಯತೆ ನೀಡಲು ಈ ವಿಧೇಯಕದ ಅವಕಾಶ ಕಲ್ಪಿಸಲಿದೆ. ಈ ವಿಧೇಯಕವನ್ನು ಮಂಡಿಸಿ ಮಾಡಿದ ಪ್ರಸ್ತಾವಿಕ ಮಾತುಗಳಲ್ಲಿ ನಾನು ಹೇಳಿರುವಂತೆ ಇದೇ ಸರಿಯಾದ ಮಾರ್ಗವಾಗಿದೆ. ಮಾನ್ಯತೆ ನೀಡುವ ವಿಷಯದಲ್ಲಿ ಪರಸ್ಪರ ಒಡಂಬಡಿಕೆ ಇಲ್ಲದ ರಾಷ್ಟ್ರಗಳಿಂದ ಪದವಿ ತೆಗೆದುಕೊಂಡು ಬರುವ ಭಾರತೀಯ ಪೌರರ ವಿದ್ಯಾರ್ಹತೆಗೆ ಮಾನ್ಯತೆ ನೀಡದಿರುವುದು ಯಾವ ಕಾರಣಕ್ಕೆ ಸರಿಯಲ್ಲ. ಅವರ ವಿದ್ಯಾರ್ಹತೆಗಳು ನಾವು ಒಡಂಬಡಿಕೆ ಹೊಂದಿರುವ ವಿಶ್ವವಿದ್ಯಾಲಯದ ಪದವಿಗಳಿಗೆ ಸರಿಸಮವಾಗಿ ಇಲ್ಲದಿರಬಹುದು ಅಥವಾ ಅವುಗಳಿಗಿಂತ ಇನ್ನು ಉತ್ತಮ ಮಟ್ಟದ್ದಾಗಿರಬಹುದು. ಆದರೆ ಒಡಂಬಡಿಕೆ ಇಲ್ಲದಿರುವ ಕಾರಣಕ್ಕಾಗಿ ಅವರು ಗಳಿಸಿರುವ ಪದವಿಗಳನು ದಾಖಲಾತಿ ವ್ಯವಸ್ಥೆಯಲ್ಲಿ ಸೇರಿಸುವುದಿಲ್ಲ ಎನ್ನುವುದು ಸರಿಯಲ್ಲ. ಪದವಿಗಳಿಗೆ ಮಾನ್ಯತೆ ನೀಡಲು ಪರಸ್ಪರ ಮಾನ್ಯತೆಯ ಒಡಂಬಡಿಕೆಗಳು ಇರಬೇಕಾಗಿಯೇ ಇಲ್ಲ ಎಂದು ಪ್ರತಿಪಕ್ಷದ ಸದಸ್ಯರೊಬ್ಬರು ಹೇಳಿದ್ದಾರೆ. ಮನುಷ್ಯ-ಮನುಷ್ಯರ ನಡುವಣ, ರಾಷ್ಟ್ರ ರಾಷ್ಟ್ರಗಳ ನಡುವಣ ಕಂದಕ ಮುಚ್ಚಿಹಾಕಲು ಬಹುಶಃ ವಿಜ್ಞಾನಕ್ಕಿಂತ ಉತ್ತಮವಾದ ಬೇರೊಂದು ಮಾರ್ಗವಿಲ್ಲ ಎಂದು ನಂಬಿದವರಲ್ಲಿ ನಾನೂ ಒಬ್ಬಳು. ಹೀಗಾಗಿ ಪದವಿ ವ್ಯಾಸಂಗಕ್ಕೆ ಅಥವಾ ಸ್ನಾತಕೋತ್ತರ ಶಿಕ್ಷಣಕ್ಕೆ ತಾವು ಬಯಸುವ ದೇಶಕ್ಕೆ ಹೋಗಲು ನಮ್ಮ ಪೌರರಿಗೆ ಇರುವ ಹಕ್ಕನ್ನು ಯಾವ ಕಾರಣಕ್ಕೂ ನಿರಾಕರಿಸಬಾರದು. ಹೀಗೆ ಪದವಿ ಗಳಿಸಿ ಬಂದಿರುವ ವೈದ್ಯರಿಗೆ ಆ ದೇಶದೊಂದಿಗೆ ಒಡಂಬಡಿಕೆ ಹೊಂದಿಲ್ಲ ಎಂಬ ಒಂದೇ ಒಂದು ಕಾರಣಕ್ಕಾಗಿ ನಮ್ಮ ದೇಶದಲ್ಲಿ ವೈದ್ಯಕೀಯ ವೃತ್ತಿ ನಿರ್ವಹಿಸಲು ಅನುಮತಿ ನೀಡದಿರುವುದು ಅಥವಾ ಅವರ ಹೆಸರುಗಳನ್ನು ದಾಖಲಾತಿಯಲ್ಲಿ ಸೇರಿಸದಿರುವುದು ಸಂಪೂರ್ಣ ತಪ್ಪು. ಇಂತಹ ಸನ್ನಿವೇಶದಲ್ಲಿ ನಮ್ಮ ರಾಷ್ಟ್ರೀಯರು ವಿದೇಶಗಳಿಗೆ ಹೋಗುವುದನ್ನು ಮತ್ತು ನಮ್ಮ ಪದವಿಗಳಿಗೆ ಅಲ್ಲಿ ಮಾನ್ಯತೆ ಪಡೆಯುವುದನ್ನು ನಾವು ಹೇಗೆ ನಿರೀಕ್ಷಿಸಲು ಸಾಧ್ಯ? ಪರಸ್ಪರ ಮಾನ್ಯತೆಯ ಒಡಂಬಡಿಕೆ ಎಂದರೆ ದೇಶವೊಂದರಲ್ಲಿ ನೆಲೆಸುವುದು, ವೈದ್ಯಕೀಯ ವೃತ್ತಿಯನ್ನು ನಡೆಸುವುದು ಇತ್ಯಾದಿ ಅಂಶಗಳು ಅಲ್ಲಿ ಪರಿಗಣನೆಗೆ ಬರುತ್ತವೆ. ಇದಕ್ಕೆ ಸಂಬಂಧಿಸಿದ ಇತರ ಅನೇಕ ಪ್ರಶ್ನೆಗಳೂ ಅಲ್ಲಿ ಬರುತ್ತವೆ. ಇದೇ ವೇಳೆಗೆ ವೈದ್ಯಕೀಯ ಶಿಕ್ಷಣದಲ್ಲಿ ಉನ್ನತ ಮಟ್ಟ ಕಾಯುವ ಪ್ರಶ್ನೆ ಬಂದಾಗ ನಮ್ಮ ರಾಷ್ಟ್ರದ ಪೌರರಿಗೆ ಶಿಕ್ಷಣದ ಈ ಅವಕಾಶವನ್ನು ನಾವೆಂದೂ ನಿರಾಕರಿಸಬಾರದು. ಉದಾಹರಣೆಗೆ ಅಮೇರಿಕದಲ್ಲಿ ಅಸಾಧಾರಣ ಶ್ರೇಣಿಯ ಪದವಿಗಳಿವೆ. ಡಾ॥ ಜಯಸೂರ್ಯ ಅವರೇ ಅದರಲ್ಲಿ ನಾಲ್ಕನ್ನು ಉಲ್ಲೇಖಿಸಿದ್ದಾರೆ. ಈ ನಾಲ್ಕು ಪದವಿಗಳಲ್ಲದೆ ಇನ್ನೂ ಎಷ್ಟೆಷ್ಟೋ ಪದವಿಗಳಿರುವುದು ನನಗೆ ತಿಳಿದಿದೆ. ಈ ಪದವಿಗಳಿಗೆ ನಾವು ಮಾನ್ಯತೆ ನೀಡಲೇಬೇಕು. ವಿದೇಶಿಯರ ವಿಷಯ ಬಂದಾಗ ನನಗೆ ಸಹಜವಾಗಿಯೇ ನಮ್ಮ ದೇಶದ ಸ್ಥಾನಮಾನದ ಬಗ್ಗೆ ಆಸೂಯೆ ಮೂಡುತ್ತದೆ. ನಮ್ಮ ಪದವಿಗಳನ್ನು ಮಾನ್ಯ ಮಾಡದ ಮತ್ತು ಈ ಸಂಬಂಧದಲ್ಲಿ ನಮ್ಮೊಂದಿಗೆ ಒಡಂಬಡಿಕೆ ಹೊಂದಿರುವ

ವಿದೇಶಿ ಪದವೀಧರರು ನಮ್ಮ ದೇಶದಲ್ಲಿ ಬಂದು ನೆಲೆಸುವುದಾಗಲಿ, ವೈದ್ಯಕೀಯ ವೃತ್ತಿ ನಡೆಸುವುದಾಗಲಿ ನನಗೆ ಸಮ್ಮತವಿಲ್ಲ. ಅದನ್ನು ಈ ವಿಧೇಯಕದ ಮೂಲಕ ಸಂಪೂರ್ಣವಾಗಿ ನಿವಾರಿಸಲಾಗುವುದು. ನಾವು ಮೂರೇ ಮೂರು ಉದ್ದೇಶಗಳಿಗಾಗಿ - ಬೋಧನೆ, ಸಂಶೋಧನೆ ಮತ್ತು ಸೇವಾ ಯೋಜನೆಗಳಲ್ಲಿ ವಿದೇಶಿಯರಿಗೆ ಅವಕಾಶ ಕಲ್ಪಿಸುತ್ತವೆ ಎಂದು ಹೇಳಿದ್ದೇವೆ. ವಿರೋಧ ಪಕ್ಷದ ನನ್ನ ಮಿತ್ರರೊಬ್ಬರು ಕೆಲ ಆಸ್ಪತ್ರೆಗಳಲ್ಲಿ ವಿದೇಶಿ ಪದವಿಗಳನ್ನು ಹೊಂದಿದವರು, ವಿದೇಶಿಯರು ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ ಎಂದು ಹೇಳಿದ್ದಾರೆ. ಅಂತಹವರಿಗೆ ಏಕೆ ಅವಕಾಶ ಕಲ್ಪಿಸಬಾರದು ಎಂದು ಕೇಳಿದ್ದಾರೆ. ಅಂತಹ ಅವಕಾಶವನ್ನು ಕಲ್ಪಿಸಲಾಗುವುದು. ಆದರೆ ಸರ್ಕಾರವು ವೈದ್ಯಕೀಯ ಮಂಡಳಿಯ ಜೊತೆ ಸಮಾಲೋಚಿಸಿ ಅವರ ವಾಸ್ತವ್ಯದ ಅವಧಿಯನ್ನು ನಿರ್ಧರಿಸುವುದು. ಅವರು ಯಾವ ಉದ್ದೇಶಕ್ಕಾಗಿ ಬಂದಿದ್ದಾರೆ ಎಂಬುದನ್ನು ನೋಡಿಕೊಂಡು ಅದಕ್ಕೆ ತಕ್ಕಂತೆ ತೀರ್ಮಾನ ಕೈಗೊಳ್ಳಲಾಗುವುದು. ಇನ್ನೋರ್ವ ಮಾನ್ಯ ಸದಸ್ಯರು ವಿದೇಶಿಯರಿಗೆ ಖಾಸಗಿ ಪ್ರಾಕ್ಟೀಸ್‌ಗೆ ಅವಕಾಶ ನೀಡದಿರುವ ಪ್ರಶ್ನೆಯನ್ನು ಎತ್ತಿದ್ದಾರೆ. ಈ ವಿಧೇಯಕ ಮೊದಲಲ್ಲಿ ರಾಜ್ಯಸಭೆಯ ಮುಂದೆ ಹೋದಾಗ ಮೂಲ ಕಾಯ್ದೆಯಿಂದಲೇ ಈ ವಿಧಿಯನ್ನು ತೆಗೆದುಹಾಕಲಾಯಿತು. ಈ ವಿಷಯ ಕುರಿತು ಕಾನೂನು ಸಚಿವಾಲಯದೊಂದಿಗೆ ನಾವು ಸಮಾಲೋಚಿಸಿದೆವು. ಆಗ ಅವರು ನಾವು ಈ ಸಂಬಂಧದ ವಾಕ್ಯಾಂಶವನ್ನು ಇರಿಸಿಕೊಂಡರೆ ವಿಶ್ವವಿದ್ಯಾಲಯಗಳು ತಮ್ಮ ಕಾಲೇಜುಗಳಿಗಾಗಿ ಕರೆಯಿಸಿಕೊಂಡ ಈ ತಜ್ಞರ ಮೇಲೆ ಅದು ಪ್ರತಿಕೂಲ ಪರಿಣಾಮ ಬೀರಬಹುದು. ಅವರು ಖಾಸಗಿ ಪ್ರಾಕ್ಟೀಸ್ ಮಾಡದೇ ಇದ್ದರೂ ವಿದೇಶಿ ಸರ್ಕಾರವೊಂದರಿಂದ ಸಂಬಳ ಪಡೆಯುವುದರಿಂದ ಅದನ್ನು ಕೂಡಾ ಖಾಸಗಿ ವರಮಾನದ ಮೂಲವೆಂದೇ ಪರಿಗಣಿಸುವ ಸಾಧ್ಯತೆ ಇದ್ದು, ಆದರಿಂದಾಗಿ ನಾವು ತಜ್ಞರ ಸೇವೆ ಪಡೆದುಕೊಳ್ಳುವ ಅವಕಾಶದಿಂದ ವಂಚಿತರಾಗಬೇಕಾಗುತ್ತದೆ ಎಂಬ ಅಂಶವನ್ನು ಇಲಾಖೆ ನನ್ನ ಗಮನಕ್ಕೆ ತಂದಿತು. ಭಾರತೀಯ ವೈದ್ಯಕೀಯ ಮಂಡಳಿಯ ಸದಸ್ಯರೊಂದಿಗೆ ನಾನು ಈ ವಿಷಯ ಚರ್ಚಿಸಿದಾಗ ಅದಕ್ಕೆ ನಿರ್ಬಂಧ ವಿಧಿಸುವ ವಿಧಿಗಳನ್ನು ಕಾಯ್ದೆಯಲ್ಲಿ ಸೇರಿಸಲು ನಾನು ಒಪ್ಪಿಕೊಂಡಿದ್ದೇನೆ. ನಮ್ಮ ವಿನಂತಿಯ ಮೇರೆಗೆ ವಿದೇಶಿಯರು ಬರುವ ಉದ್ದೇಶ-ಬೋಧನೆಗಾಗಲಿ, ಸಂಶೋಧನೆಗಳಿಗಾಗಿರಲಿ ಅಥವಾ ಸೇವಾ ಯೋಜನೆಗಳಿಗಾಗಿರಲಿ ಅವರು ಖಾಸಗಿ ವರಮಾನ ತರುವ ಯಾವುದೇ ಅನ್ಯ ಉದ್ಯೋಗದಲ್ಲಿ ತೊಡಗಬಾರದು ಎಂಬುದೇ ಈ ನಿರ್ಬಂಧವಾಗಿದೆ.

ಕೆಲವು ಮಂದಿ ಸದಸ್ಯರು ಪರವಾನಗಿ ವೈದ್ಯರ ಪ್ರಶ್ನೆ ಎತ್ತಿದ್ದಾರೆ-ಪದವೀಧರ ವೈದ್ಯರ ಯಾದಿಯಲ್ಲೇ ಅವರ ಹೆಸರು ಏಕಿರಬಾರದು? ಎಂದು ಕೇಳಿದ್ದಾರೆ. ಪರವಾನಗಿ ವೈದ್ಯರನ್ನು ಪ್ರತ್ಯೇಕ ಷೆಡ್ಯೂಲ್‌ನಲ್ಲಿ ಸೇರಿಸಿರುವುದು ಅವರು ಕೆಳದರ್ಜೆಯವರು ಎಂಬುದಕ್ಕಾಗಿ ಅಲ್ಲ ಅಥವಾ ತಾರತಮ್ಯ ತೋರುವ ಉದ್ದೇಶದಿಂದಲೂ ಅಲ್ಲ. ನಮ್ಮ ವಿದ್ಯಾರ್ಥಿಗಳು ಸ್ನಾತಕೋತ್ತರ ಅಧ್ಯಯನಕ್ಕಾಗಿ ವಿದೇಶಗಳಿಗೆ ಹೋಗುವಾಗ ಮೊದಲ ಷೆಡ್ಯೂಲ್‌ನಲ್ಲಿ ಪರವಾನಗಿ ವೈದ್ಯರೂ ಸೇರಿಕೊಂಡಿದ್ದರೆ ಪದವೀಧರರಿಗೆ ಅಲ್ಲಿ ಪ್ರವೇಶ ದೊರೆಯುವುದಿಲ್ಲ. ಪರವಾನಗಿ ವೈದ್ಯರ ವಿದ್ಯಾರ್ಹತೆಯನ್ನು ಸ್ನಾತಕೋತ್ತರ ಅಧ್ಯಯನಕ್ಕೆ ಅರ್ಹತೆ ಹೊಂದಿರುವ ವಿದ್ಯಾರ್ಹತೆ ಎಂದು ಮಾನ್ಯತೆ ನೀಡಿದಂತಾಗುತ್ತದೆ ಎಂದು ಅವರು ಆಕ್ಷೇಪಿಸುತ್ತಾರೆ. ನಾನು ಈ ವಿಷಯವನ್ನು ನನ್ನ ಪ್ರಸ್ತಾವಿಕ ಮಾತುಗಳಲ್ಲೇ ಸ್ಪಷ್ಟಪಡಿಸಿದ್ದೇನೆ. ನಮ್ಮ ರಾಷ್ಟ್ರದ ಪೌರರನ್ನು ಸಮರ್ಥಿಸುವ ಒಂದೇ

ಉದ್ದೇಶಕ್ಕಾಗಿ ನಾನು ಹಾಗೆ ಮಾಡುವುದಿಲ್ಲ, ಹಾಗೆ ಮಾಡಲು ಬರುವುದೂ ಇಲ್ಲ, ಮಾಡಲೂ ಬಾರದು. ಆದರೂ ಪರವಾನಗಿ ವೈದ್ಯರು ಮಂಡಿಸಿದ ಅಹವಾಲನ್ನು ನಾನು ಮತ್ತೊಮ್ಮೆ ಸಾವಧಾನವಾಗಿ ಆಲಿಸಿದ್ದೇನೆ ಮತ್ತು ಅಖಿಲ ಭಾರತ ದಾಖಲಾತಿಯಲ್ಲಿ ಅವರ ಹೆಸರುಗಳನ್ನು ಸೇರಿಸುವುದಾಗಿ ಭರವಸೆ ನೀಡಿದ್ದೇನೆ. ಕಾಯಿದೆಗೆ ಸಂಬಂಧಿಸಿದ ಉದ್ದೇಶಗಳಿಂದಾಗಿ ಅವರನ್ನು ಪ್ರತ್ಯೇಕ ದಾಖಲಾತಿಯಲ್ಲಿ ಇರಿಸಲಾಗಿದೆ. ಈ ಯಾದಿಗಳನ್ನು ಯಾರೂ ನೋಡುವುದಿಲ್ಲ. ಅಖಿಲ ಭಾರತ ದಾಖಲಾತಿಯನ್ನೇ ಎಲ್ಲರೂ ಪರಿಗಣಿಸುವುದು. ಅಲ್ಲಿ ಯಾವ ತಾರತಮ್ಯವೂ ಇರುವುದಿಲ್ಲ. ಸದ್ಯ ಪರವಾನಗಿ ವೈದ್ಯರಿಗೆ ಇದಕ್ಕಿಂತ ಹೆಚ್ಚಿನದೇನನ್ನೂ ನಾವು ಮಾಡಲು ಸಾಧ್ಯವಿಲ್ಲ.

ಪರವಾನಗಿ ವೈದ್ಯರಿಗೆ ವೈದ್ಯಕೀಯ ಮಂಡಳಿಯಲ್ಲಿ ಏಳು ಸ್ಥಾನಗಳನ್ನು ನೀಡಿರುವುದು ತಮ್ಮನ್ನು ಮಂಡಲಿಗೆ ಸೇರಿಸಿಕೊಳ್ಳಬೇಕೆಂದು ಅವರು ಪದೇ ಪದೇ ಮುಂದಿಟ್ಟ ಬೇಡಿಕೆಗೆ ನೀಡಿದ ಒಂದು ಪುರಸ್ಕಾರವಾಗಿದೆ. ಪರವಾನಗಿ ವೈದ್ಯರು ಸ್ವತಃ ಪದವೀಧರರಲ್ಲದಿರುವಾಗ ಪದವಿ ಶಿಕ್ಷಣದ ಮಟ್ಟವನ್ನು ನಿಷ್ಕರ್ಷಿಸುವ ಮಂಡಲಿಯಲ್ಲಿ ಪ್ರಾತಿನಿಧ್ಯ ನೀಡುವುದು ಸರಿಯಲ್ಲವೆಂದು ಸದನ ಗಮನದಲ್ಲಿಟ್ಟುಕೊಳ್ಳಬೇಕು. ಹಾಗಾಗಿ ಪರವಾನಗಿ ವೈದ್ಯರಿಗೆ ಇದೊಂದು ರಿಯಾಯ್ತಿಯೇ ಆಗಿದೆ. ಭಾರತೀಯ ವೈದ್ಯಕೀಯ ಸಂಸ್ಥೆಯಲ್ಲಿ ಸಾವಿರ, ಸಾವಿರ ಸಂಖ್ಯೆಯಲ್ಲಿ ಪರವಾನಗಿ ವೈದ್ಯರು ಸದಸ್ಯತ್ವ ಹೊಂದಿರುವುದರಿಂದ ಮತ್ತು ತಮಗೆ ಪ್ರಾತಿನಿಧ್ಯ ನೀಡುವಂತೆ ಅವರು ಪದೇ ಪದೇ ನನ್ನನ್ನು ವಿನಂತಿಸುತ್ತಿರುವುದರಿಂದ ನಾನು ಅವರಿಗೆ ಈ ಏಳು ಸ್ಥಾನಗಳನ್ನು ಕೊಟ್ಟಿದ್ದೇನೆ. ತಮ್ಮ ಸದಸ್ಯ ಸಮುದಾಯದಿಂದ ಈ ಏಳು ಮಂದಿಯನ್ನು ಅವರು ಆಯ್ಕೆ ಮಾಡಿಕೊಳ್ಳಬಹುದು. ಇನ್ನು ಹೆಚ್ಚಿನ ಪ್ರಾತಿನಿಧ್ಯ ನೀಡಲು ವೈದ್ಯಕೀಯ ಮಂಡಲಿಯ ವಿರೋಧವಿದ್ದು, ನಾನು ಕೂಡಾ ಅದು ನ್ಯಾಯವಾದದ್ದೆಂದೇ ಭಾವಿಸುತ್ತೇನೆ. ಏಕೆಂದರೆ ಈ ಪರವಾನಗಿ ವೈದ್ಯರು ಶಿಕ್ಷಣ ಕ್ರಮವನ್ನು ನಿಷ್ಕರ್ಷಿಸುವ ಅಥವಾ ವಿಮರ್ಶಿಸುವ ಸಾಮರ್ಥ್ಯವನ್ನು ಹೊಂದಿಲ್ಲ. ಪರವಾನಗಿ ವೈದ್ಯರು ದೇಶಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಗ್ರಾಮಾಂತರ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಾರೆ ಎಂದು ಮುಂತಾಗಿ ವಾದಿಸುವುದೂ ಸರಿಯಲ್ಲ. ವೈದ್ಯಕೀಯ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣದ ಮಟ್ಟವನ್ನು ಕಾಯ್ದುಕೊಳ್ಳುವ ಸಲುವಾಗಿಯೇ ಇರುವ ಮಂಡಳಿಯೊಂದರಲ್ಲಿ ಅದಕ್ಕೆ ಅರ್ಹತೆ ಇಲ್ಲದವರನ್ನು ಹೊಂದಿರುವುದು ಸರಿಯಲ್ಲ. ಈ ವಿಧೇಯಕದಲ್ಲಿ ನಾವು ವೈದ್ಯಕೀಯ ಶಿಕ್ಷಣದ ವಿಷಯದಲ್ಲಿ ಕಾಳಜಿ ಹೊಂದಿದ್ದೇವೆಯೇ ಹೊರತು ಬೇರಾವ ವಿಷಯದ ಬಗ್ಗೆಯೂ ಅಲ್ಲ.

ಇಲ್ಲಿ ಎತ್ತಿರುವ ಇತರ ಆಕ್ಷೇಪಗಳೆಂದರೆ ವಿಧೇಯಕದ 3ನೇ ಖಂಡದಲ್ಲಿ ಹೇಳಿರುವಂತೆ ಮಂಡಲಿ ಶೇ.90ರಷ್ಟು ನಾಮಕರಣ ಸದಸ್ಯರಿಂದಲೇ ಕೂಡಿರುತ್ತದೆಂಬುದು. ಅಖಿಲ ಭಾರತ ದಾಖಲಾತಿ ಸಿದ್ಧವಾಗುವುದರೊಳಗೆ ನಾನು ಏಳು ಮಂದಿ ಪರವಾನಗಿ ವೈದ್ಯರನ್ನು ನಾಮಕರಣ ಮಾಡಬೇಕಾಗಿದೆ. ಈ ಸಂಬಂಧದಲ್ಲಿ ನಾನು ಪರವಾನಗಿ ವೈದ್ಯರ ಕಾರ್ಯಕಾರಿ ಸಮಿತಿಯೊಂದಿಗೆ ಸಮಾಲೋಚಿಸುತ್ತೇನೆ ಎಂಬ ಆಶ್ವಾಸನೆಯನ್ನು ಸದನಕ್ಕೆ ನೀಡಬಯಸುತ್ತೇನೆ. ದಾಖಲಾತಿ ಸಿದ್ಧವಾಗುವುದರೊಳಗಾಗಿ ಈ ಪ್ರತಿನಿಧಿಗಳನ್ನು ಆಯ್ಕೆ ಮಾಡಿ ಕಳುಹಿಸಲು ಅವರಿಗೆ

ಸಾಧ್ಯವಾಗುವುದು ಮತ್ತು ದಾಖಲಾತಿಯ ಸಿದ್ಧತೆಗೆ ಬಹು ದೀರ್ಘ ಸಮಯ ಬೇಕಾಗುವುದು. ತಕ್ಷಣಕ್ಕೆ ಪ್ರತಿನಿಧಿಗಳು ಈ ಅನುಪಾತದಲ್ಲಿ ಇರುತ್ತಾರೆ. ವಿಶ್ವವಿದ್ಯಾಲಯಗಳಿಂದ 21 ಮಂದಿ, ರಾಜ್ಯ ವೈದ್ಯಕೀಯ ಕಾಲೇಜುಗಳಿಂದ 13 ಮಂದಿ, ನಾಮಕರಣಗೊಂಡ ಸದಸ್ಯರು 28 ಮಂದಿ. ಅಖಿಲ ಭಾರತ ವೈದ್ಯರ ದಾಖಲಾತಿ ಸಿದ್ಧಗೊಂಡಾಗ ಮಂಡಲಿಯಲ್ಲಿ ಒಟ್ಟು 62 ಮಂದಿಯಲ್ಲಿ 41 ಮಂದಿ ಚುನಾಯಿತ ಸದಸ್ಯರು ಮತ್ತು 21 ಮಂದಿ ನಾಮಕರಣ ಸದಸ್ಯರು ಇರುವರು. ಈ ಮಂಡಳಿಯಲ್ಲಿ ಶೇ. 90ರಷ್ಟು ನಾಮಕರಣ ಸದಸ್ಯರೇ ಇರುತ್ತಾರೆ ಎಂಬ ಹೇಳಿಕೆ ಸರಿಯಲ್ಲ.

ಕಾಯ್ದೆಯ 3(1) (ಎ) ಖಂಡ ಈ ಕೆಳಗಿನಂತಿದೆ:

"ಸಂಬಂಧಪಟ್ಟ ರಾಜ್ಯ ಸರ್ಕಾರಗಳೊಡನೆ ಸಮಾಲೋಚಿಸಿ ಕೇಂದ್ರ ಸರ್ಕಾರವು ಒಂದೊಂದು ರಾಜ್ಯದಿಂದ ಒಬ್ಬೊಬ್ಬ ಸದಸ್ಯರನ್ನು ನಾಮಕರಣ ಮಾಡಬೇಕು".

ಮೂಲತಃ ಈ ಖಂಡ ಹೀಗಿತ್ತು:

"ಕೇಂದ್ರ ಸರ್ಕಾರವು ಪ್ರತಿಯೊಂದು ರಾಜ್ಯದಿಂದ ಒಬ್ಬೊಬ್ಬ ಸದಸ್ಯರನ್ನು ನಾಮಕರಣ ಮಾಡಬೇಕು".

ರಾಜ್ಯಸಭೆಯಲ್ಲಿ, 'ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿ' ಎಂದು ತಿದ್ದುಪಡಿ ಸೂಚಿಸಿದಾಗ ನಾನು ಅದನ್ನು ಒಪ್ಪಿಕೊಂಡೆ. ಇದರಿಂದ ರಾಜ್ಯಗಳು ಮತ್ತು ಕೇಂದ್ರ ಸರ್ಕಾರದ ನಡುವೆ ಅತ್ಯಂತ ಆರೋಗ್ಯಕರ ಪರಂಪರೆಯನ್ನು ಹಾಕಿಕೊಟ್ಟಂತೆ ಆಗಿದೆ.

ಆರೋಗ್ಯ ಸಚಿವೆಯಾಗಿ ದೇಶಕ್ಕೆ ಸೇವೆ ಸಲ್ಲಿಸುವ ಅವಕಾಶ ದೊರೆತ ಈ ಒಂಭತ್ತು ವರ್ಷಗಳ ಅವಧಿಯಲ್ಲಿ ಒಂದೇ ಒಂದು ಸಂದರ್ಭದಲ್ಲಿ ಕೂಡಾ ರಾಜ್ಯಗಳಿಂದ ಒಂದೇ ಒಂದು ನಾಮಕರಣವನ್ನಾದರೂ ಕೇಂದ್ರ ಸರ್ಕಾರ ಅಂಗೀಕರಿಸದಿದ್ದ ಉದಾಹರಣೆ ಇಲ್ಲ. ಕೆಲವೊಂದು ಸಂದರ್ಭಗಳಲ್ಲಿ ಉತ್ತಮ ಆಯ್ಕೆ ಸಾಧ್ಯವಿತ್ತೆಂದು ನನಗನಿಸಿದರೂ ನಾವು ಅದನ್ನು ಎಂದೂ ಪ್ರಶ್ನಿಸಲಿಲ್ಲ. ರಾಜ್ಯಗಳು ಮಾಡಿದ ನಾಮಕರಣಗಳನ್ನು ನಾನು ಎಂದೂ ಪ್ರಶ್ನಿಸಿದ್ದಿಲ್ಲ. ಈ ವಿಧಾನವೇ ಮುಂದುವರಿಯಬೇಕೆಂದು ನಾನು ಇಚ್ಛಿಸುತ್ತೇನೆ.

1955ರ ಮೇ ತಿಂಗಳಿಂದಲೇ ಈ ವಿಧೇಯಕ ಸಾರ್ವಜನಿಕರ ಅವಗಾಹನೆಯಲ್ಲಿತ್ತು. ಆದರೆ ಮೊನ್ನೆಯ ತನಕವೂ ರಾಜ್ಯ ಸರ್ಕಾರಗಳಾಗಲಿ ಅಥವಾ ಇತರರಾಗಲಿ ಅದರ ಬಗ್ಗೆ ಒಂದೇ ಒಂದು ಆಕ್ಷೇಪ ಎತ್ತಲಿಲ್ಲ. ಹಾಗಾಗಿ ಮಾನ್ಯ ಸದಸ್ಯರು ಮಾಡಿದ ಟೀಕೆ ಸಂಪೂರ್ಣ ಅನಗತ್ಯ ಮತ್ತು ಅನಪೇಕ್ಷಿತವಾಗಿದೆ. ಈ ವಿಧೇಯಕವನ್ನು ಮಂಡಿಸುವಲ್ಲಿ ನಾವು ಅವಸರವನ್ನೇನೂ ಮಾಡಿಲ್ಲ. 1955ರ ಮೇ ತಿಂಗಳಲ್ಲೇ ಈ ವಿಧೇಯಕದ ಪ್ರಸ್ತಾವವನ್ನು ಜನರ ಮುಂದಿಡಲಾಯಿತು. ಆಗಸ್ಟ್ ತಿಂಗಳಲ್ಲಿ ಅದು ರಾಜ್ಯಸಭೆಯಲ್ಲಿ ಮಂಡಿಸಲ್ಪಟ್ಟು ಸಮಗ್ರವಾಗಿ ಚರ್ಚಿಸಲಾಯಿತು. ಈ ವಿಧೇಯಕವನ್ನು ಸದನದಲ್ಲಿ ಮಂಡಿಸುವುದಕ್ಕೆ ಮೊದಲೇ ನಾನು ಭಾರತೀಯ ವೈದ್ಯಕೀಯ ಮಂಡಲಿಯ ಪ್ರಮುಖರೊಂದಿಗೆ, ಖಾಸಗಿಯಾಗಿ ಮತ್ತು ಸಮಷ್ಟಿಯಾಗಿ ಅದರ ಕುರಿತು ವಿಚಾರ ವಿನಿಮಯ ನಡೆಸಿದ್ದೇನೆ. ಸಹಜವಾಗಿಯೇ ಎಲ್ಲ ರಾಜ್ಯಗಳೊಂದಿಗೂ ನಾನು ಈ ವಿಷಯದಲ್ಲಿ ಸಮಾಲೋಚನೆ ನಡೆಸಿದ್ದೇನೆ. ಎಲ್ಲ ವಿಧಿ ವಿಧಾನಗಳ ನಂತರವೇ ವಿಧೇಯಕವನ್ನು ರಾಜ್ಯಸಭೆಯಲ್ಲಿ

ಬಂಗಾಳದ ಕುರಿತು ಮಾನ್ಯ ಸದಸ್ಯರು ಕೇಳಿದ ಪ್ರಶ್ನೆಗೆ ರಾಜ್ಯ ವೈದ್ಯರ ದಾಖಲಾತಿಯಲ್ಲಿ ನೋಂದಣಿ ಹೊಂದಿರುವ ವೈದ್ಯರು ಈ ವಿಧೇಯಕ ಅಂಗೀಕಾರವಾದ ಮೇಲೂ ಆ ದಾಖಲಾತಿಯಲ್ಲೇ ಉಳಿಯುವುದು ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದೇನೆ. ಅದೇನೇ ಇದ್ದರೂ ಈ ವಿಷಯದಲ್ಲಿ ಅಖಿಲ ಭಾರತ ವೈದ್ಯಕೀಯ ಮಂಡಳಿ ಕೇಂದ್ರ ಸರ್ಕಾರಕ್ಕೆ ಶಿಫಾರಸು ಮಾಡಬೇಕು ಮತ್ತು ಯಾವುದೇ ಸಂದರ್ಭದಲ್ಲೂ ಅದರ ಶಿಫಾರಸುಗಳನ್ನು ಅಂಗೀಕರಿಸದಿರುವ ಪ್ರಶ್ನೆಯೇ ಇಲ್ಲ ಎಂಬುದನ್ನು ಮಾನ್ಯ ಸದಸ್ಯರು ನೆನಪಿಟ್ಟುಕೊಳ್ಳಬೇಕು.

ಆದರೆ, ಐದು ವೈದ್ಯಕೀಯ ಕಾಲೇಜುಗಳ ವಿಷಯದಲ್ಲಿ ಪೂನಾ, ಬರೋಡಾ, ಅಹಮದಾಬಾದ್, ನಾಗಪುರ ಮತ್ತು ದರ್ಭಾಂಗ್-ವಿಷಯದಲ್ಲಿ ಈ ಅಹವಾಲಿಗೆ ಅವಕಾಶವಿತ್ತು. ಅಖಿಲ ಭಾರತ ವೈದ್ಯಕೀಯ ಮಂಡಳಿ ಒಂದು ನಿರ್ದಿಷ್ಟ ದಿನಾಂಕದಿಂದ ಮಾನ್ಯ ಮಾಡಿರಲಿಲ್ಲ. ಆರಂಭದಲ್ಲಿ ಈ ವಿಷಯವಾಗಿ ನನಗೆ ಏನನ್ನು ಹೇಳಲಾಯಿತೋ ಅದನ್ನು ನಾನು ಅಂಗೀಕರಿಸಿದೆ. ಆದರೆ ಇದಾದ ಮೇಲೆ ಅಲ್ಲಿನ ಪದವೀಧರರಿಂದ, ಸಂಬಂಧಪಟ್ಟ ರಾಜ್ಯಗಳ ಆರೋಗ್ಯ ಸಚಿವರುಗಳಿಂದ, ಆರೋಗ್ಯ ಸೇವೆಗಳ ನಿರ್ದೇಶಕರಿಂದ ಮನವಿಗಳ ಮೇಲೆ ಮನವಿಗಳು ಬರತೊಡಗಿದವು. ಈ ವಿಷಯದಲ್ಲಿ ತನಿಖೆ ನಡೆಸಿದಾಗ ಅಖಿಲ ಭಾರತ ವೈದ್ಯಕೀಯ ಮಂಡಳಿಯು ಕ್ರಮಬದ್ಧವಾಗಿ ನಡೆದುಕೊಂಡಿದೆ ಎಂಬುದು ನನ್ನ ಗಮನಕ್ಕೆ ಬಂದಿತು. ಈ ವಿಷಯವಾಗಿ ಒಂದರ ಹಿಂದೆ ಒಂದರಂತೆ ಬಂದ ಪ್ರಶ್ನೆಗಳಿಗೆ ಉತ್ತರಿಸಿದ ನಂತರದಲ್ಲಿ ಪದವೀಧರರಿಗೆ ಯಾವುದೇ ರೀತಿಯ ಅನ್ಯಾಯವಾಗಿದ್ದಲ್ಲಿ ಅದಕ್ಕೆ ಪರಿಹಾರ ಸೂಚಿಸುತ್ತೇನೆ ಎಂದು ಆಶ್ವಾಸನೆ ನೀಡಿದೆ ಮತ್ತು ಅದೇ ರೀತಿಯಲ್ಲಿ ಅವರಿಗೆ ಆಗಿದ್ದ ಅನ್ಯಾಯಕ್ಕೆ ಪರಿಹಾರವನ್ನು ಕಲ್ಪಿಸಿದ್ದೇನೆ. ಈ ವಿಷಯದಲ್ಲಿ ಭಾರತೀಯ ವೈದ್ಯಕೀಯ ಮಂಡಳಿ ಯಾವ ರೀತಿ ನಡೆದುಕೊಳ್ಳಬೇಕಿತ್ತೋ ಹಾಗೆ ನಡೆದುಕೊಳ್ಳಲಿಲ್ಲ ಎಂದು ಹೇಳಲು ನನಗೆ ಅತೀವ ವೇದನೆಯಾಗುತ್ತಿದೆ. ಅನ್ಯಾಯವನ್ನು ಸರಿಪಡಿಸಲು ಕೇಂದ್ರ ಸರ್ಕಾರಕ್ಕಿರುವ ಕೆಲವು ಅಧಿಕಾರವನ್ನು ಯಾವ ಕಾರಣಕ್ಕೂ ಬಿಟ್ಟುಕೊಡುವ ಪೈಕಿ ನಾನಲ್ಲ. ಮೇಲಾಗಿ ವೈದ್ಯಕೀಯ ಮಂಡಳಿಯು ಭಾರತ ಸರ್ಕಾರದ ಸಲಹಾ ಮಂಡಳಿಯಾಗಿದೆ. ಭಾರತ ಸರ್ಕಾರವು ವೈದ್ಯಕೀಯ ಮಂಡಲಿಯ ಶಿಫಾರಸುಗಳನ್ನು ಬಹುತೇಕ ಎಲ್ಲ ಸಂದರ್ಭಗಳಲ್ಲಿಯೂ ಸಂಪೂರ್ಣವಾಗಿ ಒಪ್ಪಿಕೊಂಡು ನ್ಯಾಯವಾದ ರೀತಿಯಲ್ಲೇ ನಡೆದುಕೊಂಡಿದೆ. ಹಾಗಾಗಿ ವೈದ್ಯಕೀಯ ಮಂಡಲಿಯು ತನಗೆ ಅನ್ಯಾಯವಾಗಿದೆ ಎಂದು ಕಲ್ಪಿಸಿಕೊಳ್ಳುವುದು ಸರಿಯಲ್ಲ. ಗೌರವಾನ್ವಿತ ಸದನದ ಅಭಿಪ್ರಾಯದಂತೆ ಪದವೀಧರರಿಗೆ ಅನ್ಯಾಯವಾಗಿದೆ. ಹಾಗಾಗಿ ಅದನ್ನು ಸದನದ ಅಭಿಪ್ರಾಯದಂತೆ ಪದವೀಧರರಿಗೆ ಅನ್ಯಾಯವಾಗಿದೆ. ಹಾಗಾಗಿ ಸರಿಪಡಿಸಲೇಬೇಕಾಗಿದೆ ಮತ್ತು ಅವರಿಗೆ ನ್ಯಾಯ ಒದಗಿಸಲೇಬೇಕಾಗಿದೆ.

ಇನ್ನು ತಪಾಸಣಾಧಿಕಾರಿಗಳು ಮತ್ತು ಸಂದರ್ಶಕರ ಬಗ್ಗೆ ಹೇಳುವುದಾದರೆ ಯಾವ ವಿಶ್ವವಿದ್ಯಾಲಯವೂ ಭಾರತೀಯ ವೈದ್ಯಕೀಯ ಮಂಡಲಿ ಮಾಡಿದ ತಪಾಸಣಾಧಿಕಾರಿಗಳು ಮತ್ತು ಸಂದರ್ಶಕರ ನೇಮಕಾತಿಗೆ ಎಂದೂ ಆಕ್ಷೇಪ ಎತ್ತಿದ್ದಿಲ್ಲ. ಇದು ಕಾಯ್ದೆಯ ನಿಯಮ ಮತ್ತು ನಿಬಂಧನೆಗಳಿಗಿಂತ ಹೆಚ್ಚಾಗಿ ವಿಶ್ವವಿದ್ಯಾಲಯಗಳ ಅಧಿಕಾರಿಗಳ ಇಚ್ಛೆ ಮತ್ತು ಸೌಜನ್ಯಕ್ಕೆ ಸಂಬಂಧಿಸಿದ ವಿಷಯವಾಗಿದೆ. ಪರೀಕ್ಷೆಗಳು ಸರಿಯಾದ ರೀತಿಯಲ್ಲಿ ನಡೆಯುತ್ತಿವೆಯೇ ಎಂಬುದನ್ನು ತಪಾಸಿಸಲು ಅವು ತಪಾಸಣಾ ವ್ಯವಸ್ಥೆಯನ್ನೂ ಹೊಂದಿರಬೇಕು. ವಿಶ್ವವಿದ್ಯಾಲಯಗಳು ತಮ್ಮ

ಹಕ್ಕು ಮತ್ತು ಸ್ವಾತಂತ್ರ್ಯಗಳ ಮೇಲೆ ಅತಿಕ್ರಮಣ ನಡೆದಾಗ ಅದನ್ನೆಂದೂ ಸಹಿಸುವುದಿಲ್ಲ. ವಿಶ್ವವಿದ್ಯಾಲಯಗಳ ಪ್ರತಿನಿಧಿಗಳೊಂದಿಗೆ ಈ ವಿಷಯದಲ್ಲಿ ಚರ್ಚೆ ನಡೆಯುತ್ತಿದ್ದಾಗ 'ಇಲ್ಲಿಯವರೆಗೆ ನಾವು ಹೋಗಬಹುದು, ಅದಕ್ಕಿಂತ ಮುಂದಕ್ಕೆ ಹೋಗುವುದು ಸಾಧ್ಯವಿಲ್ಲ' ಎಂದು ಅಧಿಕಾರಿಗಳು ಹೇಳಿದ್ದು ಅರ್ಥಪೂರ್ಣವಾದ ಮಾತಾಗಿತ್ತು. ಈ ವಿಧೇಯಕದಲ್ಲಿ ನಾವು ಎಲ್ಲರ ಅಭಿಪ್ರಾಯಗಳನ್ನು ಗಮನಿಸಬೇಕು. ಇದಾದ ಮೇಲೆ ಸರ್ವ ಸಮ್ಮತ ಒಪ್ಪಂದಕ್ಕೆ ಬರಲು ಪ್ರಯತ್ನಿಸಬೇಕು.

* * * * * * * * * *

ಈ ವಿಷಯಕ್ಕೆ ಖಚಿತ *ಉತ್ತರ ನೀಡಲು ನಾನು ಅಸಮರ್ಥನಾಗಿದ್ದೇನೆ. ವಿಶ್ವವಿದ್ಯಾಲಯಗಳಿಂದ ವಿಶ್ವವಿದ್ಯಾಲಯಗಳಿಗೆ ಅದು ಬದಲಾಗುವುದು. ಆದರೆ ಇಂತಹ ವಿಷಯವನ್ನು ವಿಧೇಯಕದಲ್ಲಿ ಸೇರಿಸುವುದು ನಮ್ಮ ಅಧಿಕಾರ ವ್ಯಾಪ್ತಿಗೆ ಬರುವುದಿಲ್ಲ. ನಾವು ಪರಸ್ಪರರಲ್ಲಿ ಸಮನ್ವಯ ಮತ್ತು ಸಹಯೋಗ ಇರುವ ಒಂದು ಸ್ವಸ್ಥ ಸುಖೀ ಕುಟುಂಬದಂತೆ ಕಾರ್ಯ ನಿರ್ವಹಿಸಲು ಬಯಸಿದ್ದೇವೆ. ವೈದ್ಯಕೀಯ ಮಂಡಲಿ ತಾನು ಇದನ್ನು ಮಾಡಲು ಇಚ್ಛಿಸುತ್ತೇನೆ ಎಂದು ಹೇಳಿದರೆ ಮತ್ತು ವಿಶ್ವವಿದ್ಯಾಲಯದ ಅಧಿಕಾರಿಗಳೂ ಇದರಿಂದ ಒಳಿತಾಗುತ್ತದೆ ಎಂದು ಭಾವಿಸಿದರೆ ಅವರು ಅದನ್ನು ಒಪ್ಪಿಕೊಳ್ಳುತ್ತಾರೆ. ಎಂಬ ವಿಷಯದಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಆದರೆ ಸಂದರ್ಶಕರು ಯಾವುದೇ ಪರೀಕ್ಷೆಯ ನಡವಳಿಕೆಯಲ್ಲಿ ಹಸ್ತಕ್ಷೇಪ ನಡೆಸಬಾರದೆಂಬ ವಿಧಿಯು ಈ ಕಾಯ್ದೆಯಲ್ಲಿದೆ. ವಿಶ್ವವಿದ್ಯಾಲಯಗಳು ಈ ವಿಷಯದಲ್ಲಿ ಕೊಂಚ ಹಿಂದೆ ಮುಂದೆ ನೋಡುತ್ತಿದ್ದರೂ ಈ ವಿಷಯದಲ್ಲಿ ಎಂದೂ ಆಕ್ಷೇಪ ವ್ಯಕ್ತಪಡಿಸಿಲ್ಲ. ಪರೀಕ್ಷೆ ನಡವಳಿಕೆಯಲ್ಲಿ ಹೊರಗಿನಿಂದ ಯಾರಾದರೂ ಬಂದು ಟೀಕಿಸಿದರೆ ಅದನ್ನು ಆಕ್ಷೇಪಿಸುವ ಹಕ್ಕು ವಿಶ್ವವಿದ್ಯಾಲಯಕ್ಕೆ ಇದ್ದೇ ಇದೆ. ಇಂದು ಮಂಡಿಸಿರುವ ವಿಧೇಯಕದಲ್ಲಿ ಇರುವ ವಿಧಿ ನಿಖರವಾಗಿ ಮೂಲ ವಿಧೇಯಕದಲ್ಲಿ ಇದ್ದಂತೆಯೇ ಇದೆ.

* * * * * * * * * * * *

ಭಾರತೀಯ ವೈದ್ಯಕೀಯ ಮಂಡಳಿಯು ಅದು ಕಾರ್ಯ ನಿರ್ವಹಿಸಬೇಕಾಗಿದ್ದ ರೀತಿಯಲ್ಲಿ ನಡೆದುಕೊಳ್ಳಲಿಲ್ಲ ಎಂಬ ಅಹವಾಲನ್ನು ಗಮನಿಸಿ ಅದರ ಅಧ್ಯಕ್ಷರು ಸರ್ಕಾರದಿಂದ ನಾಮಕರಣಗೊಳ್ಳಬೇಕೆಂಬ ಒಂದು ತಿದ್ದುಪಡಿಯನ್ನು ಈ ವಿಧೇಯಕದಲ್ಲಿ ಸೇರಿಸಲಾಗಿದೆ. ವಾಸ್ತವವಾಗಿ ನನಗೇ ಈ ತಿದ್ದುಪಡಿ ಒಪ್ಪಿಗೆ ಇಲ್ಲ. ಇಂತಹ ನೇಮಕಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಚುನಾವಣಾ ವಿಧಾನವನ್ನೇ ಅನುಸರಿಸಬೇಕು ಮತ್ತು ಮಂಡಳಿಯ ಅಧ್ಯಕ್ಷರು ಚುನಾವಣೆಯ ಮೂಲಕ ಆಯ್ಕೆಯಾಗಬೇಕೆಂಬುದೇ ನನ್ನ ಅಭಿಮತವಾಗಿದೆ. ಇದಲ್ಲದೆ ಸ್ನಾತಕೋತ್ತರ ವೈದ್ಯಕೀಯ ಸಮಿತಿಯ ಬಗ್ಗೆಯೂ ಕೆಲವರು ಟೀಕಿಸಿದ್ದಾರೆ. ಆದರೆ ವಿಧೇಯಕದ 20ನೇ ಖಂಡವನ್ನು ಸರಕಾರ ಮತ್ತು ವೈದ್ಯಕೀಯ ಮಂಡಲಿಗಳು ಸಮಗ್ರವಾಗಿ ಚರ್ಚಿಸಬೇಕು

ಪರೀಕ್ಷೆಗಳ ತಪಾಸಣೆಗೆ ಸಂದರ್ಶಕರನ್ನು ಕಳುಹಿಸಲು ವಿಶ್ವವಿದ್ಯಾಲಯಗಳು ಒಪ್ಪಿಕೊಂಡಿವೆಯೇ ಎಂಬ ಎಂ.ಕೆ.ಮೊಯಿತ್ರಿ ಪ್ರಶ್ನೆಗೆ ಉತ್ತರಿಸುತ್ತಾ.

## 13. ಭಾರತೀಯ ವೈದ್ಯಕೀಯ ಮಂಡಲಿ ವಿಧೇಯಕ 1956*

1933ರ ಭಾರತೀಯ ವೈದ್ಯಕೀಯ ಮಂಡಲಿ ಕಾಯ್ದೆ ತೀರಾ ಕಾಲ ದೂಷಿತವಾಗಿದ್ದರಿಂದ ಮತ್ತು ಅದಕ್ಕೆ ಹಲವು ತಿದ್ದುಪಡಿಗಳನ್ನು ಸೇರಿಸುವುದು ಅವಶ್ಯವಾಗಿದ್ದುದರಿಂದ ಕಳೆದ ಕೆಲವು ಸಮಯದಿಂದ ಕಾಯ್ದೆಗೆ ತಿದ್ದುಪಡಿ ತರುವ ಪ್ರಶ್ನೆ ಸರ್ಕಾರದ ಪರಿಶೀಲನೆಯಲ್ಲಿತ್ತು. ಇಂದೀಗ ಸದನದ ಮುಂದೆ ತಿದ್ದುಪಡಿಗಳೊಂದಿಗೆ ಮಂಡಿಸಿರುವ ಈ ಕಾಯ್ದೆಯಲ್ಲಿ ವಾಸ್ತವವಾಗಿ ವಿವಾದಾತ್ಮಕವಾಗಿರುವ ಯಾವ ಅಂಶವೂ ಇಲ್ಲ. ಮಾನ್ಯ ಸದಸ್ಯರಿಗೆ ಅಧ್ಯಯನ ನಡೆಸಲು ಸಾಕಷ್ಟು ಕಾಲಾವಕಾಶ ಸಿಗಬೇಕೆಂಬ ದೃಷ್ಟಿಯಿಂದ ಅಖಿಲ ಭಾರತ ವೈದ್ಯಕೀಯ ಮಂಡಳಿಯ ಬಗ್ಗೆ ಆಸ್ಥೆ ಹೊಂದಿರುವ ಸದಸ್ಯರನ್ನು ದೃಷ್ಟಿಯಲ್ಲಿರಿಸಿಕೊಂಡು ಎರಡೂವರೆ ತಿಂಗಳ ಹಿಂದೆಯೇ ನಾನು ವಿಧೇಯಕವನ್ನು ಸದನದಲ್ಲಿ ಮಂಡಿಸಿದೆ. ಆದರೆ ಇಂದು ಬೆಳಗಿನ ತನಕವೂ ಯಾರೂ ನನಗೆ ಒಂದೇ ಒಂದು ತಿದ್ದುಪಡಿಯನ್ನು ಕಳುಹಿಸಿಕೊಟ್ಟಿಲ್ಲ ಎಂಬುದು ನನಗೆ ಅತ್ಯಂತ ಬೇಸರದ ವಿಷಯವಾಗಿದೆ. ಇಂದು ಪ್ರಶ್ನೋತ್ತರ ವೇಳೆಗೆ ನಾನು ಸ್ವಲ್ಪ ತಡವಾಗಿ ಆಗಮಿಸಲು ಅದೂ ಒಂದು ಕಾರಣವಾಗಿತ್ತು. ತಿದ್ದುಪಡಿಗಳನ್ನು ಕಳುಹಿಸಿಕೊಡುವಾಗ ವಿಧೇಯಕವನ್ನು ಪರಿಶೀಲನೆಗೆ ತೆಗೆದುಕೊಳ್ಳುವುದಕ್ಕೆ ಕನಿಷ್ಠ 24 ಗಂಟೆಗಳ ಮುಂಚಿತವಾಗಿ ಕಳುಹಿಸಬೇಕೆಂಬುದು ನಿಯಮ. ಏಕೆಂದರೆ ಸಂಬಂಧಪಟ್ಟ ಸಚಿವರಿಗೆ ಈ ತಿದ್ದುಪಡಿಗಳನ್ನು ಸ್ವೀಕರಿಸಬೇಕೇ? ಬೇಡವೇ? ಎಂಬುದನ್ನು ಪರಾಮರ್ಶಿಸುವುದಕ್ಕಾಗಿ ಈ ನಿಯಮವನ್ನು ರೂಪಿಸಲಾಗಿದೆ. ಈಗ ಸ್ವತಃ ನಾನೇ ಕೆಲವೊಂದು ಅಧಿಕೃತ ತಿದ್ದುಪಡಿಗಳನ್ನು ಸೂಚಿಸಿದ್ದು, ಸದನವು ಅವುಗಳನ್ನು ಅಂಗೀಕರಿಸುವುದೆಂದು ನಂಬಿದ್ದೇನೆ.

ಭಾರತೀಯ ವೈದ್ಯಕೀಯ ಮಂಡಳಿ ಕಾಯ್ದೆಗೆ ತಿದ್ದುಪಡಿಗಳನ್ನು ಬಹಳ ಎಚ್ಚರಿಕೆಯಿಂದ ಸಂಬಂಧಪಟ್ಟವರೊಂದಿಗೆ ಸಮಾಲೋಚಿಸಿಯೇ ತರಲಾಗಿದೆ. ಮೊದಲಲ್ಲಿ ರಾಜ್ಯ ಸರ್ಕಾರಗಳೊಂದಿಗೆ, ನಂತರದಲ್ಲಿ ಅಖಿಲ ಭಾರತ ವೈದ್ಯಕೀಯ ಮಂಡಳಿಯೊಂದಿಗೆ ಸಮಾಲೋಚಿಸಲಾಗಿದೆ. ತಿದ್ದುಪಡಿಗಳೊಂದಿಗೆ ಮಂಡಿಸಿದ ಈ ಹೊಸ ಮಸೂದೆಗೆ ಸೂಚಿಸಲಾಗಿರುವ ಬಹುತೇಕ ತಿದ್ದುಪಡಿಗಳನ್ನು ಅಖಿಲ ಭಾರತ ವೈದ್ಯಕೀಯ ಮಂಡಲಿಯಿಂದಲೇ ಸೂಚಿತವಾದವು ಎಂದು ನಾನು ನಿಮಗೆ ಹೇಳಬೇಕಾಗಿದೆ. ಇದೂ ಅಲ್ಲದೆ ರಾಜ್ಯ ಸರ್ಕಾರಗಳ ವೈದ್ಯಕೀಯ ವಲಯದ ತಜ್ಞರು, ಆರೋಗ್ಯ ಸಚಿವಾಲಯ ಹಾಗೂ ಭಾರತೀಯ ವೈದ್ಯಕೀಯ ಸಂಘಗಳೊಂದಿಗೆ ಈ ವಿಷಯದಲ್ಲಿ ಸಮಾಲೋಚಿಸಲಾಗಿದೆ. ಸಮಗ್ರ ವೈದ್ಯಕೀಯ ಸಮುದಾಯಕ್ಕೆ ಅಭಿಪ್ರಾಯ ವ್ಯಕ್ತಪಡಿಸಲು ಅವಕಾಶ ಕಲ್ಪಿಸುವ ದೃಷ್ಟಿಯಿಂದ ಹಾಗೆ ಮಾಡಲಾಯಿತು. ಈ ಎಲ್ಲ ದೃಷ್ಟಿಕೋನಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರವೇ ಈ ತಿದ್ದುಪಡಿ ವಿಧೇಯಕವನ್ನು ಸದನದ ಮುಂದೆ ತರಲಾಗಿದೆ.

---

* ಭಾರತೀಯ ವೈದ್ಯಕೀಯ ಮಂಡಳಿಯ ಪುನರ್ ಸಂಘಟನೆ ಮತ್ತು ಭಾರತದ ವೈದ್ಯಕೀಯ ದಾಖಲಾತಿ ಹಾಗೂ ಅದಕ್ಕೆ ಸಂಬಂಧಿಸಿದ ಇತರ ವಿಷಯಗಳ ಬಗೆಗೆ ಅವಕಾಶ ಕಲ್ಪಿಸಿ ಕೊಡುವ ವಿಧೇಯಕವನ್ನು ಮಂಡಿಸಿದ ಸಂದರ್ಭದಲ್ಲಿ (ರಾಜ್ಯಸಭೆ ಚರ್ಚೆ 1956 ಆಗಸ್ಟ್. ಪು.ಸಂ. 284-289, 290 ಮತ್ತು 343-350)

ಈ ಗೌರವಾನ್ವಿತ ಸದನದ ಸದಸ್ಯರು ಪರಿಶೀಲನೆಗೆ ತೆಗೆದುಕೊಳ್ಳಬೇಕಾದ ಕೆಲವೊಂದು ವಿಷಯಗಳು ಇಲ್ಲಿವೆ. ತಮ್ಮ ವಿದ್ಯಾರ್ಹತೆ, ಭಾರತೀಯ ವೈದ್ಯಕೀಯ ಮಂಡಲಿ ಕಾಯ್ದೆಯನ್ವಯ ಮಾನ್ಯತೆ ಪಡೆದಿಲ್ಲ ಎಂದು ಪರವಾನಗಿ ವೈದ್ಯರಲ್ಲಿ ಭಾರೀ ಆಕ್ರೋಶವಿದೆ. ಈಗ ಬೇರೆ ಬೇರೆ ರಾಜ್ಯಗಳ ವೈದ್ಯಕೀಯ ಕಾಯ್ದೆಗಳನ್ವಯ ಮಾತ್ರವೇ ಅವರಿಗೆ ಮಾನ್ಯತೆ ಇದೆ. ಅಖಿಲ ಭಾರತ ವೈದ್ಯರ ದಾಖಲಾತಿಯಲ್ಲಿ ಸೇರ್ಪಡೆಗೆ ಅರ್ಹತೆ ಪಡೆಯಬೇಕೆಂಬ ಈ ವೈದ್ಯರ ಬೇಡಿಕೆ ನ್ಯಾಯಬದ್ಧವಾದುದೇ ಆಗಿದೆ. ಈ ದರ್ಜೆಯ ವೈದ್ಯರು ದೇಶಾದ್ಯಂತ ಸಾವಿರ ಸಾವಿರ ಸಂಖ್ಯೆಯಲ್ಲಿ ಅದು ಅತ್ಯುತ್ತಮ ಸೇವೆ ಸಲ್ಲಿಸುತ್ತಿದ್ದಾರೆ. ಹಾಗಾಗಿ ಭಾರತ ಸರ್ಕಾರ ಅವರ ವಿದ್ಯಾರ್ಹತೆಯನ್ನು ಮಾನ್ಯ ಮಾಡುವುದು ಸರಿಯಾದ ಕ್ರಮವೇ ಆಗಿದೆ. ನಾವು ಅದಕ್ಕಿಂತಲೂ ಒಂದು ಹೆಜ್ಜೆ ಮುಂದೆ ಹೋಗಿದ್ದೇವೆ. ಅವರ ಹೆಸರುಗಳು ಅಖಿಲ ಭಾರತ ದಾಖಲಾತಿಯಲ್ಲಿ ಸೇರ್ಪಡೆಗೊಳ್ಳುವಂತೆ ಅವರ ವಿದ್ಯಾರ್ಹತೆಗೆ ಮಾನ್ಯತೆ ನೀಡಿರುವುದು ಮಾತ್ರವಲ್ಲ ಅಖಿಲ ಭಾರತ ವೈದ್ಯಕೀಯ ಮಂಡಲಿಯಲ್ಲಿ ಪ್ರಾತಿನಿಧ್ಯವನ್ನು ಕಲ್ಪಿಸಿಕೊಟ್ಟಿದ್ದೇವೆ. ಇದು ಅಷ್ಟು ಸುಲಭದ ಕೆಲಸವೇನೂ ಆಗಿರಲಿಲ್ಲ. ಕಳೆದ ಕೆಲವು ವರ್ಷಗಳ ಅವಧಿಯಲ್ಲಿ ಪರವಾನಗಿ ವೈದ್ಯರು ಹಲವಾರು ಬೇಡಿಕೆಗಳನ್ನು ಮುಂದಿಟ್ಟಿದ್ದಾರೆ. ಈ ಹಿನ್ನಲೆಯಲ್ಲಿ ಇದೀಗ ಮಂಡಿಸಲಾಗಿರುವ ವಿಧೇಯಕದಲ್ಲಿ ತಂದಿರುವ ತಿದ್ದುಪಡಿಗಳು ದೇಶದಲ್ಲಿನ ಪರವಾನಗಿ ವೈದ್ಯರ ಅಭಿಲಾಷೆ ಮತ್ತು ಆಶೋತ್ತರಗಳನ್ನು ಈಡೇರಿಸಿವೆ ಎಂದು ನಾನೂ ಭಾವಿಸಿದ್ದೇನೆ.

ಎರಡನೆಯದಾಗಿ ಭಾರತೀಯರು ವಿದೇಶಗಳಲ್ಲಿ ಪಡೆದುಕೊಂಡ ವೈದ್ಯಕೀಯ ಪದವಿಗಳಿಗೆ ಭಾರತೀಯ ವೈದ್ಯಕೀಯ ಮಂಡಳಿ ಕಾಯ್ದೆಯನ್ವಯ ಮಾನ್ಯತೆ ಹೊಂದಿಲ್ಲ ಎಂಬುದು ನನಗೆ ಅತ್ಯಂತ ವಿಷಾದ ಉಂಟು ಮಾಡಿದ ಅಂಶವಾಗಿದೆ. ವಿದೇಶಗಳೊಂದಿಗೆ ಪರಸ್ಪರದ ಪದವಿಗಳ ಮಾನ್ಯತೆಯ ವಿಷಯದಲ್ಲಿ ಒಡಂಬಡಿಕೆಗಳು ಇಲ್ಲದಿದ್ದುದೇ ಇದಕ್ಕೆ ಮುಖ್ಯ ಕಾರಣವಾಗಿತ್ತು. ನಮ್ಮ ದೇಶದ ವೈದ್ಯಕೀಯ ಪದವೀಧರರಿಗೆ ಸಮಾಂತರದ ಒಡಂಬಡಿಕೆ ಹೊಂದಿರುವ ರಾಷ್ಟ್ರಗಳಲ್ಲಿ ಪ್ರಾಕ್ಟೀಸ್ ಮಾಡಲು ಹೇಗೆ ಅವಕಾಶ ನೀಡುತ್ತಿಲ್ಲವೋ ಅದೇ ರೀತಿ ಅಲ್ಲಿನ ಪದವೀಧರರಿಗೆ ನಮ್ಮ ದೇಶದಲ್ಲಿ ಪ್ರಾಕ್ಟೀಸ್ ಮಾಡಲು ಅನುಮತಿ ನೀಡಬಾರದು ಎಂಬ ವಿಷಯದಲ್ಲಿ ನನಗೆ ಪೂರ್ಣ ಸಹಮತವಿದೆ. ಆದರೆ ವಿದೇಶಗಳಲ್ಲಿ ವೈದ್ಯಕೀಯ ಪದವಿ ಪಡೆದುಕೊಂಡಿರುವ ಭಾರತೀಯರಿಗೆ ಈ ನಿಷೇಧ ಅನ್ವಯವಾಗಬಾರದು. ಏಕೆಂದರೆ ಅವರು ಭಾರತೀಯರೇ ಆಗಿದ್ದು ಅವರು ರಾಷ್ಟ್ರೀಯ ದಾಖಲಾತಿಯಲ್ಲಿ ಇರುವುದು ಅಗತ್ಯವಾಗಿದೆ. ಹಾಗಾಗಿ ಪ್ರತಿಯೊಬ್ಬ ಭಾರತೀಯನೂ ಈ ತಿದ್ದುಪಡಿಯನ್ನು ತುಂಬು ಹೃದಯದಿಂದ ಸ್ವಾಗತಿಸುತ್ತಾನೆ ಎಂದು ನಾನು ಭಾವಿಸಿದ್ದೇನೆ.

ಇನ್ನು ವಿದೇಶಗಳಲ್ಲಿನ ವೈದ್ಯಕೀಯ ಸಂಸ್ಥೆಗಳು ವೈದ್ಯಕೀಯ ಪದವಿಗಳಿಗೆ ತಾತ್ಕಾಲಿಕ ಮಾನ್ಯತೆ ನೀಡುವ ವಿಷಯ. ನಮ್ಮೊಂದಿಗೆ ಯಾವುದೇ ರೀತಿಯ ಒಡಂಬಡಿಕೆ ಇಲ್ಲದ ಸಂದರ್ಭಗಳಲ್ಲಿ ನಮ್ಮ ದೇಶದ ಯಾವುದೇ ವೈದ್ಯಕೀಯ ಸಂಸ್ಥೆಯಲ್ಲಿ ಬೋಧನೆ, ಸಂಶೋಧನೆ ಅಥವಾ ಸೇವಾಯೋಜನೆಗಳಲ್ಲಿ ತಾತ್ಕಾಲಿಕ ನೆಲೆಯಲ್ಲಿ ಬರುವ ವೈದ್ಯರಿಗೂ ಇದು ಅನ್ವಯವಾಗುತ್ತದೆ. ಅಂಥವರಿಗೂ ಕಾರ್ಯ ನಿರ್ವಹಿಸಲು ಅವಕಾಶ ಒದಗಿಸಬೇಕಾದದ್ದು ಮುಖ್ಯ. ಯಾವುದೇ ತಾತ್ಕಾಲಿಕ ಸ್ವರೂಪದ ಯೋಜನೆಯಡಿಯಲ್ಲಿ ಬಂದ ವಿದೇಶೀಯರಿಗೆ-ರಾಜ್ಯ ಸರ್ಕಾರಗಳ ಆಹ್ವಾನದ ಮೇರೆಗೆ ಅಥವಾ ಕೇಂದ್ರ ಸರ್ಕಾರದ ಕರೆಯ ಮೇರೆಗೆ ಬಂದಿರಲಿ-ಅವರು ಬಂದ ಉದ್ದೇಶಕ್ಕಾಗಿ ಮುಕ್ತ ರೀತಿಯಲ್ಲಿ ಸೇವೆ ಸಲ್ಲಿಸಲು ಅವಕಾಶ ಕಲ್ಪಿಸುವುದು ಅವಶ್ಯವಾಗಿದೆ. ಈ ವಿಷಯದಲ್ಲಿ ನಾವು ಅವರಿಗೆ ನ್ಯಾಯ ಒದಗಿಸಬೇಕು. ಆದರೆ ಅಂತಹವರು ಯಾವುದೇ ದುರುದ್ದೇಶದಿಂದ

ಮಾನ್ಯ ಉಪ ಸಭಾಪತಿಗಳೇ, ಈ ಸದನದ ಅನೇಕ ಮಂದಿ ಸದಸ್ಯರು ನೀಡಿದ ಸಲಹೆಗಳನ್ನು ನಾನು ಸಾವಧಾನದಿಂದ ಆಲಿಸಿದ್ದೇನೆ ಮತ್ತು ಸಮಗ್ರವಾಗಿ ಪರಿಶೀಲಿಸಿದ್ದೇನೆ. ಅವರು ನೀಡಿರುವ ಈ ಸಲಹೆಗಳಿಗಾಗಿ ನಾನು ಅವರಿಗೆ ಆಭಾರಿಯಾಗಿದ್ದೇನೆ ಮತ್ತು ಅವುಗಳಲ್ಲಿ ಕೆಲವನ್ನು ಸ್ವೀಕರಿಸಿಯೂ ನಿರ್ಧರಿಸಿದ್ದೇನೆ. ಈ ಸಲಹೆಗಳು ಯಾವುವು ಎಂಬುದನ್ನು ನಾನು ಅನಂತರ ಹೇಳುತ್ತೇನೆ. ಆದರೆ ಮೂಲದಲ್ಲಿ ಸ್ವೀಕರಿಸಲು ಅಸಾಧ್ಯವಾಗಿರುವಂತಹ ಕೆಲವು ಸಲಹೆಗಳಿದ್ದು ಅವುಗಳ ಬಗ್ಗೆ ನಾನು ಉತ್ತರ ನೀಡಬೇಕಾಗಿದೆ. ಉದಾಹರಣೆಗೆ ಕೊನೆಯಲ್ಲಿ ಮಾತನಾಡಿದ ಭಾಷಣಕಾರರೊಬ್ಬರು ಈ ಮಂಡಲಿಯು ವೈದ್ಯರ ಶುಲ್ಕವನ್ನು ನಿಯಂತ್ರಿಸಬೇಕೆಂದು ಸೂಚಿಸಿದ್ದಾರೆ. ಪ್ರಸ್ತುತ ಸದನದಲ್ಲಿ ಮಂಡಿಸಿರುವ ಪ್ರಸಕ್ತ ವಿಧೇಯಕವು ಪದವಿಪೂರ್ವ ಮತ್ತು ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣವನ್ನು ನಿಯಂತ್ರಿಸಲು ಇರುವಂತಹುದಾಗಿದೆಯೆಂಬ ಅಂಶವನ್ನು ಮಾನ್ಯ ಸದಸ್ಯರು ಗಮನದಲ್ಲಿಟ್ಟುಕೊಳ್ಳಬೇಕು ಎಂದು ನಾನು ಬಯಸುತ್ತೇನೆ. ಹಾಗಾಗಿ ವೈದ್ಯರು ವಿಧಿಸುವ ಶುಲ್ಕದ ಮೇಲೆ ನಿಯಂತ್ರಣವನ್ನು ಹೇರುವ ಕ್ರಮವನ್ನು ನಾನು ಈ ವಿಧೇಯಕದಲ್ಲಿ ಅಳವಡಿಸಲು ಸಾಧ್ಯವಿಲ್ಲ. ಇದು ಆಡಳಿತಾತ್ಮಕ ವಿಷಯವಾಗಿದ್ದು ಇದು ರಾಜ್ಯ ಸರ್ಕಾರಗಳೇ ತೀರ್ಮಾನಿಸಬೇಕಾಗಿರುವ ವಿಷಯವಾಗಿದೆ. ಆದರೆ ಈ ಪ್ರಶ್ನೆಯನ್ನು ಎತ್ತಿದಾಗಲೆಲ್ಲ ವೈದ್ಯಕೀಯ ಕಾಲೇಜುಗಳಲ್ಲಿ ಬೋಧನಾ ವೃತ್ತಿಯನ್ನು ನಡೆಸುವ ಅಧ್ಯಾಪಕರಿಗೆ ಸೂಕ್ತ ಸಂಬಳ, ಸಾರಿಗೆ ನೀಡುವ, ಅವರಿಗೆ ಖಾಸಗಿ ಪ್ರಾಕ್ಟೀಸ್‌ಗೆ ಅವಕಾಶ ನೀಡದಿರುವ ಕ್ರಮಕ್ಕೆ ಒತ್ತು ನೀಡಿರುವುದನ್ನು ನಾನು ಮಾನ್ಯ ಸದಸ್ಯರಿಗೆ ಜ್ಞಾಪಿಸಲು ಬಯಸುತ್ತೇನೆ. ಆದರೆ ಹಣಕಾಸಿನ ಕಾರಣಗಳಿಂದಾಗಿ ನನ್ನ ಈ ಸಲಹೆಗೆ ಒಂದೇ ಒಂದು ರಾಜ್ಯದ ಆರೋಗ್ಯ ಸಚಿವರ ಬೆಂಬಲವೂ ದೊರೆತಿಲ್ಲ. ಹೀಗಾಗಿ ವೈದ್ಯರ ಶುಲ್ಕವನ್ನು ನಿಯಂತ್ರಿಸುವುದು ನನಗೆ ಅಸಾಧ್ಯವಾಗಿದೆ. ನೈತಿಕ ನಿಯಮಾವಳಿಗಳನ್ನು ರೂಪಿಸುವ ತನ್ನ ಕಾರ್ಯವ್ಯಾಪ್ತಿಯಿಂದ ಭಾರತೀಯ ವೈದ್ಯಕೀಯ ಮಂಡಳಿ ಮೀರಿ ಹೋಗಲು ಸಾಧ್ಯವಿಲ್ಲ ಎಂಬುದನ್ನು ಮಾನ್ಯ ಸದಸ್ಯರು ಗಮನಿಸಬೇಕು. ವೈದ್ಯರು ಮತ್ತು ವೈದ್ಯಕೀಯ ವೃತ್ತಿ ನಿರತರು ಅನುಸರಿಸಬೇಕಾದ ನೈತಿಕ ನಿಯಮಗಳನ್ನು ರೂಪಿಸಲಾಗಿದೆ. ಯಾರಾದರೂ ಈ ನಿಯಮಾವಳಿಗಳನ್ನು ಉಲ್ಲಂಘಿಸಿದರೆ ಅಂತಹವರ ಹೆಸರುಗಳನ್ನು ಈ ರಾಷ್ಟ್ರೀಯ ವೈದ್ಯರ ಯಾದಿಯಿಂದ ಕಿತ್ತುಹಾಕಲಾಗುವುದು. ಅಂತಹ ನೈತಿಕತೆಯನ್ನು ಶಾಸನಗಳಿಂದ ರೂಢಿಸಲು ಸಾಧ್ಯವಿಲ್ಲ. ಶಾಸನಗಳಿಂದ ರಾತ್ರಿ ಬೆಳಗಾಗುವುದರೊಳಗೆ ಜನರನ್ನು ಒಳ್ಳೆಯವರನ್ನಾಗಿ ಪರಿವರ್ತಿಸಲೂ ಸಾಧ್ಯವಿಲ್ಲ. ಅದಕ್ಕಾಗಿ ನಾವು ಒಂದು ಪರಂಪರೆಯನ್ನು ನಿರ್ಮಿಸಬೇಕಾಗುತ್ತದೆ. ಅಂತಹ ಪರಂಪರೆಯೊಂದನ್ನು ನಿರ್ಮಿಸುವ ಕಾರ್ಯಭಾರ ವೈದ್ಯಕೀಯ ವೃತ್ತಿಯನ್ನು ಅನುಸರಿಸುವವರ ಕೈಯಲ್ಲೇ ಇದೆ ಮತ್ತು ವೈದ್ಯ ಸಮುದಾಯ ಇದನ್ನು ಸಾಧಿಸಬಲ್ಲದೆಂಬ ನಂಬಿಕೆಯೂ ನನಗಿದೆ.

ವೈದ್ಯರಲ್ಲಿ ವೃತ್ತಿಪರ ದುರ್ನಡತೆ* ಕಂಡುಬಂದಲ್ಲಿ, ಅಂತಹವರ ವಿರುದ್ಧ ಕ್ರಮ ಕೈಗೊಳ್ಳುವುದು ಅಗತ್ಯ ಹಾಗೂ ಸೂಕ್ತ ಎಂದು ವೈದ್ಯಕೀಯ ಮಂಡಲಿ ಪರಿಗಣಿಸಿದಲ್ಲಿ ಮತ್ತು ಅಂತಹ ಪ್ರಕರಣಗಳು ಗಮನಕ್ಕೆ ತಂದಲ್ಲಿ ಅಂತಹ ವೈದ್ಯರ ಹೆಸರುಗಳನ್ನು [illegible] ಕಿತ್ತು ಹಾಕಲಾಗುವುದು. ಅಂತಹ ಅಧಿಕಾರ ಈಗಾಗಲೇ ಇದೆ. ವೈದ್ಯಕೀಯ ಶಿಕ್ಷಣದ ಪಠ್ಯಕ್ರಮವನ್ನು ರೂಪಿಸುವುದು

* ವೃತ್ತಿಪರ ದುರ್ನಡತೆ ಕುರಿತು ಶ್ರೀ ಗೋಪಿಕೃಷ್ಣ ವಿಜಯ್ ಸಿಂಗರು ಕುರಿತು ಮಾಡಿದ ಪ್ರಸ್ತಾಪಕ್ಕೆ ಉತ್ತರಿಸುತ್ತಾ

ಹಾಗೂ ನಿಯಂತ್ರಿಸುವುದು ವಿಶ್ವ ವಿದ್ಯಾಲಯದ ಕೆಲಸವಾಗಿದೆ. ಲಕ್ನೋ ವಿಶ್ವವಿದ್ಯಾಲಯದ ಉಪ ಕುಲಪತಿಗಳು -ಉಪ ಕುಲಪತಿಗಳಾದ ಅವರು ಈ ಮನೆಯ ಸದಸ್ಯರೂ ಆಗಿದ್ದಾರೆ- ಈಗ ಇಲ್ಲಿಲ್ಲ. ಒಂದು ವೇಳೆ ಪಠ್ಯಕ್ರಮದಲ್ಲಿ ಬದಲಾವಣೆ ತರುವ ಅಧಿಕಾರವನ್ನು ವೈದ್ಯಕೀಯ ಮಂಡಳಿಗೆ ನೀಡಿದ್ದರೆ ಅವರಿಗೆ ಆತಂಕ ಉಂಟಾಗುವುದು ಸಹಜ. ಆದರೆ ಕಾಲೇಜುಗಳ ಕಾರ್ಯ ನಿರ್ವಹಣೆಯಲ್ಲಿ ತಪಾಸಣೆ ನಡೆಸುವ ಅಧಿಕಾರ ಮಂಡಳಿಗೆ ಇದ್ದೇ ಇದೆ. ಅದಲ್ಲದೆ ಅನಕ್ಕೆ ಸೂಕ್ತವೆಂದು ಕಂಡು ಬಂದರೆ ಬದಲಾವಣೆಗಳನ್ನು ಸೂಚಿಸುವ ಹಕ್ಕು ಅದಕ್ಕೆ ಇದ್ದೇ ಇದೆ.

ಈಗ ಮತ್ತೆ ಎಂದಿನಂತೆ ಆಯುರ್ವೇದ ವೈದ್ಯ ಪದ್ಧತಿಯ ಪರವಾಗಿ ಮಾನ್ಯ ಸದಸ್ಯರು ಮುಂದಿಟ್ಟ ಅಹವಾಲುಗಳನ್ನು ಆಲಿಸಿದ್ದೇನೆ. ಮತ್ತೆ ಯಥಾ ಪ್ರಕಾರ ಭಾರತೀಯ ವಿಷಯಗಳ ಬಗ್ಗೆ ನನ್ನಲ್ಲಿ ಒಂದು ರೀತಿಯ ವಿಲಕ್ಷಣ ಉಪೇಕ್ಷೆ ಇದೆ ಎಂದು ನನ್ನ ಮೇಲೆ ಆರೋಪ ಮಾಡಿದ್ದಾರೆ. ಆದರೆ ಈ ವಿಷಯದಲ್ಲಿ ಸಮರ್ಥಿಸಿಕೊಳ್ಳಲು ನಾನು ಇಚ್ಛಿಸುವುದಿಲ್ಲ. ಏಕೆಂದರೆ ಭಾರತೀಯ ವೈದ್ಯಕೀಯ ಮಂಡಲಿಯನ್ನು ಒಂದು ನಿರ್ದಿಷ್ಟ ಉದ್ದೇಶದಿಂದ ಸ್ಥಾಪಿಸಲಾಗಿದೆ. ಹಾಗಾಗಿ ಇತರ ವಿಷಯಗಳು ಈಗ ಪ್ರಸ್ತುತವಲ್ಲ. ಈ ವಿಧೇಯಕವನ್ನು ಯಾವ ನಿರ್ದಿಷ್ಟ ಉದ್ದೇಶಕ್ಕಾಗಿ ತರಲಾಗಿದೆ ಎಂಬುದನ್ನು ನಾನು ಆರಂಭದಲ್ಲೇ ಸ್ಪಷ್ಟಪಡಿಸಿದ್ದೇನೆ. ಈ ಕಾಯ್ದೆಯು ಕಲವು ವಿಷಯಗಳಲ್ಲಿ ಕಾಲ ದೂಷಿತವಾಗಿದ್ದು, ಈಗಿನ ತಿದ್ದುಪಡಿಯಿಂದ ಸಹಜವಾಗಿಯೇ ಹಳೆಯ ಕಾಯ್ದೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವುದು. ನಾನೀಗಾಗಲೇ ಹೇಳಿರುವಂತೆ ನಮ್ಮ ಆಧುನಿಕ ವೈದ್ಯಕೀಯ ಕಾಲೇಜುಗಳಲ್ಲಿನ ಪದವಿ ಪೂರ್ವ ಮತ್ತು ಸ್ನಾತಕೋತ್ತರ ಶಿಕ್ಷಣವನ್ನು ನಿಯಂತ್ರಿಸುವುದೇ ಈ ವಿದೇಯಕದ ಉದ್ದೇಶವಾಗಿದೆ. ಭಾರತೀಯ ವೈದ್ಯಕೀಯ ಮಂಡಲಿಯು ಆಯುರ್ವೇದ ಕಾಲೇಜುಗಳ-ತಪಾಸಣೆ ನಡೆಸುವುದಿಲ್ಲ. ಏಕೆಂದರೆ ಅವು ರಾಜ್ಯ ಸರ್ಕಾರಗಳ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿವೆ. ಆಯುರ್ವೇದ ಪದವಿಗಳಿಗೆ ಮಾನ್ಯತೆ ನೀಡಲು ರಾಜ್ಯ ವೈದ್ಯಕೀಯ ಮಂಡಲಿಗಳಿವೆ. ಹಾಗಾಗಿ ಆ ಕೆಲಸವನ್ನು ಭಾರತೀಯ ವೈದ್ಯ ಮಂಡಳಿ ಮಾಡುವುದಿಲ್ಲ. ಅದೇ ರೀತಿ ಅಖಿಲ ಭಾರತೀಯ ಆಯುರ್ವೇದ ಮಂಡಲಿಯೊಂದನ್ನು ಸ್ಥಾಪಿಸುವ ವಿಚಾರದಲ್ಲಿ ಹೇಳುವುದಾದರೆ ಅದನ್ನು ಆಯಾ ರಾಜ್ಯ ಸರ್ಕಾರಗಳು ಕೈಗೆತ್ತಿಕೊಳ್ಳಬೇಕು ಮತ್ತು ದೇಶಾದ್ಯಂತ ಏಕರೀತಿಯ ಶಿಕ್ಷಣ ಮಟ್ಟವನ್ನು ರೂಪಿಸಬೇಕು. ಆಯುರ್ವೇದ, ಯುನಾನಿ ಮತ್ತು ಹೋಮಿಯೋಪಥಿಯ ಶಿಕ್ಷಣ ಮಟ್ಟ ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿರುವಾಗ ಅವರಿಗಾಗಿ ಅಖಿಲ ಭಾರತ ದಾಖಲಾತಿಯೊಂದನ್ನು ಹೊಂದಿರುವುದು ಸಾಧ್ಯವಿಲ್ಲವಾಗಿದೆ.

ಆಧುನಿಕ ವೈದ್ಯಕೀಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಅದರ ಮಟ್ಟವು ಎಲ್ಲ ಕಡೆ ಒಂದೇ ರೀತಿಯದಾಗಿರುತ್ತದೆ. ಲೈಸೆನ್ಸಿಯೇಟ್‌ಗಳು ಮತ್ತು ಎಲ್.ಎಂ.ಸಿ.ಗಳ ಶಿಕ್ಷಣ ಮಟ್ಟ ಒಂದೇ. ಹೆಸರುಗಳು ಮಾತ್ರ ಬೇರೆ ಬೇರೆ.*

ಭಾರತೀಯ ವೈದ್ಯಕೀಯ ಮಂಡಲಿಯು ವೈದ್ಯಕೀಯ ಪದವಿಗಳಿಗೆ ಮಾನ್ಯತೆ ನೀಡುವ ವಿಷಯದಲ್ಲಿ ವಿದೇಶಿ ವೈದ್ಯಕೀಯ ಸಂಸ್ಥೆಗಳೊಂದಿಗೆ ಸಂಪರ್ಕ ಇಟ್ಟುಕೊಳ್ಳುತ್ತದೆ. ಆದರೆ ಪರವಾನಗಿ ಪದವಿಗಳು ವಿದೇಶಗಳಲ್ಲಿ ಮಾನ್ಯತೆ ಹೊಂದಿಲ್ಲ. ಅದಲ್ಲದೆ ಅವರು ಸ್ನಾತಕೋತ್ತರ ಅಧ್ಯಯನಕ್ಕೆ ಅಲ್ಲಿಗೆ ಹೋಗುವ ಹಾಗಿಲ್ಲ. ಈ ವಿಷಯದಲ್ಲಿ ವಿದೇಶಗಳನ್ನು ನಿಯಂತ್ರಿಸಲು

*ವಿಧೇಯಕದ 14ನೇ ಖಂಡ ಕುರಿತು ಶ್ರೀ ರಾಜೇಂದ್ರ ಪ್ರತಾಪ್ ಸಿನ್ಹಾ ಅವರು ಕೇಳಿದ ಪ್ರಶ್ನೆಗೆ ಉತ್ತರಿಸುತ್ತಾ.

ಬರುವುದಿಲ್ಲ. ಆದರೆ ಪರವಾನಗಿ ಪದವೀಧರರು ದೇಶದಲ್ಲಿ ವೈದ್ಯಕೀಯ ಸೇವೆ ಸಲ್ಲಿಸುತ್ತಿರುವುದರಿಂದ, ಅವರು ಇಲ್ಲೇ ನೆಲೆಸಿರುವುದರಿಂದ ಮತ್ತು ವೈದ್ಯಕೀಯ ಮಂಡಲಿಯಲ್ಲಿ ತಮಗೆ ಪ್ರಾತಿನಿಧ್ಯ ನೀಡಬೇಕೆಂದು ಆಗ್ರಹಪಡಿಸಿರುವುದರಿಂದ ನಾನು ಅವರಿಗೆ ಅತ್ಯಂತ ಪ್ರಯಾಸದಿಂದ ಆ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದೇನೆ. ಅಖಿಲ ಭಾರತ ವೈದ್ಯಕೀಯ ಮಂಡಲಿಯಲ್ಲಿ ಏಳು ಮಂದಿ ಪರವಾನಗಿ ವೈದ್ಯರಿಗೆ ಪ್ರಾತಿನಿಧ್ಯ ಕಲ್ಪಿಸುವಂತೆ ನಾನು ಪ್ರಯತ್ನಿಸಿ ಯಶಸ್ವಿಯಾಗಿದ್ದೇನೆ. ಈ ವಿಧೇಯಕವು ಪದವಿ ಪೂರ್ವ (ಎಂ.ಬಿ.ಬಿ.ಎಸ್) ಮತ್ತು ಸ್ನಾತಕೋತ್ತರ ಶಿಕ್ಷಣಕ್ಕೆ ಮಾತ್ರವೇ ಮೀಸಲಾಗಿದೆಯೆಂಬುದನ್ನು ಮಾನ್ಯ ಸದಸ್ಯರು ನೆನಪಿಟ್ಟುಕೊಳ್ಳಬೇಕು. ಇಲ್ಲಿ ಪರವಾನಗಿ ಪದವೀಧರರಿಗೆ ಪ್ರಾತಿನಿಧ್ಯ ಕಲ್ಪಿಸುವ ವಿಷಯದಲ್ಲಿ ಕಡು ವಿರೋಧವೂ ಇತ್ತು. ಏಕೆಂದರೆ ಈ ಉನ್ನತ ಹಂತದಲ್ಲಿ ಸಲಹೆ ಸೂಚನೆಗಳನ್ನು ನೀಡಲು ಅವರು ಸಮರ್ಥರಲ್ಲ ಎಂಬುದೇ ಈ ವಿರೋಧಕ್ಕೆ ಕಾರಣವಾಗಿತ್ತು. ಆದರೂ ವೈದ್ಯಕೀಯ ಮಂಡಲಿಯ ಮುಂದೆ ನಾನು ಅವರ ಪರವಾಗಿ ಅಹವಾಲು ಮಂಡಿಸಿ ಅವರನ್ನು ಒಪ್ಪಿಸಿದ್ದೇನೆ. ಇದೇ ವೇಳೆಗೆ ಇನ್ನೋರ್ವ ಸದಸ್ಯರು ಪರವಾನಗಿ ವೈದ್ಯರ ಸಂಖ್ಯೆ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿದೆ ಎಂದು ಹೇಳಿದ್ದಾರೆ. ಅಂಥವರಲ್ಲಿ ಅನೇಕರಿಗೆ ಅಲ್ಪಾವಧಿಯ ಕೋರ್ಸ್ ಒಂದಕ್ಕೆ ಅವಕಾಶ ಕಲ್ಪಿಸಿ ಎಂ.ಬಿ.ಬಿ.ಎಸ್. ಪದವೀಧರರ ದಾಖಲಾತಿಯಲ್ಲಿ ಸೇರ್ಪಡೆಯಾಗುವಂತೆ ಮಾಡಲಾಗಿದೆ. ಒಟ್ಟಿನಲ್ಲಿ ಈ ವರ್ಗದ ವೈದ್ಯರಿಗಾಗಿ ನಾವು ಏನೆಲ್ಲಾ ಮಾಡಲು ಸಾಧ್ಯವೋ ಅಷ್ಟೆಲ್ಲವನ್ನೂ ನಾವು ಮಾಡಿದ್ದೇವೆ. ಇದರಿಂದ ಪರವಾನಗಿ ವೈದ್ಯರು ಸಂಪೂರ್ಣ ಸಂತೃಪ್ತರಾಗಿದ್ದಾರೆ ಎಂದು ನಾನು ನಂಬಿದ್ದೇನೆ.

ಆಯುರ್ವೇದ ವೈದ್ಯ ಪದ್ಧತಿಯ ಬಗ್ಗೆ ನಾನೀಗಾಗಲೇ ಸಾಕಷ್ಟು ಮಾತನಾಡಿದ್ದೇನೆ. ವೈದ್ಯರು ಅಖಿಲ ಭಾರತ ವೈದ್ಯಕೀಯ ಮಂಡಳಿಯ ಮುಂದೆ ತಮ್ಮ ಅಹವಾಲುಗಳನ್ನು ಮುಂದಿಡಬಹುದು. ಅವರ ಮನವಿಯನ್ನು ಮಂಡಳಿ ಸ್ವೀಕರಿಸಿದರೆ ಮತ್ತು ದಾವೆ ವರದಿಯಂತೆ ಸಮಗ್ರ ಹಾಗೂ ಏಕರೂಪದ ಧೋರಣೆಯೊಂದು ರೂಪಿತವಾದರೆ ಆಗ ನಾವು ಅಖಿಲ ಭಾರತ ಆಯುರ್ವೇದ ಮಂಡಳಿಯ ರಚನೆಯನ್ನು ಕೈಗೆತ್ತಿಕೊಳ್ಳಬಹುದು.

ಸ್ನಾತಕೋತ್ತರ ಸಮಿತಿಯ ರಚನೆಗೆ ಮುಂದಾದಾಗ ವೈದ್ಯಕೀಯ ಸಂಸ್ಥೆಗಳೊಂದಿಗೆ ಏಕೆ ಸಮಾಲೋಚಿಸಿಲ್ಲ ಎಂದು ಕೆಲವರು ನನ್ನನ್ನು ಪ್ರಶ್ನಿಸಿದ್ದಾರೆ. ನಾನು ಈ ವಿಷಯದಲ್ಲಿ ಎಲ್ಲ ರಾಜ್ಯ ಸರ್ಕಾರಗಳೊಂದಿಗೆ, ಅಂದರೆ ಎಲ್ಲ ರಾಜ್ಯಗಳ ಆರೋಗ್ಯ ಸಚಿವರೊಂದಿಗೆ ಸಮಾಲೋಚನೆ ನಡೆಸಿದ್ದೇನೆ ಎಂದು ಈಗಾಗಲೇ ಹೇಳಿದ್ದೇನೆ. ವೈದ್ಯಕೀಯ ಕ್ಷೇತ್ರದ ತಜ್ಞರೊಂದಿಗೆ ಖಾಸಗಿಯಾಗಿ, ಸಾಮುದಾಯಿಕವಾಗಿ ಸಮಾಲೋಚಿಸಿದ್ದೇನೆ. ಭಾರತೀಯ ವೈದ್ಯಕೀಯ ಸದಸ್ಯರೊಂದಿಗೆ, ಅದಕ್ಕಿಂತಲೂ ಮಿಗಿಲಾಗಿ ಈಗ ಅಸ್ತಿತ್ವದಲ್ಲಿರುವ ವೈದ್ಯಕೀಯ ಮಂಡಲಿಯ ಜೊತೆಯಲ್ಲೂ ಈ ವಿಷಯವನ್ನು ಚರ್ಚಿಸಿದ್ದೇನೆ. ಸ್ನಾತಕೋತ್ತರ ಸಮಿತಿಯ ಸ್ವರೂಪ ಮತ್ತು ರಚನೆಗೆ ಸಂಬಂಧಿಸಿದ ವಿಧಿಯ ವಿಷಯದಲ್ಲಿ ಹೇಳುವುದಾದರೆ ಅದು ನನ್ನ ಮತ್ತು ವೈದ್ಯಕೀಯ ಮಂಡಳಿಯ ನಡುವಣ ಒಂದು ರಾಜಿ ಸೂತ್ರವಾಗಿದೆ. ಈ ಸಂಬಂಧದಲ್ಲಿ ನಡೆದ ವೈದ್ಯಕೀಯ ಮಂಡಲಿ ಸಭೆಯಲ್ಲಿ ಮಂಡಳಿಯ ಅಧ್ಯಕ್ಷರೂ ಇದ್ದರು. ಡಾ|. ಬಿ.ಸಿ.ರಾಯ್ ಅವರೂ ಅಲ್ಲಿದ್ದರು. ಈ ಸಭೆಯಲ್ಲಿ ಸದಸ್ಯರು ನೀಡಿದ ಸಲಹೆಗಳು ಮತ್ತು ಇವರೆಲ್ಲರ ಒಪ್ಪಿಗೆಯ ಮೇರೆಗೆ ಸಮಿತಿಯ

ಪದವಿಗೆ ಸಂಬಂಧಿಸಿದ ಅಂಶಗಳನ್ನು ತೀರ್ಮಾನಿಸಲಾಯಿತು. ಅಲ್ಲಿ ಸೇರಿದವರೆಲ್ಲರೂ ತಜ್ಞರಾಗಿದ್ದರು. ಅವರ ಮಧ್ಯೆ ಈ ವಿಷಯದಲ್ಲಿ ಯಾವ ಭಿನ್ನಾಭಿಪ್ರಾಯಗಳೂ ಬರಲಿಲ್ಲ.

ಈ ವಿಧೇಯಕವು ಸರ್ವಾಧಿಕಾರಿ ಪ್ರವೃತ್ತಿಯಿಂದ ಕೂಡಿದ್ದು ಸರ್ಕಾರವೇ ಎಲ್ಲ ಅಧಿಕಾರವನ್ನು ತನ್ನ ಕೈಯಲ್ಲಿಟ್ಟುಕೊಳ್ಳಲು ಮುಂದಾಗಿದೆ ಎಂದು ಮುಂತಾಗಿ ಮಾನ್ಯ ಸದಸ್ಯರೊಬ್ಬರು ಆರೋಪಿಸಿದ್ದಾರೆ. ದರ್ಬಾಂಗ್, ಪುಣೆ ಮತ್ತು ಬರೋಡಾದ ಪದವಿಗಳಿಗೆ ಸರ್ಕಾರ ಮಾನ್ಯತೆ ನೀಡಿಕೆ ಸಂಬಂಧದಲ್ಲಿ ವೈದ್ಯಕೀಯ ಮಂಡಲಿಯ ಅಧ್ಯಕ್ಷರು ಬರೆದಿರುವ ಪತ್ರವೊಂದನ್ನು ಇಲ್ಲಿ ಓದಿ ಹೇಳಲಾಗಿದೆ. ಆದರೆ ಈ ವಿಷಯದಲ್ಲಿ ಸರ್ಕಾರ ಭಾರತೀಯ ವೈದ್ಯಕೀಯ ಮಂಡಳಿಯೊಂದಿಗೆ ಸಮಾಲೋಚಿಸಿದೆ ಎಂಬ ಅಂಶವನ್ನು ಭಾರತೀಯ ವೈದ್ಯ ಮಂಡಲಿಯ ಅಧ್ಯಕ್ಷರ ಪರವಾಗಿ ಈ ಆರೋಪ ಮಾಡಿರುವ ಮಾನ್ಯ ಸದಸ್ಯರ ಮಾಹಿತಿಗಾಗಿ ಹೇಳುತ್ತಿದ್ದೇನೆ. ಈ ರಾಜ್ಯಗಳಲ್ಲಿ ಮಾನ್ಯತೆ ಸಂಬಂಧದಲ್ಲಿ ಭಾರೀ ಚಳುವಳಿಯೇ ನಡೆದಿತ್ತು. ರಾಜ್ಯ ಸರ್ಕಾರಗಳು ಈ ವಿಷಯದಲ್ಲಿ ನನ್ನನ್ನು ಸಂಪರ್ಕಿಸಿದ್ದವು. ಪದವೀಧರರು ಉಪವಾಸ ಸತ್ಯಾಗ್ರಹದ ಬೆದರಿಕೆಯನ್ನು ಹಾಕಿದ್ದರು. ಎರಡು ವರ್ಷಗಳು ಸರಿದರೂ ಮಂಡಲಿಯಿಂದ ನನಗೆ ಯಾವ ಉತ್ತರವೂ ಬರಲಿಲ್ಲ. ಈ ಪದವೀಧರರಿಗೆ ಅನ್ಯಾಯವಾಗುತ್ತಿದೆ ಎಂದು ನನಗೆ ಮನವರಿಕೆಯಾಯಿತು. ನಾನು ತೆಗೆದುಕೊಂಡ ಕ್ರಮವನ್ನು ಪ್ರತಿಯೊಬ್ಬರೂ ಸ್ವಾಗತಿಸಿದ್ದಾರೆ. ಈ ವಿಷಯವಾಗಿ ಎಲ್ಲರೂ ನನ್ನನ್ನು ಅಭಿನಂದಿಸಿದರು. ದರ್ಬಾಂಗ್ ವೈದ್ಯಕೀಯ ಕಾಲೇಜಿನ ಪದವೀಧರನೊಬ್ಬ ಪಾಟ್ನಾ ಮತ್ತು ಬಕ್ಸರ್‌ಗಳಲ್ಲಿ ಪ್ರಾಕ್ಟೀಸ್ ನಡೆಸಬಹುದು. ಆದರೆ ಆತ ಬನಾರಸ್ ಅಥವಾ ರೂಪಲ್ ಸರಾಯ್‌ನಲ್ಲಿ ಪ್ರಾಕ್ಟೀಸ್ ನಡೆಸುವಂತಿಲ್ಲ. ಇಂತಹ ಅಸಂಬದ್ಧವನ್ನು ಯಾರಾದರೂ ಊಹಿಸಲು ಸಾಧ್ಯವೇ? ಭಾರತ ಸರ್ಕಾರಕ್ಕೆ ಈ ಕ್ರಮ ಕೈಗೊಳ್ಳದೆ ಬೇರೆ ವಿಧಿಯೇ ಇರಲಿಲ್ಲ. ದರ್ಬಾಂಗ್‌ಗೆ ಕಾಲೇಜಿನಲ್ಲಿ ವೈದ್ಯಕೀಯ ಶಿಕ್ಷಣದ ಅಂತಿಮ ವರ್ಷದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣನಾದ ವಿದ್ಯಾರ್ಥಿಗೆ ಮಾನ್ಯತೆ ಇಲ್ಲ. ಆದರೆ ಇತರ ಕಾಲೇಜುಗಳಲ್ಲಿ ಪ್ರಥಮ ವರ್ಷದಲ್ಲಿ ಅನುತ್ತೀರ್ಣನಾಗಿ ನಂತರದ ವರ್ಷಗಳಲ್ಲಿ ತೇರ್ಗಡೆ ಹೊಂದಿದ ಪದವೀಧರರಿಗೆ ಮಾನ್ಯತೆ ಇದೆ. ಇದು ನ್ಯಾಯ ಸಮ್ಮತವೇ? ಆದರೆ ಪ್ರಧಾನ ಮಂತ್ರಿಯವರಂತಹ ನಾಯಕತ್ವ ಹೊಂದಿರುವ ಕೇಂದ್ರ ಸರ್ಕಾರದಲ್ಲಿ ಎಂದೂ ಪ್ರಾದೇಶಿಕತೆ ಹಾಗೂ ಸಂಕುಚಿತ ಮನೋಭಾವಗಳಿಗೆ ಆಸ್ಪದವಿಲ್ಲ ಎಂಬ ಅಂಶವನ್ನು ನಾನು ಅತ್ಯಂತ ವಿನಮ್ರತೆಯಿಂದ ಈ ಸಂದರ್ಭದಲ್ಲಿ ಸ್ಪಷ್ಟಪಡಿಸಬಯಸುತ್ತೇನೆ.

ಬ್ರಿಟಿಷ್ ವೈದ್ಯಕೀಯ ಮಂಡಳಿಯ ಸಲಹೆ ಸೂಚನೆಗಳನ್ನು ಪಡೆಯದೆ ಅಲ್ಲಿನ ಸರ್ಕಾರ ಏನನ್ನು ಮಾಡುವುದಿಲ್ಲ ಎಂದು ಸದಸ್ಯರಲ್ಲಿ ಯಾರೋ ಒಬ್ಬರು ಹೇಳಿದ್ದಾರೆ. ಆದರೆ ಇಂಗ್ಲೆಂಡಿನ ರಾಷ್ಟ್ರೀಯ ಆರೋಗ್ಯ ಸೇವೆ ಬಗ್ಗೆ ವೈದ್ಯಕೀಯ ವೃತ್ತಿ ನಿರತರು ಮತ್ತು ಬ್ರಿಟಿಷ್ ವೈದ್ಯಕೀಯ ಮಂಡಲಿಯ ಸದಸ್ಯರು ತೀವ್ರವಾಗಿ ವಿರೋಧಿಸಿದ್ದಾರೆ. ಸರ್ಕಾರ ಈ ಯೋಜನೆಯನ್ನು ಅವರ ತೀವ್ರ ವಿರೋಧದ ಮಧ್ಯೆಯೇ ಮುಂದುವರೆಸಿಕೊಂಡು ಬಂದಿದೆ.

ವಿಧೇಯಕದ ಮೂರನೇ ಷೆಡ್ಯೂಲ್‌ನ ಎರಡನೇ ಭಾಗದಲ್ಲಿ ಸೂಚಿತವಾಗಿರುವಂತೆ ವಿದೇಶಿ ಪದವಿಗಳಿಗೆ ಮಾನ್ಯತೆ ನೀಡುವ ವಿಷಯವು ಭಾರತೀಯ ವೈದ್ಯಕೀಯ ಮಂಡಳಿಯ ನಿರ್ಧಾರಕ್ಕೆ ಸೇರಿದ ವಿಷಯವಾಗಿದೆ. ಭಾರತೀಯ ವೈದ್ಯಕೀಯ ಸಹಮತ ಇಲ್ಲದೆ ಯಾವುದೇ ವಿದೇಶಿ ಪದವಿಗೂ ಸರ್ಕಾರ ಮಾನ್ಯತೆ ನೀಡಿಲ್ಲ.

ಪ್ರತಿಯೊಂದು ವಿಶ್ವವಿದ್ಯಾಲಯದಲ್ಲೂ ವೈದ್ಯಕೀಯ ಶಿಕ್ಷಣದ ಶಾಖೆ ಚುನಾಯಿತ ಸದಸ್ಯರಿಂದ ಕೂಡಿರಬೇಕೆಂಬುದು ವೈದ್ಯಕೀಯ ಮಂಡಳಿಯ ಸಲಹೆಯೇ ಆಗಿದೆ. ವಿಶ್ವವಿದ್ಯಾನಿಲಯದ ಬೋಧನಾಂಗಗಳಿಗೆ ಕನಿಷ್ಠ ನಾಲ್ಕು ವರ್ಷಗಳ ಬೋಧನಾನುಭವ ಹೊಂದಿರುವವರನ್ನೇ ನೇಮಿಸಬೇಕೆಂದು ನಿರ್ಬಂಧ ವಿಧಿಸುವುದು ಸರಿಯಲ್ಲ. ಅಧ್ಯಾಪಕರ ಗುಣಮಟ್ಟ ಕಾಯುವ ಮತ್ತು ವೈದ್ಯಕೀಯ ಮಂಡಲಿ ಮಾನ್ಯತೆ ನೀಡುವ ಪದವಿಗಳ ಗುಣಮಟ್ಟ ನಿಷ್ಕರ್ಷೆಯನ್ನು ನಾವು ತಜ್ಞರನ್ನು ಒಳಗೊಂಡಿರುವ ವೈದ್ಯಕೀಯ ಮಂಡಲಿಗೆ ಬಿಟ್ಟು ಬಿಡಬೇಕು. ಅದರಲ್ಲಿ ಸಾರ್ವಜನಿಕರು ಹಸ್ತಕ್ಷೇಪ ಮಾಡಬಾರದು. ಅದರ ಅವಶ್ಯಕತೆಯೂ ಇಲ್ಲ.

ಇನ್ನು ವೈದ್ಯಕೀಯ ಮಂಡಳಿಯ ನೌಕರರ ಸಂಬಳ-ಸಾರಿಗೆಯ ವಿಷಯ ಹೇಳುವುದಿದ್ದರೆ ಅವು ಕೇಂದ್ರ ಸರ್ಕಾರಿ ನೌಕರರ ವೇತನಗಳ ಮಟ್ಟಕ್ಕೆ ಸರಿಸಮನಾಗಿದೆ. ಇನ್ನು ವೈದ್ಯಕೀಯ ಮಂಡಲಿಗೆ ಹಣಕಾಸಿನ ವಿಷಯದಲ್ಲಿ ಸ್ವಾಯತ್ತತೆ ನೀಡುವ ವಿಚಾರ. ನಾಳೆ ಉದಾಹರಣೆಗೆ ಮಂಡಳಿಯ ಅಧ್ಯಕ್ಷರಿಗೆ ಆರು ಸಾವಿರ ರೂಪಾಯಿ ಮತ್ತು ಇನ್ನು ಕೆಲವರಿಗೆ ಇಷ್ಟು ಸಾವಿರ ರೂಪಾಯಿಗಳು ಎಂದು ಅದು ತೀರ್ಮಾನಿಸಿದರೆ ಅದು ಸರಿಯಲ್ಲ. ಇಡೀ ಸಂಸ್ಥೆಯ ಆಯವ್ಯಯವನ್ನು ಸರ್ಕಾರವೇ ಸಗಿದೂಗಿಸುತ್ತಿರುವಾಗ ಸಂಬಳಕ್ಕೆ ಇಷ್ಟು, ಸಾರಿಗೆಗೆ ಇಷ್ಟು, ಪ್ರಯಾಣ ಭತ್ಯ ಇಷ್ಟು.. . ಕೊಡಬೇಕೆಂದು ನಿಗದಿಪಡಿಸುವ ಅಧಿಕಾರ ಸರ್ಕಾರಕ್ಕೆ ಇದ್ದೇ ಇದೆ.

ಇನ್ನು ಹಣಕಾಸಿನ ವಿಷಯದಲ್ಲಿ ಹೇಳುವುದಾದರೆ ಅದನ್ನು ವಿಧೇಯಕದ ಮಂಡನೆ ಸಂದರ್ಭದಲ್ಲಿ ಮಂಡಿಸಲಾಯಿತು. ಆಗ ಪಾರ್ಟ್ 'ಬಿ'ಗೆ ಸೇರಿದ ರಾಜ್ಯಗಳು ಅಸ್ತಿತ್ವದಲ್ಲಿ ಇದ್ದವು. ಆದರೆ ಈ ವಿಧೇಯಕವು ಕಾಯ್ದೆಯಾಗಿ ಜಾರಿಗೆ ಬರುವ ವೇಳೆಗೆ ಪಾರ್ಟ್ (ಬಿ) ರಾಜ್ಯಗಳು ಅಸ್ತಿತ್ವದಲ್ಲಿ ಇರುವುದಿಲ್ಲ. ಹಾಗಾಗಿ ಈ ವಿಂಗಡಣೆಯನ್ನು ಪರಿಗಣಿಸಬೇಕಾದ ಅಗತ್ಯವಿಲ್ಲ. ಯಾವುದೇ ವಿಧೇಯಕದಲ್ಲಿ ಹಣಕಾಸಿನ ಕೋರಿಕೆ ಪತ್ರವು ಹಣಕಾಸು ಖಾತೆಯಿಂದಲೇ ಮಂಡಿಸಲ್ಪಡುತ್ತದೆ.

ವಿದೇಶಕ್ಕೆ ತೆರಳಿ ವೈದ್ಯಕೀಯ ಪದವಿಯನ್ನು ಗಳಿಸಿ ಬಂದ ವೈದ್ಯರೊಬ್ಬರನ್ನು *ಅವರ ಹೆಸರೇನು ಎಂಬುದು ನನಗೆ ನೆನಪಿಲ್ಲ. ಅನರ್ಹಗೊಳಿಸಿದ ಪ್ರಕರಣವೊಂದನ್ನು ಮಾನ್ಯ ಮಿತ್ರರಾದ ಡಾ॥. ಸಪ್ರು ಅವರು ಸದನದಲ್ಲಿ ಪ್ರಸ್ತಾಪಿಸಿದ್ದಾರೆ. ಇದಕ್ಕಾಗಿ ನಾನು ಮಾನ್ಯ ಸದಸ್ಯರಿಗೆ ಕೃತಜ್ಞಳಾಗಿದ್ದೇನೆ. ಆ ವೈದ್ಯರ ವಿಷಯದಲ್ಲಿ ನನಗೆ ಸಂಪೂರ್ಣ ಸಹಾನುಭೂತಿ ಇದೆ. ಆದರೆ ವೈದ್ಯಕೀಯ ಮಂಡಲಿಯ ತೀರ್ಪನ್ನು ಹೈಕೋರ್ಟ್ ಅನೂರ್ಜಿತಗೊಳಿಸಿತು. ಆದರೆ ಇಂತಹ ಅನ್ಯಾಯ ಪುನರಾವರ್ತನೆಯಾಗದಂತೆ ತಡೆಯಲು ವೈದ್ಯರು ರಾಷ್ಟ್ರೀಯ ದಾಖಲಾತಿಯಿಂದ ಯಾವನೇ ಒಬ್ಬ ಸದಸ್ಯನ ಹೆಸರನ್ನು ಕಿತ್ತು ಹಾಕಿದಲ್ಲಿ ವೈದ್ಯಕೀಯ ಮಂಡಳಿ ರಾಜ್ಯ ಸರ್ಕಾರದೊಂದಿಗೆ ಚರ್ಚಿಸುತ್ತದೆ. ಅದೇನಿದ್ದರೂ ರಾಜ್ಯ ಸರ್ಕಾರ ರಾಜ್ಯ ವೈದ್ಯಕೀಯ ಮಂಡಲಿಯ ನಿರ್ಧಾರದಲ್ಲಿ ಯಾವ ರೀತಿಯ ಹಸ್ತಕ್ಷೇಪವನ್ನೂ ಮಾಡುವುದಿಲ್ಲ. ಆದರೆ ಯಾವುದೇ ಒಂದು ಪ್ರಕರಣದಲ್ಲಿ ರಾಜ್ಯ ವೈದ್ಯಕೀಯ ಮಂಡಳಿ ನ್ಯಾಯ ಒದಗಿಸಿಲ್ಲ ಎಂದು ರಾಜ್ಯ ಸರ್ಕಾರಕ್ಕೆ ಅನಿಸಿದರೆ ಕೇಂದ್ರ ಸರ್ಕಾರಕ್ಕೆ ಮನವಿ ಸಲ್ಲಿಸುವ ಅವಕಾಶವನ್ನು ನೀಡಲಾಗಿದೆ. ಈ ವಿಷಯದಲ್ಲಿ ಕೇಂದ್ರ ಸರ್ಕಾರವು ನಿಷ್ಪಕ್ಷಪಾತವಾಗಿ ವರ್ತಿಸುವುದು ಮತ್ತು ಯಾರಿಗೆ ಆದರೂ ಅನ್ಯಾಯವಾಗಲು

*ಆರ್.ಯು. ಅಗ್ನಿಬೋಜ್ ಅವರು ಮಾಡಿದ ಪ್ರಸ್ತಾಪಕ್ಕೆ ಉತ್ತರಿಸುತ್ತಾ.

ಅದು ಅವಕಾಶ ನೀಡುವುದಿಲ್ಲ ಎಂಬ ಅಂಶವನ್ನೂ ನಾನು ಮತ್ತೊಮ್ಮೆ ತಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಅಂತಹ ದೂರುಗಳು ಬಂದಾಗ ಕೇಂದ್ರ ಸರ್ಕಾರವು ಅಟಾರ್ನಿ ಜನರಲ್ ಅವರೊಂದಿಗಾಗಲಿ ಅಥವಾ ಸಾಲಿಸಿಟರ್ ಜನರಲ್ ಅವರೊಂದಿಗಾಗಲಿ ಸಮಾಲೋಚನೆ ನಡೆಸಬೇಕೆಂದು ನಿಯಮವನ್ನು ರೂಪಿಸಬೇಕು ಎಂದು ನನ್ನ ಮಾನ್ಯ ಮಿತ್ರರಾದ ಡಾ।। ಸಪ್ರು ಅವರು ಅಪೇಕ್ಷಿಸಿದರೆ ಅಂತಹ ಆಶ್ವಾಸನೆ ನೀಡಲು ಸಿದ್ಧಳಿದ್ದೇನೆ. ಹಾಗಾದಲ್ಲಿ ಈ ಕಾಯ್ದೆಯ ಸಮರ್ಪಕ ಅನುಷ್ಠಾನಕ್ಕೆ ನಿಯಮಾವಳಿಗಳನ್ನು ರೂಪಿಸಲು ಕೇಂದ್ರ ಸರ್ಕಾರಕ್ಕೆ ಅಧಿಕೃತ ಗೆಜೆಟ್ ಅಧಿಸೂಚನೆ ಹೊರಡಿಸಲು ಅವಕಾಶ ಕಲ್ಪಿಸುವ ತಿದ್ದುಪಡಿಯೊಂದನ್ನು ತರಬೇಕೆಂಬ ಅಂಶವನ್ನು ನಾನು ಸದನದ ಗಮನಕ್ಕೆ ತರಬಯಸುತ್ತೇನೆ. ಸಹಜವಾಗಿಯೇ ಈ ಪರಿಚ್ಛೇಧದಲ್ಲಿ ರೂಪಿಸಲಾಗುವ ಎಲ್ಲ ನಿಯಮಗಳನ್ನು ಸಾಧ್ಯವಾದಷ್ಟು ಬೇಗನೆ ಸಂಸತ್ತಿನ ಉಭಯ ಸದನಗಳ ಮುಂದೆ ಮಂಡಿಸಲಾಗುವುದು.

ವಿದೇಶಿ ಪದವಿಗಳನ್ನು ಕುರಿತ ಷೆಡ್ಯೂಲ್‌ಗೆ ಸಂಬಂಧಿಸಿದಂತೆ ಹೇಳುವುದಾದರೆ ವಿದೇಶಿ ಪದವಿಗಳನ್ನು ಗಳಿಸಿದ ಭಾರತೀಯರು ನಿರ್ದಿಷ್ಟ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು. ಎಂಬಿತ್ಯಾದಿ ಅಂಶಗಳನ್ನು ಕೆಲವರು ಪ್ರಸ್ತಾಪಿಸಿದ್ದಾರೆ. ಇದು ತೀರಾ ಅನ್ಯಾಯ. ಕೆಲ ಸದಸ್ಯರು ಹೇಳಿರುವಂತೆ ನಮ್ಮಲ್ಲಿನ ವೈದ್ಯಕೀಯ ಕಾಲೇಜುಗಳಲ್ಲಿ ಪ್ರವೇಶ ಸಿಗದೆ ಇರುವವರು ವ್ಯಾಸಂಗಕ್ಕಾಗಿ ವಿದೇಶಗಳಿಗೆ ಹೋಗುತ್ತಾರೆ. ಇದು ಸಹಜವೇ ಆಗಿದೆ. ನಾನು ಸ್ನಾತಕೋತ್ತರ ಅಧ್ಯಯನಕ್ಕೆ ತೋರುವ ಕಾಳಜಿಯನ್ನು ಪದವಿಪೂರ್ವ ಕೋರ್ಸ್‌ಗಳ ವಿಷಯದಲ್ಲಿ ತೋರುವುದಿಲ್ಲ ಎಂದು ಸದಸ್ಯರು ಆರೋಪಿಸಿದ್ದಾರೆ. ಸ್ನಾತಕೋತ್ತರ ಅಧ್ಯಯನ ಪರಸ್ಪರ ಮಾನ್ಯತೆಯ ಒಡಂಬಡಿಕೆ ಇಲ್ಲದ ರಾಷ್ಟ್ರಗಳಲ್ಲಿ ನಡೆದಾಗ ಸಮಸ್ಯೆ ಎದುರಾಗುತ್ತದೆ. ನಮ್ಮ ಪದವೀಧರರಿಗೆ ಅಪರ ರಾಷ್ಟ್ರದಲ್ಲಿ ಪ್ರಾಕ್ಟೀಸ್ ಮಾಡುವ ಅವಕಾಶ ಇಲ್ಲವೆಂದಾದಲ್ಲಿ ಸಹಜವಾಗಿಯೇ ವಿದೇಶಿಯರಿಗೆ ನಮ್ಮ ದೇಶದಲ್ಲಿ ವೈದ್ಯಕೀಯ ವೃತ್ತಿ ನಿರ್ವಹಿಸಲು ಅವಕಾಶ ಕಲ್ಪಿಸಿಕೊಡಲಾರೆವು. ಆದರೆ ನಮ್ಮವರಿಗೆ ನಮ್ಮ ದೇಶದಲ್ಲಿ ಇಂತಹ ನಿಷೇಧ ವಿಧಿಸುವುದು ಸರಿಯೂ ಅಲ್ಲ. ಅದು ನನಗೆ ಇಷ್ಟವೂ ಇಲ್ಲ. ಅಂತಹವರಲ್ಲಿ ಅತ್ಯಂತ ಅಸಾಧಾರಣ ದರ್ಜೆಯ ವೈದ್ಯರಿರಬಹುದು. ಅವರಲ್ಲಿ ಕೆಲವರು ಸರಕಾರದಿಂದ ಶಿಷ್ಯ ವೇತನಗಳನ್ನು ಪಡೆದು ವಿದೇಶಗಳಿಗೆ ಹೋಗಿರಬಹುದು ಅಥವಾ ತಾವಾಗಿಯೇ ಹೋಗಿರಬಹುದು. ಏನಿದ್ದರೂ ಅವರು ಮರಳಿಬಂದಾಗ ನಾವು ಅವರ ಸೇವೆಯನ್ನು ಬಳಸಿಕೊಳ್ಳಲೇಬೇಕು. ಮೇಲಾಗಿ ನಮ್ಮ ಶಿಕ್ಷಣ ಮತ್ತು ಸಂಶೋಧನ ಸಂಸ್ಥೆಗಳಲ್ಲಿ ಅರ್ಹತೆ ಹೊಂದಿದ ಸ್ನಾತಕೋತ್ತರ ಪದವೀಧರರ ಕೊರತೆ ಬಹಳಷ್ಟಿದ್ದು, ಅಂತಹವರ ಮೇಲೆ ನಿಷೇಧ ವಿಧಿಸುವುದು ಯಾವ ಕಾರಣಕ್ಕೂ ಸಮರ್ಥನೀಯವಲ್ಲ.

ಇನ್ನು ವೈಯಕ್ತಿಕ ವರಮಾನಕ್ಕಾಗಿ ಖಾಸಗಿ ಪ್ರಾಕ್ಟೀಸ್ ನಡೆಸುವ ವಿಷಯ. ವಿಧೇಯಕದಲ್ಲಿ ಈ ಶಬ್ದವನ್ನು ಬಿಟ್ಟು ಬಿಡಲಾಗಿದೆ ಎಂದು ಕೆಲವರು ತೀವ್ರ ಆಕ್ಷೇಪ ವ್ಯಕ್ತಪಡಿಸಿದ್ದಾರೆ. ಸೇವಾ ಸಂಸ್ಥೆಗಳ ಆಸ್ಪತ್ರೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ವಿದೇಶಿ ವೈದ್ಯರು ಖಾಸಗಿ ಲಾಭಕ್ಕಾಗಿ ಏನನ್ನೂ ಮಾಡುವುದಿಲ್ಲ. ಅವರು ಮಾಡುವುದೆಲ್ಲವೂ ಸಂಸ್ಥೆಗಾಗಿ. ಅವರು ತಮ್ಮ ಸೇವೆಯನ್ನು ಸಂಸ್ಥೆಗಾಗಿಯೇ ಮೀಸಲಿಡುತ್ತಾರೆ. ವಿದೇಶಗಳಿಂದ ಪ್ರಾಧ್ಯಾಪಕರು ಬಂದಲ್ಲಿ ಅವರನ್ನು ಬೋಧನೆ ಅಥವಾ ಸಂಶೋಧನೆಗಾಗಿ ತಾತ್ಕಾಲಿಕ ನೆಲೆಯಲ್ಲಿ ನೇಮಿಸಿರುತ್ತಾರೆ. ಈ ಸಂಬಂಧದಲ್ಲಿ ರಾಜ್ಯಸರ್ಕಾರಗಳು

ತಮ್ಮದೇ ಆದ ನಿಯಮಾವಳಿಗಳನ್ನು ಹೊಂದಿರಬಹುದಾಗಿದೆ. ಅದೇನಿದ್ದರೂ ಅಂತಹವರಿಗೆ ಖಾಸಗಿ ಪ್ರಾಕ್ಟೀಸ್‌ಗೆ ಅನುಮತಿ ನೀಡುವುದಿಲ್ಲ. ಮುಂದೆಯೂ ಅಂತಹ ಅವಕಾಶ ಕಲ್ಪಿಸಿಕೊಡುವುದಿಲ್ಲ.

ಇನ್ನೀಗ ಪರಸ್ಪರ ಮಾನ್ಯತೆಯ ಒಡಂಬಡಿಕೆ ಇಲ್ಲದ ದೇಶವೊಂದರಲ್ಲಿ ಸ್ನಾತಕೋತ್ತರ ಪದವಿ ಪಡೆದುಕೊಂಡು ಬಂದ ಭಾರತೀಯ ಪೌರನೊಬ್ಬನನ್ನು ಕಾಲೇಜೊಂದರಲ್ಲಿ ಅರೆಕಾಲಿಕ (ಪಾರ್ಟ್‌ಟೈಂ) ನೆಲೆಯಲ್ಲಿ ನೇಮಿಸಿದ್ದೇನೆ ಎಂದಿಟ್ಟುಕೊಳ್ಳಿ. ಇಂತಹ ಸಂದರ್ಭದಲ್ಲಿ ವರಮಾನಕ್ಕಾಗಿ ಖಾಸಗಿ ಪ್ರಾಕ್ಟೀಸ್‌ಗೆ ನಿಷೇಧ ಹೇರಿದರೆ ಅದು ನ್ಯಾಯವಾದೀತೇ? ಅದೇನಿದ್ದರೂ ನಮ್ಮ ಜನರ ಗಂಟಲನ್ನು ನಾವೇ ಕೊಯ್ಯುವುದು ಎಷ್ಟರಮಟ್ಟಿಗೆ ಸರಿ? ನಮ್ಮ ವೈದ್ಯಕೀಯ ಶಿಕ್ಷಣದ ಮಟ್ಟವನ್ನು ತಗ್ಗಿಸಬೇಕು ಎಂದು ನಾನು ಎಷ್ಟು ಮಾತ್ರಕ್ಕೂ ಹೇಳಲಾರೆ. ನಮ್ಮ ದೇಶದಲ್ಲಿ ವೈದ್ಯಕೀಯ ಸಿಬ್ಬಂದಿಯ ಕೊರತೆ ಇದ್ದರೂ ಕೂಡಾ ವೈದ್ಯಕೀಯ ಶಿಕ್ಷಣದ ಮಟ್ಟವನ್ನು ತಗ್ಗಿಸಲಿಲ್ಲ ಎಂಬ ಒಂದೇ ಕಾರಣಕ್ಕಾಗಿ ಭಾರತ ಸರ್ಕಾರವನ್ನು ಎಲ್ಲೆಡೆ ಅಭಿನಂದಿಸುತ್ತಿದ್ದಾರೆ. ನಾನು ಈ ಬಾರಿ ವಿದೇಶಕ್ಕೆ ಹೋಗಿದ್ದಾಗ ಮೇಲಿಂದ ಮೇಲೆ ನನಗೆ ಅಂತಹ ಅನುಭವ ಆಯಿತು. ವೈದ್ಯಕೀಯ ಶಿಕ್ಷಣದ ವಿಷಯದಲ್ಲಿ ಭಾರತವು ಆಗ್ನೇಯ ಏಷ್ಯಾದಲ್ಲಿನ ಇತರ ಎಲ್ಲ ರಾಷ್ಟ್ರಗಳಿಗಿಂತ ಮುಂದಿದೆ. ಮುಂಬರುವ ದಿನಗಳಲ್ಲಿ ಭಾರತವು ಈ ಭಾಗದ ಪ್ರಮುಖ ಶಿಕ್ಷಣ ಕೇಂದ್ರವಾಗಲಿದೆ ಎಂಬುದರಲ್ಲಿ ನನಗೆ ಎಳ್ಳಷ್ಟೂ ಅನುಮಾನವಿಲ್ಲ. ಈ ಬಗ್ಗೆ ನಾವು ಹೆಮ್ಮೆ ಪಟ್ಟುಕೊಳ್ಳಬೇಕಾಗಿದೆ. ವೈದ್ಯಕೀಯ ವಿಜ್ಞಾನವು ಪಶ್ಚಿಮ ಅಥವಾ ಪೂರ್ವಕ್ಕೆ ಉತ್ತರ ಅಥವಾ ದಕ್ಷಿಣಕ್ಕೆ ಸೇರಿದ್ದೆಂಬ ಸಂಕುಚಿತ ದೃಷ್ಟಿಯಿಂದ ಯೋಚಿಸಲೇಬಾರದು. ಈ ವಲಯದ ಎಲ್ಲ ರಾಷ್ಟ್ರಗಳು ಆಧುನಿಕ ವೈದ್ಯ ಪದ್ಧತಿಯನ್ನು ಅಂಗೀಕರಿಸಿದೆ. ಚೀನಾ, ಇಂಡೋನೇಷಿಯಾ, ಬರ್ಮಾ, ಥಾಯ್‌ಲ್ಯಾಂಡ್, ಸಿಲೋನ್, ಪಾಕಿಸ್ತಾನ ಮತ್ತು ಅಫ್‌ಘಾನಿಸ್ತಾನಗಳು ಕೂಡಾ ಅದನ್ನೇ ಅನುಸರಿಸುತ್ತಿವೆ. ಆದರೆ ನಾವು ಮಾತ್ರ ಆಧುನಿಕ ವೈದ್ಯ ಪದ್ಧತಿಯನ್ನು ಟೀಕಿಸುತ್ತಾ ಕುಳಿತಿರಬೇಕೇ? ಆಧುನಿಕ ವೈದ್ಯ ಪದ್ಧತಿ ಇಂತಹ ಹತಾಶ ಸ್ಥಿತಿಯಲ್ಲಿ ಮುಂದುವರಿಯಬಾರದು. ಇದಕ್ಕೆ ನಾನೆಂದೂ ಖಂಡಿತ ಅವಕಾಶ ನೀಡುವುದಿಲ್ಲ. ಅಂದರೆ ಇತರ ವೈದ್ಯ ಪದ್ಧತಿಗಳಿಗೆ ನಾನು ಈಗ ನೀಡುತ್ತಿರುವ ಅವಕಾಶವನ್ನು ಮುಂದುವರಿಸುವುದಿಲ್ಲ ಎಂದು ಅದರ ಅರ್ಥವಲ್ಲ. ಆಯುರ್ವೇದ ವೈದ್ಯ ಪದ್ಧತಿಯನ್ನು ವೈಜ್ಞಾನಿಕ ತಳಹದಿಯಲ್ಲಿ ಅಭಿವೃದ್ಧಿಪಡಿಸಲು ಜಾಮ್‌ನಗರ ಅಧ್ಯಯನ ಸಂಸ್ಥೆಯಲ್ಲಿ ಎಲ್ಲ ಅವಕಾಶಗಳನ್ನು ಕಲ್ಪಿಸಿಕೊಡಲಾಗುತ್ತಿದೆ. ಆಯುರ್ವೇದ ವೈದ್ಯ ಪದ್ಧತಿಯಲ್ಲಿ ಮೌಲಿಕವಾಗಿರುವುದೆಲ್ಲವೂ ಆಧುನಿಕ ವೈದ್ಯ ವಿಜ್ಞಾನದ ಪಾಲಿನಿಗೆ ಸೇರಲೇಬೇಕು. ಈ ವಿಷಯದಲ್ಲಿ ವೈದ್ಯ ಸಮುದಾಯವು ನನ್ನ ಜೊತೆಗಿದೆ ಮತ್ತು ಇದೀಗ ಜಾಮ್ ನಗರದಲ್ಲಿ ಆರಂಭವಾಗಿರುವ ಸ್ನಾತಕೋತ್ತರ ಅಧ್ಯಯನ ಕೇಂದ್ರ ಸರಿಯಾದ ನಿಟ್ಟಿನಲ್ಲಿ ಆಯುರ್ವೇದದ ಪ್ರಗತಿಗೆ ಅಸಾಧಾರಣ ಕೊಡುಗೆ ನೀಡುವುದೆಂಬ ಸಂಪೂರ್ಣ ಭರವಸೆ ನನಗಿದೆ.

ಈ ಸಂಬಂಧದಲ್ಲಿ ಇನ್ನೊಂದು ತಿದ್ದುಪಡಿಯನ್ನು ಮಂಡಿಸಲು ನಾನು ಉದ್ದೇಶಿಸಿದ್ದೇನೆ. ಆದರೆ ದುರಾದೃಷ್ಟವಶಾತ್ ವೈದ್ಯಕೀಯ ಮಂಡಲಿ ಈ ವಿಷಯದಲ್ಲಿ ಅಷ್ಟಾಗಿ ಆಸ್ಥೆ ಹೊಂದಿಲ್ಲ.

---

* ಮ್ಯಾನಿಚ್ ಪದವಿಗೆ ಮಾನ್ಯತೆ ನೀಡುವ ವಿಷಯದಲ್ಲಿ ಪಿ.ಎನ್. ಸಪ್ರು ಅವರು ಪ್ರಸ್ತಾವಕ್ಕೆ ಉತ್ತರಿಸುತ್ತಾ.

ಆದರೆ ಮ್ಯೂನಿಚ್‌ನ್* ಎಂ.ಡಿ. ಪದವಿಯನ್ನು ಅಧಿಕೃತ ಯಾದಿಗೆ ಸೇರಿಸಬೇಕು ಎಂಬ ವಿಷಯದಲ್ಲಿ ಸದನವು ಅಪೇಕ್ಷಿಸಿರುವುದರಿಂದ ನಾನು ಈ ಸಲಹೆಯನ್ನು ಸ್ವೀಕರಿಸುತ್ತಿದ್ದೇನೆ ಮತ್ತು ಅದು ಸರ್ವಾನುಮತದ ಅಭಿಪ್ರಾಯ ಎಂದು ವೈದ್ಯಕೀಯ ಮಂಡಳಿಗೆ ಮನವರಿಕೆ ಮಾಡಿಕೊಡುವ ಎಲ್ಲ ಪ್ರಯತ್ನ ಮಾಡುತ್ತೇನೆ. ಇನ್ನು ರೋಮ್ ಮತ್ತು ಇತರ ದೇಶಗಳ ಪದವಿಗಳಿಗೆ ಸಂಬಂಧಿಸಿದಂತೆ ನಾನು ವೈದ್ಯಕೀಯ ಮಂಡಲಿಯ ಶಿಫಾರಸುಗಳನ್ನು ಪಾಲಿಸುತ್ತೇನೆ. ಅದೇ ರೀತಿ ಕಾಲ ಸರಿದಂತೆ ಇತರ ಪದವಿಗಳು ಈ ಯಾದಿಗೆ ಸೇರ್ಪಡೆಹೊಂದಬಹುದು ಅಥವಾ ಅದರಿಂದ ಬೇರ್ಪಡೆಯಾಗಬಹುದು. ಅದು ಭವಿಷ್ಯಕ್ಕೆ ಬಿಟ್ಟ ವಿಷಯವಾಗಿದೆ".

ಕೃತಜ್ಞತೆಗಳು.

## 14. ಭಾರತೀಯ ನರ್ಸಿಂಗ್ ಮಂಡಳಿಗೆ (ತಿದ್ದುಪಡಿ) ವಿಧೇಯಕ 1957*

ಭಾರತೀಯ ನರ್ಸಿಂಗ್ ಮಂಡಳಿ ತಿದ್ದುಪಡಿ ವಿಧೇಯಕವನ್ನು ಬೆಂಬಲಿಸಲು ನಾನಿಲ್ಲಿ ನಿಂತಿದ್ದೇನೆ. ಇಂದು ಈ ವಿಧೇಯಕಕ್ಕೆ ಸೂಚಿಸಿರುವ ಸಲಹೆ ಸೂಚನೆಗಳು ಸರಿದು ಹೋದ ವರುಷಗಳಲ್ಲಿ ನರ್ಸಿಂಗ್ ಮಂಡಲಿಯು ಗಳಿಸಿರುವ ಅನುಭವದ ಫಲಶೃತಿಯಾಗಿದೆ. ನನಗಿಂತಲೂ ಮೊದಲು ಮಾತನಾಡಿದ ಸದಸ್ಯರು ಈ ವಿಷಯದಲ್ಲಿ ಬಹಳಷ್ಟು ವಿಸ್ತಾರವಾಗಿ ಹೇಳಿದ್ದಾರೆ ಮತ್ತು ಅವರ ಅಭಿಪ್ರಾಯಗಳಿಗೆ ನನ್ನ ಸಂಪೂರ್ಣ ಸಹಾನುಭೂತಿ ಇದೆ. ದಾದಿಯರ ಸೇವಾ ಪರಿಸ್ಥಿತಿಗಳ ವಿಷಯದಲ್ಲಿ, ದಾದಿಯರ ಸಂಬಳಗಳ ವಿಷಯದಲ್ಲಿ, ಆಸ್ಪತ್ರೆಗಳಲ್ಲಿ ಸಾಕಷ್ಟು ಸಿಬ್ಬಂದಿ ಇಲ್ಲದ ವಿಷಯದಲ್ಲಿ ಮತ್ತು ದಾದಿಯರು ಹೆಚ್ಚು ತಾಸುಗಳ ಕಾಲ ಕೆಲಸಮಾಡಬೇಕಾಗಿರುವುದು. ಹೀಗೆ ದಾದಿಯರು ಎದುರಿಸುತ್ತಿರುವ ಹಲವಾರು ಸಮಸ್ಯೆಗಳನ್ನು ಮುಂದಿಟ್ಟಿದ್ದಾರೆ. ಆದರೆ ಭಾರತೀಯ ನರ್ಸಿಂಗ್ ಮಂಡಳಿ ಕಾಯ್ದೆಯು ಅವರ ತರಬೇತಿಯ ಗುಣಮಟ್ಟವನ್ನು ಸುಧಾರಿಸುವ ಏಕೈಕ ಉದ್ದೇಶದಿಂದ ರೂಪಿತವಾಗಿದೆ ಎಂಬುದನ್ನು ನಾನು ಮಾನ್ಯ ಸದಸ್ಯರ ಗಮನಕ್ಕೆ ತರಲು ಇಚ್ಛಿಸುತ್ತೇನೆ. ನರ್ಸಿಂಗ್ ಮಂಡಳಿ ಕಾಯ್ದೆಯು ಅಸ್ತಿತ್ವಕ್ಕೆ ಬಂದ ನಂತರದ ವರ್ಷಗಳಲ್ಲಿ ಅವರ ಶಿಕ್ಷಣದ ಮಟ್ಟವನ್ನು ಸುಧಾರಿಸುವ ನಿಟ್ಟಿನಲ್ಲಿ ಬಹಳಷ್ಟು ಸಾಧನೆಯನ್ನು ಮಾಡಲಾಗಿದೆ. ರಾಜ್ಯಗಳ ಆಸ್ಪತ್ರೆಗಳಲ್ಲಿನ ತರಬೇತಿಯು ಬಹುಮಟ್ಟಿಗೆ ಆಯಾ ರಾಜ್ಯ ಸರ್ಕಾರಗಳ ಉಸ್ತುವಾರಿಗೆ ಬಿಟ್ಟ ವಿಷಯವಾಗಿದೆ ಎಂಬುದನ್ನು ನಾನಿಲ್ಲಿ ನೆನಪಿಸಬಯಸುತ್ತೇನೆ. ಒಟ್ಟಿನಲ್ಲಿ 1947ರಲ್ಲಿ ಇದ್ದ ಪರಿಸ್ಥಿತಿಗಿಂತ ಈಗ ಪರಿಸ್ಥಿತಿ ಬಹಳಷ್ಟು ಸುಧಾರಿಸಿದ್ದು ಮೊದಲಿಗಿಂತ ಅದು ಹೆಚ್ಚು ಏಕರೂಪತೆಯನ್ನು ಪಡೆದಿದೆ ಎಂದು ನಾನು ಹೇಳಿದರೆ ಅದು ತಪ್ಪಾಗಲಾರದು. ದಾದಿಯರ ತರಬೇತಿಯಲ್ಲಿ ಇನ್ನು ಹೆಚ್ಚಿನ ಏಕರೂಪತೆಯನ್ನು ಸಾಧಿಸಲು ಇನ್ನು ಹೆಚ್ಚಿನ ಪ್ರಯತ್ನಗಳನ್ನು ನಡೆಸಬೇಕೆಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಈ ದಿಸೆಯಲ್ಲಿ ಕೇಂದ್ರ ಆರೋಗ್ಯ ಖಾತೆಯು ಈ ಪ್ರಯತ್ನಗಳನ್ನು ಮುಂದುವರಿಸಿಕೊಂಡು ಹೋಗುವುದೆಂದು ನಾನು ದೃಢವಾಗಿ ನಂಬಿದ್ದೇನೆ.

ದಾದಿಯರ ವೃತ್ತಿಯ ಸ್ಥಾನಮಾನಗಳ ವಿಷಯದಲ್ಲಿ ಮತ್ತು ರಾಜ್ಯಗಳಲ್ಲಿ ಉನ್ನತ ಹುದ್ದೆಗಳಲ್ಲಿ ಇರುವ ದಾದಿಯರಿಗೆ ಗೆಜೆಟೆಡ್ ಸ್ಥಾನಮಾನ ನೀಡುವ ವಿಷಯದಲ್ಲಿ ನಾನು ಬಹಳಷ್ಟು ಕೆಲಸ ಮಾಡಿದ್ದೇನೆ. ನನ್ನ ಉತ್ತರಾಧಿಕಾರಿಯಾಗಿ ಬಂದಿರುವ ಆರೋಗ್ಯ ಸಚಿವರು ಪ್ರತಿವರ್ಷ ನಡೆಯುವ ಆರೋಗ್ಯ ಸಚಿವರ ಸಮ್ಮೇಳನದಲ್ಲಿ ಈ ಅಂಶಗಳನ್ನು ಪ್ರಸ್ತಾಪಿಸಿ ಅದಕ್ಕೆ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ ಎಂದು ನಾನು ನಂಬಿದ್ದೇನೆ.

ಕೇಂದ್ರಾಡಳಿತ ಪ್ರದೇಶಗಳನ್ನು ವಿಧೇಯಕದ ವ್ಯಾಪ್ತಿಯಿಂದ ಹೊರತುಪಡಿಸುವ ವಿಷಯದಲ್ಲೂ ಮಾನ್ಯ ಸದಸ್ಯರೊಬ್ಬರು ಆಕ್ಷೇಪ ವ್ಯಕ್ತಪಡಿಸಿದ್ದಾರೆ. ನನಗೆ ತಿಳಿದಿರುವಂತೆ ನರ್ಸಿಂಗ್ ಮಂಡಲಿಗಳನ್ನು ಹೊಂದಿರುವ ಪ್ರದೇಶಗಳಷ್ಟೇ ಇದರ ವ್ಯಾಪ್ತಿಗೆ ಒಳಪಡುತ್ತವೆ.

---

* ಆರೋಗ್ಯ ಸಚಿವ ಶ್ರೀ ಡಿ.ಸಿ.ಕರ್‌ಮರಕರ್ ಅವರು ಮಂಡಿಸಿದ ವಿಧೇಯಕ ಕುರಿತು ಮಾತನಾಡುತ್ತ (ರಾಜ್ಯಸಭೆ ಚರ್ಚೆ, 1957 ನವೆಂಬರ್ 18, ಕಾಲಂ 112-114).

ನನಗೆ ತಿಳಿದಿರುವಂತೆ ಕೇಂದ್ರಾಡಳಿತ ಪ್ರದೇಶಗಳಲ್ಲಿ ಎಲ್ಲೂ ನರ್ಸಿಂಗ್ ಮಂಡಳಿಗಳು ಇಲ್ಲ. ನರ್ಸಿಂಗ್ ಮಂಡಳಿಗಳ ರಚನೆಯಾದ ಕೂಡಲೇ ಅವುಗಳಿಗೆ ಸರಿಸಮಾನ ಪ್ರಾತಿನಿಧ್ಯ ನೀಡಲಾಗುವುದು.

ಈ ವಿಷಯದಲ್ಲಿ ನಾನು ಏನನ್ನು ಹೇಳಲಾರೆ.* ರಾಜ್ಯಗಳಲ್ಲಿನ ನರ್ಸಿಂಗ್ ಮಂಡಳಿಗಳ ವಿಷಯದಲ್ಲಿ ಮತ್ತು ಅವುಗಳ ಪ್ರಾತಿನಿಧ್ಯದ ವಿಷಯದಲ್ಲಿ ಹೇಳುವುದಾದರೆ ಕೇಂದ್ರಾಡಳಿತ ಪ್ರದೇಶಗಳಲ್ಲಿ ರಾಜ್ಯ ಮಂಡಳಿಗಳು ಇಲ್ಲದ ಹೊರತು ಅವರಿಗೆ ತಮ್ಮ ಪ್ರತಿನಿಧಿಗಳನ್ನು ಕಳುಹಿಸಿ ಕೊಡಲು ಸಾಧ್ಯವಾಗದು. ಮಾನ್ಯ ಸದಸ್ಯರು ವಿಧೇಯಕದ 4ನೇ ಖಂಡಕ್ಕೆ ಹೆಚ್ಚಿನ ಒತ್ತು ನೀಡಿ ರೊಟೇಷನ್ ವಿಧಾನವು ದೋಷಪೂರ್ಣವಾಗಿದೆ ಎಂಬಿತ್ಯಾದಿ ಟೀಕೆಗಳನ್ನು ಮಾಡಿದ್ದಾರೆ. ವಿಧೇಯಕದ ಈ ಖಂಡವನ್ನು ಅರ್ಥ ಮಾಡಿಕೊಳ್ಳುವಲ್ಲಿ ನನಗೇನೂ ಕಷ್ಟವಾಗಲಿಲ್ಲ. ಈಗ ಸೂಚಿಸಿರುವ ರೊಟೇಷನ್ ವಿಧಾನವು ಸರಿಯಾಗಿಯೇ ಇದೆ. ಅದೇನಿದ್ದರೂ ರಾಜ್ಯ ನರ್ಸಿಂಗ್ ಮಂಡಳಿಗಳು ರಾಜ್ಯ ಸರ್ಕಾರಗಳಿಗೆ ನಿರ್ದಿಷ್ಟ ಶಿಫಾರಸುಗಳನ್ನು ಮಾಡಬೇಕೆಂದು ನಾನು ಬಯಸುತ್ತೇನೆ. ವಸ್ತುತಃ ದಾದಿಯರ ಪ್ರಮಾಣ ಮೂವರು ರೋಗಿಗಳಿಗೆ ಒಬ್ಬರಂತೆ ಇರಬೇಕೆಂದು ಅವರು ಸರ್ಕಾರಕ್ಕೆ ಶಿಫಾರಸು ಮಾಡಿದ್ದಾರೆ. ಆದರೆ ರಾಜ್ಯ ಸರ್ಕಾರಗಳು ದಾದಿಯರ ಸೇವೆಗಾಗಿ ಖರ್ಚು ಮಾಡುವ ಮೊತ್ತವು ಕನಿಷ್ಠ ಪ್ರಮಾಣದ್ದಾಗಿದ್ದು, ಈ ಶಿಫಾರಸುಗಳನ್ನು ಕಾರ್ಯರೂಪಕ್ಕೆ ತರುವುದು ಅವುಗಳಿಗೆ ಅಸಾಧ್ಯವಾಗಿದೆ.

ನರ್ಸಿಂಗ್ ವಿದ್ಯಾರ್ಥಿಗಳನ್ನು ಶುಶ್ರೂಷೆ ಸೇವೆಗೆ ಬಳಸಿಕೊಳ್ಳುತ್ತಿರುವ ಬಗ್ಗೆಯೂ ಸದಸ್ಯರೊಬ್ಬರು ಮಾತನಾಡಿದ್ದಾರೆ. ಆಸ್ಪತ್ರೆಗಳಲ್ಲಿನ ಕೆಲಸವು ದಾದಿಯರ ತರಬೇತಿಯ ಒಂದು ಅವಿಭಾಜ್ಯ ಅಂಗವಾಗಿದೆ. ಆದರೆ ಅವರ ಕೆಲಸದ ಅವಧಿಯ ಪ್ರಶ್ನೆ ಬಗ್ಗೆ ನರ್ಸಿಂಗ್ ಮಂಡಳಿ ಹೆಚ್ಚಿನ ಗಮನಹರಿಸಬೇಕಾದ ಅಗತ್ಯವಿದೆ. ಈ ವಿಷಯ ನನಗೂ ಅತ್ಯಂತ ಕಾಳಜಿಯ ವಿಷಯವಾಗಿದೆ. ಈಗ ಅವರು ಕೆಲಸ ನಿರ್ವಹಿಸುತ್ತಿರುವ ಅವಧಿ ಅತ್ಯಂತ ದೀರ್ಘವಾಗಿದೆ. ಈ ವಿಷಯವನ್ನು ಪರಿಶೀಲನೆಗೆ ತೆಗೆದುಕೊಳ್ಳದಿರುವ ನರ್ಸಿಂಗ್ ತರಬೇತಿ ಸಂಸ್ಥೆಗಳಿಗೆ ಮಾನ್ಯತೆ ನೀಡುವಲ್ಲಿ ನರ್ಸಿಂಗ್ ಮಂಡಳಿ ಇನ್ನೂ ಹೆಚ್ಚು ಕಟ್ಟುನಿಟ್ಟಿನ ನೀತಿಯನ್ನು ಅನುಸರಿಸಬೇಕಾಗಿದೆ.

ದೇಶದಲ್ಲಿ ಬೆವರಿಳಿಸಿ ದುಡಿಯುವ ಸೇವಾ ವಿಭಾಗವೊಂದಿದ್ದರೆ ಅದು ನರ್ಸಿಂಗ್ ವೃತ್ತಿಯೊಂದೇ. ಹಾಗಾಗಿ ಅಗತ್ಯಬಿದ್ದಲ್ಲಿ ಅವಧಿ ಮೀರಿ ದುಡಿಯುವುದನ್ನು ತಪ್ಪಿಸಲು ಶಾಸನವೊಂದನ್ನು ತರುವುದಕ್ಕೂ ಸರ್ಕಾರ ಹಿಂಜರಿಯಬಾರದು. ದಾದಿಯರಿಗೆ ಸರಿಯಾದ ಸಂಬಳ-ಸಾರಿಗೆ ನೀಡಬೇಕು. ದಾದಿಯರ ಶೋಷಣೆಗೆ ಅವಕಾಶ ಇರಬಾರದು ಎಂಬುದೇ ನನ್ನ ಆಶಯವಾಗಿದೆ. ನರ್ಸಿಂಗ್ ಮಂಡಳಿ ಕಾಯ್ದೆಯ ಸಂಬಂಧದಲ್ಲಿ ಸದಸ್ಯರು ಮಾಡಿರುವ ಟೀಕೆಯ ಬಹುಭಾಗ ಪ್ರಸಕ್ತ ತಿದ್ದುಪಡಿ ವಿಧೇಯಕದ ವ್ಯಾಪ್ತಿಗೆ ಬರುವುದಿಲ್ಲ. ಒಟ್ಟಿನಲ್ಲಿ ನರ್ಸಿಂಗ್ ತರಬೇತಿಗೆ ಸೂಕ್ತ ತಳಹದಿಯನ್ನು ಕಲ್ಪಿಸಿಕೊಡಬೇಕು ಮತ್ತು ತರಬೇತಿಯ ಮಟ್ಟ ಕುಸಿಯದಂತೆ ನೋಡಿಕೊಳ್ಳಬೇಕು ಎಂಬುದೇ ಆರೋಗ್ಯ ಖಾತೆಗೆ ನಾನು ಮಾಡುವ ವಿನಂತಿ. ಬಹುತೇಕ ನರ್ಸಿಂಗ್ ತರಬೇತಿ ಕೇಂದ್ರಗಳಲ್ಲಿ ಮಹಿಳಾ ತರಬೇತಿದಾರರನ್ನು (ಸಿಸ್ಟರ್ ಟ್ಯೂಟರ್ಸ್) ನೇಮಿಸುತ್ತಿರುವುದು ಅತ್ಯಂತ ಸಂತಸದ ವಿಷಯವಾಗಿದೆ. ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ

ಎರಡು ನರ್ಸಿಂಗ್ ಕಾಲೇಜುಗಳಿದ್ದು, ಅಲ್ಲಿ ದಾದಿಯರಿಗೆ ಸೂಕ್ತ ರೀತಿಯ ತರಬೇತಿ ಸಿಗುತ್ತಿದೆ. ದಾದಿಯರ ತರಬೇತಿಯ ಮಟ್ಟವನ್ನು ಕಾಯ್ದುಕೊಳ್ಳುವುದು ಅತ್ಯಂತ ಅವಶ್ಯವಾಗಿದೆ. ಈ ದೃಷ್ಟಿಯಿಂದ ನಾವಿರಿಸಿರುವ ಹೆಜ್ಜೆ ಅತ್ಯಂತ ಮಹತ್ವದ್ದಾಗಿದೆ. ನಮ್ಮಲ್ಲಿ ಈಗ ಸಾರ್ವಜನಿಕ ಆರೋಗ್ಯ ಕ್ಷೇತ್ರದಲ್ಲೂ ದಾದಿಯರ ಸೇವೆಯನ್ನು ಬಳಸಿಕೊಳ್ಳುತ್ತಿದ್ದೇವೆ. ಅದೇ ರೀತಿ ವಿಶೇಷ ಪ್ರಾವೀಣ್ಯ ಪಡೆದಿರುವ ದಾದಿಯರ ಅವಶ್ಯಕತೆ ನಮಗಿದೆ ಎಂಬ ಸದಸ್ಯರೊಬ್ಬರ ಅಭಿಪ್ರಾಯವನ್ನು ನಾನು ಒಪ್ಪುತ್ತೇನೆ. ಆದರೆ ಇದಕ್ಕೆ ನಾವು ಸ್ವಲ್ಪ ಸಮಯ ಕಾಯಬೇಕಾಗಿದೆ. ಇಂತಹ ಎಲ್ಲ ಸೌಲಭ್ಯಗಳು ಲಭ್ಯವಾಗುವವರೆಗೂ ನಾವು ತಾಳ್ಮೆಯಿಂದ ಇರಬೇಕಾಗಿದೆ. ಇದೀಗ ಮಂಡಿಸಿರುವ ವಿಧೇಯಕದಲ್ಲಿ ವಿವಾದಾತ್ಮಕವಾಗಿರುವ ಯಾವುದೊಂದು ಪ್ರಶ್ನೆಯೂ ನನಗೆ ಕಾಣುತ್ತಿಲ್ಲ. ದಾದಿಯರ ಸ್ಥಾನಮಾನ ಎತ್ತರಿಸುವ, ಅವರ ಸಂಬಳಗಳನ್ನು ಹೆಚ್ಚಿಸುವ ಮತ್ತು ತರಬೇತಿ ಕೇಂದ್ರಗಳಿಗೆ ಮಾನ್ಯತೆ ನೀಡುವ ಬಗ್ಗೆ ಒಟ್ಟಾರೆಯಾಗಿ ನಾನು ಪ್ರಸ್ತಾಪಿಸಿರುವ ಅಂಶಗಳು ಕೇಂದ್ರ ಆರೋಗ್ಯ ಖಾತೆಯು ಪ್ರತ್ಯೇಕ ಶಾಸನಗಳ ಮೂಲಕ ಅಥವಾ ರಾಜ್ಯಗಳ ಆರೋಗ್ಯ ಸಚಿವರ ಮನವೊಲಿಸಿ ಕಾರ್ಯರೂಪಕ್ಕೆ ತರಬೇಕಾದ ವಿಷಯಗಳಾಗಿವೆಯೆಂದು ಹೇಳುವ ಮೂಲಕ ನಾನು ಈ ವಿಧೇಯಕವನ್ನು ಬೆಂಬಲಿಸುತ್ತೇನೆ.*

---

* ನಂತರ ಭಾರತೀಯ ನರ್ಸಿಂಗ್ ಮಂಡಳಿ (ತಿದ್ದುಪಡಿ) ವಿಧೇಯಕ 1957ನ್ನು 1957ರ ನವೆಂಬರ್ 18ರಂದು ಅಂಗೀಕರಿಸಲಾಯಿತು.

## 15. ಭಾರತೀಯ ರೆಡ್‌ಕ್ರಾಸ್ ಸಂಸ್ಥೆ (ತಿದ್ದುಪಡಿ) ವಿಧೇಯಕ*

ಒಂದು ಪ್ರಮುಖ ಉದ್ದೇಶದೊಂದಿಗೆ ಈ ವಿಧೇಯಕವನ್ನು ನಾನಿಂದು ಲೋಕಸಭೆಯಲ್ಲಿ ಮಂಡಿಸುತ್ತಿದ್ದೇನೆ. ರೆಡ್‌ಕ್ರಾಸ್ ಸಂಸ್ಥೆಯ ನಿಧಿಯಿಂದ ಪಾಕಿಸ್ತಾನಕ್ಕೆ ಸಲ್ಲಬೇಕಾಗಿರುವ ಪಾಲನ್ನು ವಿಂಗಡಿಸಿಕೊಡುವ ಸಲುವಾಗಿ ಈ ವಿಧೇಯಕವನ್ನು ತರಲಾಗಿದೆ. 1947ರ ಆಗಸ್ಟ್‌ನಲ್ಲಿ ಭಾರತ ವಿಭಜನೆಗೊಂಡ ಕಾರಣದಿಂದ 1920ರ ರೆಡ್‌ಕ್ರಾಸ್ ಸಂಸ್ಥೆ ಕಾಯ್ದೆಗೆ ತಿದ್ದುಪಡಿ ತರುವುದು ಅತ್ಯವಶ್ಯಕವಾಗಿದೆ. ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಮೂಲನಿಧಿ ಮತ್ತು ಸಂಬಂಧಪಟ್ಟ ಇತರ ನಿಧಿಗಳನ್ನು ಭಾಗ ಮಾಡಿ ಕೊಡಲು ಅದಕ್ಕೆ ಅಧಿಕಾರ ಕಲ್ಪಿಸುವ ಸಲುವಾಗಿ ಹಾಗೂ ಎರಡೂ ದೇಶಗಳ ರೆಡ್‌ಕ್ರಾಸ್ ಸಂಸ್ಥೆಗಳು ಪರಸ್ಪರ ಒಪ್ಪಿಕೊಂಡಿರುವ ಷರತ್ತುಗಳಿಗೆ ಅನುಗುಣವಾಗಿ ಪಾಕಿಸ್ತಾನಕ್ಕೆ ಸಲ್ಲಬೇಕಾದ ಪಾಲನ್ನು ವರ್ಗಾಯಿಸಲು ಈ ವಿಧೇಯಕ ಮಂಡಿಸಲಾಗಿದೆ. ಅದೇ ವೇಳೆಗೆ ಪಾಕಿಸ್ತಾನದಲ್ಲಿನ ಪ್ರದೇಶಗಳ ವಿಷಯದಲ್ಲಿ ಕಾಯ್ದೆ ವಿಧಿಸಿರುವ ಎಲ್ಲ ಕಟ್ಟುಪಾಡುಗಳಿಂದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯನ್ನು ವಿಮುಕ್ತಗೊಳಿಸುವ ಉದ್ದೇಶವೂ ಅದಕ್ಕಿದೆ. ಇದೇ ಈ ಮಸೂದೆಯ ಪ್ರಮುಖ ಉದ್ದೇಶವಾಗಿದೆ.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಹಕ್ಕುಬಾಧ್ಯತೆಗಳನ್ನು ಕಾಯ್ದುಕೊಳ್ಳುವ ಸಲುವಾಗಿ ಈ ತಿದ್ದುಪಡಿ ವಿಧೇಯಕವನ್ನು ಮಂಡಿಸುವುದು ಅವಶ್ಯಕವಾಗಿದೆ. ಇದೇ ಸಂದರ್ಭವನ್ನು ಬಳಸಿಕೊಂಡು ಈಗ ಅಸ್ತಿತ್ವದಲ್ಲಿರುವ ಕಾಯ್ದೆಯ 5ನೇ ಸೆಕ್ಷನ್‌ಗೆ ಕೆಲವೊಂದು ಸಣ್ಣ ಪುಟ್ಟ ತಿದ್ದುಪಡಿಗಳನ್ನು ತರಲು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಮುಂದಾಗಿದೆ. ಈ ತಿದ್ದುಪಡಿ ರಾಜ್ಯಗಳಲ್ಲಿರುವ ರೆಡ್‌ಕ್ರಾಸ್ ಶಾಖೆಗಳ ಆಡಳಿತ ನಿರ್ವಹಣೆಗೆ ಮತ್ತು ಕಾರ್ಯ ವಿಧಾನದ ಮೇಲೆ ಮಾತ್ರ ಸಂಸ್ಥೆಗೆ ನಿರ್ದಿಷ್ಟ ಪ್ರಮಾಣದ ನಿಯಂತ್ರಣ ಹೊಂದಲು ಅವಕಾಶ ಕಲ್ಪಿಸುತ್ತದೆ. ದೇಶಾದ್ಯಂತ ರೆಡ್‌ಕ್ರಾಸ್ ಸೇವೆಯ ಸುಗಮ ನಿರ್ವಹಣೆ ಮತ್ತು ಭಾರತದ ಒಕ್ಕೂಟದಿಂದ ಹೊರಗಿರುವ ಪ್ರದೇಶಗಳಲ್ಲಿ ರಚಿತವಾಗಿರುವ ಸೊಸೈಟಿಗಳನ್ನು ಮೂಲ ಸಂಸ್ಥೆಯೊಂದಿಗೆ ಸಂಯೋಜಿಸಲು ಇದು ಅವಕಾಶ ಕಲ್ಪಿಸಿಕೊಡುತ್ತದೆ. ಸಿಕ್ಕಿಂನಲ್ಲಿರುವ ರೆಡ್‌ಕ್ರಾಸ್ ಸಂಸ್ಥೆಯ ಶಾಖೆಯು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯೊಂದಿಗೆ ಸಂಯೋಜಿತವಾಗಲು ಈಗಾಗಲೇ ತನ್ನ ಮನವಿಯನ್ನು ಸಲ್ಲಿಸಿದೆ. ಅದಕ್ಕೆ ನಮ್ಮ ಸಮ್ಮತಿ ಇದೆ. ಆದರೆ ವಿಧೇಯಕದಲ್ಲಿ ನಿರ್ದಿಷ್ಟ ತಿದ್ದುಪಡಿಯನ್ನು ತಾರದ ಹೊರತು ಅದನ್ನು ಮಾಡಲು ಬರುವುದಿಲ್ಲ. ಇದರಲ್ಲಿ ವಿವಾದಾತ್ಮಕವಾದ ಯಾವ ಅಂಶಗಳೂ ಇಲ್ಲ.

ಭಾರತ ಸರ್ಕಾರಕ್ಕೆ ಪಾಕಿಸ್ತಾನ ಸರ್ಕಾರವು ಕೊಡಲು ಬಾಕಿ ಇರುವ ಮೊತ್ತದಿಂದ ಪಾಕಿಸ್ತಾನದ ರೆಡ್‌ಕ್ರಾಸ್ ಸಂಸ್ಥೆಗೆ ಪಾವತಿ ಮಾಡಬೇಕಾದ ಮೊತ್ತವನ್ನು ಭಾರತ ಸರ್ಕಾರದ ಪರವಾಗಿ ಪಾವತಿ ಮಾಡುವಂತೆ ನಿರ್ದಿಷ್ಟ ಮೊತ್ತದ ವರ್ಗಾವಣೆಗೆ ಸರಕಾರ ಯಾವುದಾದರೂ ಒಂದು ಕ್ರಮ ತೆಗೆದುಕೊಳ್ಳಬಾರದೇಕೆ? ಎಂದು ಸದನದ ಮಾನ್ಯ ಸದಸ್ಯರೊಬ್ಬರು ಸೂಚಿಸಿರುವ ತಿದ್ದುಪಡಿ ಈಗ ತಾನೇ ನನ್ನ ಕೈ ಸೇರಿದೆ. ಈ ವಿಧೇಯಕವನ್ನು ರಾಜ್ಯಸಭೆಯಲ್ಲಿ ಮಂಡಿಸುವುದಕ್ಕೆ

---

* ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕಾಯ್ದೆ (1920) ತಿದ್ದುಪಡಿಗಾಗಿ ಮಂಡಿಸಿದ ವಿಧೇಯಕವನ್ನು ಪರಿಶೀಲನೆಗೆ ತೆಗೆದುಕೊಳ್ಳುವಂತೆ ಕೋರಿ ಮಾಡಿದ ಪ್ರಸ್ತಾಪ (ಲೋಕಸಭೆ 1956ರ ಫೆಬ್ರವರಿ 18, ಸಿಸಿ 247-248, 255-256).

ಮೊದಲು ಈ ಕ್ರಮದ ಬಗ್ಗೆ ಸಹಜವಾಗಿಯೇ ನಾನು ಹಣಕಾಸು ಮತ್ತು ಕಾನೂನು ಖಾತೆಗಳೊಂದಿಗೆ ಸಮಾಲೋಚಿಸಿದೆ. ಆದರೆ ಈಗ ಸದನದ ಮುಂದೆ ಮಂಡಿಸಿರುವ ವಿಧೇಯಕದಲ್ಲಿ ಸೂಚಿಸಿರುವ ಕ್ರಮವೇ ಅತ್ಯುತ್ತಮವಾದುದೆಂಬ ತೀರ್ಮಾನಕ್ಕೆ ಬಂದೆವು. ಹಾಗಾಗಿ ಮಾನ್ಯ ಸದಸ್ಯರು ಸೂಚಿಸಿರುವ ತಿದ್ದುಪಡಿಯನ್ನು ಅಂಗೀಕರಿಸಲು ನಾನು ಅಸಮರ್ಥನಾಗಿದ್ದೇನೆ. ಈ ಕುರಿತು ಇದಕ್ಕಿಂತ ಹೆಚ್ಚಿನದೇನನ್ನೂ ನಾನೀಗ ಹೇಳಲಾರೆ.

ಸದನದ ಮಾನ್ಯ ಸದಸ್ಯರು ಎತ್ತಿರುವ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ನಾನು ಇನ್ನೂ ಒಂದಿಷ್ಟು ವಿವರಣೆ ನೀಡಲು ಬಯಸುತ್ತೇನೆ. ಸದಸ್ಯರು ಈ ಸಂಬಂಧದಲ್ಲಿ ಸೂಚಿಸಿರುವ ತಿದ್ದುಪಡಿಯನ್ನು ಅಂಗೀಕರಿಸಲು ಸಾಧ್ಯವಿಲ್ಲ ಎಂದು ನಾನು ಈಗಾಗಲೇ ಸ್ಪಷ್ಟಪಡಿಸಿದ್ದೇನೆ. ಆದರೆ ಕೊನೆಯ ಹಂತದಲ್ಲಿ ಕಳುಹಿಸಿದ ತಿದ್ದುಪಡಿಗಳನ್ನು ನಾನು ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲ ಎಂಬ ಭಾವನೆ ಸದಸ್ಯರಲ್ಲಿ ಮೂಡಬಾರದೆಂಬುದಕ್ಕಾಗಿ ಅಗತ್ಯವಿಲ್ಲದಿದ್ದರೂ ಇದನ್ನು ಹೇಳುತ್ತಿದ್ದೇನೆ.

ನನ್ನ ಮಾನ್ಯ ಮಿತ್ರರಾದ ಸರ್ದಾರ್ ಹುಕುಂ ಸಿಂಗ್ ಅವರು ಈ ಸಂಬಂಧದಲ್ಲಿ, ನನ್ನ ಸರ್ಕಾರ ಮತ್ತು ಪಾಕಿಸ್ತಾನ ಸರ್ಕಾರದ ನಡುವೆ ಮಾತುಕತೆ ನಡೆಯುತ್ತಿದೆಯೇ? ಎಂದಿನಂತೆ ಪಾಕಿಸ್ತಾನದಿಂದ ನಕಾರಾತ್ಮಕ ಉತ್ತರ ಬಂದಿದೆಯೇ? ನಮ್ಮ ಮನವಿಯನ್ನು ತಿರಸ್ಕರಿಸಲಾಗಿದೆಯೇ? ಅಥವಾ ನಾವು ಪಾಕಿಸ್ತಾನದ ವಿಷಯದಲ್ಲಿ ಎಂದಿನಂತೆ ಔದಾರ್ಯದಿಂದ ವರ್ತಿಸಿದ್ದೇವೆಯೇ? ಎಂದು ನನ್ನನ್ನು ಪ್ರಶ್ನಿಸಿದ್ದಾರೆ. ಪಾಕಿಸ್ತಾನ ರೆಡ್‌ಕ್ರಾಸ್ ಸಂಸ್ಥೆಯ ಪ್ರತಿನಿಧಿಗಳು ನನ್ನನ್ನು ಅನೇಕ ಸಲ ಭೇಟಿಯಾಗಿದ್ದಾರೆ. ಈ ಸಂದರ್ಭದಲ್ಲಿ ನಾವು ಸಾಕಷ್ಟು ಚರ್ಚೆಯನ್ನು ಮಾಡಿದ್ದೇವೆ. ಪಂಜಾಬ್ ರೆಡ್‌ಕ್ರಾಸ್ ಮತ್ತು ಬಂಗಾಳ ರೆಡ್‌ಕ್ರಾಸ್ ಸಂಸ್ಥೆಗಳಿಗೆ ಸೇರಿದ ನಿಧಿಗಳ ವಿಷಯದಲ್ಲಿ ನಮ್ಮ ಮಧ್ಯೆ ಅನೇಕ ವಿವಾದಾಸ್ಪದ ಅಂಶಗಳಿದ್ದವು. ಆದರೂ ಎಲ್ಲ ವಿಷಯಗಳನ್ನು ನಾವು ಸೌಹಾರ್ದಯುತವಾಗಿ ಬಗೆಹರಿಸಿಕೊಂಡಿದ್ದೇವೆ. ರೆಡ್ ಕ್ರಾಸ್ ಸಂಸ್ಥೆಗೆ ಸಂಬಂಧಿಸಿದ ವಿಷಯಗಳನ್ನು ಸರ್ಕಾರದ ಮಟ್ಟದಲ್ಲಿ. ಏಕೆಂದರೆ ರೆಡ್‌ಕ್ರಾಸ್ ಸಂಸ್ಥೆಯು ಭಾರತಕ್ಕೆ ಮಾತ್ರವಲ್ಲ, ಇಡೀ ಜಗತ್ತಿಗೆ ಸಂಬಂಧಿಸಿದ ಒಂದು ಮಹಾನ್ ಸಂಸ್ಥೆಯಾಗಿದೆ.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಬಗ್ಗೆ ಮಾನ್ಯ ಸದಸ್ಯರು ತುಂಬು ಗೌರವದಿಂದ ಮಾತನಾಡಿದ್ದಾರೆ. ಅದಕ್ಕಾಗಿ ಮಾನ್ಯ ಸದಸ್ಯರಿಗೆ ನಾನು ಆಭಾರಿಯಾಗಿದ್ದೇನೆ. ರೆಡ್‌ಕ್ರಾಸ್ ಸಂಸ್ಥೆಯು ಉದಾತ್ತ ಧ್ಯೇಯದ ಪ್ರತೀಕವಾಗಿದ್ದು, ಜಗತ್ತಿನ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಅತ್ಯಂತ ಪ್ರತಿಷ್ಠಿತ ಸ್ಥಾನವನ್ನು ಹೊಂದಿದೆ. ಅದರ ಉನ್ನತ ಆದರ್ಶಗಳನ್ನು ನಾವು ಮೈಗೂಡಿಸಿಕೊಂಡಿದ್ದು ಅದೇ ಕಾರಣಕ್ಕಾಗಿ. ಅನೇಕ ಅಂತಾರಾಷ್ಟ್ರೀಯ ಸಮಿತಿಗಳಲ್ಲಿ ಅದು ಪ್ರಾತಿನಿಧ್ಯ ಪಡೆದಿದೆ. ಇದು ಭಾರತ ಸರ್ಕಾರವು ಪಾಕಿಸ್ತಾನ ಸರ್ಕಾರದೊಡನೆ ಯಾವುದೇ ಒಂದು ತೀರ್ಮಾನಕ್ಕೆ ಬರುವ ಪ್ರಶ್ನೆ ಮಾತ್ರವಾಗಿರದೆ ಅದು ಪಾಕಿಸ್ತಾನ ರೆಡ್‌ಕ್ರಾಸ್ ಸಂಸ್ಥೆ ಹಾಗೂ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ನಡುವಣ ಬಾಧ್ಯತೆಯನ್ನು ಈಡೇರಿಸುವ ಪ್ರಶ್ನೆಯಾಗಿದೆ. ಅಂದರೆ ಅದು ಭಾರತೀಯರು ಮತ್ತು ಪಾಕಿಸ್ತಾನಿಯರ ನಡುವಣ ಪರಸ್ಪರ ಬಾಧ್ಯತೆಗಳಿಗೆ ಸಂಬಂಧಿಸಿದ ವಿಷಯವಾಗಿದೆ. ಒಟ್ಟಿನಲ್ಲಿ ಈ ವಿಧೇಯಕಕ್ಕೆ ಸದನದ ಮಾನ್ಯ ಸದಸ್ಯರೆಲ್ಲರೂ ಬೆಂಬಲ ನೀಡಿರುವುದು ನನಗೆ ಅಪಾರ ಸಂತಸವಾಗಿದೆ.

## 16. ಲೇಡಿ ಹಾರ್ಡಿಂಜ್ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ ವಿಧೇಯಕ*

ಮಾನ್ಯ ಉಪ ಸಭಾಪತಿಗಳೇ, ಈ ವಿಧೇಯಕದ ಬಗ್ಗೆ ಮಾತನಾಡಲು ಕೆಲವು ನಿಮಿಷಗಳ ಅವಕಾಶ ಕೊಟ್ಟಿರುವುದಕ್ಕಾಗಿ ನಾನು ತಮಗೆ ಆಭಾರಿಯಾಗಿದ್ದೇನೆ. ಕಳೆದ ಹತ್ತು ವರ್ಷಗಳಿಂದ ಲೇಡಿ ಹಾರ್ಡಿಂಜ್ ಕಾಲೇಜಿನೊಂದಿಗೆ ನಾನು ಅತ್ಯಂತ ನಿಕಟ ಸಂಬಂಧ ಹೊಂದಿದ್ದು ಈ ಸಂಸ್ಥೆಯ ಎಲ್ಲ ವಿಷಯಗಳು ನನಗೆ ಗೊತ್ತಿವೆ. ಹೀಗಾಗಿ ಈ ಸದನದ ಸದಸ್ಯರಿಗೆ ನಾನು ಸಾಕಷ್ಟು ವಿಷಯಗಳನ್ನು ತಿಳಿಸಲು ಇಚ್ಛಿಸುತ್ತೇನೆ. ಸದನದ ಮಾನ್ಯ ಸದಸ್ಯರಾದ ಶ್ರೀಮತಿ ಸೀತಾ ಪರಮಾನಂದ್ ಅವರು ಮಾಡಿರುವ ಟೀಕೆಯನ್ನು ಕುರಿತಂತೆ ಹೆಚ್ಚು ವಿವರವಾಗಿ ಹೇಳಲು ನಾನು ಹೋಗುವುದಿಲ್ಲ. ಆದರೆ ಅವರು ಮಾಡಿರುವ ಆರೋಪಗಳು ಮತ್ತು ನೀಡಿರುವ ಮಾಹಿತಿಗಳು ವಿರೋಧಾಭಾಸಗಳಿಂದ ಕೂಡಿದ್ದು ಅವರಲ್ಲಿ ಯಾವ ಹುರುಳೂ ಇಲ್ಲ ಎಂಬುದನ್ನು ನಾನು ಸದನದ ಗಮನಕ್ಕೆ ತರಲು ಬಯಸುತ್ತೇನೆ. ಅವರು ನ್ಯಾಯಾಲಯದ ತೀರ್ಪು ಹಾಗೂ ಇನ್ನಿತರ ಅಂಶಗಳ ಕುರಿತು ಮಾತನಾಡಿದ್ದಾರೆ. ಈ ವಿಷಯದಲ್ಲಿ ನಾನು ಹೆಚ್ಚಿನದೇನನ್ನೂ ಹೇಳಲು ಬಯಸುವುದಿಲ್ಲ. ಆದರೆ ನೀವು ನನಗೆ ಅವಕಾಶ ನೀಡಿದರೆ ಪಂಜಾಬ್ ಹೈಕೋರ್ಟ್ ನೀಡಿರುವ ತೀರ್ಪಿನಲ್ಲಿನ ಕೊನೆಯ ಎರಡು ಅಥವಾ ಪ್ಯಾರಗಳಿಂದ ಕೆಲವೇ ಕೆಲವು ವಾಕ್ಯಗಳನ್ನು ನಾನಿಲ್ಲಿ ಉದ್ಧರಿಸುತ್ತೇನೆ:

ಭಾರತದಲ್ಲಿ ನನ್ನ ಇಪ್ಪತ್ತೆಂಟು ವರ್ಷಗಳ ಸೇವಾವಧಿಯಲ್ಲಿ ಭಾರತೀಯರು ಮತ್ತು ಯೂರೋಪಿಯನ್ನರ ನಡುವಣ ಸಂಬಂಧಗಳಲ್ಲಿ ಮಾತ್ರವೇ ಅಲ್ಲ ಭಾರತೀಯರ ಸಾಮಾಜಿಕ ಚಿಂತನೆಯಲ್ಲಿ ಬದಲಾವಣೆಗಳಾಗಿರುವುದನ್ನು ಕಂಡಿದ್ದೇನೆ. ಲೇಡಿ ಹಾರ್ಡಿಂಜ್ ಕಾಲೇಜು ಮತ್ತು ಆಸ್ಪತ್ರೆಯ ರೂವಾರಿಗಳು ಮತ್ತು ಸಂಸ್ಥಾಪಕರು ಭಾರತದಲ್ಲಿ ಮಹಿಳಾ ವಿಮೋಚನಾ ಚಳವಳಿಯ ಆದ್ಯ ಪ್ರವರ್ತಕರ ಸಾಲಿಗೆ ಸೇರಿದವರಾಗಿದ್ದು, ಅಂದಿನ ದಿನಗಳಲ್ಲಿ ಅತ್ಯಂತ ಪ್ರಗತಿಶೀಲ ಮತ್ತು ಮುಕ್ತ ವಿಚಾರಧಾರೆ ಹೊಂದಿರುವವರೆಂದು ಭಾರೀ ಮನ್ನಣೆಗೆ ಪಾತ್ರರಾಗಿದ್ದರು. ಮಹಿಳೆಯರ ವಿಮೋಚನೆ ಮತ್ತು ಸಮಾಜದಲ್ಲಿ ಅವರಿಗೆ ಸಮಾಜ ಸ್ಥಾನಮಾನ ದೊರಕಿಸಿಕೊಡುವ ಸಲುವಾಗಿ ಅಗಾಧ ಪರಿಶ್ರಮ ವಹಿಸಿದ ಆ ಮಹಾನ್ ಪೀಳಿಗೆಯ ಉತ್ತರಾಧಿಕಾರಿಗಳು ತಮ್ಮ ವೈದ್ಯಕೀಯ ಕಾಲೇಜು ಮಹಿಳೆಯರಿಗಾಗಿಯೇ ಇರಬೇಕೆಂದು ಈಗ ಹೋರಾಟಕ್ಕೆ ಇಳಿದಿರುವುದು ನನಗೆ ಅತ್ಯಂತ ವಿಲಕ್ಷಣವಾಗಿ ಕಾಣಿಸುತ್ತಿದೆ. ಇಂದಿನ ಆಧುನಿಕ ಪೀಳಿಗೆಯವರಿಂದ ಹಳೆ ಕಾಲದ ಮನೋವೃತ್ತಿಯವರೆಂದು ವರ್ಗೀಕರಿಸಲ್ಪಟ್ಟವರು, ಸ್ತ್ರೀ - ಪುರುಷರೆಂಬ ಪ್ರತ್ಯೇಕತೆ ಪ್ರತಿಪಾದಿಸುವ ಕಡು ಸಂಪ್ರದಾಯವಾದಿಗಳು ಕೂಡಾ ವೈದ್ಯಕೀಯ ವೃತ್ತಿ ಮತ್ತು ತರಬೇತಿಯಲ್ಲಿ ಈ ತಾರತಮ್ಯವನ್ನು ಬಯಸಲಾರರು. ಇಂತಹ ಸನ್ನಿವೇಶದಲ್ಲಿ ಮಹಿಳೆಯರಿಗಾಗಿಯೇ ವೈದ್ಯಕೀಯ ಕಾಲೇಜೊಂದನ್ನು ಮೀಸಲಾಗಿಡುವಂತೆ ಒತ್ತಾಯಿಸುವುದು ಅರ್ಥಹೀನವಾಗಿದೆ.

---

* ಆರೋಗ್ಯ ಸಚಿವ ಶ್ರೀ ಡಿ.ಪಿ.ಕರ್‌ಮರ್‌ಕರ್ ಅವರು ಮಂಡಿಸಿದ ಲೇಡಿ ಹಾರ್ಡಿಂಜ್ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ ವಿಧೇಯಕಕ್ಕೆ ಸಂಬಂಧಿಸಿದ ನಿಬಂಧನೆ ಮೇಲಣ ಚರ್ಚೆಯಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತಾ (ರಾಜ್ಯಸಭೆ ಚರ್ಚೆ, 1959, ಆಗಸ್ಟ್ 10, ಪಿ.ಪಿ.143-148).

ಪ್ರಸ್ತುತ ಸನ್ನಿವೇಶದಲ್ಲಿ ಅರ್ಜಿದಾರರು ಆಕ್ಷೇಪಿಸಿರುವ ಈ ಯೋಜನೆಯು ಕಾಲೇಜು ಮತ್ತು ಆಸ್ಪತ್ರೆ ಸ್ಥಾಪನೆಯ ಹಿಂದಿನ ಮೂಲೋದ್ದೇಶಗಳಲ್ಲಿ ಒಂದನ್ನಾದರೂ ಅತಿಕ್ರಮಿಸುವುದಿಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಕಳೆದ ನಲವತ್ತು ವರ್ಷಗಳಲ್ಲಿ ಆಗಿರುವ ಅಗಾಧ ಸಾಮಾಜಿಕ ಬದಲಾವಣೆಯ ಪರಿಣಾಮವಾಗಿ ಅದರ ಮೂಲೋದ್ದೇಶಗಳಲ್ಲಿ ಒಂದು ಭಾಗ ಮಾತ್ರ ಈಗ ಅದರ ಮಹತ್ವ ಮತ್ತು ಪ್ರಾಮುಖ್ಯವನ್ನು ಕಳೆದುಕೊಂಡಿದೆ. ಈ ಎಲ್ಲ ಕಾರಣಗಳಿಂದ ನಾನು ಈ ಅರ್ಜಿಯನ್ನು ವಜಾ ಮಾಡಿದ್ದೇನೆ. ಈ ಮೊಕದ್ದಮೆಯ ಖರ್ಚು ವೆಚ್ಚಗಳನ್ನು ಅವರವರೇ ಭರಿಸಬೇಕೆಂದು ಆದೇಶ ನೀಡಿದ್ದೇನೆ.

* * *

ಈ ಸಂಸ್ಥೆಯಲ್ಲಿ ಆಸಕ್ತರಾಗಿದ್ದ ಕೆಲವು ಮಹಿಳೆಯರು ಉಗ್ರ ಮಹಿಳಾವಾದಿಗಳಾಗಿದ್ದರಿಂದ ಮತ್ತು ಅವರ ವಿಚಾರಧಾರೆ ಕಾಲಬಾಹಿರವಾಗಿದ್ದರಿಂದ ನಾವು ಅನಿವಾರ್ಯವಾಗಿ ನ್ಯಾಯಾಲಯಕ್ಕೆ ಹೋಗಲೇಬೇಕಾಯಿತು. ನನ್ನ ಜೀವನದುದ್ದಕ್ಕೂ ನಾನು ಮಹಿಳೆಯರ ಹಕ್ಕುಗಳಿಗಾಗಿ ಹೋರಾಡಿದವಳು ಮತ್ತು ಆರೋಗ್ಯ ಖಾತೆಯನ್ನು ಹೊಂದಿದ್ದ ಅವಧಿಯುದ್ದಕ್ಕೂ ನಾನು ಮಹಿಳೆಯರಿಗೆ ವೈದ್ಯಕೀಯ ಶಿಕ್ಷಣ ಒದಗಿಸುವ ಧ್ಯೇಯಕ್ಕೆ ಬದ್ಧಳಾಗಿದ್ದು, ಈ ದಿಸೆಯಲ್ಲಿ ನನ್ನೆಲ್ಲ ಪ್ರಯತ್ನಗಳನ್ನು ಮಾಡಿದೆ. ಆರೋಗ್ಯ ಖಾತೆ ಈ ನಿಟ್ಟಿನಲ್ಲಿ ನಡೆಸಿದ ಪ್ರಯತ್ನಗಳಿಂದಾಗಿ ಮಹತ್ತರ ಬದಲಾವಣೆಗಳಾಗಿವೆ. ತಾಯಂದಿರು ಮತ್ತು ಶಿಶು ಮರಣ ಪ್ರಮಾಣ ಗಣನೀಯವಾಗಿ ತಗ್ಗಿದೆ. ಮಹಿಳಾ ವೈದ್ಯರ ಸೇವೆಯನ್ನು ಬಳಸದೇ ಇರುತ್ತಿದ್ದಲ್ಲಿ ಇದನ್ನು ಸಾಧಿಸುವುದು ನಮಗೆ ಸಾಧ್ಯವಾಗುತ್ತಿರಲಿಲ್ಲ. ಅವರು ಮಾಡುತ್ತಿರುವ ಟೀಕೆ ಮಿಥ್ಯಾಪವಾದವಾಗಿದೆ. ಭಾರತೀಯ ಸಹೋದರರು ಮತ್ತು ಸಹೋದ್ಯೋಗಿಗಳೊಂದಿಗೆ ಕೆಲಸ ಮಾಡುವ ಅವಕಾಶ ದೊರಕಿರುವುದು ನನ್ನ ಸೌಭಾಗ್ಯ. ಮಹಿಳೆಯರಿಗಾಗಿ ಗೌರವ ನೀಡುವ ವಿಚಾರದಲ್ಲಿ, ಅವರಿಗೆ ಎಲ್ಲ ಕ್ಷೇತ್ರಗಳಲ್ಲೂ ಅವಕಾಶ ಕಲ್ಪಿಸಿಕೊಡುವಲ್ಲಿ ಭಾರತವು ಇತರೆಲ್ಲ ರಾಷ್ಟ್ರಗಳಿಗಿಂತ ಮುಂದಿದೆ. ವಿಶ್ವಸಂಸ್ಥೆಯಂತಹ ಗೌರವಾನ್ವಿತ ಸಂಸ್ಥೆಗಳಿಗೆ ಕಳುಹಿಸುವ ನಿಯಮಗಳ ನೇತೃತ್ವ ವಹಿಸುವ ಅವಕಾಶವೂ ಅವರಿಗೆ ದೊರೆತಿದೆ. ನಮ್ಮ ಸಂಸತ್ತಿನಲ್ಲಿ ಮಹಿಳೆಯರು ಸಾಕಷ್ಟು ಸಂಖ್ಯೆಯಲ್ಲಿದ್ದರೆ, ಮಹಿಳೆಯರಿಗೆ ಸಮಾನ ಹಕ್ಕುಗಳನ್ನು ನೀಡಬೇಕೆಂಬ ಮಹಾತ್ಮಾಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಪ್ರತಿಪಾದಿಸಿದ ನೀತಿಯನ್ನು ನಮ್ಮ ಈಗಿನ ಪ್ರಧಾನ ಮಂತ್ರಿಯವರು ಅಕ್ಷರಶಃ ಪಾಲಿಸುತ್ತಿದ್ದಾರೆ ನಮ್ಮ ಆರೋಗ್ಯ ಖಾತೆಯು ನಮಗಾಗಿ ಏನನ್ನು ಮಾಡಿಲ್ಲ ಎಂಬ ಮಹಿಳೆಯರ ಆರೋಪ ಮಿಥ್ಯಾಪವಾದವಾಗಿದೆ.

ಈ ವಿಷಯದಲ್ಲಿ ಹೆಚ್ಚಿನದೇನನ್ನೂ ನಾನು ಹೇಳಲು ಬಯಸುವುದಿಲ್ಲ. ಲೇಡಿ ಹಾರ್ಡಿಂಜ್ ಕಾಲೇಜನ್ನು ಕಾಂಪೋಸಿಟ್ ಕಾಲೇಜ್ ಆಗಿ ಪರಿವರ್ತಿಸಬೇಕೆಂಬ ವಿಷಯದಲ್ಲಿ ನಾನೇ ಮುತುವರ್ಜಿ ವಹಿಸಿ ಸಂಪುಟ ನಿರ್ಧಾರ ತೆಗೆದುಕೊಳ್ಳುವಂತೆ ಮಾಡಿದ್ದೇನೆಂಬ ಅಂಶವನ್ನೂ ನಿಮ್ಮ ಮುಂದಿಡಲು ಬಯಸುತ್ತೇನೆ. ಆರೋಗ್ಯ ಖಾತೆಯನ್ನು ವಹಿಸಿಕೊಂಡಾಗಲೇ ನಾನು ಈ ಬಗ್ಗೆ ಯೋಚಿಸಿದ್ದೆ. ಈ ಕಾಲೇಜು ಆರಂಭಗೊಂಡಾಗ ಇಪ್ಪತ್ತು ಮಂದಿ ಹುಡುಗಿಯರಿದ್ದರು. ಅನಂತರ ಈ ಸಂಖ್ಯೆ ಇಪ್ಪತ್ತೈದಕ್ಕೆ ಏರಿತು. ಮೂವತ್ತಕ್ಕೆ ತಲುಪಿತು. ನನ್ನ ಅಧಿಕಾರಾವಧಿಯಲ್ಲಿ

ಈ ಸಂಖ್ಯೆ ನಲವತ್ತಕ್ಕೆ ಮುಟ್ಟಿತು. ಇನ್ನಷ್ಟು ಪ್ರಯತ್ನಿಸಿ ಈ ಸಂಖ್ಯೆಯನ್ನು ಅರವತ್ತಕ್ಕೆ ತಂದಿರಿಸಿದೆ. ಆದರೆ ಮಹಿಳೆಯರಿಗೆ ಅಲ್ಲಿನ ಸಿಬ್ಬಂದಿಯಲ್ಲಿನ ಕಿಡಿಗೇಡಿಗಳನ್ನು ನಿಯಂತ್ರಿಸುವುದು ಅಸಾಧ್ಯವಾಗಿರುವ ಕಾರಣಕ್ಕೆ ಈ ಕ್ರಮವನ್ನು ತರಲಾಗಿದೆ ಎಂಬ ಈಗಿನ ಆರೋಗ್ಯ ಸಚಿವರ ಅಭಿಪ್ರಾಯವನ್ನು ನಾನು ಒಪ್ಪುವುದಿಲ್ಲ. ನನ್ನ ಅಧಿಕಾರಾವಧಿಯಲ್ಲೂ ಶಿಸ್ತಿಗೆ ಒಳಪಡದ ಕೆಲ ಕಿಡಿಗೇಡಿಗಳು ಅಲ್ಲಿದ್ದರು. ಸಂಸ್ಥೆಯ ಮಹಾ ನಿರ್ದೇಶಕರಾಗಿದ್ದ ಡಾ|| ಜೀವರಾಜ್ ಮೆಹ್ತಾ ಅವರು ಒಂದು ದಿನ ರಾತ್ರಿ ಹತ್ತು ಗಂಟೆಗೆ ಅಲ್ಲಿಗೆ ಹೋಗಿದ್ದಾಗ ಕಿಡಿಗೇಡಿಗಳು ತರಲೆ ಎಬ್ಬಿಸಿದರು. ಆ ದಿನ ಪ್ರಕರಣ ವಿಕೋಪಕ್ಕೆ ಹೋಗದಂತೆ ಉಪಶಮನಗೊಳಿಸಲಾಯಿತು. ನಂತರದಲ್ಲಿ ಈ ಕಿಡಿಗೇಡಿಗಳು ಮತ್ತೆ ತಲೆ ಎತ್ತಿ ತಮ್ಮ ಯೂನಿಯನ್‌ಗೆ ಮಾನ್ಯತೆ ನೀಡಬೇಕೆಂದು ಒತ್ತಾಯಿಸಿದರು. ಅವರ ಬೇಡಿಕೆ ನ್ಯಾಯ ಸಮ್ಮತವಾಗಿಲ್ಲದ್ದರಿಂದ ಅವರ ಪ್ರಯತ್ನಕ್ಕೆ ಅಲ್ಲಿಯೇ ತಡೆ ಒಡ್ಡಲಾಯಿತು. ಇದಾದ ಮೇಲೆ ಏನಾಯಿತೋ ನನಗೆ ಗೊತ್ತಿಲ್ಲ. ಆದರೆ ನನ್ನ ಅಧಿಕಾರಾವಧಿಯಲ್ಲಿ ಅವರಲ್ಲಿ ಯಾರೊಬ್ಬರೂ ತಲೆ ಎತ್ತಲಿಲ್ಲ. ಅದೇ ವೇಳೆಗೆ ಮಹಿಳೆಯರೇ ಒಂದು ಸಂಸ್ಥೆ ನಡೆಸುವಾಗ ಅಥವಾ ಸಂಸ್ಥೆಯ ಉಸ್ತುವಾರಿ ವಹಿಸಿಕೊಂಡಾಗ ಇಂತಹ ಕಿಡಿಗೇಡಿಗಳನ್ನು ನಿಯಂತ್ರಿಸುವುದು ಅವರಿಂದ ಸಾಧ್ಯವಾಗುವುದಿಲ್ಲವೆಂಬ ಸಿದ್ಧಾಂತವನ್ನೂ ನಾನು ಒಪ್ಪುವುದಿಲ್ಲ. ಆರೋಗ್ಯ ಖಾತೆಯ ಬೆಂಬಲ ಹೊಂದಿರುವ ಲೇಡಿ ಹಾರ್ಡಿಂಜ್ ವೈದ್ಯಕೀಯ ಕಾಲೇಜಿನಂತಹ ಒಂದು ಕಾಲೇಜನ್ನು ಅಲ್ಲಿ ನಿಯಂತ್ರಿಸಲಾಗದ ಕಿಡಿಗೇಡಿ ಉದ್ಯೋಗಿಗಳಿದ್ದಾರೆ ಎಂಬ ಒಂದೇ ಕಾರಣಕ್ಕಾಗಿ ಸರ್ಕಾರವೇ ಅದನ್ನು ವಹಿಸಿಕೊಳ್ಳುವುದು ಸರಿಯಾಗಲಾರದು. ಅದೇನಿದ್ದರೂ ನಾನು ಆರೋಗ್ಯ ಖಾತೆಯ ಸಚಿವೆಯಾಗಿ ಅಧಿಕಾರ ವಹಿಸಿಕೊಂಡ ದಿನದಿಂದಲೂ ಅಂದರೆ ಕಳೆದ ಹಲವಾರು ವರ್ಷಗಳಿಂದ ಈ ಕಾಲೇಜನ್ನು ಸಂಪೂರ್ಣವಾಗಿ ಸರ್ಕಾರದ ನಿಧಿಯಿಂದಲೇ ನಿರ್ವಹಿಸಲಾಗಿದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

ಕಾಲೇಜಿಗೆ ಸಂಬಂಧಿಸಿದ ವಿವಾದದಲ್ಲಿ ಮಾನ್ಯ ನ್ಯಾಯಾಧೀಶರು ವ್ಯಕ್ತಪಡಿಸಿದ ಅಭಿಪ್ರಾಯವನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ನ್ಯಾಯಾಧೀಶರು ಹೇಳಿರುವಂತೆ ಕಾಲೇಜು ಸ್ಥಾಪನೆಯಾದ ದಿನಗಳಲ್ಲಿ ಭಾರತದಲ್ಲಿನ ಪರಿಸ್ಥಿತಿ ಈಗಿನದಕ್ಕಿಂತ ತೀರಾ ತೀರಾ ಭಿನ್ನವಾಗಿತ್ತು. ಮಹಿಳೆಯರು ಚಿಕಿತ್ಸೆಗಾಗಿ ಆಸ್ಪತ್ರೆಗಳಿಗೆ ಹೋಗಲು ಮತ್ತು ಪುರುಷ ವೈದ್ಯರಿಂದ ತಪಾಸಣೆಗೆ ಒಳಗಾಗಲು ಸಿದ್ಧರಿರಲಿಲ್ಲ. ಆಗಿನ ರೀತಿ ಹುಡುಗಿಯರು ಹುಡುಗರೊಂದಿಗೆ ಸಹ ಶಿಕ್ಷಣಕ್ಕೂ ಹಿಂಜರಿಯುತ್ತಿದ್ದರು. ಮಹಿಳಾ ವೈದ್ಯರೇ ಮಹಿಳಾ ರೋಗಿಗಳನ್ನು ತಪಾಸಿಸುವುದು ಆಗಿನ ರೂಢಿಯಾಗಿತ್ತು. ವಾಸ್ತವವಾಗಿ ಈ ಕಾಲೇಜು ಸ್ಥಾಪಿತವಾದದ್ದು ಕೂಡಾ ಅದೇ ಕಾರಣಕ್ಕೆ. ಆದರೆ ಅಂದಿನಿಂದ ಇಂದಿಗೆ ಕಾಲ ಬಹಳಷ್ಟು ಬದಲಾಗಿದೆ. ಈಗ ಮಹಿಳೆಯರು ಪುರುಷರಿಂದ ಪರೀಕ್ಷೆ ಮಾಡಿಸಿಕೊಳ್ಳುವುದಕ್ಕೆ ಅಥವಾ ಪುರುಷ ವೈದ್ಯರಿಂದ ಶಸ್ತ್ರ ಚಿಕಿತ್ಸೆ ಮಾಡಿಕೊಳ್ಳಲು ಹಿಂಜರಿಯುತ್ತಿಲ್ಲ. ಈಗ ಪರಿಸ್ಥಿತಿ ಸಂಪೂರ್ಣ ಬದಲಾಗಿದೆ. ಲೇಡಿ ಹಾರ್ಡಿಂಜ್ ಕಾಲೇಜಿಗಿದ್ದ ಪ್ರಮುಖ ಸಮಸ್ಯೆ ಎಂದರೆ ಅದು ಮಹಿಳೆಯರು ಮತ್ತು ಮಕ್ಕಳ ಆಸ್ಪತ್ರೆಯಾಗಿದ್ದುದು. ಆಧುನಿಕ ವೈದ್ಯ ಪದ್ಧತಿಯ ಅಭ್ಯಾಸಕ್ಕೆ ಅತ್ಯವಶ್ಯಕವಾಗಿದ್ದ ಜನರಲ್ ಆಸ್ಪತ್ರೆಯಲ್ಲಿನ ತರಬೇತಿ ಅಲ್ಲಿ ಅವರಿಗೆ ಸಿಗುತ್ತಿರಲಿಲ್ಲ. ಆಗ ನನಗೆ ಇದಕ್ಕೆ ಏನು ಪರಿಹಾರ ಮಾರ್ಗ ಎಂಬುದು ಯೋಜನೆಗಿಟ್ಟುಕೊಂಡಿತು. ಆರಂಭದಲ್ಲಿ ಸಫ್ದರ್‌ಜಂಗ್ ಆಸ್ಪತ್ರೆಯಲ್ಲಿ ನಾವು ಅವರಿಗಾಗಿ ಕೆಲವು

ಹಾಸುಗೆಗಳನ್ನು ಮೀಸಲಿರಿಸಿದೆವು. ಇದಲ್ಲದೆ ಇತರ ಸೌಕರ್ಯಗಳಿಗಾಗಿಯೂ ನಾವು ಪ್ರಯತ್ನಿಸಿದೆವು. ವೈದ್ಯಕೀಯ ಮಂಡಳಿ ಕೂಡ ನಮಗೆ ಸಮಯಾವಕಾಶ ನೀಡಿತು. ನಾವು ಉತ್ತಮ ಫಲಿತಾಂಶವನ್ನೇನೋ ತೋರಿಸಿದೆವು. ಆದರೆ ಅದು ನಮ್ಮ ನಿರೀಕ್ಷೆಯ ಮಟ್ಟವನ್ನು ಮುಟ್ಟಲಿಲ್ಲ. ಅದೇ ವೇಳೆಗೆ ಸರಿಯಾಗಿ ದೆಹಲಿಯಲ್ಲಿ ಪುರುಷರಿಗಾಗಿ ವೈದ್ಯಕೀಯ ಕಾಲೇಜೊಂದನ್ನು ಪ್ರಾರಂಭಿಸಬೇಕೆಂಬ ಆಗ್ರಹವು, ಒತ್ತಡವೂ ಬಂದಿತು. ನಮ್ಮಲ್ಲಿ ನಿಧಿಗಳ ತೀವ್ರ ಕೊರತೆ ಇದ್ದುದ್ದರಿಂದ, ನಮ್ಮ ನಿರೀಕ್ಷೆಯ ಮಟ್ಟಕ್ಕೆ ಸರಿಯಾಗಿ ವೈದ್ಯಕೀಯ ಶಿಕ್ಷಣದ ಮಟ್ಟವನ್ನು ಕಾಯ್ದುಕೊಳ್ಳಲು ಸಾಕಷ್ಟು ಹಣಕಾಸು ಇಲ್ಲದಿದ್ದುದರಿಂದ ಮತ್ತು ಸಿಬ್ಬಂದಿಯ ತೀವ್ರ ಕೊರತೆ ಇದ್ದುದ್ದರಿಂದ ಕಾಂಪೋಸಿಟ್ ಕಾಲೇಜ್ ಹೊಂದಿರುವುದೇ ಇದಕ್ಕೆ ಅತ್ಯುತ್ತಮ ಪರಿಹಾರ ಎಂದು ನಾನು ತೀರ್ಮಾನಿಸಿದೆ. ಅದೇ ವೇಳೆಗೆ ವಿದ್ಯಾರ್ಥಿನಿಯರ ಸಂಖ್ಯೆಯನ್ನು ನಲವತ್ತರಿಂದ ಅರವತ್ತಕ್ಕೆ ಏರಿಸಲು ತೀರ್ಮಾನಿಸಲಾಯಿತು. ಅದುವರೆಗೆ ಲೇಡಿ ಹಾರ್ಡಿಂಜ್ ಕಾಲೇಜಿನ ಆವರಣದಲ್ಲಿ ಯುವಕರಿಗೆ ಪ್ರವೇಶವಿರಲಿಲ್ಲ. ಹುಡುಗಿಯರಿಗೆ ಅಲ್ಲಿ ಯಾವ ತೊಂದರೆಯೂ ಇರಲಿಲ್ಲ. ಆದರೆ ಅವರಿಗೆ ಇದ್ದ ಒಂದೇ ಒಂದು ಕೊರಗೆಂದರೆ ಪ್ರಸೂತಿ ಮತ್ತು ಸ್ತ್ರೀರೋಗ ಶಾಸ್ತ್ರಗಳನ್ನು ಬಿಟ್ಟರೆ ಬೇರಾವ ಶಾಖೆಯನ್ನು ಕಲಿಯುವ ಅವಕಾಶ ಅವರಿಗಿರಲಿಲ್ಲ. ಈ ವಿದ್ಯಾರ್ಥಿನಿಯರು ಇರ್ವಿನ್ ಆಸ್ಪತ್ರೆಗೆ ಹೋದರೆ ತರಗತಿಯಲ್ಲಿ ಹುಡುಗರೊಂದಿಗೆ ಕುಳಿತು ಸಾಮಾನ್ಯ ವೈದ್ಯಶಾಸ್ತ್ರದ ಪಾಠಗಳನ್ನು ಕಲಿತರೆ ಅದರಲ್ಲಿ ತಪ್ಪೇನಿತ್ತೋ ಆ ದೇವರಿಗೇ ಗೊತ್ತು. ನಾನು ಅತ್ಯುಗ್ರ ಸ್ತ್ರೀವಾದಿಯಂತೂ ಅಲ್ಲ. ಆದರೆ ಮಹಿಳೆಯರ ಹಕ್ಕಿಗಾಗಿ ಹೋರಾಡುವವಳು. ನಾನು ಹಾಕಿದ ಒಂದೇ ಒಂದು ಷರತ್ತೆಂದರೆ ಲೇಡಿ ಹಾರ್ಡಿಂಜ್ ಕಾಲೇಜಿನ ಪ್ರಾಧ್ಯಾಪಕರು ಮತ್ತು ಸಿಬ್ಬಂದಿಗಳನ್ನು ವಜಾಗೊಳಿಸಬಾರದು ಎಂಬುದು ಮತ್ತು ಕಾಲೇಜಿನ ಪ್ರಿನ್ಸಿಪಾಲರು ಮತ್ತು ಸಿಬ್ಬಂದಿಯವರು ಮಹಿಳೆಯರೇ ಆಗಿರಬೇಕೆಂಬುದು. ಅವಶ್ಯಕ ಅರ್ಹತೆ ಇರುವ ಮಹಿಳೆಯರು ಸಿಗದಿದ್ದ ಸಂದರ್ಭದಲ್ಲಿ ಮಾತ್ರವೇ ಪುರುಷರನ್ನು ನೇಮಿಸಬೇಕು ಎಂಬುದು. ಈ ಯೋಜನೆಯು ಕಾರ್ಯರೂಪಕ್ಕೆ ಬಂದಿದ್ದರೆ ಸರ್ಕಾರವು ದೆಹಲಿಯಲ್ಲಿ ಇನ್ನೊಂದು ಕಾಲೇಜಿಗಾಗಿ ಅಷ್ಟೊಂದು ಅಗಾಧವಾದ ಮೊತ್ತವನ್ನು ವಿನಿಯೋಗಿಸಬೇಕಾಗಿ ಬರುತ್ತಿರಲಿಲ್ಲ. ಅಷ್ಟು ಮಾತ್ರವಲ್ಲ ಆರೋಗ್ಯ ಸಚಿವರು ಈ ವಿಧೇಯಕವನ್ನು ಮಂಡಿಸುವ ಪ್ರಮೇಯವೇ ಬರುತ್ತಿರಲಿಲ್ಲ. ಆದರೆ ಈಗ ಲೇಡಿ ಹಾರ್ಡಿಂಜ್ ಕಾಲೇಜನ್ನು ವಹಿಸಿಕೊಳ್ಳಲು ಅವರು ಸರಿಯಾದ ಮಾರ್ಗವನ್ನೇ ಅನುಸರಿಸುತ್ತಿದ್ದಾರೆ. ಅನೇಕ ಮಹಿಳಾ ಸದಸ್ಯರು ಮಹಿಳೆಯರಿಗಾಗಿಯೇ ಪ್ರತ್ಯೇಕ ಕಾಲೇಜು ಇರಬೇಕೆಂದು ಹೇಳಿದ್ದಾರೆ. ಗೌರವಾನ್ವಿತ ಸಚಿವರು ಅಮೆರಿಕದಲ್ಲಿರುವ ಮಹಿಳೆಯರ ಕಾಲೇಜಿನ ಬಗ್ಗೆ ಸಾಕಷ್ಟು ಮಾಹಿತಿ ನೀಡಿದ್ದರು. ಇಂಗ್ಲೆಂಡಿನಲ್ಲಿ ಮಹಿಳೆಯರಿಗಾಗಿ ಒಂದೇ ಒಂದು ಕಾಲೇಜು ಇಲ್ಲ ಎಂಬ ಅಂಶವನ್ನು ನಿಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಮೊದಲಿದ್ದ ಕಾಲೇಜುಗಳು ಈಗ ಇಲ್ಲ. ಅಮೆರಿಕದಲ್ಲಿ ಒಂದೇ ಒಂದು ಕಾಲೇಜು ಉಳಿದುಕೊಂಡಿದೆ ಮತ್ತು ಅಲ್ಲಿಯ ಸಿಬ್ಬಂದಿಯಲ್ಲಿ ಪ್ರಿನ್ಸಿಪಾಲರು ಸೇರಿದಂತೆ ಶೇ.80ರಷ್ಟು ಮಂದಿ ಪುರುಷರೇ ಆಗಿದ್ದಾರೆ. ನಾನು 'ಹೀಗೇಕೆ?' ಎಂದು ಅವರನ್ನು ಪ್ರಶ್ನಿಸಿದಾಗ "ನಮ್ಮಲ್ಲಿ ಅನೇಕ ಕಾಲೇಜುಗಳಿವೆ. ಹುಡುಗಿಯರು ಎಲ್ಲ ಕಾಲೇಜುಗಳನ್ನು ಸೇರಿಕೊಳ್ಳುತ್ತಿದ್ದಾರೆ. ಆದರೂ ಈ ಒಂದು ಕಾಲೇಜನ್ನು ನಾವು ಮುಂದುವರೆಸಿಕೊಂಡು ಬಂದಿದ್ದೇವೆ.

ಹುಡುಗಿಯರು ಮತ್ತು ಹುಡುಗರಿಗೆ ಪ್ರತ್ಯೇಕ ಕಾಲೇಜುಗಳನ್ನು ನಡೆಸುವುದರಲ್ಲಿ ನಮಗೆ ನಂಬಿಕೆ ಉಳಿದಿಲ್ಲ'' ಎಂದು ಅವರು ಹೇಳಿದರು. ಭಾರತದಲ್ಲೂ ಈ ನಿಟ್ಟಿನಲ್ಲಿ ನಾವು ಮುಂದುವರಿಯಬೇಕಾಗಿದೆ. ಇತರ ಎಲ್ಲ ವಿಷಯಗಳಂತೆ ವೈದ್ಯಕೀಯ ಶಿಕ್ಷಣದಲ್ಲೂ ನಾವು ಪ್ರಗತಿ ಸಾಧಿಸಬೇಕಾಗಿದೆ. ಮುಂಬೈ, ಕಲ್ಕತ್ತಾ, ಮದ್ರಾಸ್, ಹೈದರಾಬಾದ್ ಮತ್ತು ಇಲ್ಲಿನ ವೈದ್ಯಕೀಯ ಅಧ್ಯಯನ ಸಂಸ್ಥೆಯಲ್ಲಿ ಈಗ ಹುಡುಗರ ಜೊತೆಯೇ ಹುಡುಗಿಯರು ಅಧ್ಯಯನ ನಡೆಸುತ್ತಿದ್ದಾರೆ. ಹೀಗಿರುವಾಗ ಇದಕ್ಕೆ ಆಕ್ಷೇಪವಾದರೂ ಏಕೆ? ಆದರೂ ಈ ವಿಷಯದಲ್ಲಿ ಸಚಿವರು ಆಶ್ವಾಸನೆ ಕೊಡಬೇಕು ಎಂದು ನಾವು ಬಯಸುತ್ತೇವೆ. ಅದನ್ನು ಈ ಮಸೂದೆಯಲ್ಲಿ ಸೇರಿಸಲು ಸಾಧ್ಯವಾದರೆ ಅದು ಮತ್ತೂ ಒಳ್ಳೆಯದು. ಮಹಿಳೆಯರು, ಮಹಿಳೆಯರಿಗಾಗಿಯೇ ಸ್ಥಾಪಿಸಿದ ಕಾಲೇಜು ಇದಾಗಿದೆ ಮತ್ತು ಆರಂಭದಿಂದಲೂ ಅದನ್ನು ಮಹಿಳೆಯರೇ ನಡೆಸಿಕೊಂಡು ಬಂದಿದ್ದಾರೆ. ಬಹುಶಃ ನಾನು ಹೇಳುವುದೆಲ್ಲವೂ ಸರಿಯಾಗಿಯೇ ಇದೆ. ಒಂದು ವೇಳೆ ತಪ್ಪಿದ್ದರೆ ಅದನ್ನು ಸಚಿವರು ಸರಿಪಡಿಸುವರೆಂಬ ದೃಢ ವಿಶ್ವಾಸ ನನಗಿದೆ. ವೈದ್ಯಕೀಯ ಕಾಲೇಜಿನ ಸಿಬ್ಬಂದಿಯಲ್ಲಿ ಒಬ್ಬರೋ ಇಬ್ಬರೋ ಗಂಡಸರಿದ್ದಾರೆ. ಉಳಿದವರೆಲ್ಲರೂ ಮಹಿಳೆಯರು. ಈ ಸಂಸ್ಥೆಯ ನೇಮಕಗಳಲ್ಲಿ ಮಹಿಳೆಯರಿಗೆ ಆದ್ಯತೆ ನೀಡಬೇಕೆಂಬ ಅಭಿಪ್ರಾಯ ತಪ್ಪು. ನಾವು ಮಹಿಳಾ ಅಭ್ಯರ್ಥಿಗಳಿಗಾಗಿ ಹುಡುಕಾಟ ನಡೆಸುತ್ತಲೇ ಇರುತ್ತೇವೆ. ಆದರೆ ಅಂಥವರು ಸಿಗುವುದು ಕಷ್ಟವಾಗಿದೆ. ಸೂಕ್ತ ಮಹಿಳಾ ಅಭ್ಯರ್ಥಿಗಳು ಇಲ್ಲದಿರುವುದರಿಂದ ನಾವು ಹುದ್ದೆಗಳನ್ನು ತುಂಬಲು ಎಲ್ಲ ರೀತಿಯ ಪ್ರಯತ್ನಗಳನ್ನು ನಡೆಸುತ್ತೇವೆ. ಅದೇನಿದ್ದರೂ ಈ ಕಾಲೇಜಿನ ಎಲ್ಲ ವೃತ್ತಿಪರ ಹುದ್ದೆಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಸೂಕ್ತ ವಿದ್ಯಾರ್ಹತೆ ಹೊಂದಿರುವ ಮಹಿಳೆಯರಿಗೆ ನೀಡಲಾಗುವುದೆಂಬ ಆಶ್ವಾಸನೆಯನ್ನು ಸಚಿವರು ನೀಡಬೇಕೆಂದು ಬಯಸುತ್ತೇನೆ. ಮಹಿಳಾ ಅಭ್ಯರ್ಥಿಗಳು ದೊರೆಯದ ಇಂಥ ಸಂದರ್ಭದಲ್ಲಿ ಮಾತ್ರವೇ ಪುರುಷ ಅಭ್ಯರ್ಥಿಗಳನ್ನು ನೇಮಿಸಬೇಕೆಂದು ನಾನು ಆಗ್ರಹಪಡಿಸುತ್ತೇನೆ. ಮಹಿಳೆಯರು ತಾವು ಮಹಿಳೆಯರೆಂಬ ಒಂದೇ ಕಾರಣಕ್ಕಾಗಿ ಅರ್ಹತೆ ಇಲ್ಲದಿದ್ದರೂ ತಮ್ಮ ಬೇಡಿಕೆಗಳನ್ನು ಮುಂದಿಡಬೇಕಾದ ಪರಿಸ್ಥಿತಿ ಇರಬಾರದೆಂದು ಪ್ರತಿಪಾದಿಸುವವರಲ್ಲಿ ನಾನು ಒಬ್ಬಳಾಗಿದ್ದೇನೆ. ಅವರು ತಮ್ಮ ಹಕ್ಕುಗಳಿಗಾಗಿ ಹೋರಾಡಲೇಬೇಕು. ಆದರೆ ಅಲ್ಲಿ ಅವರ ಅರ್ಹತೆ ಮತ್ತು ಯೋಗ್ಯತೆಯೇ ಅದಕ್ಕೆ ತಳಹದಿಯಾಗಿರಬೇಕು ಎಂಬುದನ್ನು ಅವರು ಮರೆಯಬಾರದು. ಅರ್ಹತೆಗೆ ಆದ್ಯತೆ ನೀಡಿದರೆ ಪಕ್ಷಪಾತಕ್ಕೆ ಅಲ್ಲಿ ಅವಕಾಶವೇ ಇರುವುದಿಲ್ಲ. ಹೆಚ್ಚು ಹೆಚ್ಚು ಸವಲತ್ತುಗಳನ್ನು ಕೇಳುತ್ತಾ ಹೋದರೆ ನೀವು ದುರ್ಬಲರಾಗುತ್ತಾ ಹೋಗುತ್ತೀರಿ. ಅದು ದೀರ್ಘಾವಧಿಯಲ್ಲಿ ನಿಮಗೆ ಮಾರಕವಾಗಿ ಪರಿಣಮಿಸುವುದು. ಗೌರವಾನ್ವಿತ ಸದನದ ಮುಂದೆ ನನ್ನ ಈ ಅನಿಸಿಕೆಗಳನ್ನು ಮುಂದಿಡುವ ಮೂಲಕ ನಾನು ಈ ವಿಧೇಯಕವನ್ನು ಸಂಪೂರ್ಣವಾಗಿ ಬೆಂಬಲಿಸುತ್ತೇನೆ.

* 1959ರ ಆಗಸ್ಟ್ 11 ರಂದು ಈ ವಿಧೇಯಕವನ್ನು ಅಂಗೀಕರಿಸಲಾಯಿತು.

## 17. ಔಷಧಗಳು (ತಿದ್ದುಪಡಿ) ವಿಧೇಯಕ 1954*

ಔಷಧ ಕಾಯ್ದೆಗೆ ತಿದ್ದುಪಡಿ ಸೂಚಿಸಿ ಮಂಡಿಸಿರುವ ವಿಧೇಯಕವನ್ನು ಈಗಾಗಲೇ ಸದಸ್ಯರಿಗೆ ರವಾನಿಸಲಾಗಿದೆ. ಈ ಸಂದರ್ಭದಲ್ಲಿ ನಾನು ಇದಕ್ಕೆ ಸಂಬಂಧಿಸಿದ ಕೆಲವೊಂದು ವಿಷಯಗಳನ್ನು ಸದನದ ಮುಂದಿಡಲು ಬಯಸುತ್ತೇನೆ. ಔಷಧಗಳ ಆಮದು, ತಯಾರಿಕೆ, ವಿತರಣೆ ಮತ್ತು ಮಾರಾಟವನ್ನು ನಿಯಂತ್ರಿಸಲು ಅವಕಾಶ ಕಲ್ಪಿಸುವ ಮತ್ತು ಔಷಧಗಳ ಗುಣಮಟ್ಟವನ್ನು ನಿರ್ದಿಷ್ಟಪಡಿಸುವ 1940ರ ಔಷಧ ಕಾಯ್ದೆಯು 1947ನೇ ಏಪ್ರಿಲ್ ತಿಂಗಳಿನಿಂದಲೇ ಜಾರಿಯಲ್ಲಿದೆ. ಕಳೆದ ಏಳು ವರ್ಷಗಳ ಅವಧಿಯಲ್ಲಿ ಈ ಕಾಯ್ದೆಯ ಜಾರಿಯಲ್ಲಿ ನಾವು ಗಳಿಸಿರುವ ಅನುಭವದ ಬೆಳಕಿನಲ್ಲಿ ಇದೀಗ ಸದನದ ಮುಂದೆ ಮಂಡಿಸಿರುವ ವಿಧೇಯಕದ ಮೂಲಕ ಕೆಲವೊಂದು ತಿದ್ದುಪಡಿಗಳನ್ನು ತರಲು ಉದ್ದೇಶಿಸಲಾಗಿದೆ. ಈ ತಿದ್ದುಪಡಿಗಳು ಕಾಯ್ದೆಯನ್ನು ಇನ್ನು ಹೆಚ್ಚು ಪರಿಣಾಮಕಾರಿಯಾಗಿ ಜಾರಿಗೆ ತರಲು ಅವಕಾಶ ಮಾಡಿಕೊಡಲಿದೆ. ಈ ವಿಧೇಯಕವನ್ನು ಮಂಡಿಸುವಲ್ಲಿ ಅನೇಕ ವಿಷಯಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ. ಈ ಕಾಯ್ದೆಯಲ್ಲಿ ಬಳಸಿರುವ "ಔಷಧ" ಎಂಬ ಪರಿಭಾಷೆಯ ವ್ಯಾಖ್ಯೆಯ ವ್ಯಾಪ್ತಿಯನ್ನು ಹಿಗ್ಗಿಸುವ ಅಗತ್ಯವೂ ಅವುಗಳಲ್ಲಿ ಒಂದಾಗಿತ್ತು. ಅದೇ ರೀತಿ 'ತಯಾರಿಕೆ' ಎಂಬ ಪರಿಭಾಷೆಯ ವ್ಯಾಖ್ಯೆಯನ್ನು ಇನ್ನಷ್ಟು ನಿಖರಗೊಳಿಸುವುದೂ ಅಗತ್ಯವಾಗಿತ್ತು. ಅಷ್ಟು ಮಾತ್ರವಲ್ಲದೆ ಔಷಧಗಳ ತಯಾರಿಕೆಯ ತಾಂತ್ರಿಕ ಸಲಹಾ ಮಂಡಲಿಯೊಂದನ್ನು ರಚಿಸುವ ಅಗತ್ಯವೂ ಇತ್ತು. ಅದೂ ಅಲ್ಲದೆ ಔಷಧ ತಯಾರಿಕೆಯಲ್ಲಿ ಇಡೀ ದೇಶಾದ್ಯಂತ ಏಕರೂಪದ ನೀತಿಯೊಂದನ್ನು ತರುವ ನಿಟ್ಟಿನಲ್ಲಿ ಇದುವರೆಗೂ ರಾಜ್ಯ ಸರ್ಕಾರಗಳ ಕೈಯಲ್ಲಿದ್ದ ಈ ಸಂಬಂಧದ ಶಾಸನಗಳನ್ನು ರೂಪಿಸುವ ಅಧಿಕಾರವನ್ನು ಕೇಂದ್ರ ಸರ್ಕಾರವು ತಾನೇ ವಹಿಸಿಕೊಳ್ಳಬೇಕಾದ ಅಗತ್ಯವೂ ಇಲ್ಲಿದೆ.

ಆಹಾರ ಪದಾರ್ಥಗಳಲ್ಲಿ ಮಾತ್ರವೇ ಔಷಧಗಳಲ್ಲಿ ಕೂಡಾ ಕಲಬೆರಕೆ ಮಿತಿಮೀರಿದೆ ಎಂಬುದು ಮಾನ್ಯ ಸದಸ್ಯರಿಗೆ ತಿಳಿದಿರುವ ವಿಷಯವೇ ಆಗಿದೆ. ಕಲಬೆರಕೆ ಎಂಬುದು ಈಗ ಒಂದು ರೂಢಿಯಾಗಿ ಪರಿಣಮಿಸಿದ್ದು ಅನೇಕ ನಕಲಿ ಔಷಧಿಗಳು ಮಾರುಕಟ್ಟೆಯಲ್ಲಿ ಸಾರಾಸಗಟಾಗಿ ಮಾರಾಟವಾಗುತ್ತಿವೆ. ಹಾಗಾಗಿ ಇಂತಹ ಅಪರಾಧಗಳಿಗೆ ಕಾಯ್ದೆಯ ವ್ಯಾಪ್ತಿಯಲ್ಲಿ ಈಗಿರುವ ದಂಡನೆಗಳನ್ನು ವಿಸ್ತರಿಸಬೇಕಾದ ಅಗತ್ಯವನ್ನೂ ನಾವು ಮನಗಂಡೆವು. ಅದಕ್ಕೆ ಪೂರಕವಾಗಿ ಕಾಯ್ದೆಯನ್ನು ಉಲ್ಲಂಘಿಸಿದ ಪ್ರಕರಣಗಳಲ್ಲಿ ದಂಡ ಅಥವಾ ಶಿಕ್ಷೆ ವಿಧಿಸುವ ದಂಡಾಧಿಕಾರಿಗಳ ಅಧಿಕಾರವನ್ನು ವಿಸ್ತರಿಸಬೇಕಾದ ಅಗತ್ಯವೂ ಉಂಟಾಗಿದೆ. ಈ ಎಲ್ಲಾ ಕಾರಣಗಳಿಂದ ಈ ತಿದ್ದುಪಡಿ ತರಬೇಕಾಯಿತು. ಔಷಧ ತಪಾಸಣಾಧಿಕಾರಿಗಳಿಗೆ ಹೆಚ್ಚಿನ ಅಧಿಕಾರವನ್ನು ಕೊಡಬೇಕಾದ ಅಗತ್ಯವೂ ಈಗ ಕಂಡುಬಂದಿದೆ. ಈ ತಿದ್ದುಪಡಿಗಳನ್ನು ತರುವುದು ತೀರಾ ತೀರಾ ಅವಶ್ಯವಾಗಿ ಪರಿಣಮಿಸಿದ್ದರಿಂದ ಇದೀಗ ಈ ವಿಧೇಯಕವನ್ನು ಸದನದ ಮುಂದೆ ತರಲಾಗಿದೆ. ಈ ವಿಧೇಯಕದ ವಿಷಯದಲ್ಲೂ ದಂತವೈದ್ಯರ (ತಿದ್ದುಪಡಿ) ವಿಧೇಯಕದ ಅಂಗೀಕಾರದಲ್ಲೂ ತೋರಿದ ಆಸಕ್ತಿ ಮತ್ತು ಬೆಂಬಲವನ್ನೇ ತೋರಿಸುತ್ತಾರೆಂದು ನಾನು ನಂಬಿದ್ದೇನೆ.

---

* 1940ರ ಔಷಧ ಕಾಯ್ದೆಗೆ ತಿದ್ದುಪಡಿ ಸೂಚಿಸುವ ವಿಧೇಯಕವನ್ನು ಮಂಡಿಸುತ್ತಾ (ರಾಜ್ಯಸಭೆ ಚರ್ಚೆ, 1954 ಸಿಸಿ 925-926,939-941, ಮತ್ತು 955-961).

ಮಾನ್ಯ ಸದಸ್ಯರು ಎತ್ತಿದ ಆಕ್ಷೇಪಕ್ಕೆ ಮೂಲಕಾಯ್ದೆಯ 106ನೇ ಸೆಕ್ಷನ್‌ನಲ್ಲಿ ಸರಿಯಾದ ಉತ್ತರ ಇದೆ:

"ಜೆ ಷೆಡ್ಯೂಲ್‌ನಲ್ಲಿ ನಿರ್ದಿಷ್ಟವಾಗಿ ಸೂಚಿಸಿರುವ ಯಾವುದೇ ರೋಗಗಳು ಅಥವಾ ವ್ಯಾಧಿಗಳನ್ನು ನಿರ್ದಿಷ್ಟ ಔಷಧಿಗಳು ನಿಯಂತ್ರಿಸುತ್ತದೆವೆ ಅಥವಾ ಗುಣಪಡಿಸುತ್ತವೆ ಎಂದು ಹೇಳಿಕೊಳ್ಳಬಾರದು ಅಥವಾ ಅಂತಹ ತಾತ್ಪರ್ಯ ಬರುವ ರೀತಿಯಲ್ಲಿ ಜಾಹೀರು ಪಡಿಸಬಾರದು. ಮಹಿಳೆಯರಲ್ಲಿ ಗರ್ಭಪಾತಕ್ಕೆ ಸಹಾಯಕವಾಗಿದೆ ಅಥವಾ ಅನುಕೂಲವಾಗಿದೆ ಅಥವಾ ಶರೀರದ ಅಂಗ ರಚನೆಯ ಮೇಲೆ ಪರಿಣಾಮ ಬೀರುತ್ತದೆ ಅಥವಾ ಅಂಗಾಂಗಗಳನ್ನು ಬದಲಿಸುತ್ತದೆ ಎಂದು ಹೇಳಿಕೊಳ್ಳಬಾರದು".

ಮಾನ್ಯ ಸದಸ್ಯರು ಜೆಷೆಡ್ಯೂಲ್ ಅನ್ನು ಪರಾಂಬರಿಸಿದರೆ ಈ ರೋಗಗಳು ಮತ್ತು ವ್ಯಾಧಿಗಳು ಯಾವುವು ಮತ್ತು ಅವುಗಳನ್ನು ಯಾವ ಯಾವ ಹೆಸರಿನಿಂದ ಕರೆಯಲಾಗಿದೆ? ಈ ವ್ಯಾಧಿಗಳು ಮತ್ತು ರೋಗಗಳನ್ನು ನಿಯಂತ್ರಿಸಲು ಮತ್ತು ಗುಣಪಡಿಸಲು ಯಾಕೆ ಬರುವುದಿಲ್ಲವೆಂಬ ಅಂಶವನ್ನು ಅವರು ಕಂಡುಕೊಳ್ಳಬಹುದಾಗಿದೆ. ಹೀಗೆ ಜೆ ಷೆಡ್ಯೂಲ್‌ನಲ್ಲಿ ಔಷಧಗಳಿಗೆ ಸಂಬಂಧಿಸಿದಂತೆ ವ್ಯಾಪಕವಾಗಿ ವಿವರಿಸಲಾಗಿದೆ. ಸದ್ಯ ಈ ವ್ಯಾಧಿಗಳ ನಿಯಂತ್ರಣದಲ್ಲಿ ಇದಕ್ಕಿಂತ ಹೆಚ್ಚಿನದೇನನ್ನು ಮಾಡಲು ಸಾಧ್ಯವಿಲ್ಲ ಎಂಬ ಅಂಶವನ್ನೂ ನಾನು ಮಾನ್ಯ ಸದಸ್ಯರ ಗಮನಕ್ಕೆ ತರಬಯಸುತ್ತೇನೆ.

ಮಾನ್ಯ ಉಪಸಭಾಪತಿಗಳು ಈ ಸಂದರ್ಭದಲ್ಲಿ ಇದೀಗ ಮಂಡಿಸಿರುವ ವಿಧೇಯಕದ ಬಗ್ಗೆ ಸದನವು ತೋರಿರುವ ಆಸಕ್ತಿಗಾಗಿ ನಾನು ಮತ್ತೊಮ್ಮೆ ನನ್ನ ಕೃತಜ್ಞತೆಗಳನ್ನು ಸೂಚಿಸಬಯಸುತ್ತೇನೆ.* ಈ ವಿಧೇಯಕದಲ್ಲಿ 'ಔಷಧ' ಎಂಬ ಪರಿಭಾಷೆಯ ವ್ಯಾಖ್ಯೆಯ ಅಡಿಯಲ್ಲಿ ಯಾಂತ್ರಿಕ ಗರ್ಭ ನಿರೋಧಕಗಳನ್ನು ಸೇರಿಸಲು ನನಗೆ ಸಾಧ್ಯವಾಗಿಲ್ಲ. ಈ ಸಂಬಂಧದಲ್ಲಿ ನಾನು ಏನೆಲ್ಲ ಮಾಡಬಹುದಿತ್ತೋ ಅವೆಲ್ಲವನ್ನು ಮಾಡಿದ್ದೇನೆ. ಆಯುರ್ವೇದ ಔಷಧಗಳ ಕುರಿತು ನಾವು ಬಹಳಷ್ಟು ಮಾತನಾಡುತ್ತಿದ್ದೇವೆ. ಈ ವಿಧೇಯಕದಲ್ಲಿ ಆಯುರ್ವೇದ ಔಷಧಗಳನ್ನು ಕೂಡಾ ಸೇರಿಸಬೇಕೆಂದು ಮಾನ್ಯ ಸದಸ್ಯರೊಬ್ಬರು ಸೂಚಿಸಿರುವುದನ್ನು ಕೇಳಿ ನನಗೆ ಅತ್ಯಂತ ಹರ್ಷವಾಗಿದೆ. ಆದರೆ ಈ ವಿಧೇಯಕದಲ್ಲಿ ಆಯುರ್ವೇದ ಔಷಧಗಳನ್ನು ಸೇರಿಸಲು ನನಗೆ ಸಾಧ್ಯವಾಗಿಲ್ಲ. ಏಕೆಂದರೆ ಆಯುರ್ವೇದ ಅಥವಾ ಯುನಾನಿ ಔಷಧಗಳ ಔಷಧ ಕೋಶ ನಮ್ಮಲಿಲ್ಲ. ಆಯುರ್ವೇದ ಔಷಧಗಳನ್ನು ಈ ಮಸೂದೆಯ ವ್ಯಾಪ್ತಿಗೆ ಒಳಪಡಿಸುವುದರಿಂದ ಆಯುರ್ವೇದ ವೈದ್ಯ ಪದ್ಧತಿಗೆ ಹೆಚ್ಚಿನ ಪ್ರಯೋಜನವಾಗುವುದೆಂದು ಸದಸ್ಯರೊಬ್ಬರು ನೀಡಿರುವ ಅಭಿಪ್ರಾಯವು ನೂರಕ್ಕೆ ನೂರು ನಿಜವಾಗಿದೆ. ಆಯುರ್ವೇದ ಔಷಧಿಗಳಲ್ಲಿ ಕೂಡಾ ಕಲಬೆರಕೆ ಧಾರಾಳವಾಗಿದೆ. ಅಲಹಾಬಾದಿನಿಂದ ವೈದ್ಯರೊಬ್ಬರು ಮೊನ್ನೆ ನನ್ನನ್ನು ನೋಡಲು ಬಂದಿದ್ದರು. ಮಲೇರಿಯಾಕ್ಕೆ ಶುದ್ಧ ಆಯುರ್ವೇದ ಪರಿಹಾರ ಎಂದು ಹೇಳಿಕೊಂಡು ಮಾತ್ರೆಗಳನ್ನು ತಯಾರಿಸಿ ಮಾರಾಟ ಮಾಡುತ್ತಿರುವ ಸಂಗತಿಯನ್ನು ಅವರು ನನ್ನ

*ಪ್ರಸ್ತಾವಿತ ತಿದ್ದುಪಡಿಯು ಕೇವಲ ರಾಸಾಯನಿಕ ಗರ್ಭನಿರೋಧಕಗಳನ್ನು ಮಾತ್ರವೇ ಒಳಗೊಂಡಿದ್ದು ಯಾಂತ್ರಿಕ ಗರ್ಭ ನಿರೋಧಕಗಳ ಉಲ್ಲೇಖ ಇಲ್ಲ ಎಂದು ಶ್ರೀಮತಿ ಸೀತಾ ಪರಮಾನಂದ ಅವರು ಎತ್ತಿದ ಆಕ್ಷೇಪಕ್ಕೆ ವಿವರಣೆ ನೀಡುತಾ.

ಗಮನಕ್ಕೆ ತಂದರು. ವಾಸ್ತವದಲ್ಲಿ ಈ ಮಾತ್ರೆಗಳು ಕ್ವಿನೈನ್ ಮಾತ್ರೆಗಳೇ ಆಗಿದ್ದವು. ಇಂತಹುದು ನಮ್ಮಲ್ಲಿ ಸಾಮಾನ್ಯವಾಗಿದೆ. ಅದನ್ನು ನಿಯಂತ್ರಿಸಲು ಏನಾದರೂ ಕ್ರಮಕೈಗೊಳ್ಳುವುದು ಈಗ ಅನಿವಾರ್ಯವಾಗಿದೆ. ಕಾನೂನುಗಳನ್ನು ರೂಪಿಸುವ ಅಧಿಕಾರವನ್ನು ರಾಜ್ಯ ಸರ್ಕಾರಗಳಿಂದ ಕೈಗೆ ತೆಗೆದುಕೊಳ್ಳದ ಕೇಂದ್ರ ಸರ್ಕಾರದ ನಿರ್ಧಾರದ ಬಗ್ಗೆ ಅನೇಕ ಮಂದಿ ಸದಸ್ಯರು ಪ್ರಸ್ತಾಪಿಸಿದ್ದಾರೆ. ಈ ವಿಷಯದಲ್ಲಿ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಲಾಗಿದೆ ಮತ್ತು ಈ ಅಧಿಕಾರವನ್ನು ವಹಿಸಿಕೊಳ್ಳಲು ಕೇಂದ್ರ ಸರಕಾರ ಒಪ್ಪಿಕೊಂಡಿದೆ. ಕಾನೂನು ಕಾಯ್ದೆಗಳಲ್ಲಿ ಏಕರೂಪತೆ ತರುವ ಒಂದೇ ದೃಷ್ಟಿಯಿಂದ ಇದಕ್ಕೆ ಒಪ್ಪಿಗೆ ಸೂಚಿಸಿದೆ. ವಿವಿಧ ರಾಜ್ಯಗಳಲ್ಲಿ ಈಗ ಪ್ರಚಲಿತವಾಗಿರುವ ಕಾಯ್ದೆಗಳು ವಿರೋಧಾಭಾಸಗಳಿಂದ ಕೂಡಿವೆ. ಅವುಗಳಲ್ಲಿ ಅನೇಕ ವ್ಯತ್ಯಾಸಗಳಿವೆ ಮತ್ತು ಕೆಲವು ಸಂದರ್ಭಗಳಲ್ಲಿ ಅವು ಸಂಘರ್ಷಕ್ಕೂ ದಾರಿ ಮಾಡಿಕೊಡುತ್ತವೆ. ಅದನ್ನು ನಿವಾರಿಸುವುದೇ ಈ ಕಾನೂನಿನ ಉದ್ದೇಶವಾಗಿದೆ. ಆದರೆ ಯಾವುದೇ ಕಾಯ್ದೆಯನ್ನೂ ರೂಪಿಸುವ ಮೊದಲು ಈ ಬಗೆಗೆ ಸಮಾಲೋಚಿಸಲಾಗುವುದು. ಅದಲ್ಲದೆ ಅವುಗಳನ್ನು ಸಾರ್ವಜನಿಕರ ಅವಗಾಹನೆಗಾಗಿ ಪ್ರಕಟಿಸಲಾಗುವುದು. ಹಾಗಾಗಿ ನಾವು ತೆಗೆದುಕೊಂಡಿರುವ ಕ್ರಮ ಸಮಂಜಸವಾಗಿದೆ. ಈ ಬಗೆಗೆ ನನ್ನ ವಿವರಣೆ ನಿಮಗೆ ಸಮಾಧಾನಕೊಟ್ಟಿದೆ ಎಂದು ನಾನು ಭಾವಿಸುತ್ತೇನೆ.

ಸದಸ್ಯರೊಬ್ಬರು ದಂಡ ಮನ್ನಾ ಮಾಡಿರುವುದನ್ನು ಪ್ರಸ್ತಾಪಿಸಿದ್ದಾರೆ. ಈ ತನಕ ಅಂತಹ ಯಾವುದೇ ನಿರ್ಧಾರವನ್ನು ಕೈಗೊಂಡಿಲ್ಲ. ದಂಡದ ಗರಿಷ್ಠ ಮಿತಿಯನ್ನು ಮಾತ್ರವೇ ತೆಗೆದುಹಾಕಲಾಗಿದೆ. ಇದರಿಂದ ಪ್ರಕರಣಗಳ ತನಿಖೆ ನಡೆಸುವ ದಂಡಾಧಿಕಾರಿಗಳಿಗೆ ಮ್ಯಾಜಿಸ್ಟ್ರೇಟರಿಗೆ ಹೆಚ್ಚಿನ ಮೊತ್ತದ ದಂಡವನ್ನು ವಿಧಿಸಲು ಅಧಿಕಾರ ದೊರೆಯುವುದು.

ಅದೇ ವೇಳೆಗೆ ಮಸೂದೆಯ 9ಬಿ ವಿಧಿಯ ಬಗ್ಗೆಯೂ ಸದಸ್ಯರು ಪ್ರಸ್ತಾಪಿಸಿದ್ದಾರೆ. ಈ ವಿಧಿಯನ್ವಯ ಅಧಿಕಾರವನ್ನು ಕೇಂದ್ರ ಸರ್ಕಾರ ಮಾತ್ರವೇ ತುರ್ತು ಸಂದರ್ಭಗಳಲ್ಲಿ ಬಳಸಿಕೊಳ್ಳುವುದು. ಇದರಲ್ಲಿ ರಾಜ್ಯಸರ್ಕಾರಗಳನ್ನು ಮೀರುವ ಪ್ರಶ್ನೆಯೇ ಇಲ್ಲ. ಸಮಾಲೋಚನೆ ನಡೆಸುವುದು ಬಹು ದೀರ್ಘವಾದ ಪ್ರಕ್ರಿಯೆಯೇ ಆಗುವುದು. ಕೇಂದ್ರವು ರಾಜ್ಯ ಸರ್ಕಾರಗಳನ್ನು ಯಾವ ಕಾರಣಕ್ಕೂ ಅತಿಕ್ರಮಿಸುವುದಿಲ್ಲ. ಆದರೆ ತುರ್ತು ಸಂದರ್ಭಗಳಲ್ಲಿ ಕೆಲ ಅಧಿಕಾರಗಳನ್ನು ಬಳಸುವ ಅಧಿಕಾರವನ್ನು ಹೊಂದಿರಲು ಅಪೇಕ್ಷಿಸುವುದು.

ಔಷಧಗಳ ತಯಾರಿಕೆ, ಸರಬರಾಜು ಹಾಗೂ ವಿತರಣೆ ಇವುಗಳ ನಿಯಂತ್ರಣ, ಔಷಧ ತಪಾಸಣಾಧಿಕಾರಿಗಳ ಸಾಮರ್ಥ್ಯವನ್ನು ಅವಲಂಬಿಸಿರುತ್ತದೆ ಎಂಬ ಸದಸ್ಯರ ಹೇಳಿಕೆಯನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಈ ಔಷಧ ತಪಾಸಣಾಧಿಕಾರಿಗಳ ವಿದ್ಯಾರ್ಹತೆಯನ್ನು ಔಷಧಗಳ ಕಾಯ್ದೆಯಲ್ಲಿಯೇ ನಿರ್ದಿಷ್ಟಪಡಿಸಲಾಗಿದೆ. ಈ ತಪಾಸಣಾಧಿಕಾರಿಗಳು ಔಷಧ ವಿಜ್ಞಾನ ಅಥವಾ ಔಷಧ ರಸಾಯನ ಶಾಸ್ತ್ರದಲ್ಲಿ ಪದವಿ ಪಡೆದಿರಬೇಕು ಅಥವಾ ರಸಾಯನ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿರಬೇಕು ಎಂಬುದನ್ನು ಈ ಕಾಯ್ದೆಯ ವಿಧಿಗಳಿಂದ ಸ್ಪಷ್ಟವಾಗುತ್ತದೆ. ಈ ವಿದ್ಯಾರ್ಹತೆಯ ಆಧಾರದಿಂದ ಹೇಳುವುದಾದರೆ ಅದು ಉನ್ನತ ಮಟ್ಟದ್ದೇ ಆಗಿದೆ.

ಇನ್ನು ಪ್ರಾಮಾಣಿಕತೆಯ ಪ್ರಶ್ನೆ. ಮೊದಲಿನಲ್ಲಿ ನಾವು ನಮ್ಮ ಜನರ ಬಗ್ಗೆ ನಂಬಿಕೆ ಇರಿಸಬೇಕು. ನಾವು ಎಲ್ಲ ಕ್ಷೇತ್ರಗಳಲ್ಲೂ ಪ್ರಾಮಾಣಿಕತೆಯ ಮಟ್ಟವನ್ನು ಎತ್ತರಿಸಬೇಕಾಗಿದೆ. ಪ್ರಾಮಾಣಿಕತೆಯನ್ನು ನಿರೀಕ್ಷಿಸುವಾಗ ಅವರಿಗೆ ಪ್ರಾಮಾಣಿಕತೆಯ ಮಟ್ಟವನ್ನೂ ನಾವು ತೋರಿಸಿಕೊಡಬೇಕಾಗುತ್ತದೆ. ಈ ದೃಷ್ಟಿಯಿಂದ ಈ ಶಾಸನ ಸರಿಯಾದ ದಿಕ್ಕಿನಲ್ಲಿ ಇಡುತ್ತಿರುವ ಒಂದು ಹೆಜ್ಜೆಯಾಗಿದೆ ಎಂಬುದರಲ್ಲಿ ನನಗೆ ಎಳ್ಳಷ್ಟೂ ಅನುಮಾನವಿಲ್ಲ. ಔಷಧ ಉದ್ಯಮಗಳ ಆಗುಹೋಗುಗಳ ಬಗ್ಗೆ ಆಗಾಗ ತಪಾಸಣೆಯನ್ನು ನಡೆಸುವಂತೆ ನಾವು ರಾಜ್ಯ ಸರ್ಕಾರಗಳನ್ನು ಕೇಳಿಕೊಳ್ಳುತ್ತೇವೆ. ಔಷಧ ನಿಯಂತ್ರಣ ಅಧಿಕಾರಿಗಳು ಅವರವರ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸುತ್ತಿದ್ದಾರೆಯೇ ಎಂಬುದರ ಬಗ್ಗೆ ರಾಜ್ಯ ಸರ್ಕಾರಗಳು ನಿಗಾ ಇಡಬೇಕು.

ಔಷಧ ತಪಾಸಣಾಧಿಕಾರಿಗಳ ಅಧಿಕಾರದ ವಿಷಯದಲ್ಲಿ ಈ ಇನ್ಸ್‌ಪೆಕ್ಟರ್‌ಗಳಿಗೆ ಅಗತ್ಯಕ್ಕಿಂತ ಹೆಚ್ಚಿನ ಅಧಿಕಾರಗಳನ್ನು ನೀಡಲಾಗಿದೆ ಎಂಬ ಮಾತು ಕೇಳಿಬಂದಿದೆ. ಔಷಧ ನಿಯಂತ್ರಣವನ್ನು ಬಿಗಿಗೊಳಿಸುವುದು ಅದರ ಉದ್ದೇಶವಾಗಿದೆ. ಔಷಧ ತಯಾರಿಕಾ ಘಟಕಗಳ ತಪಾಸಣೆ ಮತ್ತು ಶೋಧ ಕಾರ್ಯಾಚರಣೆಯನ್ನು ಅಪರಾಧ ದಂಡ ಸಂಹಿತೆಯ ವಿಧಿಗಳಿಗೆ ಅನುಗುಣವಾಗಿ, ಅಂದರೆ ಈ ವಿಧೇಯಕದ ನಾಲ್ಕನೇ ಪುಟದಲ್ಲಿ ಹೇಳಿರುವ 22ನೇ ಸೆಕ್ಷನ್‌ನ (2) ಸಬ್‌ಸೆಕ್ಷನ್‌ಗೆ ಅನುಗುಣವಾಗಿ ನಡೆಸಬೇಕಾಗಿದೆ. ಈಗಿರುವ ಕಾಯ್ದೆಯಲ್ಲಿ ಇಂತಹ ಯಾವುದೇ ವಿಧಿಗಳಿಲ್ಲ. ಆದರೆ ಔಷಧಿ ತಪಾಸಣಾಧಿಕಾರಿಗಳಿಗಿರುವ ಅಧಿಕಾರಗಳ ವಿಷಯವಾಗಿ ಹೇಳುವುದಾದರೆ ಮೂಲ ಕಾಯ್ದೆಯ 21ನೇ ಪುಟವನ್ನು ನೀವು ನೋಡಿದರೆ ಇನ್ಸ್‌ಪೆಕ್ಟರ್‌ಗಳು ತಮ್ಮ ಅಧಿಕಾರ ವ್ಯಾಪ್ತಿಯನ್ನು ಮೀರುವುದನ್ನು ತಡೆ ಹಿಡಿಯುವ ಹಲವಾರು ವಿಧಿಗಳೂ ಅಲ್ಲಿರುವುದನ್ನು ಕಾಣುತ್ತೀರಿ. ಇನ್ನು ಔಷಧ ತಯಾರಿಕಾ ಘಟಕಗಳ ಶೋಧ ಮತ್ತು ಅಕ್ರಮವಾಗಿ ತಯಾರಿಸಿದ ಔಷಧ ವಸ್ತುಗಳನ್ನು ವಶಪಡಿಸಿಕೊಳ್ಳುವ ವಿಷಯದಲ್ಲಿ ಅವರು ಕಾನೂನಿನ ಚೌಕಟ್ಟಿನೊಳಗೆ ಮತ್ತು ಕಟ್ಟುನಿಟ್ಟಾದ ನಿಯಮ-ನಿಬಂಧನೆಗಳ ನಡುವೆ ಕಾರ್ಯನಿರ್ವಹಿಸಬೇಕಾಗುತ್ತದೆ. ಏಕೆಂದರೆ ಈ ಸಂಬಂಧದಲ್ಲಿ ಹೂಡುವ ಮೊಕದ್ದಮೆಯಲ್ಲಿ ಪ್ರಾಸಿಕ್ಯೂಶನ್‌ನ ಎಲ್ಲ ನಿಯಮ-ನಿಬಂಧನೆಗಳನ್ನು ಪಾಲಿಸಬೇಕಾಗುತ್ತದೆ. ಹಾಗಾಗಿ ಯಾವುದೇ ಶೋಧ ಕಾರ್ಯಾಚರಣೆಯು ಸಾಕ್ಷಿಗಳು ಮತ್ತು ಪಂಚರ ಸಮಕ್ಷಮದಲ್ಲಿ ನಡೆಯುವುದು ಅಪೇಕ್ಷಣೀಯವಾಗಿದೆ. ಅಪರಾಧ ದಂಡ ಸಂಹಿತೆಯಲ್ಲೂ ಈ ನಿರ್ಬಂಧವನ್ನು ವಿಧಿಸಲಾಗಿದೆ. ಹಾಗಾಗಿ ಇಷ್ಟರಮಟ್ಟಿನ ರಕ್ಷಣೆ ಸಾಕು. ಔಷಧ ತಪಾಸಣಾಧಿಕಾರಿಗಳಿಗೆ ನಿರ್ದಿಷ್ಟ ಅಧಿಕಾರವನ್ನು ಕೊಡದೆ ಇದ್ದಲ್ಲಿ ಅವರು ಕ್ರಮಕೈಗೊಳ್ಳಲು ಹಿಂಜರಿಯುತ್ತಾರೆ. ಹಾಗಾಗಿ ಅವರಿಗೆ ಅಧಿಕಾರವನ್ನು ಕೊಡುವುದು ಅವಶ್ಯವೇ ಆಗಿದೆ.

ಇನ್ನೋರ್ವ ಸದಸ್ಯರು ಕಂಪನಿಗಳು ಎಸಗುವ ಅಪರಾಧಗಳ ಬಗ್ಗೆ ಮಾತನಾಡಿದ್ದಾರೆ.* ಕಂಪನಿಗಳನ್ನು ರಕ್ಷಿಸಲು ಅವರು ಏಕೆ ಬಯಸುತ್ತಾರೋ ನನಗೆ ಗೊತ್ತಿಲ್ಲ. ನಕಲಿ ಔಷಧಗಳನ್ನು ತಯಾರಿಸುವ ಕಂಪನಿಗಳ ವಿಷಯದಲ್ಲಿ ನಿಗಾ ಇಡುವುದು ಅತ್ಯವಶ್ಯ. ಖೋಟಾ ಔಷಧಿಗಳು ಕಳಪೆ ದರ್ಜೆಯದ್ದಾಗಿರುತ್ತದೆ. ಅಲ್ಲಿ ಗುಣಮಟ್ಟಕ್ಕೆ ಆದ್ಯತೆ ಇರುವುದಿಲ್ಲ ಮತ್ತು ಅವು ಜನರ

* ಇನ್ಸ್‌ಪೆಕ್ಟರ್‌ಗಳಿಂದ ಅನಾವಶ್ಯಕ ಹಾಗೂ ನ್ಯಾಯಬಾಹಿರ ಕಿರುಕುಳ ಕುರಿತು ಶ್ರೀ ಅಕ್ಬರ್ ಅಲಿಖಾನ್ ಅವರು ಮಾಡಿದ ಪ್ರಸ್ತಾವಕ್ಕೆ ವಿವರಣೆ ನೀಡುತ್ತಾ.

ಪ್ರಾಣಗಳಿಗೆ ಕಂಟಕಪ್ರಾಯವಾಗಿರುತ್ತದೆ. ಅಂತಹ ನಕಲಿ ಔಷಧಗಳನ್ನು ತಯಾರಿಸುವವರ ಮೇಲೆ ಕ್ರಮ ಕೈಗೊಳ್ಳಲೇಬೇಕು. ಅವುಗಳ ಪಟ್ಟು ಅಡಗಿಸುವವರೆಗೆ ಅವುಗಳ ವಿರುದ್ಧ ಕಾರ್ಯಾಚರಣೆ ನಡೆಯಬೇಕು. ಈ ನಕಲಿ ಔಷಧ ತಯಾರಿಕೆಯ ಕೃತ್ಯವು ಕ್ರಿಮಿನಲ್ ಅಪರಾಧವಾಗಿದೆ. ಅದೊಂದು ಸಮಾಜ ದ್ರೋಹದ ಕೃತ್ಯವಾಗಿದೆ. ಕಂಪನಿಗಳು ಎಸಗುವ ಅಪರಾಧಗಳ ವಿಷಯದಲ್ಲಿ 1951 ರಿಂದ ತಂದಿರುವ ಎಲ್ಲ ಕಾಯ್ದೆಗಳಲ್ಲೂ ಇದೇ ರೀತಿಯ ವಿಧಿಗಳಿವೆ ಎಂಬುದನ್ನು ನಾನು ಮಾನ್ಯ ಸದಸ್ಯರ ಗಮನಕ್ಕೆ ತರಬಯಸುತ್ತೇನೆ. ಇಂತಹ ಸಮಾಜ ಘಾತುಕ ಕೃತ್ಯಗಳಲ್ಲಿ ತೊಡಗಿರುವ ಕಂಪನಿಗಳಿಗೆ ನಾವು ಶಿಕ್ಷೆ ವಿಧಿಸಿದರೆ ಅಪ್ರಾಮಾಣಿಕ ಹಾಗೂ ಅಮಾನವೀಯ ಕೃತ್ಯಗಳಲ್ಲಿ ತೊಡಗಿರುವ ವ್ಯಕ್ತಿಗಳ ಮೇಲೂ ಅದರ ಪರಿಣಾಮ ಬೀರುವುದೆಂದು ನಾನು ಭಾವಿಸಿದ್ದೇನೆ.

ಈ ವಿಧೇಯಕಕ್ಕೆ ಸದನದ ಒಬ್ಬರೇ ಒಬ್ಬರು ಸದಸ್ಯರು ಸೂಚಿಸಿರುವ ತಿದ್ದುಪಡಿಯನ್ನು ನಾನು ಪ್ರಸ್ತಾಪಿಸಲು ಬಯಸುತ್ತೇನೆ. ವಿಧೇಯಕದ 11ನೇ ವಿಧಿಗೆ ಅವರು ತಿದ್ದುಪಡಿಯೊಂದನ್ನು ಕಳುಹಿಸಿಕೊಟ್ಟಿದ್ದಾರೆ. ಆದರೆ ಮೂಲ ಕಾಯ್ದೆಯ 23 (ಬಿ) ಸೆಕ್ಷನ್‌ನಲ್ಲಿ ಕಲ್ಪಿಸಿರುವ ರಕ್ಷಣ ಕ್ರಮಗಳ ಹಿನ್ನೆಲೆಯಲ್ಲಿ ಅವರು ತರಲು ಎಳೆಸಿರುವ ತಿದ್ದುಪಡಿಯು ನಿರರ್ಥಕವಾಗಿ ಬಿಡುತ್ತದೆ. ಅಷ್ಟು ಮಾತ್ರವಲ್ಲ ಬದಲಿಗೆ ಕಾಯ್ದೆಯ ಅನುಷ್ಠಾನಕ್ಕೆ ಅಡ್ಡಿಯಾಗುತ್ತದೆ. ಈ ವಿಧೇಯಕದಲ್ಲಿ ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟ್ ಎಂಬ ಉಲ್ಲೇಖವನ್ನು ಉದ್ದೇಶಪೂರ್ವಕವಾಗಿಯೇ ಕೈಬಿಡಲಾಗಿದೆ. ಹೀಗಾಗಿ ಈ ತಿದ್ದುಪಡಿಯನ್ನು ಅಂಗೀಕರಿಸುವುದು ಸಾಧ್ಯವಿಲ್ಲವಾಗಿದೆ.

ಔಷಧ ತಪಾಸಣಾಧಿಕಾರಿಯೊಬ್ಬರು ಸಲ್ಲಿಸಿರುವ ದೂರೊಂದರ ಬಗ್ಗೆ ಮಾನ್ಯ ಸದಸ್ಯರು ಪ್ರಸ್ತಾಪಿಸಿದ್ದಾರೆ. ತಪಾಸಣಾಧಿಕಾರಿಯ ಕಾರ್ಯನಿರ್ವಹಣೆಗೆ ಯಾರಾದರೂ ಅಡ್ಡಿಪಡಿಸಿದಲ್ಲಿ ಅಂಥವರ ವಿರುದ್ಧ ದೂರು ಸಲ್ಲಿಸಲು ಕಾಯ್ದೆಯಲ್ಲಿ ಅವಕಾಶವಿದೆ. ಆದರೆ ಜಿಲ್ಲಾ ಮ್ಯಾಜಿಸ್ಟ್ರೇಟರು ತಮ್ಮ ಗೈರು ಹಾಜರಿಯಲ್ಲಿ ನಡೆದ ಅಪರಾಧವೊಂದರ ಬಗ್ಗೆ ದೂರು ದಾಖಲಿಸುವುದು ಹೇಗೆ ಸಾಧ್ಯ ಎಂಬುದು ನನಗೆ ಅರ್ಥವಾಗುತ್ತಿಲ್ಲ.

* * *

ಪ್ರಸಕ್ತ ವಿಧೇಯಕದ 14ನೇ ಖಂಡದ ಬಗ್ಗೆ ಹೇಳುವುದಾದರೆ ಈಗ ಅದರಲ್ಲಿ ಸೇರಿಸಿರುವ ವಿಧಿಗಳು ಎಲ್ಲ ವಿಧದ ಅಪರಾಧಗಳನ್ನು ಒಳಗೊಳ್ಳುತ್ತವೆ ಮತ್ತು ಅಪರಾಧ ಸ್ವರೂಪ ಮತ್ತು ಪ್ರಮಾಣಕ್ಕೆ ಅನುಗುಣವಾಗಿ ದಂಡನೆ ವಿಧಿಸಲು ಮತ್ತು ನ್ಯಾಯ ತೀರ್ಮಾನದಲ್ಲಿ ವಿವೇಚನೆಯನ್ನು ಬಳಸಲು, ಪ್ರಕರಣಗಳನ್ನು ತೀರ್ಮಾನಿಸಲು ನ್ಯಾಯಾಧೀಶರಿಗೆ ಅವಕಾಶ ಕಲ್ಪಿಸಿಕೊಡುತ್ತದೆ. ಪ್ರತಿಯೊಂದು ಅಪರಾಧಕ್ಕೂ ಗರಿಷ್ಠ ದಂಡ ಮತ್ತು ಶಿಕ್ಷೆ ವಿಧಿಸಲು ಅವಕಾಶ ಕಲ್ಪಿಸಿದರೆ ಅದು ನ್ಯಾಯವಾಗಲಾರದು. ಹಾಗಾಗಿ ಈ ಕುರಿತ ತಿದ್ದುಪಡಿಯನ್ನು ಅಂಗೀಕರಿಸುವುದು ನನಗೆ ಸಾಧ್ಯವಾಗಲಾರದು.

ವಿಧೇಯಕದ 16ನೇ ಖಂಡ ಕುರಿತು ಹೇಳುವುದಾದರೆ ಈಗಾಗಲೇ ಇರುವ ವಿಧಿಯು ಎಲ್ಲ ರೀತಿಯ ರಕ್ಷಣಾತ್ಮಕ ಕ್ರಮಗಳಿಗೂ ಅವಕಾಶ ಕಲ್ಪಿಸುವುದರಿಂದ ಈ ಕುರಿತ ತಿದ್ದುಪಡಿ ನಿರರ್ಥಕವಾಗಿದೆ. ವಿಧೇಯಕಕ್ಕೆ ತಂದಿರುವ ಇತರ ಎಲ್ಲ ತಿದ್ದುಪಡಿಗಳನ್ನು ಅಂಗೀಕರಿಸದಿದ್ದರೆ ಅವು ಈ ತಿದ್ದುಪಡಿಗೆ ಅನುಷಂಗಿಕವಾಗಿರುತ್ತಿದ್ದವು. ಹಾಗಾಗಿ ಈ ತಿದ್ದುಪಡಿಗಳನ್ನು ಸೇರಿಸಲು ಸಾಧ್ಯವಾಗದಿರುವುದಕ್ಕಾಗಿ ನಾನು ವಿಷಾದಿಸುತ್ತೇನೆ. ಮಾನ್ಯ ಸದಸ್ಯರು ಅಪೇಕ್ಷಿಸಿರುವ ಎಲ್ಲ ಅಂಶಗಳು ಈ ವಿಧೇಯಕದಲ್ಲಿ ಒಳಗೊಂಡಿದೆ ಎಂದೇ ನಾನು ಭಾವಿಸಿದ್ದೇನೆ.

ಮಾನ್ಯ ಸದಸ್ಯರೊಬ್ಬರು ಈ ಸಂದರ್ಭದಲ್ಲಿ ಆಯುರ್ವೇದದ ಬಗ್ಗೆ ಪ್ರಸ್ತಾಪಿಸಿ ಪ್ರಸಕ್ತ ಪಂಚವಾರ್ಷಿಕ ಯೋಜನೆಯಲ್ಲಿ ಆಯುರ್ವೇದಕ್ಕಾಗಿ ತೀರಾ ಕಡಿಮೆ ಹಣ ನೀಡಲಾಗಿದೆ ಎಂದು ಅಸಮಧಾನ ಸೂಚಿಸಿದ್ದಾರೆ. ಈ ಸಂದರ್ಭದಲ್ಲಿ ನಾನು ಇದನ್ನು ಹೇಳಬೇಕಾದ ಅಗತ್ಯವಿಲ್ಲದಿದ್ದರೂ ಕೂಡಾ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ದೇಶೀಯ ಔಷಧ ಪದ್ಧತಿಗಳ ಸಂಶೋಧನೆಗಾಗಿ 37.5 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ ಎಂದು ಮಾನ್ಯ ಸದಸ್ಯರಿಗೆ ಮಾಹಿತಿ ನೀಡುವ ಸಲುವಾಗಿ ಈ ವಿಷಯ ಹೇಳಿದ್ದೇನೆ. ಹಾಗಾಗಿ ಆಯುರ್ವೇದ ಪದ್ಧತಿಯನ್ನು ನಿರ್ಲಕ್ಷಿಸುವ ಪ್ರಶ್ನೆಯೇ ಇಲ್ಲಿಲ್ಲ.

* * *

ಈಗಿಂದೀಗಲೇ ನಿಖರವಾದ ಅಂಕಿ ಅಂಶಗಳನ್ನು ನೀಡಲು ಸಾಧ್ಯವಿಲ್ಲ. ಆದರೆ ಮೀಸಲಿಟ್ಟ ಈ ಹಣವನ್ನು ವೆಚ್ಚ ಮಾಡುವುದೇ ನನಗೆ ಕಠಿಣ ಕೆಲಸವಾಗಿದೆ. ಏಕೆಂದರೆ ಆಯುರ್ವೇದ ವೈದ್ಯ ಪದ್ಧತಿಯಲ್ಲಿ ಸಂಶೋಧನೆ ನಡೆಸಬಲ್ಲವರು ಸಾಕಷ್ಟು ಸಂಖ್ಯೆಯಲ್ಲಿಲ್ಲ. ಹೀಗಾಗಿ ಆಧುನಿಕ ವೈದ್ಯ ಪದ್ಧತಿಯನ್ನು ಅನುಸರಿಸುತ್ತಿರುವವರೇ ಸಂಶೋಧನೆಯನ್ನು ಕೈಗೊಳ್ಳಬೇಕಾಗಿದೆ. ದುರಂತವೆಂದರೆ ಈ ವೈದ್ಯ ವೃತ್ತಿ ಹಣ ಮಾಡುವ ಒಂದು ದಂಧೆಯಾಗಿ ಪರಿವರ್ತಿತವಾಗಿರುವುದು. ಆಧುನಿಕ ವೈದ್ಯ ಪದ್ಧತಿಯನ್ನು ಅಥವಾ ಆಧುನಿಕ ಪದ್ಧತಿಯನ್ನು ಅನುಸರಿಸುತ್ತಿರುವ ವೈದ್ಯರನ್ನು ಸಮರ್ಥಿಸಲು ನಾನು ಈ ಮಾತು ಹೇಳುತ್ತಿಲ್ಲ. ಹೆಚ್ಚಿನ ಸಂಶೋಧಕರು ತಮ್ಮ ಕೆಲಸದ ಬಗ್ಗೆ ಕಾಳಜಿ ಹೊಂದಿರುವುದಿಲ್ಲ. ಬದಲಾಗಿ ತಮಗೆ ಅದರಿಂದ ಏನು ಗಿಟ್ಟುತ್ತದೆ ಎಂಬುದರಲ್ಲೇ ಹೆಚ್ಚಿನ ಕಾಳಜಿ ತೋರುತ್ತಾರೆ. ಇದು ನಿಜಕ್ಕೂ ವಿಷಾದದ ಸಂಗತಿ.

ಸದಸ್ಯರು ಪ್ರಸ್ತಾಪಿಸಿದ ಎಲ್ಲ ಪ್ರಶ್ನೆಗಳಿಗೂ ನಾನು ಉತ್ತರಿಸಿದ್ದೇನೆ ಎಂದು ಭಾವಿಸಿದ್ದೇನೆ.*

* 1954ರ ಔಷಧ (ತಿದ್ದುಪಡಿ) ವಿಧೇಯಕವನ್ನು ಅಂಗೀಕರಿಸಲಾಯಿತು.

## 18. ಔಷಧ ತಿದ್ದುಪಡಿ ವಿಧೇಯಕ *

ಔಷಧ (ತಿದ್ದುಪಡಿ) ವಿಧೇಯಕವನ್ನು ಪರಿಶೀಲನೆಗೆ ಸ್ವೀಕರಿಸಬೇಕೆಂದು ಈ ಗೌರವಾನ್ವಿತ ಸದನದ ಮುಂದೆ ವಿನಂತಿಸಲು ನನಗೆ ಅತ್ಯಂತ ಹರ್ಷವೆನಿಸುತ್ತದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಏನಾದರೂ ಮಾಡಲೇಬೇಕೆಂದು ಈ ಸದನದ ಸನ್ಮಾನ್ಯ ಸದಸ್ಯರು ನನ್ನನ್ನು ಬಹು ಸಮಯದಿಂದ ಕೇಳುತ್ತಲೇ ಬಂದಿದ್ದಾರೆ. ಈ ವಿಷಯವು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಉಭಯ ಸಾಮಾನ್ಯ ಯಾದಿಯಲ್ಲಿ ಸೇರಿದಾಗ ಎಲ್ಲ ರಾಜ್ಯಗಳಿಂದ ಅಭಿಪ್ರಾಯ ಮತ್ತು ಸಲಹೆ ಸೂಚನೆಗಳನ್ನು ಪಡೆದುಕೊಂಡು ಅವಶ್ಯವೆನಿಸಿದ ತಿದ್ದುಪಡಿಗಳನ್ನು ಪ್ರಸ್ತುತ ವಿಧೇಯಕದಲ್ಲಿ ಸೇರಿಸಲಾಗಿದೆ: ಈ ತಿದ್ದುಪಡಿಗಳೆಲ್ಲವೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವ್ಯಾಪಕ ಸಹಾನುಮತದಿಂದಲೇ ಈ ಕಾಯ್ದೆಯಲ್ಲಿ ಸೇರಿಸಲ್ಪಟ್ಟಿವೆ.

1947ರ ಏಪ್ರಿಲ್ ತಿಂಗಳಿಂದಲೇ ಔಷಧಗಳ ಕಾಯ್ದೆ ಅಸ್ತಿತ್ವದಲ್ಲಿದೆ. ಸರಿದು ಹೋದ ಏಳು ವರ್ಷಗಳ ಅವಧಿಯಲ್ಲಿ ಸರ್ಕಾರಕ್ಕಾಗಿರುವ ಅನುಭವದ ಹಿನ್ನೆಲೆಯಲ್ಲಿ ಈ ಕಾಯ್ದೆಗೆ ಕೆಲವೊಂದು ತಿದ್ದುಪಡಿಗಳನ್ನು ಸೇರಿಸಲು ಉದ್ದೇಶಿಸಲಾಗಿದ್ದು ನಾನೀಗ ಈ ಬಗ್ಗೆ ಸಂಕ್ಷಿಪ್ತವಾಗಿ ಕೆಲವೊಂದು ಅಂಶಗಳನ್ನು ನಿಮ್ಮ ಅವಗಾಹನೆಗಾಗಿ ವಿಷದಪಡಿಸುತ್ತಿದ್ದೇನೆ.

ಈ ವಿಧೇಯಕದಲ್ಲಿ 'ಔಷಧ' ಎಂಬ ಪರಿಭಾಷೆಯ ವ್ಯಾಖ್ಯೆಯನ್ನು ಸಾಕಷ್ಟು ಮಟ್ಟಿಗೆ ಹಿಗ್ಗಿಸಲಾಗಿದೆ. ಗರ್ಭ ನಿರೋಧಕಗಳ ಹೆಸರಿನಲ್ಲಿ ಹಲವಾರು ಔಷಧಿಗಳು ಮಾರುಕಟ್ಟೆಗೆ ಬಂದಿದ್ದು ಅವು ಜನರ ಆರೋಗ್ಯದ ಮೇಲೆ ಮಾರಕ ಪರಿಣಾಮಗಳನ್ನು ಉಂಟುಮಾಡಿದೆ. ಇಂತಹ ಔಷಧಗಳೆಲ್ಲವನ್ನೂ ಮತ್ತು ಇತರ ಮಾರಕ ಔಷಧಿಗಳನ್ನು ಕಾಯ್ದೆಯ ವ್ಯಾಪ್ತಿಗೆ ಸೇರಿಸಲು ಉದ್ದೇಶಿಸಲಾಗಿದೆ. ಅದೇ ರೀತಿ ಕೀಟನಾಶಕಗಳನ್ನೂ ಈ ಕಾಯಿದೆಯ ವ್ಯಾಪ್ತಿಗೆ ತರಲಾಗಿದ್ದು ಅವುಗಳನ್ನು ಆಗಿಂದಾಗ್ಗೆ ಕೇಂದ್ರಸರ್ಕಾರವು ಅಧಿಕೃತ ಗೆಜೆಟ್‌ನಲ್ಲಿ ಘೋಷಿಸುವಂತೆ ಔಷಧಗಳ ಗುಣಮಟ್ಟದ ಮೇಲೆ ನಿಯಂತ್ರಣ ಹೊಂದಲು ಉದ್ದೇಶಿಸಲಾಗಿದೆ.

ಅದೂ ಅಲ್ಲದೆ ಮೊತ್ತ ಮೊದಲ ಬಾರಿಗೆ ಈ ವಿಧೇಯಕದಲ್ಲಿ 'ತಯಾರಿಕೆ' ಎಂಬ ಪರಿಭಾಷೆಯ ವ್ಯಾಖ್ಯೆಯನ್ನು ಕೊಡಲಾಗಿದೆ. ಮೂಲ ಕಾಯ್ದೆಯಲ್ಲಿ ಅದನ್ನು ಸರಿಯಾಗಿ ವ್ಯಾಖ್ಯಾನಿಸಿರಲಿಲ್ಲ. ನಮ್ಮ ದೇಶದಲ್ಲಿ ಔಷಧ ಉದ್ಯಮದ ಬಹುಭಾಗವು ಔಷಧಿಗಳ ಸಗಟು ಆಮದು, ಈ ಔಷಧಿಗಳನ್ನು ಸೀಸೆಗಳಲ್ಲಿ ತುಂಬಿಸುವುದು, ಲೇಬಲ್‌ಗಳನ್ನು ಹಾಕುವುದು ಮತ್ತು ಹೊಸ ಪ್ಯಾಕ್‌ಗಳಲ್ಲಿ ಕೊಡುವುದು ಇತ್ಯಾದಿ ಚಟುವಟಿಕೆಗಳನ್ನು ಒಳಗೊಂಡಿದೆ. ಹೀಗಾಗಿ ಇಂತಹ ಚಟುವಟಿಕೆಗಳ ಮೇಲೆ ನಿಯಂತ್ರಣ ಸಾಧಿಸಲು ಅವುಗಳನ್ನು ಔಷಧ ತಯಾರಿಕೆ ಪರಿಭಾಷೆಯ ವ್ಯಾಪ್ತಿಗೆ ತರುವುದು ಅಗತ್ಯವೆಂದು ಪರಿಗಣಿಸಲಾಯಿತು.

ಔಷಧಗಳ ಉತ್ಪಾದನೆಗೆ ಸಂಬಂಧಿಸಿದ ಸಲಹಾ ಮಂಡಲಿಯ ಸ್ವರೂಪದಲ್ಲೂ ಒಂದಿಷ್ಟು ಬದಲಾವಣೆ ಅಗತ್ಯ ಎನಿಸಿತು. ಈಗ ಈ ಮಂಡಳಿಯಲ್ಲಿ ಔಷಧ ತಯಾರಿಕಾ ಉದ್ಯಮಕ್ಕೆ ಒಂದೇ ಒಂದು ಪ್ರಾತಿನಿಧ್ಯವಿದೆ. ಆದರೆ ಈ ಕ್ಷೇತ್ರದಲ್ಲಿ ದಿನದಿಂದ ದಿನಕ್ಕೆ ಚಟುವಟಿಕೆ

---

* ರಾಜ್ಯಸಭೆಯನ್ನು ಅಂಗೀಕೃತವಾದ 1940ರ ಔಷಧ ಕಾಯ್ದೆ ತಿದ್ದುಪಡಿಯನ್ನು ಮಂಡಿಸುತ್ತಾ (ಲೋಕಸಭೆ ಚರ್ಚೆ, 1955, ಫೆಬ್ರವರಿ 28, ಸಿ.ಸಿ. 601-605, 621-625 ಮತ್ತು 629-622)

ಹೆಚ್ಚುತ್ತಿರುವುದರಿಂದ ಈ ಪ್ರಾತಿನಿಧ್ಯವನ್ನು ಮೂರು ಮಂದಿ ಸದಸ್ಯರಿಗೆ ಹೆಚ್ಚಿಸಲು ಉದ್ದೇಶಿಸಲಾಗಿದೆ. ಈ ಪ್ರತಿನಿಧಿಗಳನ್ನು 1948ರ ಫಾರ್ಮಸಿ ಕಾಯ್ದೆಯ ಅನ್ವಯ ಭಾರತೀಯ ಫಾರ್ಮಸಿ ಕೌನ್ಸಿಲ್‌ನ ಮೂಲಕ ಚುನಾಯಿಸಲಾಗುವುದು. ಈವರೆಗೆ ಬ್ರಿಟಿಷ್ ಮೆಡಿಕಲ್ ಅಸೋಸಿಯೇಷನ್‌ನ ಭಾರತೀಯ ಶಾಖೆಗಳು ಈ ಮಂಡಳಿಗೆ ಓರ್ವ ಸದಸ್ಯನನ್ನು ಆಯ್ದು ಕಳಿಸುವ ಅಧಿಕಾರ ಹೊಂದಿದ್ದವು. ಬ್ರಿಟಿಷ್ ಮೆಡಿಕಲ್ ಅಸೋಸಿಯೇಷನ್‌ಗೆ ಇನ್ನು ಮುಂದೆ ವಿಶೇಷ ಪ್ರಾತಿನಿಧ್ಯ ನೀಡುವ ಅಗತ್ಯವಿಲ್ಲ ಎಂದೂ ತೀರ್ಮಾನಿಸಲಾಗಿದೆ. ಹಾಗಾಗಿ ಅದಕ್ಕೆ ಸಂಬಂಧಿಸಿದ ವಿಧಿಯನ್ನು ಈ ಕಾಯ್ದೆಯಿಂದ ತೆಗೆದುಹಾಕಲಾಗಿದೆ. ಈ ಕಾಯ್ದೆಯ ಉಸ್ತುವಾರಿಯ ಹೊಣೆ ಹೊತ್ತಿರುವ ಕೇಂದ್ರ ಸರ್ಕಾರದ ಔಷಧ ನಿಯಂತ್ರಣಾಧಿಕಾರಿಯನ್ನು ಮಂಡಳಿಯ ಪದನಿಮಿತ್ತ ಸದಸ್ಯರನ್ನಾಗಿ ನೇಮಿಸುವುದು ಅಗತ್ಯ ಎಂಬುದನ್ನು ನಾವು ಮನಗಂಡಿದ್ದೇವೆ.

ಈ ವಿಧೇಯಕಕ್ಕೆ ಸೂಚಿಸಲಾಗಿರುವ ಪ್ರಮುಖ ತಿದ್ದುಪಡಿಗಳಲ್ಲಿ ಒಂದೆಂದರೆ 4ನೇ ಅಧ್ಯಾಯದನ್ವಯ ಈ ಸಂಬಂಧದ ಕಾನೂನು ಕಾಯ್ದೆಗಳನ್ನು ರೂಪಿಸುವ ಅಧಿಕಾರವನ್ನು ಕೇಂದ್ರ ಸರ್ಕಾರವೇ ವಹಿಸಿಕೊಳ್ಳುವುದು. ಈ ವಿಷಯದಲ್ಲಿ ಎಲ್ಲ ರಾಜ್ಯಗಳು ಸಂಪೂರ್ಣ ಸಹಮತ ಹೊಂದಿವೆ ಎಂಬ ಅಂಶವನ್ನು ನಾನಿಲ್ಲಿ ಸ್ಪಷ್ಟಪಡಿಸಬಯಸುತ್ತೇನೆ. ದೇಶದಲ್ಲಿ ಬಳಕೆಯಲ್ಲಿರುವ ಅನೇಕ ಪ್ರಮುಖ ಔಷಧಿಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳಲಾಗುತ್ತಿದೆ. ಅವು ಅಂತಾರಾಜ್ಯ ವಾಣಿಜ್ಯ ವಹಿವಾಟಿಗೆ ಒಳಪಡುವುದರಿಂದ ಅವುಗಳ ಗುಣಮಟ್ಟ ಮತ್ತಿತರ ವಿಷಯಗಳಲ್ಲಿನ ನಿಯಮ ನಿರ್ಬಂಧಗಳು ದೇಶಾದ್ಯಂತ ಏಕರೂಪವಾಗಿರಬೇಕೆಂಬುದನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ತಿದ್ದುಪಡಿಯನ್ನು ತರಲಾಗಿದೆ.

ಔಷಧ ತಯಾರಿಕೆ ಮತ್ತು ಮಾರಾಟಕ್ಕೆ ಸಂಬಂಧಿಸಿದ ಅಕ್ರಮಗಳಲ್ಲಿ ವಿಧಿಸಲಾಗಿರುವ ದಂಡ ಮತ್ತು ಶಿಕ್ಷೆಯನ್ನು ವಿಸ್ತರಿಸುವ ವಿಷಯದಲ್ಲೂ ಸರ್ಕಾರ ಗಮನಹರಿಸಿದೆ. ಈ ವಿಷಯದಲ್ಲಿ ರಾಜ್ಯ ಸರ್ಕಾರಗಳಿಂದ ಮತ್ತು ಈ ಸದನದಿಂದ ಸತತ ಒತ್ತಾಯ ಬರುತ್ತಲೇ ಇತ್ತು. ಹಾಗಾಗಿ ಕಾಯ್ದೆಯ 27ನೇ ಸೆಕ್ಷನ್ ಅನ್ವಯ ದಂಡ ವಿಧಿಸಲು ಅವಕಾಶವಿರುವ ಈಗಿನ ವಿಧಿಗೆ ಮೂರು ವರ್ಷಗಳ ಸೆರೆಮನೆ ಶಿಕ್ಷೆ ವಿಧಿಸಲು ಅವಕಾಶ ಇರುವಂತೆ ಅದರ ವ್ಯಾಪ್ತಿಯನ್ನು ವಿಸ್ತರಿಸಲು ಉದ್ದೇಶಿಸಲಾಗಿದೆ. ಅದೇ ರೀತಿ 30ನೇ ಸೆಕ್ಷನ್‌ನನ್ವಯ ಈಗಿರುವ ವಿಧಿಯಲ್ಲಿ ದಂಡ ವಿಧಿಸಲು ಯಾವುದೇ ಗರಿಷ್ಠ ಮಿತಿಯನ್ನು ಸೂಚಿಸದೆ ಐದು ವರ್ಷಗಳ ಸೆರೆಮನೆ ಶಿಕ್ಷೆ ವಿಧಿಸಲು ಅವಕಾಶ ಕಲ್ಪಿಸಲಾಗಿದೆ. ನಕಲಿ ಔಷಧಗಳ ತಯಾರಿಕೆ ಮತ್ತು ಔಷಧಗಳ ಕಲಬೆರಕೆ ದೇಶಾದ್ಯಂತ ಹಬ್ಬಿರುವ ಒಂದು ಪಿಡುಗಾಗಿದ್ದು ಈ ಸಂಬಂಧದ ಅಪರಾಧಗಳಿಗೆ ಈಗಿರುವ ಶಿಕ್ಷೆಯನ್ನು ವಿಸ್ತರಿಸಬೇಕೆಂಬ ವಿಷಯದಲ್ಲಿ ಎಲ್ಲ ರಾಜ್ಯಗಳು ಸಮ್ಮತಿಸಿವೆ. ಈಗ ಔಷಧ ತಯಾರಿಕೆ ಮತ್ತು ಮಾರಾಟಕ್ಕೆ ಸಂಬಂಧಿಸಿದ ಅಕ್ರಮಗಳಿಗೆ ಸಂಬಂಧಿಸಿದ ಶಿಕ್ಷೆಯನ್ನು ವಿಸ್ತರಿಸುವುದರಿಂದ ಈ ಕಾಯ್ದೆಯಡಿಯಲ್ಲಿನ ಎಲ್ಲ ಅಪರಾಧಗಳನ್ನು ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟ್ ಅಥವಾ ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟ್‌ಗಳೇ ವಿಚಾರಣೆ ನಡೆಸಬೇಕು. ಇದೇ ಸರಿಯಾದ ಕ್ರಮ. ಏಕೆಂದರೆ ಯಾವುದೇ ಪ್ರಕರಣಗಳ ಶಿಕ್ಷೆಯನ್ನು ವಿಸ್ತರಿಸಿದಲ್ಲಿ ಅಂತಹ ಪ್ರಕರಣಗಳ ವಿಚಾರಣೆ ನಡೆಸಲು ಮತ್ತು ದಂಡ ವಿಧಿಸಲು ಪ್ರಥಮ ದರ್ಜೆ ಮತ್ತು ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟ್‌ಗಳೇ ಅಧಿಕಾರಸ್ಥರಾಗಿರುತ್ತಾರೆ.

ಔಷಧ ತಯಾರಿಕಾ ಕಂಪೆನಿಗಳು ಎಸಗುವ ಅಪರಾಧಗಳಲ್ಲಿ ವಿಧಿಸಲಾಗುವ ಶಿಕ್ಷೆಗೆ ಸಂಬಂಧಪಟ್ಟ ಪ್ರಚಾರ ನೀಡುವ ಇನ್ನೊಂದು ಪ್ರಮುಖ ತಿದ್ದುಪಡಿಯನ್ನೂ ಈ ವಿಧೇಯಕ ಒಳಗೊಂಡಿದೆ. ಔಷಧ ತಪಾಸಣಾಧಿಕಾರಿಗಳ ಮೇಲೆ ಬೀಳುವ ಹೆಚ್ಚಿನ ಹೊಣೆಗಾರಿಕೆ ಹಿನ್ನೆಲೆಯಲ್ಲಿ ಔಷಧಗಳ ಶೋಧ ಮತ್ತು ವಶಪಡಿಸುವ ಕಾರ್ಯಾಚರಣೆಗೆ ಸಂಬಂಧಿಸಿದಂತೆ ಇನ್ನೂ ಹೆಚ್ಚು ಪರಿಣಾಮಕಾರಿಯಾದ ಅಧಿಕಾರ ಕಲ್ಪಿಸಿಕೊಡಲು ಅನುಕೂಲವಾಗುವಂತೆ-ಈ ಸಂಬಂಧದಲ್ಲಿ ಮ್ಯಾಜಿಸ್ಟ್ರೇಟರಿಂದ ವಿಶೇಷ ಅನುಮತಿ ಪಡೆದುಕೊಳ್ಳದೆಯೇ ಕಾಯ್ದೆಯ ಪ್ರಸಕ್ತ ಸೆಕ್ಷನ್‌ಗೆ ತಿದ್ದುಪಡಿ ತರಲು ಉದ್ದೇಶಿಸಲಾಗಿದೆ. ಇದರೊಂದಿಗೆ ಇಂತಹ ಶೋಧ ಕಾರ್ಯಾಚರಣೆಗಳ ವೇಳೆಯಲ್ಲಿ ಅವಶ್ಯವಾದ ರಕ್ಷಣಾ ಕ್ರಮಗಳಿಗೆ ಅಪರಾಧ ದಂಡ ಸಂಹಿತೆಯಲ್ಲಿ ಈಗಾಗಲೇ ಇರುವ ವಿಧಿಗಳು ಇದ್ದೇ ಇರುತ್ತವೆ ಎಂಬುದನ್ನು ಇಲ್ಲಿ ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ. ಅದೇ ವೇಳೆಗೆ ಇಂತಹ ಶೋಧ ಕಾರ್ಯಗಳಿಗೆ ಸಜೆ ವಿಧಿಸುವ ಸೆಕ್ಷನ್‌ಗೂ ತಿದ್ದುಪಡಿ ತರಲು ಯೋಜಿಸಲಾಗಿದೆ.

ಔಷಧ ತಯಾರಿಕೆಗೆ ನೀಡುವ ಪೇಟೆಂಟ್‌ಗಳು ಮತ್ತು ಖಾಸಗಿಯಾಗಿ ತಯಾರಿಸಲ್ಪಡುವ ಔಷಧಗಳ ಮಾರಾಟಕ್ಕೆ ಸಂಬಂಧಿಸಿದಂತೆ ನೀಡಲಾಗಿದ್ದ ರಿಯಾಯ್ತಿಗಳನ್ನು ಹಿಂತೆಗೆದುಕೊಂಡಿರುವುದು ಇನ್ನೊಂದು ಪ್ರಮುಖ ತಿದ್ದುಪಡಿಯಾಗಿದೆ. ಈ ತನಕ ಔಷಧ ಪ್ರಯೋಗಾಲಯಗಳು ನೀಡುತ್ತಿದ್ದ ನೋಂದಣಿ ಸಂಖ್ಯೆ ಆಧಾರದಲ್ಲಿ ಮಾರಾಟಕ್ಕೆ ಅವಕಾಶವಿತ್ತು. ಔಷಧ ನಿಯಂತ್ರಣ ಕ್ಷೇತ್ರದಲ್ಲಿ ಜಗತ್ತಿನ ಎಲ್ಲ ಮುಂದುವರೆದ ರಾಷ್ಟ್ರಗಳ ರೀತಿಯನ್ನು ನಾವು ಅನುಸರಿಸುವುದು ಅವಶ್ಯವಾಗಿದೆ. ಪ್ರತಿಯೊಂದು ಔಷಧ ಯಾವ ಯಾವ ವಸ್ತುಗಳನ್ನು ಹೊಂದಿದೆ ಎಂಬ ಮಾಹಿತಿಯನ್ನು ಅದರ ಲೇಬಲ್ ಮೇಲೆ ನಮೂದಿಸಿರಬೇಕು. ಇದು ಗ್ರಾಹಕರಿಗೆ ತಾವು ಖರೀದಿಸುವ ಔಷಧಿಯಲ್ಲಿ ಯಾವ ಯಾವ ಸಾಮಾಗ್ರಿಗಳು ಬಳಸಲ್ಪಟ್ಟಿವೆ ಎಂಬುದು ತಿಳಿಯಲು ಅನುಕೂಲವಾಗುತ್ತದೆ.

ಖೋಟಾ ಔಷಧಿಗಳ ಹಾವಳಿ ಬಗ್ಗೆ ನಾನು ಈಗಾಗಲೇ ಪ್ರಸ್ತಾಪಿಸಿರುತ್ತೇನೆ. ಅಂತಹ ಔಷಧಗಳ ನಿಯಂತ್ರಣದಲ್ಲಿ ರಾಜ್ಯ ಸರ್ಕಾರವು ಅತ್ಯಂತ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತಿವೆ ಎಂಬುದನ್ನು ತಿಳಿಸಲು ನಾನು ಸಂತಸಪಡುತ್ತೇನೆ. ಅವು ಈ ವಿಷಯದಲ್ಲಿ ಅತ್ಯಂತ ಕ್ರಿಯಾಶೀಲವಾಗಿದ್ದು ಅವುಗಳ ಗಮನಕ್ಕೆ ಬರುವ ಅಕ್ರಮ ಪ್ರಕರಣಗಳ ವಿರುದ್ಧ ಮೊಕದ್ದಮೆ ಹೂಡುತ್ತವೆ. ಪ್ರಸ್ತಾಪಿತ ತಿದ್ದುಪಡಿಗಳು ಔಷಧ ಗುಣಮಟ್ಟ ನಿಯಂತ್ರಣಾಧಿಕಾರಿಗಳ ಕೈಗಳನ್ನು ಇನ್ನಷ್ಟು ಬಲಪಡಿಸುವ ದಿಸೆಯಲ್ಲಿಯೂ ಅತ್ಯಂತ ಪರಿಣಾಮಕಾರಿಯಾಗಲಿವೆ. ಹೀಗಾಗಿ ಈ ಕಾಯ್ದೆಯು ಸಾಧ್ಯವಾದಷ್ಟು ಬೇಗ ಕಾಯ್ದೆಗಳ ಸಂಪುಟಕ್ಕೆ ಸೇರಬೇಕು ಎಂದು ನಾನು ಬಯಸುತ್ತೇನೆ. ಈ ಕಾಯ್ದೆಯು ವಿಧಿಗಳನ್ನು ಈ ಸಂಬಂಧದಲ್ಲಿ ಯಾವುದೇ ಕಾನೂನು-ಕಾಯ್ದೆಗಳನ್ನು ರೂಪಿಸದಿರುವ 'ಬಿ' ಗುಂಪಿನ ರಾಜ್ಯಗಳಿಗೂ ವಿಸ್ತರಿಸಿರುವುದರಿಂದ ಈ ಕಾಯ್ದೆ ಅತ್ಯವಶ್ಯಕವಾಗಿದೆ. ಈ ಸಂಬಂಧದಲ್ಲಿ ಕೇಂದ್ರ ಸರ್ಕಾರವು ಇಡೀ ದೇಶಕ್ಕೆ ಅನ್ವಯವಾಗುವ ಏಕರೂಪದ ನೀತಿಯನ್ನು ಜಾರಿಗೆ ತರಲು ಇದರಿಂದ ಸಹಾಯಕವಾಗಲಿದೆ.

ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಸಮಯವನ್ನು ತೆಗೆದುಕೊಳ್ಳಲು ನಾನು ಬಯಸುವುದಿಲ್ಲ. ಔಷಧಗಳ ತಯಾರಿಕೆ ಮತ್ತು ಮಾರಾಟಕ್ಕೆ ಸಂಬಂಧಿಸಿದ, ಅಂದರೆ ಔಷಧಗಳ ಆಮದು ಮತ್ತು ತಯಾರಿಕೆ ಹಾಗೂ ನಿಯಂತ್ರಣ ಇತ್ಯಾದಿಗಳಿಗೆ ಸಂಬಂಧಿಸಿದ ಸಮಗ್ರ ಅಂಶಗಳ ಉಸ್ತುವಾರಿಗಾಗಿ

ಈಚೆಗೆ ಔಷಧ ತಯಾರಿಕಾ ಘಟಕಗಳ ತನಿಖಾ ಸಮಿತಿಯೊಂದನ್ನು ನೇಮಿಸಿರುವುದು ಸದನಕ್ಕೆ ಗೊತ್ತಿರುವ ವಿಷಯವೇ ಆಗಿದೆ. ಈ ಸಂಬಂಧದಲ್ಲಿ ಸಮಿತಿಯ ಸದಸ್ಯರು ಹಲವು ಪ್ರಮುಖ ಶಿಫಾರಸುಗಳನ್ನು ಮಾಡಿದ್ದಾರೆ. ಈ ತಿದ್ದುಪಡಿ ವಿಧೇಯಕವು ಈಗಾಗಲೇ ರಾಜ್ಯಸಭೆಯಲ್ಲಿ ಮಂಡಿಸಲ್ಪಟ್ಟಿರುವುದರಿಂದ ಇನ್ನೂ ಅನೇಕ ಶಿಫಾರಸುಗಳು ಬರುವ ನಿರೀಕ್ಷೆ ಇದ್ದೇ ಇದೆ. ಅಂತಹ ಶಿಫಾರಸುಗಳನ್ನು ಈಗಾಗಲೇ ವಿಧೇಯಕದಲ್ಲಿ ಸೇರಿಸಿಕೊಳ್ಳಲಾಗಿದೆ. ಅವುಗಳಲ್ಲಿ ಅತಿ ಮಹತ್ವದ ಒಂದೆರಡು ಶಿಫಾರಸುಗಳು ಸರ್ಕಾರದ ತೀವ್ರ ಪರಿಶೀಲನೆಯಲ್ಲಿವೆ. ಏನೇ ಇದ್ದರೂ ಈ ವಿಧೇಯಕವನ್ನು ಇನ್ನಷ್ಟು ಕಾಲ ತಡೆಹಿಡಿಯಲು ನಾನು ಸಿದ್ಧಳಿಲ್ಲ. ಈ ಎಲ್ಲ ಶಿಫಾರಸುಗಳನ್ನು ರಾಜ್ಯ ಸರ್ಕಾರಗಳಿಂದ ಬರುವ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಸಮಗ್ರವಾಗಿ ಪರಿಶೀಲಿಸಿ ಅನಂತರದಲ್ಲಿ ಈ ಕಾಯ್ದೆಗೆ ಇನ್ನು ಹೆಚ್ಚಿನ ತಿದ್ದುಪಡಿಗಳನ್ನು ತರಲು ನಾನು ಉದ್ದೇಶಿಸಿದ್ದೇನೆ. ಇದಿಷ್ಟೇ ನಾನು ಹೇಳಬಯಸುವುದು.

ಈ ವಿಧೇಯಕಕ್ಕೆ ಸಂಬಂಧಿಸಿದಂತೆ ಒಂದೇ ಒಂದು ತಿದ್ದುಪಡಿಯೂ ಬಂದಿಲ್ಲ. ಬಂದಿರುವ ತಿದ್ದುಪಡಿಗಳೆಲ್ಲವೂ ರಾಜ್ಯಸಭೆಯಲ್ಲಿ ಸೂಚಿತವಾದವೇ ಆಗಿವೆ. ಇಂತಹ ತಿದ್ದುಪಡಿಗಳು ಪ್ರಸ್ತಾಪಕ್ಕೆ ಬಂದಾಗ ನಾನು ಅವುಗಳಿಗೆ ಪ್ರತ್ಯುತ್ತರ ನೀಡುತ್ತೇನೆ. ಬಹುತೇಕ ತಿದ್ದುಪಡಿಗಳು ಅಂಗೀಕಾರಕ್ಕೆ ಅರ್ಹವಾಗಿಲ್ಲವೆಂದೇ ನನ್ನ ಭಾವನೆಯಾಗಿದೆ. ಒಟ್ಟಿನಲ್ಲಿ ಸದನವು ಈ ವಿಧೇಯಕದ ಬಗ್ಗೆ ಸಮ್ಮತಿ ಹೊಂದಿದೆ ಎಂದು ನಾನು ಭಾವಿಸುತ್ತೇನೆ. ಈ ವಿಧೇಯಕಕ್ಕೆ ನಾನೇ ಸ್ವತಃ ಎರಡು ನಿರ್ದಿಷ್ಟ ತಿದ್ದುಪಡಿಗಳನ್ನು ತರಲು ಬಯಸಿದ್ದೇನೆ.

ಇದೀಗ ಮಂಡಿಸಿರುವ ವಿಧೇಯಕದ ಬಗ್ಗೆ ಅಲ್ಲಿನ ನ್ಯೂನತೆಗಳು ಮತ್ತು ಕೊರತೆಗಳ ಬಗ್ಗೆ ಕೆಲ ಸದಸ್ಯರು ಟೀಕಿಸಿದ್ದರಾದರೂ ಒಟ್ಟಿನಲ್ಲಿ ಅದಕ್ಕೆ ತಾತ್ವಿಕ ಬೆಂಬಲ ನೀಡಿರುವ ಸದನದ ಎಲ್ಲ ಸದಸ್ಯರನ್ನು ನಾನು ಅಬಿನಂಧಿಸುತ್ತೇನೆ. ಈ ಸಂಬಂಭದಲ್ಲಿ ಸದಸ್ಯರು ಎತ್ತಿರುವ ಆಕ್ಷೇಪಗಳಿಗೆ ಉತ್ತರವಾಗಿ ಅತ್ಯಂತ ಸಂಕ್ಷಿಪ್ತವಾಗಿ ಕೆಲ ಮಾಹಿತಿಗಳನ್ನು ನಾನು ನೀಡಬಯಸಿದ್ದೇನೆ.

ಚರ್ಚೆಯ ವೇಳೆಯಲ್ಲಿ ಮಾನ್ಯ ಸದಸ್ಯರೊಬ್ಬರು* ಈ ವಿಧೇಯಕದಲ್ಲಿ ಆಯುರ್ವೇದ, ಯುನಾನಿ ಔಷಧಿಗಳನ್ನು ನಾನು ಏಕೆ ಕೈಬಿಟ್ಟಿದ್ದೇನೆಂದು ಕೇಳಿದ್ದಾರೆ. ಈ ಔಷಧಗಳನ್ನು ವಿಧೇಯಕದ ವ್ಯಾಪ್ತಿಗೆ ಒಳಪಡಿಸುವುದು ಅಸಾಧ್ಯವಾಗಿದೆ. ನನಗದು ಬೇಕಾಗಿರಲಿಲ್ಲ ಎಂಬುದಕ್ಕೆ ಹಾಗಾಗಿಲ್ಲ. ನಮ್ಮ ದೇಶೀಯ ಔಷಧಗಳ ಬಗ್ಗೆ ಸಮಗ್ರವಾದ ಔಷಧ ಮಾಹಿತಿ ಕೋಶ ನಮ್ಮಲ್ಲಿ ಇಲ್ಲದಿರುವುದರಿಂದ ಅವುಗಳನ್ನು ಸೇರಿಸುವುದು ಸಾಧ್ಯವಿಲ್ಲವಾಗಿದೆ. ಇದೀಗ ಸಿದ್ಧಗೊಳ್ಳುತ್ತಿರುವ ಹೊಸ ಔಷಧ ಮಾಹಿತಿ ಕೋಶದಲ್ಲಿ ಸೇರಿಸಲಾಗಿರುವ ಎಲ್ಲ ದೇಶೀಯ ಔಷಧಗಳು ಸದ್ಯದಲ್ಲಿ ಈ ವ್ಯಾಪ್ತಿಗೆ ಬರಲಿವೆ. ದೇಶೀಯ ಔಷಧಗಳಲ್ಲಿಯೂ ಕಲಬೆರಕೆ ನಡೆಯುತ್ತಿರುವ ವಿಷಯ ನನಗೆ ಗೊತ್ತಿದೆ. ಈ ವಿಷಯದಲ್ಲಿ ಸಾಧ್ಯವಿರುವ ಕ್ರಮಗಳನ್ನು ತೆಗೆದುಕೊಳ್ಳಲು ಸರ್ಕಾರ ಎಲ್ಲ ಪ್ರಯತ್ನಗಳನ್ನು ಮಾಡಲಿದೆ. ಸದ್ಯದ ಪರಿಸ್ಥಿತಿಯಲ್ಲಿ ಎಲ್ಲ ದೇಶೀಯ ಔಷದಿಗಳ ಸಮಗ್ರ ಯಾದಿ ನನ್ನ ಕೈಗೆ ಸಿಗುವವರೆಗೆ ಈ ವಿಷಯದಲ್ಲಿ ಏನನ್ನೂ ಮಾಡುವುದು ಸಾಧ್ಯವಿಲ್ಲ. ನನ್ನ ಇಚ್ಛೆ ಅಥವಾ ಅನಿಚ್ಛೆಯ ಪ್ರಶ್ನೆ ಇದಲ್ಲ. ಯಾವುದೇ ವೈದ್ಯ ಪದ್ಧತಿಯ ಯಾವುದೇ ಔಷಧ ಅತ್ಯಂತ ಪರಿಶುದ್ಧವಾಗಿರಬೇಕು ಎಂಬುದು ನನ್ನ ಸಿದ್ಧಾಂತವಾಗಿದೆ.

---

* ಶ್ರೀಧುಲೇಕರ್

ಚರ್ಚೆಯ ಪ್ರಾರಂಭದಲ್ಲಿ ಮಾತನಾಡಿದ ಮಾನ್ಯ ಗಿದ್ವಾನಿಯವರು ಎತ್ತಿದ ಪ್ರಮುಖ ಅಂಶಗಳನ್ನು ನಾನಿಲ್ಲಿ ಪ್ರಸ್ತಾಪಿಸಲೇ ಬೇಕಾಗಿದೆ. ನಕಲಿ ಔಷಧಿಗಳ ತಯಾರಿಕೆ ಮತ್ತು ಕಲಬೆರಕೆಗೆ ಸಂಬಧಿಸಿದ ಪ್ರಕರಣಗಳಲ್ಲಿ ದಂಡ ಮತ್ತು ಸಜೆ ಎರಡನ್ನೂ ವಿಧಿಸಲು ಅವಕಾಶವಿರಬೇಕೆಂದು ಅವರು ಹೇಳಿದ್ದಾರೆ. ಇದು ತುಂಬಾ ಸೂಕ್ಷ್ಮವಾದ ವಿಷಯವಾಗಿದ್ದು, ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟ್ ಮತ್ತು ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟರ ವಿವೇಚನೆಗೆ ಬಿಡಬೇಕಾದ ವಿಷಯವಾಗಿದೆ. ಕೆಲವೊಂದು ಪ್ರಕರಣಗಳಲ್ಲಿ ತಾಂತ್ರಿಕ ಸ್ವರೂಪದ ಅಪರಾಧಗಳ ದಂಡನೆ ಮತ್ತು ಶಿಕ್ಷೆ ಎರಡನ್ನೂ ವಿಧಿಸುವುದು ನ್ಯಾಯಸಮ್ಮತವೆನಿಸದು. ಹಾಗಾಗಿ ದಂಡ ಮತ್ತು ಸೆರೆಮನೆ ವಾಸದ ಶಿಕ್ಷೆಗೆ ಬದಲಾಗಿ ದಂಡ ಅಥವಾ ಶಿಕ್ಷೆ ಎಂಬ ತಿದ್ದುಪಡಿ ಸೂಕ್ತವಾಗಿದೆ.

ಇನ್ನೋರ್ವ ಮಾನ್ಯ ಸದಸ್ಯರು ಕಾಯ್ದೆಯ 27ನೇ ಸೆಕ್ಷನ್‌ನಲ್ಲಿ ಸೂಚಿಸಲಾಗಿರುವ ಶಿಕ್ಷೆಯ ಬಗ್ಗೆ ನಮ್ಮ ಗಮನ ಸೆಳೆದಿದ್ದಾರೆ. ಈ ವಿಷಯವನ್ನು ಮಾನ್ಯ ಸದಸ್ಯರು ತಪ್ಪಾಗಿ ಗ್ರಹಿಸಿಕೊಂಡಿದ್ದಾರೆ. ನನ್ನ ಮಾನ್ಯ ಮಿತ್ರರಾದ ಡಾ।। ರಾಮರಾವ್ ಅವರು ಈ ತಪ್ಪನ್ನು ಈಗಾಗಲೇ ಸರಿಪಡಿಸಿದ್ದಾರೆ. ಕಾಯ್ದೆಯಲ್ಲಿ ಗರಿಷ್ಠ ಎಂದಿರಬೇಕಾದಲ್ಲಿ ಕನಿಷ್ಠ ಎಂದು ಅವರು ಭಾವಿಸಿದ್ದೇ ಈ ತಪ್ಪು ಗ್ರಹಿಕೆಗೆ ಕಾರಣ. ನ್ಯಾಯಾಲಯಕ್ಕೆ ಶಿಕ್ಷೆಯನ್ನು ನಿಶ್ಚಯಯಿಸುವ ವಿಷಯದಲ್ಲಿ ಪೂರ್ಣ ಅಧಿಕಾರವಿದೆ. ಹಾಗಾಗಿ ಅಪರಾಧಕ್ಕೆ ತಕ್ಕಂತೆ ದಂಡ ಅಥವಾ ಸಜೆ ವಿಧಿಸುವ ಅಧಿಕಾರ ನ್ಯಾಯಾಧೀಶರಿಗೆ ಇದ್ದೇ ಇದೆ. ಸಮಾಜ ಘಾತುಕ ಕೃತ್ಯಗಳಲ್ಲಿ ತೊಡಗಿರುವ ಮಂದಿ ದಂಡವನ್ನು ತೆತ್ತು ಅಪರಾಧದಿಂದ ವಿಮುಕ್ತರಾಗುವುದಕ್ಕೆ ಅವಕಾಶ ಕಲ್ಪಿಸಲು ನಾನು ಸಿದ್ಧಳಿಲ್ಲ. ಏಕೆಂದರೆ ಸಾವಿರಾರು ರೂಪಾಯಿಗಳನ್ನು ಸಂಪಾದಿಸುವ ಇಂತಹ ವ್ಯಕ್ತಿಗಳು ದಂಡವನ್ನು ಪಾವತಿ ಮಾಡಲು ಹಿಂದೆ ಮುಂದೆ ನೋಡುವುದಿಲ್ಲ. ಹೀಗಾಗಿ ಮಾನವ ಸಮುದಾಯಕ್ಕೆ ಮಾರಕವಾಗಿರುವ ಅಪರಾಧವನ್ನು ಎಸಗುವ ಮಂದಿ ಶಿಕ್ಷೆಗೆ ಗುರಿಯಾಗಲೇಬೇಕು ಎಂಬುದು ನನ್ನ ದೃಢ ಅಭಿಪ್ರಾಯವಾಗಿದೆ.

ಔಷಧ ತಪಾಸಣಾ ಅಧಿಕಾರಿಗಳಿಗೆ ವಿಶೇಷ ವಿದ್ಯಾರ್ಹತೆಗಳಿರಬೇಕೆಂಬ ಸಲಹೆಯನ್ನು ಮಾನ್ಯ ಸದಸ್ಯರೊಬ್ಬರು ಮುಂದಿಟ್ಟಿದ್ದಾರೆ. * ಕಾಯ್ದೆಯ ಪ್ರಕಾರ ಅವರು ವಿಶೇಷ ವಿದ್ಯಾರ್ಹತೆಯನ್ನು ಹೊಂದಿರಲೇಬೇಕು ಎಂಬುದನ್ನು ನಾನು ಮಾನ್ಯ ಸದಸ್ಯರ ಗಮನಕ್ಕೆ ತರಲು ಬಯಸುತ್ತೇನೆ. ಔಷಧ ನಿಯಂತ್ರಣ ಕಾಯ್ದೆಯನ್ವಯ ಅವರಿಗೆ ಉತ್ತಮ ವೇತನ ನೀಡಬೇಕು. ಉದಾಹರಣೆಗೆ ದೆಹಲಿಯಲ್ಲಿ ಅವರ ವೇತನ ಶ್ರೇಣಿ 275-800 ರೂಪಾಯಿಗಳವರೆಗೆ ಇದೆ. ಔಷದ ತಪಾಸಣಾಧಿಕಾರಿಗಳಿಗೆ ಸಾಕಷ್ಟು ಅದಿಕಾರ ಇರಬೇಕು ಎಂಬ ಅಂಶವನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಅವರಿಗೆ ಉತ್ತಮ ಸಂಬಳ ನೀಡಿದರೆ ಅವರು ಲಂಚದ ಆಮಿಷಕ್ಕೆ, ಭ್ರಷ್ಟಾಚಾರಕ್ಕೆ ಒಳಗಾಗುವುದಿಲ್ಲ. ಔಷಧ ನಿಯಂತ್ರಣದ ಉಸ್ತುವಾರಿ ರಾಜ್ಯ ಸರ್ಕಾರಗಳ ಕೈಯಲ್ಲಿ ಇರುವುದೆಂಬ ಅಂಶವನ್ನು ನಾನು ಡಾ।।. ರಾಮರಾವ್ ಅವರ ಗಮನಕ್ಕೆ ತರಲು ಬಯಸುತ್ತೇನೆ. ಈ ಕಾಯ್ದೆಯ ನಿರ್ವಹಣೆ ರಾಜ್ಯ ಸರ್ಕಾರಗಳ ಕೈಯಲ್ಲೇ ಇರುವುದರಿಂದ ಔಷಧ ತಪಾಸಣಾಧಿಕಾರಿಗಳ ವಿದ್ಯಾರ್ಹತೆಯನ್ನು ನಿರ್ಧರಿಸುವುದು ಅವುಗಳ ವಿವೇಚನೆಗೆ ಸೇರಿದ ವಿಷಯವಾಗಿದೆ.

---

* ಇನ್ಸ್‌ಪೆಕ್ಟರ್‌ಗಳಿಂದ ಅನವಶ್ಯಕ ಹಾಗೂ ನ್ಯಾಯಬಾಹಿರ ಕಿರುಕುಳ ಕುರಿತು ಶ್ರೀ ಅಕ್ಬರ್ ಅಲಿಖಾನ್ ಅವರು ಮಾಡಿದ ಪ್ರಸ್ತಾಪಕ್ಕೆ ವಿವರಣೆ ನೀಡುತ್ತಾ.

ಔಷಧ ತಯಾರಿಕೆ ಉದ್ದಿಮೆಯ ರಾಷ್ಟ್ರೀಕರಣದ ಬಗ್ಗೆಯೂ ಕೆಲವರು ಪ್ರಸ್ತಾಪಿಸಿದ್ದಾರೆ. ಔಷಧ ತಯಾರಿಕಾ ಉದ್ಯಮ ಅಭಿವೃದ್ಧಿ ಸಾಧಿಸಬೇಕು ಎಂಬ ಬಗ್ಗೆ ನನಗಿರುವ ಆಸ್ಥೆ ಪ್ರಾಯಶಃ ಇನ್ನಾರಿಗೂ ಇಲ್ಲ. ಈ ಕ್ಷೇತ್ರದಲ್ಲಿ ಅಭಿವೃದ್ಧಿ ಸಾಧಿಸದ ಹೊರತು ಔಷಧಗಳ ಬೆಲೆಯನ್ನು ತಗ್ಗಿಸುವುದಾಗಲಿ ಅಥವಾ ಜನಸಾಮಾನ್ಯರಿಗೆ ನ್ಯಾಯಬದ್ಧ ಬೆಲೆಯಲ್ಲಿ ಅವುಗಳನ್ನು ಸರಬರಾಜು ಮಾಡುವುದಾಗಲಿ ಅಸಾಧ್ಯ. ಈ ವಿಷಯದಲ್ಲಿ ಸಹೋದ್ಯೋಗಿಗಳಿಗಿರುವ ವಾಣಿಜ್ಯ ಮತ್ತು ಕೈಗಾರಿಕಾ ಸಚಿವರು ನನಗೆ ಸಂಪೂರ್ಣ ಸಹಕಾರ ನೀಡಿದ್ದಾರೆ. ಈ ನಿಟ್ಟಿನಲ್ಲಿ ನಿಕಟ ಭವಿಷ್ಯದಲ್ಲೇ ನಾವು ಕಾರ್ಯಕ್ರಮವೊಂದನ್ನು ರೂಪಿಸಲಿದ್ದೇವೆ. ಈಗಾಗಲೇ ನಾವು ಪೆನ್ಸಿಲಿನ್ ಕಾರ್ಖಾನೆಯನ್ನು ಪ್ರಾರಂಭಿಸಿದ್ದು, ಅದು ಅತಿ ಶೀಘ್ರವಾಗಿ ಉತ್ಪಾದನೆ ಆರಂಭಿಸಲಿದೆ. ಅದೇ ರೀತಿ ಡಿಡಿಟಿ ಉತ್ಪಾದನೆಗೂ ಸರಕಾರ ಮುಂದಾಗಿದ್ದು ಎರಡು ಡಿಡಿಟಿ ಕಾರ್ಖಾನೆಗಳನ್ನು ಪ್ರಾರಂಭಿಸಲು ಉದ್ದೇಶಿಸಿದೆ. ಅದೇ ರೀತಿ ಆಂಟಿಬಯಾಟಿಕ್‌ಗಳ ಉತ್ಪಾದನೆಗೂ ಸರಕಾರ ಮುಂದಾಗಲಿದೆ. ಔಷಧಗಳ ವಿಷಯದಲ್ಲಿ ಸ್ವಾವಲಂಬನೆ ಸಾಧಿಸಬೇಕಾದ ಅಗತ್ಯವನ್ನು ಔಷಧ ತಯಾರಿಕಾ ಘಟಕಗಳ ತನಿಖಾ ಸಮಿತಿಯು ಶಿಫಾರಸು ಮಾಡಿದೆ. ಈ ವಿಚಾರವು ನನ್ನ ಹಾಗೂ ವಾಣಿಜ್ಯ ಮತ್ತು ಕೈಗಾರಿಕಾ ಖಾತೆಯ ಸಕ್ರಿಯ ಪರಿಶೀಲನೆಯಲ್ಲಿದೆ.

ಔಷಧಗಳ ಬಗ್ಗೆ ಸಾರ್ವಜನಿಕರಿಗೆ ತಿಳುವಳಿಕೆ ಮೂಡಿಸಬೇಕೆಂಬ ವಿಚಾರದಲ್ಲಿ ಮಾನ್ಯ ಸದಸ್ಯರು ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ನನ್ನ ಪೂರ್ಣ ಸಹಮತವಿದೆ. ಆರೋಗ್ಯ ಖಾತೆಯ ಅಧೀನದಲ್ಲಿನ ಪ್ರಚಾರ ಶಾಖೆಯು ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಲಿದೆ. ಸಾರ್ವಜನಿಕರಿಗೆ ಔಷಧಗಳಿಗೆ ಸಂಬಂಧಿಸಿದಂತೆ ಎಲ್ಲ ಮಾಹಿತಿಯನ್ನು ನೀಡಿ ಅವರಲ್ಲಿ ಎಚ್ಚರ ಮೂಡಿಸುವ ಕಾರ್ಯವನ್ನು ಅದು ನಿರ್ವಹಿಸಲಿದೆ. ಸೂಕ್ತ ಮಾಹಿತಿ ಇಲ್ಲದ ಯಾವುದೇ ಔಷಧ ಮಾರಾಟಕ್ಕೂ ಆರೋಗ್ಯ ಇಲಾಖೆ ಅನುಮತಿ ನೀಡುವುದಿಲ್ಲ. ಇದು ಸಾರ್ವಜನಿಕರ ಆರೋಗ್ಯ ಸಂರಕ್ಷಣೆಯ ದಿಕ್ಕಿನಲ್ಲಿ ಒಂದು ಸರಿಯಾದ ಹೆಜ್ಜೆಯಾಗಿದೆ. ಔಷಧಗಳ ಜಾಹೀರಾತುಗಳ ವಿಷಯದಲ್ಲಿಯೂ ಸರಕಾರ ನಿಗಾ ಇರಿಸಲಿದೆ. ಇಂತಹ ಜಾಹೀರಾತುಗಳನ್ನು ಸದನ ಈಚೆಗೆ ಅಂಗೀಕರಿಸಿರುವ ಔಷಧ ಮತ್ತು ಕ್ಷಿಪ್ರ ಪರಿಹಾರ ನೀಡುವ ಔಷಧಗಳ ನಿಯಂತ್ರಣ ಕಾಯ್ದೆಯ ವಿಧಿಗಳಿಗೆ ಅನುಗುಣವಾಗಿ ನಿಯಂತ್ರಿಸಲಾಗುವುದು. ಈ ಕಾಯ್ದೆಯ ನಿಯಮ ನಿಬಂಧನೆಗಳನ್ನು ಈಗಾಗಲೇ ಪ್ರಕಟಿಸಲಾಗಿದ್ದು, ಅದು ಪ್ರಸಕ್ತ ವರ್ಷದ ಏಪ್ರಿಲ್ 1 ರಿಂದ ಜಾರಿಗೆ ಬರಲಿವೆ. ಇದರೊಂದಿಗೆ ಔಷಧ ಮಾರಾಟಗಾರರನ್ನು ನಿಯಂತ್ರಿಸುವ ಫಾರ್ಮಸಿ ಕಾಯ್ದೆಯನ್ನು ಸರಕಾರ ಜಾರಿಗೆ ತಂದಿದೆ. ಇದು ಔಷಧ ಮಳಿಗೆಗಳಿಗೆ ಅಗತ್ಯವಾಗಿರುವ ಸಿಬ್ಬಂದಿಯ ನೇಮಕಕ್ಕೂ ಅನ್ವಯವಾಗುತ್ತದೆ.

ಗರ್ಭ ನಿರೋಧಕಗಳ ವಿಷಯದಲ್ಲೂ ನಿರ್ದಿಷ್ಟ ಮಾನದಂಡಗಳನ್ನು ಅಳವಡಿಸಬೇಕೆಂದು ಸದಸ್ಯರೊಬ್ಬರು ಸೂಚಿಸಿದ್ದಾರೆ. ಈ ವಿಷಯದಲ್ಲೂ ನನ್ನ ಸಂಪೂರ್ಣ ಸಹಮತವಿದೆ. ಪ್ರಸ್ತಾಪಿತ ತಿದ್ದುಪಡಿಯು ಗರ್ಭನಿರೋಧಕಗಳ ನಿರ್ದಿಷ್ಟ ಮಾನದಂಡಗಳಿಗೆ ಅನುಗುಣವಾಗಿರುವಂತೆ ಕಡ್ಡಾಯಪಡಿಸಲಿದ್ದು, ಅದು ರಾಸಾಯನಿಕ ಮತ್ತು ಯಾಂತ್ರಿಕ ಸಾಧನಗಳೂ ಸೇರಿದಂತೆ ಎಲ್ಲ ಮಾದರಿಯ ಗರ್ಭ ನಿರೋಧಕಗಳನ್ನು ಒಳಗೊಂಡಿರುತ್ತದೆ. ಮಾನ್ಯ ಸದಸ್ಯರು ಪ್ರಸ್ತಾಪಿತ ವಿಧೇಯಕದ ಪುಟ 6ರಲ್ಲಿ 17ನೇ (ಬಿ) ಖಂಡವನ್ನು ಗಮನಿಸಿದರೆ ಎಂತಹವರಿಗೂ ಮನವರಿಕೆಯಾಗುವುದು.

ಇದಲ್ಲದೆ ಮಾನ್ಯ ಸದಸ್ಯರು ಇನ್ನು ಕೆಲವು ತಿದ್ದುಪಡಿಗಳನ್ನು ಸೂಚಿಸಿದ್ದಾರೆ. ಅನೇಕ ಕಾರಣಗಳಿಗಾಗಿ ಅವುಗಳಲ್ಲಿ ಅನೇಕ ತಿದ್ದುಪಡಿಗಳನ್ನು ಅಂಗೀಕರಿಸಲು ಸಾಧ್ಯವಾಗುತ್ತಿಲ್ಲ ಎಂದು ತಿಳಿಸಲು ಇಚ್ಛಿಸುತ್ತೇನೆ. ಹೀಗಾಗಿ ಇನ್ನು ಮಾನ್ಯ ಮಿತ್ರರಾದ ವಿ.ಬಿ. ಗಾಂಧಿ ಮತ್ತು ಎಸ್.ವಿ.ರಾಮಸ್ವಾಮಿಯವರು ಸೂಚಿಸಿರುವ ತಿದ್ದುಪಡಿಗಳನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ನಾನು ಅವರನ್ನು ಕೋರುತ್ತಿದ್ದೇನೆ. ವಿಧೇಯಕದ 6ನೇ ಖಂಡದ ತಿದ್ದುಪಡಿ ವಿಷಯದಲ್ಲಿ ಹೇಳುವುದಿದ್ದರೆ ಈಗಿರುವ ಕಾಯ್ದೆಯ ವಿಧಿಯು 'ಅವರು ಅಪೇಕ್ಷಿಸಿದಲ್ಲಿ' ಎಂದಿದೆ. ಔಷಧ ತಪಾಸಣಾಧಿಕಾರಿಗಳಿಗೆ ಕೇಂದ್ರ ಔಷಧಗಳ ಹೊಣೆಗಾರಿಕೆಯನ್ನು ನಿರ್ವಹಿಸಲು ಅನುಕೂಲವಾಗುವಂತೆ ಕಂಡು ವಿಧೇಯಕದಲ್ಲಿ 'ಅಗತ್ಯ' ಎಂಬ ಶಬ್ದವನ್ನು ಉದ್ದೇಶಪೂರ್ವಕವಾಗಿ ಬದಲಾಯಿಸಲಾಗಿದೆ. "ಔಷಧ ನಿಯಂತ್ರಣಾಧಿಕಾರಿ ಅಪೇಕ್ಷಿಸಿದಲ್ಲಿ" ಎಂಬ ವಾಕ್ಯಂಶವನ್ನು ಅಲ್ಲಿ ಸೇರಿಸಲಾಗಿದೆ. ಹೀಗೆ ಯಾವುದೇ ವಿಷಯದಲ್ಲಿ ಸಂದೇಹ ಬಂದಾಗ ಸಂಬಂಧಪಟ್ಟ ಅಧಿಕಾರಿಯು ಔಷಧ ನಿಯಂತ್ರಣಾಧಿಕಾರಿಯನ್ನು ಸೂಕ್ತ ನಿರ್ದೇಶನ ಪಡೆಯಲು ಇದು ಸಹಾಯಕವಾಗಿದ್ದು ಇಲ್ಲಿ ಯಾವುದೇ ಹೊಸ ತಿದ್ದುಪಡಿ ಅವಶ್ಯವಿಲ್ಲವೆಂದು ನನ್ನ ಖಚಿತ ಅಭಿಪ್ರಾಯವಾಗಿದೆ.

ಮಾನ್ಯ ಸದಸ್ಯರಾದ* ವಿ.ಬಿ. ಗಾಂಧಿಯವರು ಎತ್ತಿರುವ ಪ್ರಶ್ನೆಗೂ ನಾನಿಲ್ಲಿ ವಿವರಣೆ ನೀಡಬಯಸುತ್ತಿದ್ದೇನೆ. ಔಷಧಗಳನ್ನು ಪರೀಕ್ಷೆಗಾಗಿ ಕಳುಹಿಸಿಕೊಡಬೇಕಾದ ಪ್ರಯೋಗಾಲಯವು ಕೆಲವೊಂದು ಸಂದರ್ಭಗಳಲ್ಲಿ ಬಹುದೂರದ ಪ್ರದೇಶಗಳಲ್ಲಿರುತ್ತದೆ. ಈ ಕಾರಣಕ್ಕಾಗಿ ಆ ಅವಧಿಯಲ್ಲಿ ಹತ್ತು ದಿನಗಳಿಂದ 30 ದಿನಗಳಿಗೆ ವಿಸ್ತರಿಸುವಂತೆ ರಾಜ್ಯಸಭೆಯಲ್ಲಿ ಸೂಚಿಸಲಾಯಿತು ಮತ್ತು ಈ ಸಲಹೆಯನ್ನು ನಾನು ಪರಿಗಣಿಸಿ ಅದನ್ನು 30 ದಿನಗಳಿಗೆ ನಿಗದಿಪಡಿಸಿದ್ದೇನೆ. ಗ್ರಾಮಾಂತರ ಪ್ರದೇಶಗಳಲ್ಲಿನ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ನಾನು ಈ ನಿರ್ಧಾರವನ್ನು ತೆಗೆದುಕೊಂಡಿದ್ದೇನೆ. ಹಾಗಾಗಿ ಇದಕ್ಕೆ ಮತ್ತೊಂದು ತಿದ್ದುಪಡಿಯನ್ನು ಅಂಗೀಕರಿಸುವುದು ಅಸಾಧ್ಯವಾಗಿದೆ.

ಔಷಧ ತಪಾಸಣಾಧಿಕಾರಿ ಪಣಾಮಕಾರಿಯಾಗಿ ಹಾಗೂ ದಕ್ಷತೆಯಿಂದ ಕಾರ್ಯ ನಿರ್ವಹಿಸುವಂತೆ ಮಸೂದೆಯಲ್ಲಿನ ಕೆಲವೊಂದು ವಿಧಿಗಳನ್ನು ರದ್ದುಪಡಿಸಲು ಸೂಚಿಸಿರುವ ತಿದ್ದುಪಡಿಯು ಅಂಗೀಕಾರರ್ಹವಾಗಿಲ್ಲ ಎಂಬುದನ್ನು ನಾನು ವಿನಮ್ರಳಾಗಿ ಹೇಳಬಯಸುತ್ತೇನೆ. ಔಷಧ ನಿಯಂತ್ರಣಾಧಿಕಾರಿಯ ತಪಾಸಣೆಯ ಕಾಲಕ್ಕೆ ಮ್ಯಾಜಿಸ್ಟ್ರೇಟರುಗಳಿಂದ ಯಾವುದೇ ವಿಧದ ಹಸ್ತಕ್ಷೇಪಕ್ಕೆ ಆಸ್ಪದ ಇರಕೂಡದೆಂಬ ದೃಷ್ಟಿಯಿಂದ ಈ ಕಾಯ್ದೆಯನ್ನು ರೂಪಿಸಲಾಗಿದೆ. ಆದರೆ ಅವರು ಕೈಗೊಳ್ಳುವ ಶೋಧ, ಕಾರ್ಯಾಚರಣೆ ಮತ್ತು ಅಕ್ರಮ ಔಷಧಿಗಳನ್ನು ವಶಪಡಿಸುವ ಪ್ರಕ್ರಿಯೆ ಅಪರಾದ ದಂಡ ಸಂಹಿತೆಯು ವಿಧಿಸಿರುವ ವಿಧಿ ವಿಧಾನಗಳಿಗೆ ಅನುಗುಣವಾಗಿಯೇ ನಡೆಯಬೇಕಾಗುತ್ತದೆ. ಪ್ರಸ್ತುತ ವಿಧೇಯಕದಲ್ಲಿ ಹೊಸದಾಗಿ ಸೇರಿಸಿರುವ 22(2) ಸೆಕ್ಷನ್‌ನಲ್ಲಿ ಈ ಅಂಶ ನಿಮಗೆ ಸ್ಪಷ್ಟವಾಗುತ್ತದೆ. ರಾಜ್ಯಸಭೆಯಲ್ಲೂ ಪ್ರಶ್ನೆ ಎತ್ತಲಾಗಿದ್ದು ಮೂಲ ಕಾಯ್ದೆಯ 25ನೇ ಸೆಕ್ಷನ್‌ನಲ್ಲಿ ಕಲ್ಪಿಸಿರುವ ರಕ್ಷಣಾತ್ಮಕ ಕ್ರಮಗಳ ಹಿನ್ನೆಲೆಯಲ್ಲಿ ಹೊಸ ತಿದ್ದುಪಡಿಯು ನಿರರ್ಥಕವಾಗುವುದೆಂದು ನಾನು ಈಗಾಗಲೇ ಸ್ಪಷ್ಟಪಡಿಸಿದ್ದೇನೆ. ಒಂದು ವೇಳೆ ಹೊಸ

---

'ಹತ್ತು ದಿನಗಳ' ಬದಲಾಗಿ 'ಇಪ್ಪತ್ತು ದಿನಗಳು' ಎಂದು ಶ್ರೀ ವಿ.ಬಿ.ಗಾಂಧಿ ಅವರು ಮಂಡಿಸಿದ ತಿದ್ದುಪಡಿಗೆ ಉತ್ತರಿಸುತ್ತಾ.

ತಿದ್ದುಪಡಿಯನ್ನು ಅಂಗೀಕರಿಸಿದಲ್ಲಿ ಕಾಯ್ದೆಯ ಮೂಲ ಉದ್ದೇಶಕ್ಕೆ ಭಂಗ ಉಂಟಾಗುವ ಸಾಧ್ಯತೆ ಇದೆ. ಹಾಗಾಗಿ ಮಾನ್ಯ ಸದಸ್ಯರು ತಮ್ಮ ತಿದ್ದುಪಡಿಯನ್ನು ಹಿಂತೆಗೆದುಕೊಳ್ಳಬೇಕೆಂದು ಆಗ್ರಹಪೂರ್ವಕವಾಗಿ ಕೋರುತ್ತಿದ್ದೇನೆ.

ನಾನು ಆರಂಭದ ಪ್ರಸ್ತಾವಿಕ ಭಾಷಣದಲ್ಲಿ ಹೇಳಿರುವಂತೆ ನಕಲಿ ಔಷಧಗಳ ಉತ್ಪಾದನೆ ಮತ್ತು ಮಾರಾಟ ಈಚಿನ ವರ್ಷಗಳಲ್ಲಿ ಮಿತಿಮೀರಿವೆ. ಈ ಹಿನ್ನೆಲೆಯಲ್ಲಿ ಕಾಯ್ದೆಯಲ್ಲಿ ಸೂಚಿಸಿರುವ ದಂಡನೆಯನ್ನು ವಿಸ್ತರಿಸುವಂತೆ ರಾಜ್ಯ ಸರ್ಕಾರಗಳು ಮತ್ತು ಸಾರ್ವಜನಿಕರು ಸತತವಾಗಿ ಒತ್ತಾಯ ಮಾಡುತ್ತಲೇ ಇದ್ದಾರೆ. ಹಾಗಾಗಿ ಶಿಕ್ಷೆಯ ಅವಧಿಯನ್ನು ಮೂರು ವರ್ಷಗಳಿಂದ ಎರಡು ವರ್ಷಗಳಿಗೆ ತಗ್ಗಿಸಬೇಕೆಂಬ ಬೇಡಿಕೆಯನ್ನು ಪರಿಶೀಲಿಸಲು ಅಗತ್ಯವೇ ಇಲ್ಲವೆಂದು ನಾನು ಭಾವಿಸಿದ್ದೇನೆ.* 27ನೇ ಸೆಕ್ಷನ್ ಅನ್ವಯ ದಂಡವನ್ನು ವಿಸ್ತರಿಸುವ ಈಗಿನ ಪ್ರಸ್ತಾಪವು ಅಂದರೆ ಶಿಕ್ಷೆಯ ಅವಧಿಯನ್ನು ಮೂರು ವರ್ಷಗಳ ಅವಧಿಗೆ ವಿಸ್ತರಿಸುವ ತಿದ್ದುಪಡಿ ಅಪರಾಧ ದಂಡ ಸಂಹಿತೆಯ ಸಂಬಂಧಪಟ್ಟ ಸೆಕ್ಷನ್‌ನ ಅರ್ಥವ್ಯಾಪ್ತಿಗೆ ಅನುಗುಣವಾಗಿಯೇ ಇದೆ. ಹೀಗಾಗಿ ಮಾನ್ಯ ಸದಸ್ಯರು* ತಿದ್ದುಪಡಿಯನ್ನು ಅಂಗೀಕರಿಸಿದಲ್ಲಿ ಈ ಕಾಯ್ದೆಯ ಧ್ಯೇಯವನ್ನೇ ವಿಫಲಗೊಳಿಸಿದಂತಾಗುವುದು. ಆದ್ದರಿಂದ ಈ ತಿದ್ದುಪಡಿಯನ್ನು ಅಂಗೀಕರಿಸುವುದು ಅಸಾಧ್ಯವಾಗಿದೆ.

ಈ ಸೆಕ್ಷನ್ ಅನ್ವಯ ದಂಡವನ್ನು ಹೆಚ್ಚಿಸುವ ಕ್ರಮವು ಅಪರಾಧಿಗಳಿಗೆ ಯಾವುದೇ ರೀತಿಯಲ್ಲಿ ಮಾರಕವಾಗುವುದಿಲ್ಲ. ಬದಲಾಗಿ ಇಂತಹ ಸಮಾಜ ವಿರೋಧಿ ಕೃತ್ಯಗಳಲ್ಲಿ ತೊಡಗದಂತೆ ಅವರಲ್ಲಿ ಅಂಜಿಕೆಯನ್ನು ಮೂಡಿಸಲು ಅದು ನೆರವಾಗುವುದು ಎಂದು ನಾನು ಭಾವಿಸಿದ್ದೇನೆ.

---

* ಎರಡು ವರ್ಷಗಳ ಬದಲಾಗಿ ಮೂರು ವರ್ಷಗಳು ಎಂದು ಶ್ರೀ.ವಿ.ಬಿ.ಗಾಂಧಿಯವರು ಮಂಡಿಸಿದ ತಿದ್ದುಪಡಿಗೆ ಉತ್ತರಿಸುತ್ತಾ.

* ವಿಧೇಯಕಕ್ಕೆ ತಿದ್ದುಪಡಿ ಸೂಚಿಸಿ ನಂತರ ಅಂಗೀಕರಿಸಲಾಯಿತು.

## 19. ಔಷಧಗಳು ಮತ್ತು ಕ್ಷಿಪ್ರ ಪರಿಹಾರ ಔಷಧಗಳ(ಆಕ್ಷೇಪಾರ್ಹ ಜಾಹೀರಾತು) ವಿಧೇಯಕ *

ಈ ವಿಧೇಯಕಕ್ಕೆ ಮೀಸಲಿಟ್ಟಿರುವ ಕಾಲಾವಕಾಶವು ತೀರಾ ಪರಿಮಿತವಾಗಿರುವುದರಿಂದ ಈ ವಿಷಯದಲ್ಲಿ ಸದನದ ಹೆಚ್ಚು ಸಮಯವನ್ನು ತೆಗೆದುಕೊಳ್ಳಲು ನಾನು ಇಚ್ಛಿಸುವುದಿಲ್ಲ. ಔಷಧಗಳ ನಿಯಂತ್ರಣಕ್ಕಾಗಿ ನಾನು ಈ ದಿನ ಸದನದ ಮುಂದೆ ಮಂಡಿಸುತ್ತಿರುವ ಈ ವಿಧೇಯಕವನ್ನು ಯಾರೂ ವಿರೋಧಿಸುವುದಿಲ್ಲ. ರಾಜ್ಯಸಭೆಯಲ್ಲಿ ಈ ವಿಧೇಯಕಕ್ಕೆ ದೊರೆತ ರೀತಿಯ ಮೆಚ್ಚುಗೆ ಹಾಗೂ ಬೆಂಬಲಸಿಗುತ್ತದೆ ಇಲ್ಲೂ ಎಂಬ ಸಂಪೂರ್ಣ ಭರವಸೆ ನನಗಿದೆ. ಈ ವಿಧೇಯಕದ ಧ್ಯೇಯೋದ್ದೇಶಗಳನ್ನು ಅದರ ಪ್ರಸ್ತಾವನೆಯಲ್ಲಿ ವಿವರಿಸುವುದರಿಂದ ಈ ಕುರಿತು ನಾನು ಹೆಚ್ಚೇನೂ ಹೇಳುವ ಅಗತ್ಯವಿಲ್ಲ. ಆದರೆ ಈಚಿನ ವರ್ಷಗಳಲ್ಲಿ ಕೆಲವೊಂದು ವ್ಯಾಧಿಗಳಲ್ಲಿ ಪವಾಡ ಸದೃಶ್ಯ ಪರಿಣಾಮ ಬೀರುತ್ತವೆ ಎಂಬ ವಿಚಾರ ವೈಖರಿಯೊಂದಿಗೆ ಆಕ್ಷೇಪಾರ್ಹ ಜಾಹೀರಾತುಗಳ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿರುವುದು ನನಗೆ ತೀವ್ರ ಕಳವಳ ಉಂಟು ಮಾಡಿದೆ. ಈ ಜಾಹೀರಾತುಗಳು ಅಸಭ್ಯವಾಗಿರುವುದು ಮಾತ್ರವಲ್ಲ ಅತ್ಯಂತ ಅಪಾಯಕಾರಿಯೂ ಆಗಿದೆ. ಅಮಾಯಕ ಜನಸಮುದಾಯವನ್ನು ಶೋಷಿಸಲು ನೀತಿ ಸಿದ್ಧಾಂತಗಳಿಲ್ಲದ ನಿರ್ಲಜ್ಜ ಜನರು ಕೈಗೊಂಡಿರುವ ಮಾರ್ಗ ಇದು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೂಪಿಸಿರುವ ಔಷಧ ನಿಯಂತ್ರಣ ಕಾಯ್ದೆಗಳಲ್ಲಿ ಕೆಲವೊಂದು ನಿರ್ದಿಷ್ಟ ವ್ಯಾಧಿಗಳನ್ನು ಪ್ರತಿಬಂಧಿಸುತ್ತದೆ ಅಥವಾ ಗುಣಪಡಿಸುತ್ತದೆ ಎಂದು ಪ್ರತಿಪಾದಿಸುವ ಅಥವಾ ಅಂತಹ ಅರ್ಥ ಬರುವಂತೆ ಇರುವ ಲೇಬಲ್ ಅಥವಾ ಮಾಹಿತಿ ಇರುವ ಯಾವುದೇ ಔಷಧವನ್ನು ಆಮದು ಮಾಡದಂತೆ, ತಯಾರಿಸದಂತೆ ಮತ್ತು ಮಾರಾಟ ಮಾಡದಂತೆ ತಡೆಹಿಡಿಯುವ ವಿಧಿಯೊಂದಿದೆ. ಆದರೆ ಈ ವಿಧಿಯು ಔಷಧ ನಿಯಂತ್ರಣದ ಉದ್ದೇಶವನ್ನು ಸಮರ್ಪಕವಾಗಿ ಈಡೇರಿಸುವಲ್ಲಿ ಅಸಮರ್ಥವಾಗಿದೆ.

ಈ ವಿಧೇಯಕಕ್ಕೆ ಕೆಲವೊಂದು ತಿದ್ದುಪಡಿಗಳನ್ನು ಸೂಚಿಸಿ ಸದಸ್ಯರು ಸೂಚನೆಗಳನ್ನು ಕಳುಹಿಸಿದ್ದಾರೆ. ಆದರೆ ಈ ತಿದ್ದುಪಡಿಗಳನ್ನು ಅಂಗೀಕರಿಸಲು ಸಾಧ್ಯವಾಗಿಲ್ಲ. ಅವುಗಳಲ್ಲಿ ಅನೇಕ ತಿದ್ದುಪಡಿಗಳು ವ್ಯಾವಹಾರಿಕವಾಗಿಲ್ಲ. ಈ ವಿಷಯದಲ್ಲಿ ನಾನು ಕಾನೂನು ಖಾತೆಯೊಂದಿಗೆ ಸಮಾಲೋಚನೆ ನಡೆಸಿದ್ದು, ಪ್ರಸ್ತಾಪಿತ ತಿದ್ದುಪಡಿಗಳು ಮೂಲ ಕಾಯ್ದೆಯ ವಿಧಿಗಳಿಗಿಂತ ಅದರ ಅರ್ಥ ವ್ಯಾಪ್ತಿಯಲ್ಲಿ ಭಿನ್ನವಾಗಿಲ್ಲ ಎಂದು ಅದು ಅಭಿಪ್ರಾಯ ಪಟ್ಟಿದೆ. ಒಂದೆರಡು ತಿದ್ದುಪಡಿಗಳು ಮಾತ್ರ ಇದಕ್ಕೆ ಅಪವಾದವಾಗಿವೆ. ಈ ತಿದ್ದುಪಡಿಗಳನ್ನು ಚರ್ಚೆಗೆ ಎತ್ತಿಕೊಳ್ಳುವಾಗ ನಾನು ಅದರ ಬಗ್ಗೆ ಮಾತನಾಡುತ್ತೇನೆ.

ಒಟ್ಟಾರೆಯಾಗಿ ಈ ಸಣ್ಣ ವಿಧೇಯಕಕ್ಕೆ ಸದನದ ಬಹುತೇಕ ಸದಸ್ಯರ ಬೆಂಬಲ ಲಭಿಸಿರುವುದು ನನಗೆ ಸಂತಸದ ವಿಷಯವಾಗಿದೆ. ಕೆಲವೊಂದು ಸದಸ್ಯರು ಈ ವಿಷಯದಲ್ಲಿ ಎತ್ತಿದ ಆಕ್ಷೇಪಗಳಿಗೆ ಉತ್ತರ ನೀಡುವುದರ ಹೊರತಾಗಿ ಬೇರೆ ಏನನ್ನು ಈ ಸಂದರ್ಭದಲ್ಲಿ

---

* ಕೆಲವೊಂದು ವ್ಯಾಧಿಗಳಿಗೆ ಪವಾಡ ಸದೃಶ್ಯ ಪರಿಹಾರ ಎಂಬ ಪ್ರಚಾರ ವೈಖರಿಯೊಂದಿಗೆ ಬರುವ ಜಾಹೀರಾತುಗಳನ್ನು ನಿಷೇಧಿಸಲು ಮತ್ತು ಅಂತಹ ಔಷಧಗಳನ್ನು ನಿಯಂತ್ರಿಸುವ ವಿಧೇಯಕವನ್ನು ಮಂಡಿಸುತ್ತಾ,(ಲೋಕಸಭೆ ಚರ್ಚೆ ಏಪ್ರಿಲ್ 26 1954, ಸಿಸಿ 5734 - 35 ಮತ್ತು 5765 - 87).

ಮಾತನಾಡಲು ಬಯಸುವುದಿಲ್ಲ. ಜಾಹೀರಾತುಗಳ ಬಗ್ಗೆ ಹೇಳುವುದಾದರೆ ಅಂತಹ ಕೆಲವು ಜಾಹೀರಾತುಗಳ ಪ್ರತಿಗಳು ನನ್ನ ಬಳಿಯಲ್ಲೇ ಇದ್ದು, ಈ ಬಗ್ಗೆ ನನಗೆ ಯಾರೂ ಹೆಚ್ಚು ವಿವರಿಸಿ ಹೇಳಬೇಕಾದ ಅಗತ್ಯವಿಲ್ಲ. ಅವು ಎಷ್ಟು ಭಯಾನಕವಾಗಿವೆ ಎಂಬುದನ್ನು ಈ ಪ್ರತಿಗಳೇ ಸಾರಿ ಹೇಳುತ್ತವೆ. ಇಂತಹ ಪಿಡುಗನ್ನು ನಿವಾರಿಸಲು ನಾವು ಕೆಲವು ಬಿಗಿ ಕ್ರಮಗಳನ್ನು ಕೈಗೊಳ್ಳುವುದು ಅನಿವಾರ್ಯವಾಯಿತು. ಈ ವಿಧೇಯಕವನ್ನು ಬಹುತೇಕ ಎಲ್ಲ ರಾಜ್ಯಗಳು ಸ್ವಾಗತಿಸಿವೆ. ಅವುಗಳೊಂದಿಗೆ ಪ್ರಪ್ರತ್ಯೇಕವಾಗಿಯೇ ಸಮಾಲೋಚಿಸಿಯೇ ನಾನು ಈ ವಿಧೇಯಕ ರೂಪಿಸಿದ್ದೇನೆ. ಜಾಹೀರಾತುಗಳನ್ನು ನಿಯಂತ್ರಿಸುವ ಕ್ರಮವು ಪತ್ರಿಕೆಗಳ ಸ್ವಾತಂತ್ರ್ಯಗಳ ಮೇಲೆ ನಡೆಸುವ ಅತಿಕ್ರಮಣವಾಗಿದೆ ಎಂದು ಕೆಲ ಸದಸ್ಯರು ಟೀಕಿಸಿದ್ದಾರೆ. ಆದರೆ ಈ ಕ್ರಮವನ್ನು ಸ್ವತಃ ಪತ್ರಿಕೆಗಳೇ ಟೀಕಿಸಿಲ್ಲ. ಆದರೆ ಈ ಟೀಕೆಯಲ್ಲಿ ಯಾವುದೇ ಹುರುಳಿಲ್ಲ. ಮಾನ್ಯ ಸದಸ್ಯರು ಈ ವಿಧೇಯಕದ ವ್ಯಾಪ್ತಿಗೆ ಬರುವ ಜಾಹೀರಾತುಗಳು ಯಾವ ಮಾದರಿಯವು ಎಂಬುದನ್ನು ಒಂದು ಕ್ಷಣ ಗಮನಿಸಬೇಕು. ಈ ವಿಧೇಯಕದ ವ್ಯಾಪ್ತಿಯು ಅತ್ಯಂತ ಸೀಮಿತವಾಗಿದೆ. ಅದನ್ನು ಗಮನಿಸಿದರೆ ಮಾನ್ಯ ಸದಸ್ಯರಿಗೆ ತಾನಾಗಿಯೇ ತಿಳಿಯುತ್ತದೆ. ಈ ಕಾಯ್ದೆಯ 2ನೇ ಖಂಡದ (ಎ) ಉಪಖಂಡದಲ್ಲಿ ಜಾಹೀರಾತಿಗೆ ನೀಡಲಾಗಿರುವ ವ್ಯಾಖ್ಯೆಯು " ಯಾವುದೇ ನೋಟೀಸು ಸುತ್ತೋಲೆ, ಲೇಬಲ್, ಹೊದಿಕೆ (ರ್‍ಯಾಪರ್) ಅಥವಾ ಇತರ ಯಾವುದೇ ದಾಖಲೆ ಮತ್ತು ಮೌಖಿಕವಾಗಿ ಮಾಡುವ ಪ್ರಕಟಣೆ ಅಥವಾ ಬೆಳಕು, ಧ್ವನಿ ಅಥವಾ ಹೊಗೆಯನ್ನು ಉಗುಳುವ ಯಾವುದೇ ಸಾಧನಗಳಿಗೆ ಅನ್ವಯಿಸುತ್ತದೆ" ಹಾಗಾಗಿ ಅದು ಪತ್ರಿಕೆಗಳಿಗೆ ಮಾತ್ರವೇ ಅನ್ವಯವಾಗುವ ನಿರ್ಬಂಧವಲ್ಲ. ಇಂತಹ ನಿರ್ಬಂಧಗಳನ್ನು ವಿಧಿಸುವುದರಿಂದ ಪತ್ರಿಕೆಗಳ ಮಟ್ಟವು ಸುಧಾರಿಸುವುದು ಮತ್ತು ಮಾನವ ಸಮುದಾಯಕ್ಕೆ ಅವಹೇಳನಕಾರಿಯಾಗುವ ಜಾಹೀರಾತುಗಳನ್ನು ನಿರ್ಬಂಧಿಸಿದರೆ ಅದರಿಂದ ಪತ್ರಿಕೆಗಳ ಘನತೆ ಹೆಚ್ಚುವುದು. ಈ ಕಾರಣಕ್ಕಾಗಿ ಪತ್ರಿಕೆಗಳ ಸಂಪಾದಕರೂ ತಾವಾಗಿಯೇ ಇದನ್ನು ಸ್ವಾಗತಿಸುತ್ತಾರೆ ಎಂದು ನಾನು ಖಚಿತವಾಗಿ ನಂಬಿದ್ದೇನೆ.

ನಾನು ಆಹಾರ ಕಲಬೆರಕೆ ನಿಯಂತ್ರಣ ವಿಧೇಯಕಕ್ಕೆ ಆದ್ಯತೆ ನೀಡಿಲ್ಲ. ಬದಲಾಗಿ ಔಷಧ ನಿಯಂತ್ರಣ ವಿಧೇಯಕವನ್ನು ತಂದಿದ್ದೇನೆ ಎಂದು ನನ್ನ ಮೇಲೆ ಆರೋಪ ಮಾಡಲಾಗಿದೆ. ನಾನು ಆಹಾರ ಕಲಬೆರಕೆ ನಿಯಂತ್ರಣಕ್ಕೆ ಅತ್ಯಂತ ಹೆಚ್ಚಿನ ಒತ್ತು ನೀಡಿದ್ದೇನೆ ಎಂಬುದನ್ನು ನಾನು ತಮ್ಮ ಮುಂದೆ ಅತ್ಯಂತ ವಿನಮ್ರಳಾಗಿ ಅರಿಕೆ ಮಾಡಿಕೊಳ್ಳುತ್ತೇನೆ. ಆದರೆ ಲೋಕಸಭೆಯ ಆದ್ಯತೆಗಳನ್ನು ನಿರ್ಧರಿಸುವವಳು ನಾನಲ್ಲ. ಯಾವ ವಿಧೇಯಕ ಮೊದಲು ಬರಬೇಕು ಎಂದು ನಿರ್ಧರಿಸುವುದು ಸದನ ಸಮಿತಿ. ಹಾಗಾಗಿ ಈ ಆರೋಪವನ್ನು ನನ್ನ ಮೇಲೆ ಹೊರಿಸುವುದು ಸರಿಯಲ್ಲ.

ಮಾನ್ಯ ಸದಸ್ಯರೊಬ್ಬರು ವಿದೇಶಿ ಔಷಧಗಳ ಪ್ರಶ್ನೆಯನ್ನು ಎತ್ತಿದ್ದಾರೆ. ಈಗ ಆಮದು ಮಾಡಿಕೊಳ್ಳಲು ಅನುಮತಿ ನೀಡಲಾಗುವುದಿಲ್ಲ. ಈಗ ಅಂದರೆ ವಿದೇಶಿ ಔಷಧಿಗಳ ನಿಯಂತ್ರಣ ಸಂಪೂರ್ಣವಾಗಿ ನನ್ನ ಕೈಯಲ್ಲಿದೆ.

ವೈದ್ಯರುಗಳಿಗೆ ರಿಯಾಯ್ತಿ ಕಲ್ಪಿಸಿಕೊಡುವ ಸಲುವಾಗಿ ಅದಕ್ಕೆ ಸಂಬಂಧಿಸಿದ ಖಂಡವನ್ನೇ ಸಂಪೂರ್ಣವಾಗಿ ರದ್ದುಪಡಿಸಬೇಕೆಂದು ಕೆಲವು ಸದಸ್ಯರು ಸೂಚಿಸಿದ್ದಾರೆ. ರಿಜಿಸ್ಟರ್ಡ್ ಮೆಡಿಕಲ್ ಪ್ರಾಕ್ಟಿಷನರ್‌ಗಳನ್ನು ಈ ಕಾಯ್ದೆಯ ವ್ಯಾಪ್ತಿಯಿಂದ ವಿನಾಯ್ತಿ ನೀಡಲು ಇರುವ ಕಾರಣವೆಂದರೆ

ಅವರೆಲ್ಲರೂ ಔಷಧಗಳ ಗುಣಮಟ್ಟ ಕಾಯುವ ವಿಚಾರದಲ್ಲಿ ಆಸಕ್ತಿ ಹೊಂದಿದವರಾಗಿದ್ದು ವಿವೇಕಶಾಲಿಗಳು ಎಂಬುದಕ್ಕಾಗಿ. ನೋಂದಣಿ ಹೊಂದಿದ ವೈದ್ಯರಲ್ಲಿ ಮತ್ತು ವೈದ್ಯಕೀಯ ವೃತ್ತಿಯ ಹೊಣೆ ಹೊತ್ತವರಲ್ಲಿ ನಾವು ವಿಶ್ವಾಸ ಇಡಲೇಬೇಕು. ವಿಧೇಯಕದಲ್ಲಿ ಸೂಚಿತವಾದ ಯಾವುದೇ ವ್ಯಾಧಿಯ ಚಿಕಿತ್ಸೆಯಲ್ಲಿ ಒಂದು ನಿರ್ದಿಷ್ಟ ಔಷಧದ ಪರಿಣಾಮಕಾರಿತ್ವವನ್ನು ತಿಳಿದುಕೊಳ್ಳಬೇಕಾದಲ್ಲಿ ವೈದ್ಯ ವೃತ್ತಿಯನ್ನು ಅನುಸರಿಸುವ ಯಾರೇ ಆದರೂ ಔಷಧಗಳನ್ನು ವೈಜ್ಞಾನಿಕವಾಗಿ ಪರೀಕ್ಷಿಸಲು ಅದನ್ನು ಪ್ರಯೋಗಾಲಯಕ್ಕೆ ಕಳುಹಿಸಿಕೊಡುವ ಹಕ್ಕನ್ನು ಹೊಂದಿಯೇ ಇರುತ್ತಾರೆ. ಅದೇ ರೀತಿ ಯಾವುದೇ ಒಂದು ಔಷಧವನ್ನು ಮಾರಾಟಕ್ಕೆ ತೆಗೆದುಕೊಳ್ಳುವ ಮುನ್ನ ಔಷಧ ಮಾರಾಟಗಾರರು ನಿರ್ದಿಷ್ಟ ಔಷಧ ಏನೇನು ಗುಣಗಳಿವೆ ಎಂದು ತಿಳಿದುಕೊಳ್ಳುವುದು ಅಗತ್ಯವಾಗಿದೆ. ಔಷಧ ಮಾರಾಟಗಾರರಿಗೆ ಕಳುಹಿಸಿಕೊಡುವ ಜಾಹೀರಾತುಗಳು ನಿರ್ದಿಷ್ಟ ಔಷಧದಲ್ಲಿ ಅಡಕವಾಗಿರುವ ಗುಣಲಕ್ಷಣ ಮತ್ತು ಅದು ಒಳಗೊಂಡಿರುವ ಕ್ರಮಗಳ ಬಗ್ಗೆ ತಿಳುವಳಿಕೆ ಮೂಡಿಸುವ ಉದ್ದೇಶ ಹೊಂದಿರುತ್ತದೆ. ಜಾಹೀರಾತುಗೊಳಿಸಿದ ಔಷಧಗಳು ಅವುಗಳಲ್ಲಿ ಇದೆ ಎಂದು ಹೇಳಲಾದ ಗುಣಲಕ್ಷಣ ಮತ್ತು ಔಷಧ ದ್ರವ್ಯಗಳನ್ನು ಒಳಗೊಂಡಿದ್ದರೆ ಅದಕ್ಕೆ ನನ್ನ ಅಭ್ಯಂತರ ಇಲ್ಲ. ಆದರೆ ಅವು ಹಾಗಿರುವುದಿಲ್ಲ. ಹಾಗಾಗಿಯೇ ಅವು ಆರೋಗ್ಯಕ್ಕೆ ಅತ್ಯಂತ ಅಪಾಯಕಾರಿಯಾಗಿವೆ. ಇಂತಹ ಜಾಹೀರಾತುಗಳಿಂದ ಅಮಾಯಕ ಜನರು ಮೋಸ ಹೋಗುತ್ತಾರೆ. ಅದರಲ್ಲೂ ಸ್ವಯಂ ಚಿಕಿತ್ಸೆಯ ಪದ್ಧತಿಯನ್ನು ಏನಾದರೂ ಮಾಡಿ ನಿಲ್ಲಿಸಬೇಕು.

ಕಾನೂನನ್ನು ಅತಿಕ್ರಮಿಸುವ ವೈದ್ಯರ ವಿರುದ್ಧ ಭಾರತೀಯ ವೈದ್ಯಕೀಯ ಕಾಯ್ದೆಯ ಪ್ರಕಾರ ನಾವು ಕ್ರಮ ಕೈಗೊಳ್ಳಬಹುದಾಗಿದೆ. ಈ ಸಮಸ್ಯೆಯ ನಿಜವಾದ ಮೂಲವೆಂದರೆ ಇಂತಹ ಜಾಹೀರಾತಿನ ಔಷಧಗಳಿಗೆ ಜನರು ಮುಗಿಬೀಳುವುದು. ಜನರಿಗೆ ಒದಗಿಸಬೇಕಾದ ವೈದ್ಯಕೀಯ ಸವಲತ್ತನ್ನು ನಾವು ಒದಗಿಸದಿರುವುದೇ ಅದಕ್ಕೆ ಕಾರಣವಾಗಿದೆ. ಈ ಪ್ರಶ್ನೆಯನ್ನು ಕೆಲ ಸದಸ್ಯರು ಎತ್ತಿದ್ದಾರೆ. ಈ ನಿಟ್ಟಿನಲ್ಲಿ ನಾವು ಶಕ್ತಿಮೀರಿ ಪ್ರಯತ್ನಿಸುತ್ತಿದ್ದೇವೆ. ಈ ಸಂಬಂಧದಲ್ಲಿ ಔಷಧ ಉದ್ಯಮ ಸಮಿತಿಯ ವರದಿಯನ್ನು ಎದುರು ನೋಡಲಾಗುತ್ತಿದ್ದು, ಕೆಲವೊಂದು ಔಷಧಿಗಳನ್ನು ನಮ್ಮ ದೇಶದಲ್ಲೇ ತಯಾರಿಸುವ ನಿಟ್ಟಿನಲ್ಲಿ ಸರಕಾರ ಪ್ರಯತ್ನಿಸುತ್ತಿದೆ. ದೇಶೀಯವಾಗಿಯೇ ಔಷಧಗಳನ್ನು ಉತ್ಪಾದಿಸಿದರೆ ಕಾಲಕ್ರಮದಲ್ಲಿ ಔಷಧಿಗಳು ಅಗ್ಗವಾಗುವುವು. ಹಾಗೂ ಜನತೆಗೆ ಸುಲಭವಾಗಿ ಲಭ್ಯವಾಗುವುವು. ಈ ಯೋಜನೆಯಂತೆ ಪೆನ್ಸಿಲಿನ್ ಕಾರ್ಖಾನೆಯು ಈ ವರ್ಷದಿಂದಲೇ ಕಾರ್ಯಾರಂಭ ಮಾಡಲಿದೆ. ಇದೇ ರೀತಿ ಡಿ.ಡಿ.ಟಿ ಕಾರ್ಖಾನೆಯು ಉತ್ಪಾದನೆಯನ್ನು ಪ್ರಾರಂಭಿಸಿದೆ. ಈ ನಿಟ್ಟಿನಲ್ಲಿ ನಾವೇನು ಕೈ ಕಟ್ಟಿ ಕುಳಿತಿಲ್ಲ ಎಂಬುದಕ್ಕೆ ಇದೇ ನಿದರ್ಶನವಾಗಿದೆ.

ಯಾವುದೇ ಕಾಯಿದೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರಬೇಕೆಂದು ಮಾನ್ಯ ಸದಸ್ಯರು ಹೇಳಿರುವುದನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಯಾವುದೇ ಕಾಯಿದೆ ಅನ್ವಯ ಯಾರೇ ಆದರೂ ನ್ಯಾಯ ಬಾಹಿರವಾಗಿ ದಂಡನೆಗೆ ಗುರಿಯಾದರೆ ಅಂತಹವರನ್ನು ರಕ್ಷಿಸಲು

---

** ಪವಾಡ ಸದೃಶ್ಯ ಪರಿಣಾಮಗಳನ್ನು ಬೀರುತ್ತದೆ ಎಂದು ಹೇಳಿಕೊಂಡು ವೃದ್ಯವೃತ್ತಿಯ್ನು ಅವಲಂಬಿಸಿರುವವರನ್ನು ಪ್ರತಿಬಂಧಿಸಬೇಕು ಎಂಬ ಶ್ರೀ ದುಲೀಕರ್ ಅವರು ತಿದ್ದು ಪಡಿಗೆ ಉತ್ತರ ನೀಡುತ್ತಾ

ಕೂಡಾ ಕಾಯ್ದೆಯಲ್ಲಿ ಅವಕಾಶವಿರಬೇಕೆಂಬ ಕೆಲ ಸದಸ್ಯರ ಅಭಿಪ್ರಾಯವನ್ನು ನಾನು ಸಮರ್ಥಿಸುತ್ತೇನೆ. ಕಾಯ್ದೆಯ 16ನೇ ಖಂಡದನ್ವಯ ನಿಯಮಾವಳಿಗಳನ್ನು ರೂಪಿಸಲು ಅಧಿಕಾರ ಕಲ್ಪಿಸಲಾಗಿದೆ. ಇನ್ನು ಕಿರುಹೊತ್ತಿಗೆಗಳ ವಿಷಯದಲ್ಲಿ ಕೆಲವೊಂದು ಅಮೂಲ್ಯವಾದ ಸಲಹೆಗಳನ್ನು ಸದಸ್ಯರು ನೀಡಿದ್ದಾರೆ. ಅಂತಹ ಎಲ್ಲ ಉಪಯುಕ್ತ ಸಲಹೆಗಳನ್ನು ಈ ವಿಧೇಯಕದಲ್ಲಿ ಸೇರಿಸಲು ನಾವು ಪ್ರಯತ್ನಿಸುತ್ತೇವೆ.

ಚರ್ಚೆಯ ಕಾಲಕ್ಕೆ ಮಾನ್ಯ ಸದಸ್ಯರು ಎತ್ತಿರುವ ಎಲ್ಲ ಪ್ರಶ್ನೆಗಳಿಗೆ ನಾನು ಉತ್ತರ ನೀಡಿದ್ದೇನೆ ಎಂದು ಭಾವಿಸಿದ್ದೇನೆ. ಈ ಸಂದರ್ಭದಲ್ಲಿ ಈ ವಿಧೇಯಕಕ್ಕೆ ಬೆಂಬಲ ನೀಡಿದ ಎಲ್ಲ ಸದಸ್ಯರನ್ನು ನಾನು ಅಭಿನಂದಿಸುತ್ತೇನೆ. ನಕಲಿ ಔಷಧಗಳ ಹಿಡುಗಿನ ವಿರುದ್ಧ ಕ್ರಮ ಕೈಗೊಳ್ಳಲು ಸಾಧ್ಯವಾಗುವಂತೆ ಆದಷ್ಟು ಬೇಗ ಈ ಶಾಸನವು ಕಾಯ್ದೆ ಪುಸ್ತಕದಲ್ಲಿ ಸೇರ್ಪಡೆಯಾಗಲಿ ಎಂದು ನಾನು ಆಶಿಸುತ್ತೇನೆ.

-------

ಯಾವ ಎರಡು ವಿಧೇಯಕಗಳು ಏಕರೂಪವಾಗಿರುವುದಿಲ್ಲ. ಒಂದು ವಿಧೇಯಕದಲ್ಲಿ ಶಿಕ್ಷೆ ಮತ್ತು ದಂಡ * ಎರಡನ್ನೂ ಸೇರಿಸಿರುವುದರಿಂದ ಈ ವಿಧೇಯಕದಲ್ಲೂ ಅವುಗಳನ್ನು ಸೇರಿಸಬೇಕೆಂಬ ವಾದವು ಇಲ್ಲಿ ಸಿಂಧುವಲ್ಲ. ದಂಡ ವಿಧಿಸುವ ಅಧಿಕಾರವನ್ನು ಮ್ಯಾಜಿಸ್ಟ್ರೇಟರ ವಿವೇಚನೆಗೆ ಬಿಡುವುದು ಒಳ್ಳೆಯದು ಎಂಬುದು ನನ್ನ ಅಭಿಪ್ರಾಯವಾಗಿದೆ. ಹಾಗಾಗಿ ಯಾವುದೇ ಅಪರಾಧದಲ್ಲಿ ದಂಡದೊಂದಿಗೆ ಸಜೆಯನ್ನು ವಿಧಿಸಬೇಕೆ ? ಅಥವಾ ಸಜೆಯನ್ನು ಮಾತ್ರ ವಿಧಿಸಬೇಕೆ ? ಅಥವಾ ದಂಡವನ್ನು ಮಾತ್ರ ವಿಧಿಸಬೇಕೆ ? ಎಂಬುದು ನ್ಯಾಯಾಧೀಶರ ವಿವೇಚನೆಗೆ ಬಿಡಬೇಕು. ಹಾಗಾಗಿ ಈ ವಿಧೇಯಕವನ್ನು ಈ ರೂಪದಲ್ಲಿ ಇರಿಸುವುದು ಒಳಿತೆಂದು ನಾನು ಭಾವಿಸುತ್ತೇನೆ.

'ಶಿಕ್ಷಿತ' ಎಂಬ ಪರಿಭಾಷೆಯು 'ಶಿಕ್ಷಾರ್ಹ' ಎಂಬುದಾಗಿ ಬದಲಾಯಿಸಬೇಕೆಂಬ ಪ್ರಸ್ತಾಪಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಒಂದು ಕಾಯ್ದೆಯ ಅಪರಾಧ ಸಾಬೀತಾದಲ್ಲಿ ಮಾತ್ರವೇ ಶಿಕ್ಷಾರ್ಹ ಎನಿಸಲ್ಪಡುತ್ತದೆ. ಆದರೆ ಯಾರೇ ಆದರೂ ದೋಷಿ ಎಂದು ರುಜುವಾತಾದರೆ ಅಂತಹವನು ಶಿಕ್ಷಿಸಲ್ಪಡುವನು. ಹಾಗಾಗಿ ನಾನು ಈ ತಿದ್ದುಪಡಿಯನ್ನು ವಿರೋಧಿಸುತ್ತೇನೆ.

---

* ಮೊದಲ ಅಪರಾಧಕ್ಕೆ ಕನಿಷ್ಠ ಸಾವಿರ ರೂಪಾಯಿ ದಂಡ ನಂತರದ ಅಪರಾಧಗಳಿಗೆ ಕನಿಷ್ಠ ಎರಡು ಸಾವಿರ ರೂಪಾಯಿ ದಂಡ ನಿಗದಿಗೊಳಿಸಬೇಕು ಎಂದು ಶ್ರೀ ಗಡಿಲಿಂಗನ ಗೌಡ ಅವರು ತಂದ ತಿದ್ದುಪಡಿಗೆ ಉತ್ತರ ನೀಡುತ್ತ.

* * ಪವಾಡ ಸದೃಶ್ಯ ಪರಿಣಾಮಗಳನ್ನು ಬೀರುತ್ತದೆ ಎಂದು ಹೇಳಿಕೊಂಡು ವೈದ್ಯ ವೃತ್ತಿಯನ್ನು ಅವಲಂಬಿಸಿರುವವರನ್ನು ಪ್ರತಿಬಂಧಿಸಬೇಕು ಎಂಬ ಶ್ರೀ ಧುಲೇಕರ್ ಅವರ ತಿದ್ದುಪಡಿಗೆ ಉತ್ತರ ನೀಡುತ್ತಾ.

ಈ ನಿರ್ದಿಷ್ಟ ವಿಧೇಯಕದ * * ಮೂಲಕ ಭಾರತ ಸರ್ಕಾರವು ತಾನು ಬಯಸಿದ ಎಲ್ಲವನ್ನು ನಿಷ್ಪ್ರಯೋಜಕಗೊಳಿಸಬಹುದು ಎಂಬ ವಾದವೂ ಸಮರ್ಥನೀಯವಲ್ಲ. ಯಾವುದೇ ಒಂದು ಕಾಯ್ದೆಯಲ್ಲೂ ವಿನಾಯ್ತಿ ನೀಡುವುದು ಸಾಮಾನ್ಯ ವಿಷಯವಾಗಿದ್ದು ಅದು ಸರ್ಕಾರದ ಕೈಯಲ್ಲೇ ಇರಬೇಕು.

ಆರೋಗ್ಯ ಖಾತೆಯು ಯಾವುದೇ ಒಂದು ವೈದ್ಯ ಪದ್ಧತಿಯ ವಿರುದ್ಧವಾಗಿ ಅಥವಾ ಯಾವುದೇ ಒಂದು ವೈದ್ಯ ಪದ್ಧತಿಯ ಪರವಾಗಿ ವರ್ತಿಸುವ ಮನೋಭಾವನೆಯನ್ನು ಹೊಂದಿರುವುದಿಲ್ಲ ಎಂದು ಮಾನ್ಯ ಸದಸ್ಯರಿಗೆ ಸ್ಪಷ್ಟಪಡಿಸುತ್ತೇನೆ. ಒಂದು ಸಾಮೂಹಿಕ ಪಿಡುಗನ್ನು ನಿವಾರಿಸುವುದೇ ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಇನ್ನು ವಿದೇಶಿ ಜಾಹೀರಾತುಗಳ ವಿಷಯದಲ್ಲಿ ಹೇಳುವುದಾದರೂ ಇದೇ ಕಾಯ್ದೆಗಳ ನಿಯಮಗಳು ಅನ್ವಯವಾಗುವುವು. ಈ ಸಂಬಂಧದ ನಿಯಮಗಳನ್ನು ರೂಪಿಸುವಾಗ ಈ ಅಂಶವನ್ನು ಪರಿಶೀಲಿಸಬಹುದಾಗಿದೆ.*

---

* ನಂತರ ಈ ವಿಧೇಯಕವನ್ನು ಅಂಗೀಕರಿಸಲಾಯಿತು.

## 20. ಕಾಮಾಲೆ ತನಿಖಾ ವರದಿ *

ಸದನದಲ್ಲಿ ಇದೀಗ ನಡೆದಿರುವ ಚರ್ಚೆಗೆ ಉತ್ತರ ನೀಡಲು ಅತ್ಯಂತ ದುಃಖದಿಂದ ನಾನಿಲ್ಲಿ ನಿಂತಿದ್ದೇನೆ. ದೇಶದಲ್ಲಿ ಹಬ್ಬಿರುವ ಕಾಮಾಲೆ ಹಾವಳಿಯಿಂದ ನನ್ನಷ್ಟು ದುಃಖಿತರಾದವರು ಹಾಗೂ ನೋವನ್ನು ಅನುಭವಿಸಿದವರು ಬೇರಾರು ಇರಲಿಕ್ಕಿಲ್ಲ. ಸಹಜವಾಗಿಯೇ ದುಃಖಿತರ ವಿಚಾರದಲ್ಲಿ ಅಪಾರ ಪ್ರೀತಿ ಮತ್ತು ಸಹಾನುಭೂತಿ ಹೊಂದಿರುವ ನಾನು ಈ ಬಗ್ಗೆ ಇನ್ನಷ್ಟು ಕೇಳಲು ಸಿದ್ಧಳಿಲ್ಲ. ದೆಹಲಿಯ ಜಂಟಿ ಜಲ ಮತ್ತು ಒಳಚರಂಡಿ ಮಂಡಳಿಯ ಸ್ಥಾಪನೆಯ ವಿಷಯದಲ್ಲಿ ಮಾತನಾಡಿದ ಸದಸ್ಯರಲ್ಲಿ ಸ್ವಲ್ಪ ಮಟ್ಟಿನ ತಪ್ಪು ತಿಳುವಳಿಕೆ ಇದೆ ಎಂದು ನಾನು ಭಾವಿಸಿದ್ದೇನೆ. ಈ ಮಂಡಳಿಯು ಮಾನ್ಯ ಆಯುಕ್ತರ ಅಧೀನದಲ್ಲಿ ಕೆಲಸ ಮಾಡುತ್ತಿದೆ. ದೆಹಲಿ ನಗರ ಸಭೆ ಸಮಿತಿಯಿಂದ ನಾಲ್ಕು ಮಂದಿ ಸದಸ್ಯರು ಅಲ್ಲಿರುತ್ತಾರೆ. ದೆಹಲಿಯ ಸಿವಿಲ್ ಲೈನ್ಸ್ ಅಧಿಸೂಚಿತ ಪ್ರದೇಶದ ಸಮಿತಿಯಿಂದ ಒಬ್ಬರು, ಇನ್ನೊಬ್ಬರು ದೆಹಲಿಯ ಪೌರರು. ಇವರೆಲ್ಲರೂ ಅಧಿಕಾರೇತರರು. ದೆಹಲಿಯ ಬ್ರಿಗೇಡ್‌ನ ಆಫೀಸರ್ ಕಮಾಂಡ್ ಅವರಿಂದ ನಾಮನಿರ್ದೇಶನ ಹೊಂದಿದ ಸದಸ್ಯರೊಬ್ಬರು. ಇದಲ್ಲದೆ ಕೇಂದ್ರ ಸರ್ಕಾರದಿಂದ ನಾಮಕರಣಗೊಂಡ ಇಬ್ಬರು ಸದಸ್ಯರು. ಅವರಲ್ಲಿ ಒಬ್ಬರು ದೆಹಲಿ ರಾಜ್ಯದ ಸಿ.ಪಿ.ಡಬ್ಲ್ಯು.ಡಿ.ಯ ಸೂಪರಿಂಟೆಂಡೆಂಟ್ ಎಂಜಿನಿಯರ್ ಹಾಗೂ ಹಣಕಾಸು ಖಾತೆಯ ಉಪ ಕಾರ್ಯದರ್ಶಿಯೊಬ್ಬರು. ಇನ್ನು ಸಂಪ್ರದಾಯದಂತೆ ದೆಹಲಿ ರಾಜ್ಯದ ಆರೋಗ್ಯ ಸಚಿವರು ಮಂಡಳಿಯ ಸಭೆಗೆ ಖಾಯಂ ಆಹ್ವಾನಿತ ಸದಸ್ಯರಲ್ಲಿ ಒಬ್ಬರಾಗಿರುತ್ತಾರೆ. ಅದೇ ರೀತಿ ದೆಹಲಿ ನಗರಸಭೆ ಸಮಿತಿಯ ಮುನ್ಸಿಪಲ್ ಎಂಜಿನಿಯರ್ ಅವರನ್ನು ಆಹ್ವಾನಿಸಲಾಗುವುದು. ಹೀಗಾಗಿ ಸಂಸ್ಥೆಯು ಅತ್ಯಂತ ವಿಶ್ವಾಸಾರ್ಹ ಸಂಸ್ಥೆಯಾಗಿದ್ದು, ಅಧಿಕಾರಿಗಳಲ್ಲದವರೇ ಬಹು ಸಂಖ್ಯಾತರಾಗಿರುತ್ತಾರೆ.

ಮಾನನೀಯ ಸದಸ್ಯರು ಮಾಡಿದ ಭಾಷಣಗಳನ್ನು ನಾನು ಗಮನವಿಟ್ಟು ಕೇಳಿದ್ದೇನೆ. ಅನೇಕರು ತುಂಬಾ ಕೋಪದಿಂದ ಮಾತನಾಡಿದ್ದಾರೆ ಆದರೆ ನಾನು ಅವರನ್ನು ಆ ಕಾರಣಕ್ಕಾಗಿ ಹಳಿಯಲು ಇಚ್ಛಿಸುವುದಿಲ್ಲ. ದೇಶದಲ್ಲಿ ಕಾಮಾಲೆಯ ಹಾವಳಿ ಅಷ್ಟು ಭಯಾನಕವಾಗಿದೆ. ಈ ನೋವಿನಿಂದಲೇ ಸದಸ್ಯರು ಮಾತನಾಡಿದ್ದಾರೆ ಎಂಬ ಅರಿವು ನನಗಿದೆ. ದೇಶಾದ್ಯಂತ ಹಿಂದೆಯೂ ಕೇಳಿ ಅರಿಯದಂತಹ ಕಾಮಾಲೆ ಪಿಡುಗಿನ ವರದಿಗಳು ಬಂದಿವೆ. ಆದರೆ ಸಾಂಕ್ರಾಮಿಕವು ಗಂಭೀರ ಸ್ವರೂಪದ್ದು ಎಂಬ ಕಾರಣದಿಂದಾಗಿ ಅಸಮರ್ಥನೀಯ ಟೀಕೆಗಳು ಬಂದರೆ ಅವುಗಳನ್ನು ಹಾಗೆ ಹಾಗೆಯೇ ಸ್ವೀಕರಿಸುವುದು ಸರಿಯಲ್ಲ. ಅಂದರೆ ಈ ಸಾಂಕ್ರಾಮಿಕ ರೋಗ ಹರಡುವುದಕ್ಕೆ ಮುನ್ನ ಸಾಂಕ್ರಾಮಿಕ ರೋಗಗಳ ಪ್ರಕರಣಗಳು ಇದ್ದುವು.

ನೀರು ಕಲುಷಿತಗೊಂಡಿದೆ ಎಂಬುದು ನನಗೆ ಗೊತ್ತಿದೆ. ಆದರೆ ಸಾಂಕ್ರಾಮಿಕ ರೋಗಗಳು ಹಬ್ಬುವ ಮೊದಲು ದೆಹಲಿಯಲ್ಲಿ ಹೆಪಟೈಟಿಸ್ ಸೋಂಕಿನ ಪ್ರಕರಣಗಳು ಇಷ್ಟೇ ಇದ್ದುವು.

---

* ದೆಹಲಿಯಲ್ಲಿ ಕುಡಿಯುವ ನೀರು ಕಲುಷಿತಗೊಂಡ ಹಿನ್ನಲೆಯಲ್ಲಿ 213ನೇ ನಿಯಮದಡಿಯಲ್ಲಿ ಅಂಗೀಕರಿಸಿದ ಕಾಮಾಲೆ ತನಿಖಾ ವರದಿಯ ಬಗ್ಗೆ ಸದಸ್ಯರು ಎತ್ತಿದ ಪ್ರಶ್ನೆಗಳಿಗೆ ಉತ್ತರಿಸುತ್ತಾ (ಲೋಕಸಭೆ ಚರ್ಚೆ) ಮಾರ್ಚ್ 12, ಮಾರ್ಚ್ 1956, ಸಿಸಿ 2519 - 2524).

ದೆಹಲಿಯಲ್ಲಿ ಮಾತ್ರವಲ್ಲ ಭಾರತದ ಅನೇಕ ಪಟ್ಟಣಗಳಲ್ಲಿ ಕಾಮಾಲೆ - ಪ್ರಕರಣಗಳಲ್ಲಿ ಹೆಚ್ಚಳ ಕಂಡು ಬಂದಿದೆ. ಇಡೀ ಭಾರತದಲ್ಲಿ ಕಾಮಾಲೆ ವ್ಯಾಧಿ ಹಬ್ಬುತ್ತಿರುವುದರ ಅರಿವು ನನಗಿದ್ದುದರಿಂದ ಈ ಕುರಿತು ಸಂಶೋಧನೆ ನಡೆಸುವಂತೆ ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯನ್ನು ನಾನು ಕೇಳಿಕೊಂಡಿದ್ದೆ. ವಿರೋಧ ಪಕ್ಷದಲ್ಲಿನ ನನ್ನ ಮಿತ್ರರಾದ ಕಾಮತ್ ಅವರು ಈ ಪ್ರಕರಣಗಳಿಂದ ಸಂಭವಿಸಿರುವ ಮರಣ ಪ್ರಮಾಣವನ್ನು ಬಹಳವಾಗಿ ಉತ್ಪ್ರೇಕ್ಷಿಸಿ ಹೇಳಿದ್ದಾರೆ. ಕಾಮತ್ ಅವರು ಯಾವುದೇ ವಿಷಯವನ್ನು ಉತ್ಪ್ರೇಕ್ಷಿಸಿ ಹೇಳುವುದರಲ್ಲಿ ನಿಸ್ಸೀಮರು. ಅದು ಅವರ ಮಾತುಗಾರಿಕೆಯ ಅವಿಭಾಜ್ಯ ಅಂಗವಾಗಿದೆ.

ಕಾಮಾಲೆ ವ್ಯಾಧಿಯಿಂದಾಗಿ ಸಾವಿರ ಸಾವಿರ ಸಂಖ್ಯೆಯಲ್ಲಿ ಅಸು ನೀಗಿದ್ದಾರೆಂದು ಅವರು ಮರಣ ಪ್ರಮಾಣವನ್ನು ಉತ್ಪ್ರೇಕ್ಷಿಸಿದ್ದಾರೆ.

ನನ್ನ ಬಳಿಯಲ್ಲಿ ಇರುವ ಎಲ್ಲ ದಾಖಲೆಗಳು ಸಾವಿನ ಪ್ರಕರಣಗಳಿಗೆ ಸಂಬಂಧಿಸಿದ ದಾಖಲೆಗಳು. ಇವು ಅತ್ಯಂತ ನಿಖರವಾಗಿವೆ... ಈ ವರದಿಗಳ ಪ್ರಕಾರ ಈ ರೋಗದ ಸೋಂಕು ತಗಲಿದವರ ಸಂಖ್ಯೆ 4 ಲಕ್ಷ. ಆದರೆ ದೆಹಲಿಯಲ್ಲಿ ಸತ್ತಿರುವವರ ಸಂಖ್ಯೆ ನೂರನ್ನು ದಾಟಿಲ್ಲ. ಕಾಮಾಲೆ ವ್ಯಾಧಿಯ ಸೋಂಕಿನ ಪ್ರಕರಣಗಳು ಖಂಡಿತವಾಗಿಯೂ ಅಧಿಕವಾಗಿವೆ. ಆದರೆ ಈ ಸೋಂಕು ಸೌಮ್ಯ ಸ್ವರೂಪದ್ದಾಗಿತ್ತು. ಈ ವ್ಯಾಧಿಗೆ ಸಂಬಂಧಿಸಿದ ಎಲ್ಲ ಪ್ರಕರಣಗಳನ್ನು ದಾಖಲಿಸುವಂತೆ ಆಸ್ಪತ್ರೆಗಳಿಗೆ ವಿಶೇಷ ಸೂಚನೆ ನೀಡಲಾಗಿತ್ತು. ಯಾವುದೇ ಆಸ್ಪತ್ರೆಯಲ್ಲಿ ಯಾರಿಗೆ ಆದರೂ ಪ್ರವೇಶ ನಿರಾಕರಿಸಿದ ಒಂದೇ ಒಂದು ಪ್ರಕರಣ ನಮ್ಮ ಗಮನಕ್ಕೆ ಬಂದಿಲ್ಲ. ಕಾಮಾಲೆ ಕಾಯಿಲೆಯವರಿಗಾಗಿ ವಿಶೇಷ ವಾರ್ಡ್‌ಗಳ ವ್ಯವಸ್ಥೆಯನ್ನು ಮಾಡಲಾಗಿತ್ತು.

ಈ ವಿಷಯದಲ್ಲಿ ಯಾವನೇ ಒಬ್ಬ ಅಧಿಕಾರಿ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಅವರ ವಿಚಾರಣೆ ನಡೆಸಲಾಗುವುದು. ಅಂತಹ ಪ್ರಕರಣಗಳ ವಿಚಾರಣೆ ಮುಖ್ಯ ಆಯುಕ್ತರೇ ನಡೆಸುತ್ತಿದ್ದು, ಅವರ ವಿರುದ್ಧ ಯಾವ ಕ್ರಮ ಕೈಗೊಳ್ಳಬೇಕೆಂಬುದು ಅವರ ವಿವೇಚನೆಗೆ ಬಿಟ್ಟ ವಿಷಯವಾಗಿದೆ. ಇಂತಹ ಸಂದರ್ಭಗಳಲ್ಲಿ ಯಾರ ತಪ್ಪು ಇಲ್ಲದೆ ಇಂತಹ ವಿಷಯಗಳು ನಡೆಯುವುದು ಸಾಮಾನ್ಯ ಎಂಬುದು ನನ್ನ ಅಭಿಪ್ರಾಯವಾಗಿದೆ. ದೆಹಲಿಯಲ್ಲಿ ನಗರಾಡಳಿತಕ್ಕೆ ಸಂಬಂಧಿಸಿದ ಕೆಲವು ಶಾಖೆಗಳಿರುವುದು ಮತ್ತು ಅವುಗಳ ಮಧ್ಯೆ ಪರಸ್ಪರ ಸಮನ್ವಯ ಇಲ್ಲದಿರುವುದು ಇಂತಹ ನ್ಯೂನತೆಗಳಿಗೆ ದಾರಿ ಮಾಡಿಕೊಡುತ್ತವೆ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ಅದೇ ವೇಳೆಗೆ ಈ ಅಧಿಕಾರ ವರ್ಗದವರಿಗೆ ಪ್ರತ್ಯೇಕ ಹೊಣೆಗಳನ್ನು ವಹಿಸಿಕೊಡುವುದು ಅತ್ಯಂತ ದುಸ್ತರವಾದ ಕಾರ್ಯಭಾರವಾಗಿದೆ ಎಂಬ ವಾಸ್ತವಾಂಶವನ್ನು ನಾವು ಒಪ್ಪಿಕೊಳ್ಳಬೇಕಾಗಿದೆ.

ನಾನೀಗ ಹೇಳುತ್ತಿರುವುದು ಗುಟ್ಟಿನ ಸಂಗತಿಯೇನಲ್ಲ. ನಾನು ಆರೋಗ್ಯ ಸಚಿವೆಯಾಗಿ ಅಧಿಕಾರ ವಹಿಸಿಕೊಂಡಾಗಿನಿಂದಲೂ ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಮತ್ತು ಸಂಕೀರ್ಣವಾಗುತ್ತಿರುವ ದೆಹಲಿ ಸಮಸ್ಯೆಗಳನ್ನು ನಿಭಾಯಿಸಲು ಏಕೈಕ ಪ್ರಾಧಿಕಾರ ಹೊಂದಿರಬೇಕೆಂದು ನಾನು ಸತತವಾಗಿ ಪ್ರಯತ್ನಿಸುತ್ತಲೇ ಬಂದಿದ್ದೇನೆ. ಆದರೆ ನಾನು ಅಪೇಕ್ಷಿಸಿದಷ್ಟು ಮತ್ತು ನಿರೀಕ್ಷಿಸಿದಷ್ಟು ಮಟ್ಟಿಗೆ ನಾನು ಅದರಲ್ಲಿ ಯಶಸ್ವಿಯಾಗಿಲ್ಲವೆಂಬುದು ನಿಜ. ಆದರೆ ಅದಕ್ಕೆ ಪ್ರಯತ್ನ ಶೀಲತೆಯ ಕೊರತೆ ಕಾರಣವಲ್ಲ. ದೇಶ ವಿಭಜನೆಯ ನಂತರದಲ್ಲಿ ದೆಹಲಿಯಲ್ಲಿ ಮತ್ತು ದೆಹಲಿಯ ಆಸುಪಾಸಿನಲ್ಲಿ ನಿರಾಶ್ರಿತರ ಕಾಲೋನಿಗಳು ಒಂದರ ಹಿಂದೆ

ಒಂದರಂತೆ ಹುಟ್ಟಿಕೊಳ್ಳುತ್ತಲೇ ಇದೆ. ಈ ಕಾಲೋನಿಗಳು ಅಡ್ಡಾದಿಡ್ಡಿಯಾಗಿ ಮತ್ತು ಯಾವುದೇ ವಿವೇಚನೆ ಇಲ್ಲದೆ ಎಲ್ಲಿ ಬೇಕೆಂದರಲ್ಲಿ ಮೇಲೇಳುತ್ತಿವೆ. ಅಲ್ಲಿ ಯಾವುದೇ ಒಳಚರಂಡಿ ವ್ಯವಸ್ಥೆಯಾಗಲಿ ಅಥವಾ ಕಸ ವಿಲೇವಾರಿ ಮಾಡುವ ಯಾವುದೇ ವ್ಯವಸ್ಥೆಗಳು ಅಲ್ಲಿರುವುದಿಲ್ಲ.

ಇದೀಗ ಬಹಳಷ್ಟು ಟೀಕೆಗೆ ಮತ್ತು ಚರ್ಚೆಗೆ ಒಳಗಾಗಿರುವ ನಜಫಘರ್‌ದಲ್ಲಿ ಮಳೆ ನೀರು ಹರಿದು ಹೋಗುವ ಸಲುವಾಗಿಯೇ ನಿರ್ಮಿಸಿರುವ ಕಾಲುವೆಯಾಗಿದೆ. ಆದರೆ ಈಗ ಅದರ ಕಸ ಕೊಳಚೆನ್ನು ಹರಿದು ಹೋಗುವ ಕಾಲುವೆಯಾಗಿ ಬಳಸಿಕೊಳ್ಳಲಾಗುತ್ತಿದೆ. ಈಗಿನ ವಿಪರೀತ ಪರಿಣಾಮಗಳಿಗೆ ಅದು ಒಂದು ಕಾರಣ. ಈ ಸಮಿತಿಯು ಅದನ್ನು ಸರಿಯಾಗಿಯೇ ಹೇಳಿದೆ. ಆದರೆ ಈಗಿನ ಪ್ರಶ್ನೆ ಎಂದರೆ ಇನ್ನು ಮುಂದೆ ಇಂತಹ ಅನಾಹುತ ಸಂಭವಿಸದಂತೆ ಯಾವ ಹೆಜ್ಜೆಗಳನ್ನು ಇಡಬಹುದೆಂಬ ಬಗ್ಗೆ ಸಲಹೆ ನೀಡುವಂತೆ ಮುಂಬಯಿ ನಗರಪಾಲಿಕೆಯ ಶ್ರೀ ಮೋದಕ್ ಅವರನ್ನು ವಿನಂತಿಸಿಕೊಂಡಿದ್ದೇನೆ.

ನೀರು ಸರಬರಾಜು ಮತ್ತು ಅದರ ನೈರ್ಮಲ್ಯ ರಕ್ಷಣೆಗೆ ಸಂಬಂಧಿಸಿದಂತೆ ಅತ್ಯಂತ ತ್ವರಿತಗತಿಯ ಕಾರ್ಯಾಚರಣೆ ಅಗತ್ಯವಾಗಿದೆ. ಈ ದಿಕ್ಕಿನಲ್ಲಿ ನನ್ನಿಂದ ಸಾಧ್ಯವಿರುವ ಎಲ್ಲ ಪ್ರಯತ್ನಗಳನ್ನು ನಡೆಸುತ್ತಿದ್ದೇನೆ. ನಜಫಘರ್‌ನಲ್ಲದಿಂದ ಕೊಳಚೆ ಕಶ್ಮಲಗಳನ್ನು ಒಳಚರಂಡಿ ಜಾಲಕ್ಕೆ ತಿರುಗಿಸಲು ಈಗಾಗಲೇ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ ಮತ್ತು ಈ ಕೊಳಚೆ ನೀರಿನ ಸಂರಕ್ಷಣೆಗಾಗಿ ಉತ್ತರ ದೆಹಲಿಯಲ್ಲಿ 1.4 ಕೋಟಿ ರೂಪಾಯಿ ವೆಚ್ಚದಲ್ಲಿ ಸಂಸ್ಕರಣ ಸ್ಥಾವರಗಳನ್ನು ನಿರ್ಮಿಸುವ ದಿಸೆಯಲ್ಲೂ ಕ್ರಮ ಕೈಗೊಳ್ಳಲಾಗಿದೆ. ಈ ಎಲ್ಲ ಕಾಮಗಾರಿಗಳು ಅತ್ಯಂತ ತ್ವರಿತಗತಿಯಲ್ಲಿ ನಡೆಯಬೇಕೆಂಬುದು ಸರ್ಕಾರದ ಉದ್ದೇಶವಾಗಿದೆ.

ನನ್ನ ಮಾನ್ಯ ಮಿತ್ರರಾದ ಡಾ॥ ಲಂಕಾ ಸುಂದರಂ ಅವರ ಅಭಿಪ್ರಾಯವನ್ನು ನಾನು ಸಂಪೂರ್ಣವಾಗಿ ಸಮರ್ಥಿಸುತ್ತೇನೆ. ಅವರು ವಜೀದಾಬಾದ್ ಪಂಪಿಂಗ್ ಸ್ಟೇಷನ್ ಬದಲಾವಣೆಗೆ ಸಂಬಂಧಿಸಿದಂತೆ ಹಲವು ಅಮೂಲ್ಯ ಸಲಹೆಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಅದನ್ನು ಅಲ್ಲಿಂದ ಇನ್ನೂ ಎತ್ತರಕ್ಕೆ ನದಿಯ ಮೇಲ್ಭಾಗಕ್ಕೆ ಸ್ಥಳಾಂತರಿಸಬೇಕೆಂದು ಹೇಳಿದ್ದಾರೆ. ಈ ವಿಷಯವನ್ನು ನಾವು ಈಗಾಗಲೇ ಗಣನೆಗೆ ತೆಗೆದುಕೊಂಡಿದ್ದು, ಈ ವಿಷಯ ಕುರಿತ ಮುಂದಿನ ಚರ್ಚೆಯಲ್ಲಿ ಮಾನ್ಯ ಸದಸ್ಯರು ನಮ್ಮೊಂದಿಗೆ ಇರಬೇಕೆಂದು ಕೇಳಿಕೊಳ್ಳುತ್ತೇನೆ. ಅಷ್ಟು ಮಾತ್ರವಲ್ಲ ಇದಕ್ಕೆ ಸಂಬಂಧಿಸಿದಂತೆ ಸರ್ಕಾರ ಕೈಗೊಳ್ಳುತ್ತಿರುವ ಕ್ರಮಗಳಲ್ಲಿ ಆಸಕ್ತರಾಗಿರುವ ಎಲ್ಲ ಸದಸ್ಯರು ನನ್ನ ಖಾತೆಗೆ ಬರಬೇಕು ಮತ್ತು ನನ್ನೊಂದಿಗೆ ಈ ವಿಷಯಗಳಲ್ಲಿ ಚರ್ಚಿಸಬೇಕು ಹಾಗೂ ನಾವು ಕೈಗೊಂಡಿರುವ ಕಾಮಗಾರಿಗಳನ್ನು ನನ್ನೊಂದಿಗೆ ಬಂದು ಪರಿಶೀಲಿಸಬೇಕು ಎಂದು ನಾನು ಅಪೇಕ್ಷಿಸುತ್ತೇನೆ. ವಾಸ್ತವವಾಗಿ ನೀರು ಸರಬರಾಜಿಗೆ ಸಂಬಂಧಿಸಿದ ವಿಷಯಕ್ಕೂ ನನ್ನ ಖಾತೆಗೂ ಯಾವುದೇ ಸಂಬಂಧವಿಲ್ಲ. ಹಾಗಾಗಿ ನಾನಾಗಿಯೇ ಈ ವಿಷಯದಲ್ಲಿ ಏನನ್ನೂ ಮಾಡುವ ಹಾಗಿಲ್ಲ. ನೀರು ಕಲುಷಿತಗೊಂಡಿದೆ ಎಂದು ದೃಢವಾದ ಮೇಲಷ್ಟೇ ಆ ಸಂಬಂಧ ವರದಿಗಳು ಬಂದ ನಂತರವೇ ನನ್ನ ಖಾತೆಯು ಈ ವಿಷಯದಲ್ಲಿ ಏನನ್ನಾದರೂ ಮಾಡಬಹುದು. ಆದರೂ ಈ ವಿಷಯ ನನ್ನ ಗಮನಕ್ಕೆ ಬಂದ ಕ್ಷಣದಿಂದಲೇ ನಾನು ಕಾರ್ಯ ಪ್ರವೃತ್ತಳಾದೆ. ಆ ದಿನವೇ ಈ ವಿಷಯಕ್ಕೆ ಸಂಬಂಧಿಸಿದ ಅಧಿಕಾರಿಗಳ ಜೊತೆ ನಾನು ಸಮಾಲೋಚಿಸಿದೆ.

ನೀರು ಕಲುಷಿತಗೊಂಡಿದೆ ಎಂಬ ಸುದ್ದಿ 15ರಂದೇ ನನ್ನ ಗಮನಕ್ಕೆ ಬಂದಿತು.* ತಕ್ಷಣವೇ ನಾನು ಅಧಿಕಾರಿಗಳ ಸಭೆ ಕರೆದೆ " ನೀರಿನಲ್ಲಿ ಕ್ಲೋರೈಡ್ ಪ್ರಮಾಣ (ಶೇಕಡಾವಾರು ) ಅಧಿಕವಾಗಿದೆ ಎಂದು ಕಂಡುಬಂದಾಗ ನೀರು ಕಲುಷಿತಗೊಂಡಿದೆ ಎಂಬುದು ಅಧಿಕಾರಿಗಳಿಗೆ ತಿಳಿಯಲಿಲ್ಲವೇ ? " ಎಂದು ಕೆಲ ಸದಸ್ಯರು ನನ್ನನ್ನು ಪ್ರಶ್ನಿಸಿದ್ದಾರೆ. ನೀರಿನ ವಿಶ್ಲೇಷಣೆ ನಡೆಸಿದಾಗ ಅದರಲ್ಲಿ ಕ್ಲೋರೈಡ್ ಅಂಶ ಅಧಿಕವಾಗಿರುವುದು ಕಂಡು ಬಂದಿತೆ ಹೊರತು ಅಲ್ಲಿ ನೈಟ್ರೇಟ್‌ಗಳು, ನೈಟ್ರೇಟ್‌ಗಳ ಅಂಶಗಳು ಅದರಲ್ಲಿರಲಿಲ್ಲ. ಹಾಗಾಗಿ ನೀರು ಕಲುಷಿತವಾಗಿದೆ ಎಂದು ತೀರ್ಮಾನಿಸಲು ಕಾರಣಗಳೇ ಇರಲಿಲ್ಲ.

ಆದರೆ ಇದು ಅತ್ಯಂತ ದುರದೃಷ್ಟಕರ ಪರಿಸ್ಥಿತಿ ಎಂಬುದನ್ನು ನಾನೇ ಒಪ್ಪಿಕೊಳ್ಳುತ್ತೇನೆ. ಈ ಸಂಬಂಧದಲ್ಲಿ ಇಂತಿಂಥ ನ್ಯೂನತೆಗಳಿವೆ, ಇಂತಿಂತಹವರು ಕಾರಣ ಎಂದು ಬೆರಳು ತೋರಿಸುವುದು ಸರಿಯಲ್ಲ ಎಂಬ ನನ್ನ ಮಿತ್ರ ಶ್ರೀ ಕೃಷ್ಣನ್ ನಾಯರ್ ಅವರ ಅಭಿಪ್ರಾಯವನ್ನು ನಾನು ಸಮರ್ಥಿಸುತ್ತೇನೆ. ಯಾರೇ ಆದರೂ ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯ ತೋರಿದಲ್ಲಿ ಅಂತಹವರಿಗೆ ದಂಡ ವಿಧಿಸಲೇಬೇಕು ಮತ್ತು ಅಂತಹ ನ್ಯೂನತೆಗೆ ಕಾರಣರಾದವರನ್ನು ವಿಚಾರಣೆಗೆ ಒಳಪಡಿಸಬೇಕು ಹಾಗೂ ವ್ಯವಸ್ಥೆಯನ್ನು ಸರಿಪಡಿಸಲೇಬೇಕು. ಅಂದರೆ ಮಾತ್ರ ಭವಿಷ್ಯದಲ್ಲಿ ಇಂತಹ ಅನಾಹುತಗಳು ಸಂಭವಿಸದಂತೆ ತಡೆಯಬಹುದಾಗಿದೆ. ಈ ಸಂಬಂಧದಲ್ಲಿ ಸಮಿತಿಯು ಮಾಡಿರುವ ಶಿಫಾರಸುಗಳಿಗೆ ಅನುಗುಣವಾಗಿ ನಾನು ಈಗಾಗಲೆ ಅಂತಹ ಕ್ರಮ ಕೈಗೊಂಡಿದ್ದೇನೆ ಎಂದು ಸದನದ ಗಮನಕ್ಕೆ ತರಬಯಸುತ್ತೇನೆ. ಇಷ್ಟು ಮಾತ್ರವಲ್ಲ ಈ ನಿಟ್ಟಿನಲ್ಲಿ ಇನ್ನು ಮಾಡಬಹುದಾದದ್ದು ಏನಿದೆ ? ಪರಿಸ್ಥಿತಿ ಸುಧಾರಿಸಲು ಏನೆಲ್ಲ ಕ್ರಮಗಳನ್ನು ಕೈಗೊಳ್ಳಬಹುದು ಎಂಬುದರ ಬಗ್ಗೆಯೂ ಇನ್ನಷ್ಟು ದೂರ ಕ್ರಮಿಸಲು ನಿರ್ಧರಿಸಿದ್ದೇನೆ. ನೀರು ವಿಷಾಣುಗಳಿಂದ ಕಲುಷಿತಗೊಳ್ಳದಂತೆ ಮಾಡುವ ಸಲುವಾಗಿ ರಕ್ಷಣಾ ಖಾತೆಯ ಸಹಕಾರದೊಂದಿಗೆ ನಾವು ಹಗಲು ರಾತ್ರಿ ಎಂಬ ಪರಿವೆ ಇಲ್ಲದೆ ಎಷ್ಟೆಲ್ಲ ಕೆಲಸಗಳನ್ನು ಮಾಡಿದ್ದೇವೆ ಎಂಬುದನ್ನು ನೆನಪಿಸಿಕೊಳ್ಳಬಯಸುತ್ತೇನೆ. ಈ ವಿಷಯದಲ್ಲಿ ರಕ್ಷಣಾ ಖಾತೆಯ ಮೇಲೆ ಎಳ್ಳಿನ ಏಳು ಭಾಗದಷ್ಟು ಹೊಣೆಯನ್ನು ಕೂಡಾ ಹೊರಿಸಲು ನಾನು ಸಿದ್ಧನಿಲ್ಲ. ಈ ವಿಷಯದಲ್ಲಿ ರಕ್ಷಣಾ ಸಚಿವರು ನೀಡಿರುವ ಹೇಳಿಕೆಯನ್ನು ಸಂಪೂರ್ಣವಾಗಿ ಸಮರ್ಥಿಸುತ್ತೇನೆ. ರಕ್ಷಣಾ ಖಾತೆಯವರು ತಮ್ಮ ಸಿಬ್ಬಂದಿ ಲಭ್ಯವಿಲ್ಲ ಎಂದ ಕೂಡಲೇ ಕೇಂದ್ರ ಸಿ.ಪಿ.ಡಬ್ಲ್ಯೂ.ಡಿ. ಯಿಂದ ಸಿಬ್ಬಂದಿಯನ್ನು ಪಡೆದುಕೊಂಡೆವು. ಆದರೆ ದುರದೃಷ್ಟವಶಾತ್ ಅವರು ಸಮಾಧಾನಕರವಾಗಿ ಕಾರ್ಯ ನಿರ್ವಹಿಸಲಿಲ್ಲ. ಹಾಗಾಗಿ ಮರು ಕ್ಷಣವೇ ನಾವು ರಕ್ಷಣಾ ಖಾತೆಯನ್ನು ವಿನಂತಿಸಿಕೊಂಡೆವು. ಕೂಡಲೇ ಅವರು ಒಪ್ಪಿ ತಮ್ಮ ಸಿಬ್ಬಂದಿಯನ್ನು ಕಳುಹಿಸಿದರು. ಅವರೀಗ ಹಗಲು ರಾತ್ರಿ ಸೇವೆ ಸಲ್ಲಿಸಿದರು. ಪ್ರಾರಂಭದಲ್ಲಿ ಸೇನೆ ಏಕೆ ನೆರವಿಗೆ ಬರಲಿಲ್ಲ ಎಂಬುದಕ್ಕೆ ಹೊಣೆಗಾರಿಕೆ ಹೊತ್ತ ಸಮಿತಿಯೇ ಅತ್ಯಂತ ಸಮರ್ಪಕ ಕಾರಣಗಳಿದ್ದವು ಎಂದು ಹೇಳಿರುವಾಗ ಸದನವು ಅವರ ವರದಿಯನ್ನು ಅಂಗೀಕರಿಸಲು ಯಾವುದೇ ಅಡ್ಡಿಯೂ ಇರಲಾರದೆಂದು ಭಾವಿಸುತ್ತೇನೆ.

---

* ಆರೋಗ್ಯ ಸಚಿವರ ಗಮನಕ್ಕೆ ಈ ವಿಷಯ ಯಾವಾಗ ಬಂದಿತು ಎಂದು ಡಾ|| ಸುರೇಶ್ ಚಂದ್ರ ಅವರು ಕೇಳಿದ ಪ್ರಶ್ನೆಗೆ ಉತ್ತರಿಸುತ್ತಾ ,

ನನ್ನ ಖಾತೆಯ ಪತ್ರವು ಯಾವುದೇ ದಿನಾಂಕವನ್ನು ಹೊಂದಿರಲಿಲ್ಲ. ನನ್ನ ಸಚಿವ ಶಾಖೆಯು ಎಲ್ಲ ಸಂದರ್ಭಗಳಲ್ಲೂ ಪತ್ರ ವ್ಯವಹಾರವನ್ನೇ ನೆಚ್ಚಿಕೊಂಡು ಕುಳಿತಿರುವುದಿಲ್ಲ. ನಾವು ತಕ್ಷಣವೇ ರಕ್ಷಣಾ ಖಾತೆಯನ್ನು ದೂರವಾಣಿ ಮೂಲಕ ಸಂಪರ್ಕಿಸಿದೆವು. ಆಗ ಅವರಿಂದ ಇಲ್ಲಿ ಸಿಬ್ಬಂದಿ ಇಲ್ಲ ಎಂಬ ಉತ್ತರ ದೊರೆಯಿತು. ಅನಂತರ ನಾವು ಸಿ.ಪಿ.ಡಬ್ಲ್ಯು.ಡಿ.ಯ ಸಹಕಾರ ಕೋರಿದೆವು. ಅವರ ಬಳಿ ಇರುವ ಎಲ್ಲ ಯಂತ್ರೋಪಕರಣಗಳೊಂದಿಗೆ ಬರಬೇಕೆಂದು ಕೇಳಿಕೊಂಡೆವು. ಈ ನಮ್ಮ ಕಾರ್ಯಾಚರಣೆಯನ್ನು ಮುಂದುವರೆಸಿದೆವು. ನಮ್ಮ ಬಳಿ ಲಭ್ಯ ಇದ್ದ ಯಂತ್ರೋಪಕರಣಗಳಿಂದ ನೀರನ್ನು ಯಶಸ್ವಿಯಾಗಿ ಪಂಪ್ ಮಾಡಲು ಶಕ್ತರಾಗಿದಿದ್ದರೆ ನೀರು ಕಲುಷಿತಗೊಳ್ಳುವ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ. ಆದರೆ ನಮ್ಮ ಬಳಿ ಇದ್ದ ಯಂತ್ರೋಪಕರಣಗಳಿಂದ ನಾವು ನಿರ್ಮಿಸಿದ್ದ ಕಾಲುವೆಗಳು ಸಮರ್ಪಕವಾಗಿ ಇಲ್ಲದಿದ್ದುದರಿಂದ ನೀರನ್ನು ಕಾಯಿಸಲು ನಮಗೆ ಸಾಧ್ಯವಾಗಲಿಲ್ಲ ಮತ್ತು ನಜಫಘರ್‌ನಲ್ಲದ ನೀರು ಕುಡಿಯುವ ನೀರನ್ನು ಕಲುಷಿತಗೊಳಿಸಿತು. ಇದಕ್ಕಾಗಿ ನಾನು ವಿಷಾದ ಪಡುತ್ತೇನೆ ಮತ್ತು ಸದನದ ಕ್ಷಮೆಯನ್ನು ಯಾಚಿಸುತ್ತೇನೆ. ನನ್ನ ಖಾತೆಯ ಬಗ್ಗೆ ಹೇಳುವುದಿದ್ದರೆ ವಿಷಯ ನಮಗೆ ತಿಳಿದಾಕ್ಷಣ ನಮ್ಮಿಂದ ಸಾಧ್ಯವಿರುವ ಎಲ್ಲವನ್ನು ನಾವು ಮಾಡಿದೆವು. ಒಟ್ಟಿನಲ್ಲಿ ಮುಂದೆಯೂ ಇಂತಹ ಅನಾಹುತ ಸಂಭವಿಸದಂತೆ ನನ್ನೆಲ್ಲ ಪ್ರಯತ್ನಗಳನ್ನು ಮುಂದುವರೆಸುತ್ತೇನೆ ಮತ್ತು ದೆಹಲಿಯ ಜನತೆಗೆ ಅವಶ್ಯವಿರುವ ನೀರಿನ ಸರಬರಾಜು ಸಮರ್ಪಕವಾಗಿ ನಡೆಯುವಂತೆ ಎಲ್ಲ ಮುಂಜಾಗ್ರತೆಯನ್ನು ವಹಿಸುತ್ತೇನೆ ಎಂಬ ಅಂಶವನ್ನು ನಾನು ಸದನಕ್ಕೆ ಅರಿಕೆ ಮಾಡಿಕೊಳ್ಳುತ್ತಿದ್ದೇನೆ. ಕಸ ಕಶ್ಮಲಗಳು ಮತ್ತು ಚರಂಡಿಯ ನೀರು ನದಿಗಳಿಗೆ ಹರಿಯ ಬಿಡಬಾರದೆಂಬ ಅಭಿಪ್ರಾಯವನ್ನು ನಾನು ಒಪ್ಪುತ್ತೇನೆ. ಈ ವಿಷಯವನ್ನು ಸ್ವಲ್ಪ ಸಮಯದ ಹಿಂದೆ ಇದೇ ಸದನದಲ್ಲಿ ಪ್ರಸ್ತಾಪಿಸಲಾಯಿತು. ದೆಹಲಿಯ ಮಂದಿ ಯಮುನಾ ನದಿಯಲ್ಲಿ ಸ್ನಾನ ಮಾಡುತ್ತಾರೆ. ನಮ್ಮಲ್ಲಿ ಒಳಚರಂಡಿ ಮತ್ತು ಕಸ ಕಶ್ಮಲಗಳು ವಿಲೇವಾರಿ ವ್ಯವಸ್ಥೆ ಸಮರ್ಪಕವಾಗಿಲ್ಲದಿರುವುದರಿಂದ ನದಿಗಳ ನೀರು ಶುದ್ಧವಾಗಿರುವುದಿಲ್ಲ. ಹಾಗಾಗಿ ಜನರು ನದಿಗಳಲ್ಲಿ ಸ್ನಾನ ಮಾಡಬಾರದೆಂದು ನಾನು ಪದೇ ಪದೇ ಹೇಳುತ್ತಾ ಬಂದಿದ್ದೇನೆ. ಇಂದು ಕೂಡಾ ರಾಜ್‌ಘಾಟ್ ಬಳಿ ಕೊಳ್ಚೆ ನೀರು ನದಿಗೆ ಸೇರುವ ಮೋರಿಯನ್ನು ನಾವು ಕಾಣಬಹುದು. ದೆಹಲಿಯಂತಹ ನಗರದಲ್ಲಿ ಅಂತಹ ಮೋರಿಗಳಿರಬಾರದು. ಹಾಗಾಗಿ ಅವುಗಳ ಬಗ್ಗೆ ಮುಂಜಾಗ್ರತೆ ವಹಿಸಬೇಕಾಗಿದೆ. ಇಂತಹ ಒಳಚರಂಡಿಗಳಲ್ಲಿನ ಕಸ ಕಶ್ಮಲಗಳಿಂದ ಸಂಸ್ಕರಿಸುವ ಸ್ಥಾವರಗಳನ್ನು ಸ್ಥಾಪಿಸಲು ಯೋಜನೆಯೊಂದನ್ನು ಸಿದ್ಧಪಡಿಸಬೇಕೆಂದು ಯೋಚಿಸಿದ್ದೇನೆ. ಇದು ಕೂಡಾ ಎಷ್ಟು ಕಲುಷಿತಗೊಂಡಿದೆ ಎಂದರೆ ಅದನ್ನು ಕೂಡಾ ಬಳಸಿಕೊಳ್ಳಲು ಸಾಧ್ಯವಿಲ್ಲ. ಹೀಗೆ ನಾವು ಪ್ರತಿಯೊಂದು ಮಾರ್ಗವನ್ನು ಬಳಸಿಕೊಳ್ಳಲು ಯೋಚಿಸುತ್ತಿದ್ದೇವೆ. ಈ ಕುರಿತ ಕಾಮಗಾರಿಗಳಿಗಾಗಿ ಸಾಕಷ್ಟು ಹಣವನ್ನು ನಾವು ಮಂಜೂರು ಮಾಡುತ್ತಿದ್ದೇವೆ. ಈ ದಿಕ್ಕಿನಲ್ಲಿ ಸಾಧ್ಯವಿರುವ ಎಲ್ಲ ಕ್ರಮಗಳನ್ನು ನಾನು ಕೈಗೊಳ್ಳುತ್ತೇನೆ ಮತ್ತು ಅಂತಹ ಯೋಜನೆಗಳನ್ನು ಕೈಗೆತ್ತಿಕೊಳ್ಳುವಲ್ಲಿ ಸದನದ ಪ್ರತಿಯೊಬ್ಬ ಸದಸ್ಯರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುತ್ತೇನೆ ಎಂದು ಸದನಕ್ಕೆ ಮತ್ತೊಮ್ಮೆ ಭರವಸೆ ಕೊಡುತ್ತಿದ್ದೇನೆ. ಇದೇ ವೇಳೆಗೆ ಬೃಹದಾಕಾರದ ಸಮಸ್ಯೆಯ ವಿರುದ್ಧ ನಾವು ಯಾವ ರೀತಿಯ ಹೋರಾಟ ನಡೆಸಬಹುದೆಂಬ ಬಗ್ಗೆ ಸಲಹೆ ಸೂಚನೆಗಳನ್ನು ನೀಡಲು ಮತ್ತು ಸಹಾಯ ಮಾಡುವಂತೆ ನಾನು ಮಾನ್ಯ ಸದಸ್ಯರನ್ನು ವಿನಂತಿಸಬಯಸುತ್ತೇನೆ. ಇದು ಸಣ್ಣ ಸಮಸ್ಯೆಯಲ್ಲ

ಎಂಬುದನ್ನು ನಾನು ಮತ್ತೊಮ್ಮೆ ಒತ್ತಿ ಹೇಳುತ್ತೇನೆ. ಒಳಚರಂಡಿ ಮತ್ತು ಕಸ ಕಶ್ಮಲಗಳ ವಿಲೇವಾರಿ ವ್ಯವಸ್ಥೆ ಮತ್ತು ಅದಕ್ಕೆ ಅಗತ್ಯವಾಗಿರುವ ಯಂತ್ರೋಪಕರಣಗಳು ಏರುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಹೆಚ್ಚಿಲ್ಲವೆಂಬ ಅಂಶವನ್ನು ನಾವು ಈ ಸಂದರ್ಭದಲ್ಲಿ ನೆನಪಿಟ್ಟುಕೊಳ್ಳಬೇಕಾಗಿದೆ. ದೆಹಲಿಗೆ ಹೊರಗಿನಿಂದ ಅಪಾರ ಸಂಖ್ಯೆಯಲ್ಲಿ ಜನರು ವಲಸೆ ಬರುತ್ತಿದ್ದು, ಅದಕ್ಕೆ ಸರಿಯಾಗಿ ಒಳಚರಂಡಿ ಮತ್ತು ಕಸ ಕಶ್ಮಲಗಳ ವಿಲೇವಾರಿಯ ವ್ಯವಸ್ಥೆ ನಮ್ಮಲ್ಲಿಲ್ಲ. ಮಾನ್ಯ ಮಿತ್ರರಾದ ನಾಯರ್ ಅವರು ನಾನು ಪತ್ರಿಕಾಗೋಷ್ಠಿಯೊಂದರಲ್ಲಿ ನಾನು ಹೇಳಿರುವುದನ್ನು ತಪ್ಪಾಗಿ ಅರ್ಥೈಸಿದ್ದಾರೆ. ಹೆಪಟೈಟಿಸ್‌ನ ಸೋಂಕು ಕಲುಷಿತ ನೀರಿನಿಂದ ಮಾತ್ರವಲ್ಲ ಕಲುಷಿತ ಆಹಾರದಿಂದಲೂ ಬರುತ್ತದೆ ಎಂದು ನಾನು ಹೇಳಿರುವುದು ನಿಜ. ಆದರೆ ಕಲುಷಿತ ಆಹಾರವನ್ನು ಸ್ವೀಕರಿಸಬಾರದೆಂಬ ನನ್ನ ಸಲಹೆಯನ್ನು ಸಾರ್ವಜನಿಕರು ಗಣನೆಗೆ ತೆಗೆದುಕೊಂಡಿಲ್ಲ. ಈ ವಿಷಯದಲ್ಲಿ ನನಗೆ ಜನರಿಂದ ನಿರೀಕ್ಷಿಸಿದಷ್ಟು ಪ್ರತಿಕ್ರಿಯೆ ಬರಲಿಲ್ಲ. ಆದರೆ ಇದು ಅತ್ಯಂತ ಕಠಿಣ ಪರಿಸ್ಥಿತಿಯಾಗಿತ್ತು ಮತ್ತು ನಮ್ಮ ನಿಯಂತ್ರಣಕ್ಕೆ ಮೀರಿದ್ದಾಗಿತ್ತು. ಹಾಗಾಗಿ ಸರ್ಕಾರವನ್ನೇ ಇದಕ್ಕೆ ಹೊಣೆಯಾಗಿಸುವುದು ಸರಿಯಲ್ಲವೆಂಬ ಅಂಶವನ್ನು ಸದಸ್ಯರು ಮನಗಾಣಬೇಕೆಂದು ಬಯಸುತ್ತೇನೆ. ಅದೇನಿದ್ದರೂ ಈ ಸಾಂಕ್ರಾಮಿಕ ರೋಗ ಹರಡುವಲ್ಲಿ ಸರ್ಕಾರದ ನಿಷ್ಕ್ರಿಯತೆಯೂ ಕಾರಣವಾಗಿದ್ದರೆ ನಾನು ಅದಕ್ಕಾಗಿ ಸಾರ್ವಜನಿಕರ ಕ್ಷಮೆ ಯಾಚಿಸುತ್ತೇನೆ. ಇಂತಹ ಅನಾಹುತ ಇನ್ನೊಮ್ಮೆ ಸಂಭವಿಸದಂತೆ ತಡೆಹಿಡಿಯುವ ದಿಸೆಯಲ್ಲಿ ತಾವೆಲ್ಲರೂ ಸಹಕಾರ ನೀಡಬೇಕೆಂದು ನಿಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ.

---

ನಾನು ಈಗಾಗಲೇ ಈ ಪ್ರಶ್ನೆಯನ್ನು ಚರ್ಚಿಸಿದ್ದೇನೆ. ಇದೀಗ ಈ ಉದ್ದೇಶಕ್ಕಾಗಿ ಮಧ್ಯಂತರ ಅಭಿವೃದ್ಧಿ ಪ್ರಾಧಿಕಾರವನ್ನು * ರಚಿಸಲಾಗಿದ್ದು ಇದು ಈ ಸ್ವರೂಪದ ಎಲ್ಲ ವಿಷಯಗಳ ಪರಿಶೀಲನೆ ನಡೆಸಿದೆ. ರಾಜ್ಯಗಳ ಪುನರ್‌ವಿಂಗಡಣೆ ಪ್ರಶ್ನೆಯನ್ನು ಸದ್ಯದಲ್ಲೇ ಎತ್ತಿಕೊಳ್ಳಲಾಗುವುದು. ಇನ್ನು ಜನರಿಗೆ ಶುದ್ಧ ನೀರಿನ ಸರಬರಾಜು ವಿಷಯದಲ್ಲಿ ಹೇಳುವುದಾದರೆ ಅದು ಸಂಪೂರ್ಣವಾಗಿ ಕೇಂದ್ರ ಸರ್ಕಾರಕ್ಕೆ ಸೇರಿದ ವಿಷಯವಾಗಿದೆ ಎಂದು ಸದನದ ಸದಸ್ಯರಿಗೆ ಇದೇ ಸಂದರ್ಭದಲ್ಲಿ ನೀಡಬಯಸುತ್ತೇನೆ.

---

* ಸಂವಿಧಾನಿಕ ವಿಧಿ ವಿಧಾನಗಳು ಮತ್ತು ಇತರ ಯಾವುದೇ ಜೋಡಣೆಗಳಿಲ್ಲದ ಏಕೀಕೃತ ಪ್ರಾಧಿಕಾರ ರಚನೆಗೆ ಸಂಬಂಧಿಸಿದಂತೆ ಡಾ|| ಲಂಕಾ ಸುಂದರಂ ಅವರು ಎತ್ತಿದ ಆಕ್ಷೇಪಕ್ಕೆ ಉತ್ತರ ನೀಡುತ್ತಾ.

## 21. ಬಿ.ಸಿ.ಜಿ. ಚುಚ್ಚುಮದ್ದು *

ಬಿ.ಸಿ.ಜಿ. ಲಸಿಕೆ ನೀಡಿಕೆ ನಿರುಪಾಯಕಾರಿತ್ವ ಮತ್ತು ಪರಿಣಾಮಕಾರಿತ್ವದ ಬಗ್ಗೆ ವಿವಾದ ಎದ್ದಿದೆ. ಐದು ವರ್ಷಗಳ ಹಿಂದೆ ಮದ್ರಾಸ್ ರಾಜ್ಯದಲ್ಲಿ ಈ ಬಗ್ಗೆ ವಿವಾದ ಎದ್ದಾಗ ಬಿ.ಸಿ.ಜಿ. ಲಸಿಕೆಯ ಉಪಯುಕ್ತತೆ ಮತ್ತು ಪರಿಣಾಮಕಾರಿತ್ವದ ಬಗ್ಗೆ ಸಾರ್ವಜನಿಕರಿಗೆ ವಿವರವಾಗಿ ತಿಳಿಸಲಾಗಿದೆ. ಇದರ ಫಲಿತಾಂಶವಾಗಿ ಬಿ.ಸಿ.ಜಿ. ಲಸಿಕೆಯ ವಿರುದ್ಧ ಎದ್ದ ಸಂದೇಹಗಳು ಸಂಪೂರ್ಣವಾಗಿ ನಿವಾರಣೆಯಾದವು ಮತ್ತು ಬಿಸಿಜಿ ಆಂದೋಲನ ಜನಪ್ರಿಯವಾಗಿ ಮುಂದುವರೆಯಿತು. ಈ ಆಂದೋಲನವನ್ನು ಇನ್ನಷ್ಟು ವಿಸ್ತರಿಸುವಂತೆ ಕೋರಿ ಮದ್ರಾಸ್ ರಾಜ್ಯವೂ ಸೇರಿದಂತೆ ದೇಶದ ಎಲ್ಲ ಭಾಗಗಳಿಂದ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಬೇಡಿಕೆಗಳು ಬರಲಾರಂಭಿಸಿವೆ. ಇದನ್ನು ಅನುಸರಿಸಿ ಸಾಮೂಹಿಕ ಚುಚ್ಚು ಹಾಕುವ ಆಂದೋಲನ ಹಮ್ಮಿಕೊಳ್ಳಲಾಗಿದ್ದು, ದೇಶದ ಎಲ್ಲ ರಾಜ್ಯಗಳಲ್ಲೂ ಅದನ್ನು ನಡೆಸಿಕೊಂಡು ಬರಲಾಗುತ್ತಿದೆ. ಈ ಆಂದೋಲನದಲ್ಲಿ ತಪಾಸಿಸಲ್ಪಟ್ಟ ಚುಚ್ಚು ಹಾಕಿಸಿಕೊಂಡವರ ಒಟ್ಟು ಸಂಖ್ಯೆಯು ಅನುಕ್ರಮವಾಗಿ ಆರು ಕೋಟಿ ಮತ್ತು ಎರಡು ಕೋಟಿಯಾಗಿದೆ. ಈ ಹಂತದಲ್ಲಿ ಮತ್ತೆ ಬಿ.ಸಿ.ಜಿ. ಚುಚ್ಚುಮದ್ದಿನ ಉಪಯುಕ್ತತೆ ಮತ್ತು ಪರಿಣಾಮಕಾರಿತ್ವದ ಬಗ್ಗೆ ಕೆಲ ಸಂದೇಹಗಳನ್ನು ಎತ್ತಿರುವುದು ನಿಜಕ್ಕೂ ದುರದೃಷ್ಟಕರವಾಗಿದೆ. ಹೀಗಾಗಿ ನಮ್ಮ ದೇಶದಲ್ಲಿ ಲಸಿಕೆ ನೀಡುವ ಕಾರ್ಯಕ್ರಮದ ಅಗತ್ಯವನ್ನು ಪುನರುಚ್ಚರಿಸುವುದು ಅಗತ್ಯವಾಗಿ ಪರಿಣಮಿಸಿದೆ.

ಭಾರತದಲ್ಲಿ ಕ್ಷಯರೋಗದ ಸಮಸ್ಯೆ ಎಷ್ಟು ಗಂಭೀರವಾಗಿದೆ ಎಂದು ಮಾನ್ಯ ಸದಸ್ಯರೆಲ್ಲರಿಗೂ ಗೊತ್ತಿರುವ ಸಂಗತಿಯಾಗಿದೆ. ಭಾರತದಲ್ಲಿ ಕ್ಷಯರೋಗವನ್ನು ನಿಯಂತ್ರಿಸಲು ಹಣಕಾಸು ಮತ್ತು ತರಬೇತಿ ಹೊಂದಿದ ಸಿಬ್ಬಂದಿಯ ಕೊರತೆ ಇರುವುದು ಎಲ್ಲರಿಗೂ ತಿಳಿದಿರುವುದೇ ಆಗಿದೆ. ಅಪಾರ ಪ್ರಮಾಣದ ಸಂಪನ್ಮೂಲ ಹೊಂದಿರುವ ರಾಷ್ಟ್ರಗಳಲ್ಲಿ ಅನುಸರಿಸುತ್ತಿರುವ ವಿಧಾನಗಳಿಗೆ ಹೋಲಿಸಿದರೆ ನಮ್ಮ ದೇಶದ ಪರಿಸ್ಥಿತಿ ತೀರಾ ಶೋಚನೀಯವಾಗಿದೆ. ನಮ್ಮ ದೇಶದಲ್ಲಿ ಈ ವ್ಯಾಧಿಯನ್ನು ನಿಯಂತ್ರಿಸಲು ನಮ್ಮಲ್ಲಿ ಲಭ್ಯವಿರುವ ಸಂಪನ್ಮೂಲಗಳಿಗೆ ಅನುಗುಣವಾಗಿ ಅತ್ಯಂತ ಸುರಕ್ಷಿತ ಹಾಗೂ ಪರಿಣಾಮಕಾರಿ ವಿಧಾನಗಳನ್ನು ರೂಪಿಸಿಕೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ನಮ್ಮ ಪಂಚವಾರ್ಷಿಕ ಯೋಜನೆಗಳಲ್ಲಿ ಜನರ ಜೀವನ ಮಟ್ಟ ಎತ್ತರಿಸುವ ಮತ್ತು ಅವರಿಗೆ ಪೌಷ್ಟಿಕ ಆಹಾರ ಒದಗಿಸುವ, ವಸತಿ ಹಾಗೂ ಆಸ್ಪತ್ರೆಗಳಲ್ಲಿ ಹಾಸಿಗೆಗಳ ಸಂಖ್ಯೆ ಹೆಚ್ಚಿಸುವ ಮತ್ತು ಚಿಕಿತ್ಸಾಲಯಗಳನ್ನು ತೆರೆಯುವ ಇತರ ಎಲ್ಲ ಸೌಲಭ್ಯಗಳನ್ನು ಕಲ್ಪಿಸುವ ಯೋಜನೆಗಳನ್ನು ಅಳವಡಿಸಲಾಗುತ್ತಿದೆ ಮತ್ತು ಅವುಗಳನ್ನು ಅನುಷ್ಠಾನಕ್ಕೆ ತರಲಾಗುತ್ತಿದೆ. ಈ ರೀತಿಯ ಸೌಕರ್ಯಗಳನ್ನು ಕಲ್ಪಿಸಿದಾಗ ಅದು ಜನರಲ್ಲಿ ಸಹಜವಾಗಿಯೇ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುವುದು ಎಂಬುವುದರಲ್ಲಿ ಯಾವ ಅನುಮಾನವೂ ಇಲ್ಲ. ಆದರೆ ಇಂತಹ ಕಾರ್ಯಕ್ರಮಗಳ ಅನುಷ್ಠಾನದಿಂದ ರಾತ್ರಿ ಬೆಳಗಾಗುವುದರೊಳಗಾಗಿ ಈ ಪಿಡುಗನ್ನು ನಿವಾರಿಸುವುದು ಸಾಧ್ಯವಿಲ್ಲದ ವಿಷಯವಾಗಿದೆ. ಹಾಗಾಗಿ ಕ್ಷಯರೋಗದ ಪ್ರಮಾಣ ಹೆಚ್ಚುವುದನ್ನು ತಡೆ ಹಿಡಿಯಲು

---

* ಬಿ.ಸಿ.ಜಿ. ಲಸಿಕೆ ನೀಡುವ ಆಂದೋಲನಕ್ಕೆ ಸಂಬಂಧಿಸಿದಂತೆ ಎದ್ದ ವಿವಾದಕ್ಕೆ ನಿಯಮಾವಳಿ 216ರ ಅಡಿಯಲ್ಲಿ ತುರ್ತು ಸಾರ್ವಜನಿಕ ಪ್ರಾಮುಖ್ಯದ ವಿಷಯಕ್ಕೆ ಎಸ್.ಎಂ. ಲಿಂಗಂ ಅವರು ಮಂಡಿಸಿದ ಗಮನ ಸೆಳೆಯುವ ಸೂಚನೆಗೆ ಉತ್ತರ ನೀಡುತ್ತಾ (ರಾಜ್ಯಸಭೆ ಚರ್ಚೆ ಆಗಸ್ಟ್ 31, 1955 ಸಿಸಿ 11611 - 11616)

ಈ ಕಾರ್ಯಕ್ರಮದ ಬಗ್ಗೆ ಅಸಹಜವಾದ ಭೀತಿ ಆವರಿಸಿತು. ನಮಗೆ ತಿಳಿದಿರುವಂತೆ ಈ ಪತ್ರಿಕೆಗಳು ಅಂತಹ 25 ಪ್ರಕರಣಗಳನ್ನು ವರದಿ ಮಾಡಿದ್ದವು. ಅವು ಮದ್ರಾಸ್ ರಾಜ್ಯಕ್ಕೆ ಒಳಪಟ್ಟಿದ್ದವು. ಅವುಗಳಲ್ಲಿ ಬಹುತೇಕ ಪ್ರಕರಣಗಳನ್ನು ತನಿಖೆಗೆ ಒಳಪಡಿಸಲಾಯಿತು. ಹಾಗೆ ತನಿಖೆಗೆ ಒಳಪಟ್ಟ ಬಹುತೇಕ ಪ್ರಕರಣಗಳಲ್ಲಿ ಬಹಳಷ್ಟು ಮಂದಿಗೆ ಲಸಿಕೆಯನ್ನೇ ನೀಡಿರಲಿಲ್ಲ. ಬದಲಾಗಿ ಲಸಿಕೆ ನೀಡಿಕೆಗೆ ಮುಂಚಿತವಾಗಿ ನೀಡುವ ಚುಚ್ಚುಮದ್ದುಗಳನ್ನಷ್ಟೇ ನೀಡಲಾಗಿತ್ತು ಎಂಬ ಅಂಶವು ದೃಢಪಟ್ಟಿತ್ತು. ಉಳಿದ ಪ್ರಕರಣಗಳು ಎಲ್ಲರಿಗೂ ಬರುವ ಸಾಮಾನ್ಯ ರೀತಿಯ ಕಾಯಿಲೆಗಳಾಗಿದ್ದವು.

ಕೊಯಮುತ್ತೂರಿನಲ್ಲಿ ಸಂಭವಿಸಿತೆನ್ನಲಾದ ದೃಷ್ಟಿ ಕಳೆದುಹೋದ ಪ್ರಕರಣವು ಭಾರಿ ಚರ್ಚೆಗೆ ಒಳಗಾಗಿ ಮತ್ತು ಅದಕ್ಕೆ ಬಿಸಿಜಿಯೇ ಕಾರಣವೆಂದು ಹೇಳಲಾಗಿತ್ತು. ತಜ್ಞ ವೈದ್ಯರ ಸಮಿತಿಯೊಂದು ಈ ಪ್ರಕರಣದ ಆಮೂಲಾಗ್ರ ತನಿಖೆ ನಡೆಸಿ ದೃಷ್ಟಿ ಕಳೆದುಹೋದ ಪ್ರಕರಣವು ಮಿದುಳಿನ ಉರಿಯೂತದಿಂದಾಗಿ ಸಂಭವಿಸಿದ್ದೆಂದು ಕಂಡುಹಿಡಿತು. ಲಸಿಕೆ ಹಾಕುವ ಆ ಸಂದರ್ಭದಲ್ಲಿ ಕೊಯಮುತ್ತೂರಿನಲ್ಲಿ ಈ ವ್ಯಾಧಿ ವ್ಯಾಪಕವಾಗಿ ಹರಡಿತ್ತು. [illegible] ಬಂದಿದ್ದ ಆಂಶಿಕ ಕುರುಡುತನದ ಇಂತಹುದೇ ಇನ್ನೊಂದು ಪ್ರಕರಣದಲ್ಲೂ ಆಕೆಗೆ ಲಸಿಕೆಯನ್ನೇ ನೀಡಿರಲಿಲ್ಲ ಎಂಬುದು ತನಿಖೆಯಿಂದ ಸ್ಪಷ್ಟವಾಯಿತು. ಹೀಗೆ ಈ ತನಿಖೆಯು ಬಿಸಿಜಿ ಯಾವ ರೀತಿಯಿಂದಲೂ ಹಾನಿಕಾರಕವಾಗಿರಲಿಲ್ಲ ಎಂಬುದು ಸ್ಪಷ್ಟವಾಗಿ ತೋರಿಸಿಕೊಟ್ಟಿತು. ಅದೇ ಅವಧಿಯಲ್ಲಿ [illegible] ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿ ತನಿಖೆ ಕೈಗೊಂಡ 24 ಕುರುಡುತನದ ಪ್ರಕರಣಗಳಲ್ಲಿ ಮೂರು ಮಿದುಳಿನ ಉರಿಯೂತದಿಂದ ಸಂಭವಿಸಿದವುಗಳು ಎಂಬುದು [illegible]. ಕಳೆದ ಎಂಟು ವರ್ಷಗಳ ಅವಧಿಯಲ್ಲಿ ಸಂಭವಿಸಿರುವ [illegible] ಅಂತಹ ತೊಡಕುಗಳ ಪ್ರಕರಣಗಳ ಆಧಾರದಲ್ಲಿ [illegible] ಎಂದು ತೀರ್ಮಾನಕ್ಕೆ ಬರುವುದು ಯಾವ ರೀತಿಯಲ್ಲೂ ಸಮರ್ಥನೀಯವಲ್ಲ. [illegible] ಕೋಟಿ ಜನರಿಗೆ ಬಿಸಿಜಿ ಚುಚ್ಚುಮದ್ದು ನೀಡಿರುವಾಗ ಅಂತಹ ಪ್ರಕರಣಗಳು [illegible] ಅವುಗಳನ್ನು ಈ ಆಂದೋಲನದ ವಿರುದ್ಧದ ಟೀಕೆಗಳಿಗೆ ಬಳಸಿಕೊಳ್ಳುವುದು [illegible] ಸಮರ್ಥನೀಯವಲ್ಲ. ಬಿ.ಸಿ.ಜಿ. ಕಾರ್ಯಕ್ರಮದ ಬಗ್ಗೆ [illegible] ವಿವಾದಗಳ [illegible] ನಡುವೆಯೂ ಈ ಆಂದೋಲನವು ದೇಶಾದ್ಯಂತ ಯಶಸ್ವಿಯಾಗಿ [illegible] ನನಗೆ ಅತ್ಯಂತ ಸಮಾಧಾನದ ಸಂಗತಿಯಾಗಿದೆ. ಈ ನಿಟ್ಟಿನಲ್ಲಿ ಮದ್ರಾಸ್ ರಾಜ್ಯವು ಕೂಡಾ ಕಾರ್ಯಕ್ರಮದಲ್ಲಿ ಸರ್ಕಾರದೊಂದಿಗೆ ಸಹಕರಿಸುತ್ತಿರುವುದು [illegible].

ಬಿ.ಸಿ.ಜಿ.ಯು ಒಂದು [illegible] ಲಸಿಕೆಯಾಗಿದ್ದು ಅದು ಕ್ಷಯರೋಗವನ್ನು [illegible] ಎಂದು ಹೇಳಿರುವ [illegible] ಈಗಾಗಲೇ [illegible] ಬಿ.ಸಿ.ಜಿ. ಚುಚ್ಚುಮದ್ದು [illegible] ಅದಕ್ಕೆ [illegible] ಬಿ.ಸಿ.ಜಿ. [illegible] ಸಂಬಂಧಿಸಿದ ಎಲ್ಲ [illegible] ಕ್ಷಯರೋಗದ ಪ್ರಕರಣಗಳಲ್ಲಿ [illegible] ಕ್ಷಯ ರೋಗದ ಪ್ರಮಾಣದಲ್ಲಿ ತೀವ್ರ ಕುಸಿತ ಕಂಡುಬಂದಿದೆ. ಈ ಕಾರ್ಯಕ್ರಮದ

ಫಲಿತಾಂಶವಾಗಿ ಡೆನ್ಮಾರ್ಕ್ ಇಂದು ಕ್ಷಯರೋಗದ ಮರಣ ಪ್ರಮಾಣ ಪಟ್ಟಿಯಲ್ಲಿ ಅತ್ಯಂತ ಕಡಿಮೆಯಾಗಿರುವ ದೇಶವಾಗಿದೆ.

ಹೇಮಂತ ಲಸಿಕೆಯ ಬಗೆಗಿನ ಆಕ್ಷೇಪಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಸಿಡುಬಿನ ಲಸಿಕೆ, ಹಳದಿ ಜ್ವರದ ಲಸಿಕೆ, ಆಫ್ರಿಕನ್ ಪ್ಲೇಗ್‌ನ ಲಸಿಕೆಗಳಂತಹ ಇತರ ಎಲ್ಲ ವ್ಯಾಕ್ಸಿನ್‌ಗಳು ಇದೇ ರೀತಿಯವುಗಳಾಗಿವೆ. ಈ ಎಲ್ಲ ಲಸಿಕೆಗಳು ಜಗತ್ತಿನಾದ್ಯಂತ ಬಳಕೆಯಲ್ಲಿದ್ದು ಅವು ಹಾನಿಕಾರಕವಾಗಿಲ್ಲ ಎಂಬುದನ್ನು ಸಾರ್ವತ್ರಿಕವಾಗಿ ಒಪ್ಪಿಕೊಳ್ಳಲಾಗಿದೆ.

ಹೀಗೆ ಬಿಸಿಜಿಯು ಎಳ್ಳಷ್ಟೂ ಹಾನಿಕಾರವಲ್ಲದ ಲಸಿಕೆ ಎಂಬುದು ರುಜುವಾತಾಗಿದೆ ಮತ್ತು ಅದು ಕ್ಷಯರೋಗದ ವಿರುದ್ಧ ರೋಗನಿರೋಧಕ ಶಕ್ತಿಯನ್ನು ಹೊಂದಿದೆ. ಕ್ಷಯರೋಗವನ್ನು ನಿಯಂತ್ರಿಸುವ ಪ್ರಯತ್ನದಲ್ಲಿ ಇದು ನಮ್ಮ ಕೈಯಲ್ಲಿರುವ ಅತ್ಯಂತ ಪರಿಣಾಮಕಾರಿ ಅಸ್ತ್ರವಾಗಿದೆ ಮತ್ತು ಕ್ಷಯರೋಗ ನಿವಾರಣೆಯ ದಿಸೆಯಲ್ಲಿ ಏಕಕಾಲಕ್ಕೆ ನಾವು ಅನುಸರಿಸುತ್ತಿರುವ ಇತರ ಕ್ರಮಗಳಿಗೆ ಅದು ಪೂರಕವಾಗಿದೆ.

ಹೀಗಾಗಿ ಈ ವಿಷಯದಲ್ಲಿ ಯಾವುದೇ ರೀತಿಯ ಭೀತಿಗೆ ಅವಕಾಶ ಇಲ್ಲ ಎಂಬ ಅಂಶವನ್ನು ನಾನು ಈ ಸಂದರ್ಭದಲ್ಲಿ ಮತ್ತೊಮ್ಮೆ ಒತ್ತಿ ಹೇಳಲು ಬಯಸುತ್ತೇನೆ. ದೇಶದಲ್ಲಿ ಅತ್ಯಂತ ಬಿರುಸಿನಿಂದ ಕೈಗೊಂಡಿರುವ ಈ ಉಪಯುಕ್ತ ಆಂದೋಲನವನ್ನು ಮುಂದುವರಿಸಿಕೊಂಡು ಹೋಗುವ ನೀತಿಯನ್ನು ಪುನರ್ ವಿಮರ್ಶಿಸಲು ಕೇಂದ್ರ ಸರ್ಕಾರಕ್ಕೆ ಯಾವುದೇ ಸೂಕ್ತ ಕಾರಣಗಳಿಲ್ಲ ಎಂಬ ಅಂಶವನ್ನು ಈ ಸಂದರ್ಭದಲ್ಲಿ ಸ್ಪಷ್ಟಪಡಿಸಬಯಸುತ್ತೇನೆ.

## 22. ಅನರ್ಹರ ಸಂತಾನಶಕ್ತಿ ಹರಣ ವಿಧೇಯಕ *

ಈ ವಿಷಯದಲ್ಲಿ ಸರ್ಕಾರದ ದೃಷ್ಟಿಕೋನ ಮತ್ತು ಅಭಿಪ್ರಾಯಗಳನ್ನು ವಿವರಿಸಲು ಅವಕಾಶ ಮಾಡಿಕೊಟ್ಟದ್ದಕ್ಕಾಗಿ ನನಗೆ ಸಂತಸವಾಗಿದೆ. ಈ ವಿಷಯದಲ್ಲಿ ಈ ವಿಧೇಯಕವನ್ನು ಮಂಡಿಸಿದ ಸನ್ಮಾನ್ಯ ಸದಸ್ಯರಷ್ಟೇ ನಾನು ಕಾತರಳಾಗಿದ್ದೇನೆ. ಕುಷ್ಠರೋಗ, ಸಿಫಿಲಿಸ್, ಮನೋವೈಕಲ್ಯ ಮತ್ತು ಬುದ್ಧಿ ಮಾಂದ್ಯಗಳಂತಹ ವ್ಯಾಧಿಗಳನ್ನು ನಿರ್ಮೂಲನೆಗೊಳಿಸುವ ವಿಚಾರದಲ್ಲಿ ನಾನು ಮಾನ್ಯ ಸದಸ್ಯರಷ್ಟೇ ಆಸಕ್ತಳಾಗಿದ್ದೇನೆ. ಆದರೆ ನಮ್ಮ ದೃಷ್ಟಿಯಲ್ಲಿರುವ ಧ್ಯೇಯವನ್ನು ಸಾಧಿಸಲು ಇದು ಸರಿಯಾದ ಕ್ರಮವಲ್ಲ ಎಂಬುದನ್ನು ನಾನು ಒತ್ತಿ ಹೇಳಲು ಬಯಸುತ್ತೇನೆ. ಕುಷ್ಠ ವ್ಯಾಧಿ, ಸಿಫಿಲಿಸ್‌ನಂತಹ ವ್ಯಾಧಿಗಳಿಗೆ ಜಗತ್ತಿನ ಯಾವುದೇ ದೇಶದ ಕಾಯ್ದೆ ಪುಸ್ತಕಗಳಲ್ಲೂ ಕಾಯ್ದೆಗಳಿಲ್ಲ. ಸಿಫಿಲಿಸ್ ಆಧುನಿಕ ವೈದ್ಯ ಪದ್ಧತಿಯಿಂದ ಸಂಪೂರ್ಣ ಗುಣಮುಖಗೊಳಿಸಬಲ್ಲ ವ್ಯಾಧಿಯಾಗಿದೆ. ಸಿಫಿಲಿಸ್ ವ್ಯಾಧಿ ಹೊಂದಿರುವವರ ಮಕ್ಕಳಿಗೂ ಸಿಫಿಲಿಸ್ ಬರುತ್ತದೆ ಎಂಬುದಕ್ಕೆ ಯಾವ ಸಾಕ್ಷ್ಯಾಧಾರವೂ ಇಲ್ಲ. ಕುಷ್ಠ ವ್ಯಾಧಿಯ ವಿಷಯದಲ್ಲಿ ಹೇಳುವುದಾದರೆ ಅದು ವಂಶಪಾರಂಪರ್ಯದಿಂದ ಬರುವ ವ್ಯಾಧಿಯಲ್ಲ ಎಂಬುದು ಜಗತ್ತಿನ ತಜ್ಞರ ಅಭಿಮತವಾಗಿದೆ. ಕುಷ್ಠರೋಗ ವ್ಯಾಧಿಯನ್ನು ಈಗಾಗಲೇ ಅನೇಕ ದೇಶಗಳಲ್ಲಿ ನಿರ್ಮೂಲನೆಗೊಳಿಸಲಾಗಿದೆ. ನನ್ನ ಬಳಿಯೂ ಇದಕ್ಕೆ ಬೇಕಾದ ಸಾಧನ ಸಂಪನ್ಮೂಲಗಳು ಇರುತ್ತಿದ್ದರೆ ಅಂದರೆ ಹಣಕಾಸಿನ ಬಲ ಇದ್ದಿದ್ದರೆ ನಮ್ಮ ದೇಶದಿಂದಲೂ ನಾನು ಕುಷ್ಠರೋಗವನ್ನು ನಿರ್ಮೂಲನೆಗೊಳಿಸುತ್ತಿದ್ದೆ ಎಂಬ ಖಾತರಿ ನನಗಿದೆ. ಕುಷ್ಠ ರೋಗಿಗಳು ಮತ್ತು ಅವರ ಮಕ್ಕಳನ್ನು ಒಂದು ನಿರ್ದಿಷ್ಟ ಅವಧಿಗೆ ಪ್ರತ್ಯೇಕಿಸುವ ಮತ್ತು ಬೇರ್ಪಡಿಸುವ ಮೂಲಕ ಈ ವ್ಯಾಧಿಯನ್ನು ನಿರ್ಮೂಲನೆಗೊಳಿಸಬಹುದು. ಈ ಎರಡು ವ್ಯಾಧಿಗಳಲ್ಲಿ ಸಂತಾನ ಸಾಮರ್ಥ್ಯ ಹರಣದ ಪ್ರಶ್ನೆಯನ್ನು ಅನ್ವಯಿಸಬಾರದು.

ಮನೋವೈಕಲ್ಯಕ್ಕೆ ಸಂಬಂಧಿಸಿದಂತೆ ವಿಧೇಯಕದ 2(5) ಖಂಡದಲ್ಲಿ 'ಅನರ್ಹರು' ಎಂಬುದನ್ನು, " ಯಾವನೇ ವ್ಯಕ್ತಿ ಗಂಡಸರಾಗಿರಲಿ, ಹೆಂಗಸರಾಗಿರಲಿ ಯಾವುದೇ ವಿಧದ ಕುಷ್ಠ ಅಥವಾ ಸಿಫಿಲಿಸ್, ಮನೋ ವೈಕಲ್ಯ ಅಥವಾ ಬುದ್ಧಿ ಮಾಂದ್ಯ-ಅನುವಂಶಿಕವಾಗಿರಲಿ ಅಥವಾ ಬೇರೆ ಕಾರಣಗಳಿಂದ ಬಂದಿರುವುದಾಗಿರಲಿ ಮತ್ತು ಸಂತಾನ ಶಕ್ತಿ ಹರಣ ಮಾಡದೇ ಇದ್ದಲ್ಲಿ ಅಂತಹ ಮಕ್ಕಳಿಗೆ ಜನ್ಮ ನೀಡುವ ಸಂದರ್ಭ ಇದ್ದಲ್ಲಿ " ಎಂದು ವ್ಯಾಖ್ಯಾನಿಸಲಾಗಿದೆ. ಯಾವ ರೀತಿಯ ಮನೋ ವೈಕಲ್ಯ ಅಥವಾ ಬುದ್ಧಿ ಮಾಂದ್ಯತೆ ಅನುವಂಶಿಕ ಎಂಬುದನ್ನು ಖಚಿತವಾಗಿ ಹೇಳುವ ಸ್ಥಿತಿಯನ್ನು ನಾವಿನ್ನೂ ಮುಟ್ಟಿಲ್ಲ. ಸಂತಾನ ಸಂಬಂಧಿ ಶಾಸ್ತ್ರ ಇಂದು ಅತಿ ದೊಡ್ಡ ವಿಜ್ಞಾನವಾಗಿದೆ. ಆದರೆ ಬುದ್ಧಿಭ್ರಮಣೆ ಹೊಂದಿರುವರಿಗೆ ಬುದ್ಧಿಮಾಂದ್ಯ ಮಗುವೇ ಹುಟ್ಟುತ್ತದೆ ಎಂಬುದನ್ನು ನಿಖರವಾಗಿ ಹೇಳಬಲ್ಲ ಮಟ್ಟಿಗೆ ಈ ವೈದ್ಯ ವಿಜ್ಞಾನ ಪ್ರಗತಿಯನ್ನು ಸಾಧಿಸಿಲ್ಲ. ಹೀಗೆ ನಮಗೆ ಈ ಸಂಬಂಧದಲ್ಲಿ ಲಭ್ಯವಿರುವ ವೈದ್ಯಕೀಯ ಸಾಕ್ಷ್ಯ ಹಿನ್ನಲೆಯಿಂದ ನೋಡಿದಾಗ ಇಂತಹ ವಿಧೇಯಕವೊಂದು ಅವಶ್ಯವಾಗಿದೆ ಎಂದು ನನಗನಿಸುವುದಿಲ್ಲ. ಗಂಡಸು ಅಥವಾ ಹೆಂಗಸಿನ ಸಂತಾನ ಶಕ್ತಿ ಹರಣ ಅತ್ಯಂತ ಗಂಭೀರ ವಿಷಯವಾಗಿದೆ. ಈ ವಿಷಯದಲ್ಲಿ

---

* ಕೆಲವೊಂದು ವರ್ಗದ ಜನರ ಅನಪೇಕ್ಷಿತ ದೈಹಿಕ ಮತ್ತು ಮಾನಸಿಕ ಸ್ಥಿತಿ ಹೊಂದಿರುವವರ ಸಂತಾನ ಶಕ್ತಿಯ ಪ್ರತಿಬಂಧಿಸುವ ಸಂಬಂಧದಲ್ಲಿ ಶ್ರೀ. ಎಸ್.ವಿ. ರಾಮಸ್ವಾಮಿ ಅವರು ಮಂಡಿಸಿದ ಖಾಸಗಿ ನಿರ್ಣಯದ ಮೇಲಿನ ಚರ್ಚೆಗೆ ಉತ್ತರಿಸುತ್ತಾ (ಲೋಕಸಭೆ ಚರ್ಚೆ, ಜುಲೈ 30, 1952, ಸಿಸಿ 4894 - 95).

ಯಾವ ಸರ್ಕಾರವಾದರೂ ಬಲವಂತಕ್ಕೆ ಮುಂದಾಗುವ ವಿಚಾರವನ್ನು ಯೋಚಿಸಲೇಬಾರದು. ಅದರಲ್ಲೂ ಅದರ ಪ್ರತಿಕೂಲ ಪರಿಣಾಮಗಳ ಬಗ್ಗೆ ಅತ್ಯಂತ ಖಚಿತವಾದ ಪರಿಜ್ಞಾನ ಇಲ್ಲದ ಹೊರತು ಇಂತಹ ಕ್ರಮಕ್ಕೆ ಮುಂದಾಗಬಾರದು. ಅದು ಅಲ್ಲದೆ ವಿಧೇಯಕ ಮಂಡಿಸಿರುವ ಮಾನ್ಯ ಸದಸ್ಯರು ಸೂಚಿಸಿರುವ ಮಂಡಳಿಗಳು ಈ ವಿಷಯದಲ್ಲಿ ಯಾವುದೇ ರೀತಿಯ ಅನುಭವ ಇಲ್ಲದವರನ್ನು ಕೂಡಾ ಒಳಗೊಂಡಿರುವ ಸಾಧ್ಯತೆ ಇದೆ. ಅಂತಹ ಸಂದರ್ಭಗಳಲ್ಲಿ ತೆಗೆದುಕೊಳ್ಳುವ ತೀರ್ಮಾನಗಳು ಸಮಗ್ರವಾಗಿರುವುದಿಲ್ಲ ಮತ್ತು ನಿರ್ಣಾಯಕವಾಗಿರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಜನರು ನ್ಯಾಯಾಲಯಗಳಿಗೆ ಹೋಗುತ್ತಾರೆ. ಆದರೆ ಇಂತಹ ಪ್ರಕರಣಗಳು ಸಮಗ್ರವಾಗಿ ಕಾನೂನಿಗೆ ಸಂಬಂಧಪಟ್ಟ ವಿಷಯಗಳೇ ಆಗಿರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ತಜ್ಞರು ಬೇಕಾಗುತ್ತಾರೆ. ಅದಕ್ಕೆ ಬೇಕಾಗುವ ಸರ್ಕಾರಿ ಆಡಳಿತ ಯಂತ್ರವು ನಮ್ಮಲ್ಲಿ ಇಲ್ಲ. ಈ ವಿಧೇಯಕವನ್ನು ಕಾನೂನಾಗಿ ಪರಿವರ್ತಿಸಿದರೆ ಅದರಿಂದ ಅಂತಹ ಖರ್ಚು ವೆಚ್ಚಗಳು ಬರುವುದಿಲ್ಲ ಎಂಬ ಮಾನ್ಯ ಸದಸ್ಯರ ಅಭಿಪ್ರಾಯವನ್ನು ನಾನು ಒಪ್ಪಿಕೊಳ್ಳಲು ಸಿದ್ಧಳಿಲ್ಲ. ಹೀಗಾಗಿ ನಾನು ಈ ವಿಧೇಯಕವನ್ನು ವಿರೋಧಿಸುತ್ತೇನೆ ಮತ್ತು ಅದೇ ವೇಳೆಗೆ ಮಾನ್ಯ ಸದಸ್ಯರು ಉದ್ದೇಶಿಸಿರುವ ಧ್ಯೇಯಗಳನ್ನು ಈಡೇರಿಸಲು ಇತರ ವಿಧಾನಗಳು ಲಭ್ಯ ಇವೆ ಎಂಬ ಅಂಶವನ್ನು ಇಲ್ಲಿ ಪುನರುಚ್ಚರಿಸುತ್ತೇನೆ. ಮಾನ್ಯ ಸದಸ್ಯರಂತೆಯೇ ನಾನು ಕೂಡಾ ಈ ದೇಶದಿಂದ ಅನೇಕ ಪಿಡುಗುಗಳನ್ನು ನಿರ್ಮೂಲನೆಗೊಳಿಸುವಲ್ಲಿ ಆಸಕ್ತಳಾಗಿದ್ದೇನೆ. ಒಟ್ಟಿನಲ್ಲಿ ಹಣಕಾಸಿನ ದೃಷ್ಟಿಯಿಂದ, ವ್ಯಾವಹಾರಿಕ ದೃಷ್ಟಿಯಿಂದ ಮತ್ತು ವೈಜ್ಞಾನಿಕ ದೃಷ್ಟಿಯಿಂದ ಈ ವಿಧೇಯಕವು ಅಂಗೀಕಾರಾರ್ಹವಾಗಿಲ್ಲ. ಹಾಗಾಗಿ ಈ ವಿಧೇಯಕವನ್ನು ಮಾನ್ಯ ಸದಸ್ಯರು ಹಿಂತೆಗೆದುಕೊಳ್ಳಬೇಕೆಂಬ ಮನವಿ ಮಾಡಿಕೊಳ್ಳುತ್ತಿದ್ದೇನೆ. *

* ಅನಂತರ ಈ ಮಸೂದೆಯನ್ನು ತಿರಸ್ಕರಿಸಲಾಯಿತು.

## 23. ವಯಸ್ಕರ ಪುನರ್‌ಸಂತಾನಶಕ್ತಿ ಹರಣದ ಮೇಲಿನ ಗೊತ್ತುವಳಿ *

ಮಾನ್ಯ ಉಪ ಸಭಾಪತಿಗಳೇ, ನನ್ನ ಮಾನ್ಯ ಮಿತ್ರರಾದ ಮತ್ತು ನನ್ನ ಒಡನಾಡಿಗಳಾದ ಶ್ರೀಮತಿ ಲೀಲಾವತಿ ಮುನ್ಷಿ ಅವರು ಸದನದ ಮುಂದೆ ಮಂಡಿಸಿದ ನಿರ್ಣಯದ ಮೇಲೆ ಇಂದು ಬೆಳಿಗ್ಗೆ ಸದಸ್ಯರು ನಡೆಸಿದ ಚರ್ಚೆಯನ್ನು ಅತ್ಯಂತ ಆಸಕ್ತಿಯಿಂದ ಆಲಿಸಿದ್ದೇನೆ. ಈ ನಿರ್ಣಯವನ್ನು ಬೆಂಬಲಿಸಿ ಮಾತನಾಡಿದವರು ಈ ಪ್ರಶ್ನೆಯನ್ನು ಸರಿಯಾಗಿ ಅಭ್ಯಸಿಸಿಲ್ಲ ಎಂದು ನಾನು ವಿಷಾದದಿಂದ ಹೇಳುತ್ತಿದ್ದೇನೆ. ಇಂದಿನ ಪರಿಸ್ಥಿತಿಯ ಬಗ್ಗೆ ಸರಿಯಾದ ಗ್ರಹಿಕೆ ಅವರಲ್ಲಿ ಇಲ್ಲದಿರುವುದು ವಿಷಾದನೀಯವಾಗಿದೆ. ಹಿಂದಿನ ಅಧಿವೇಶನದಲ್ಲೂ ಇದೇ ಧ್ಯೇಯೋದ್ದೇಶವನ್ನು ಹೊಂದಿದ್ದ ಒಂದು ವಿಧೇಯಕವನ್ನು ಸದನದಲ್ಲಿ ಮಂಡಿಸಲಾಗಿತ್ತು. ಆಗಲೂ ನಾನು ನನ್ನೆಲ್ಲ ಶಕ್ತಿ ವ್ಯಯಿಸಿ ಈ ವಿಧೇಯಕವನ್ನು ವಿರೋಧಿಸಿದ್ದೆ. ಈ ವಿಧೇಯಕವು ವೈಜ್ಞಾನಿಕ ದೃಷ್ಟಿಯಿಂದ ಸಂಪೂರ್ಣ ಅವೈಜ್ಞಾನಿಕವಾಗಿದೆ ಮತ್ತು ನೈತಿಕ ದೃಷ್ಟಿಯಿಂದ ತೀರಾ ಅನೈತಿಕವಾಗಿದೆ ಮತ್ತು ವ್ಯವಹಾರಿಕ ದೃಷ್ಟಿಯಿಂದ ಸಂಪೂರ್ಣ ಅವ್ಯವಹಾರಿಕವಾಗಿದೆ. ಈ ನಿರ್ಣಯವನ್ನು ಬೆಂಬಲಿಸಿ ಮಾತನಾಡಿದ ಸದಸ್ಯರ ಮನಸ್ಸಿನಲ್ಲಿ ವಿಚಾರಗಳ ಗೊಂದಲವಿದೆ. ಹೀಗಾಗಿ ಅವರು ಮಾಡುತ್ತಿರುವ ವಾದವು ಗೊಂದಲಮಯವಾಗಿದೆ. ಈ ನಿರ್ಣಯವನ್ನು ಮಂಡಿಸಿ ಮಾತನಾಡಿದ ಗೌರವಾನ್ವಿತ ಸದಸ್ಯರು ನಮ್ಮ ದೇಶ ಜನಸಂಖ್ಯೆ ಹೆಚ್ಚಳದ ಸಮಸ್ಯೆಯಿಂದ ಬಳಲುತ್ತಿದೆ ಮತ್ತು ಈ ಪಿಡುಗನ್ನು ತಡೆಹಿಡಿಯುವ ಉದ್ದೇಶದಿಂದಲೇ ಈ ನಿರ್ಣಯವನ್ನು ಮಂಡಿಸಲಾಗಿದೆ ಎಂದೇ ತಮ್ಮ ಚರ್ಚೆಯನ್ನು ಪ್ರಾರಂಭಿಸಿದ್ದಾರೆ. ಈ ನಿರ್ಣಯದ ಪರವಾಗಿ ಮಾತನಾಡಿರುವವರೆಲ್ಲರೂ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಗಮನಿಸಿದರೆ ನಮ್ಮ ದೇಶದಲ್ಲಿ ಲಕ್ಷ ಲಕ್ಷ ಸಂಖ್ಯೆಯಲ್ಲಿ ಬುದ್ಧಿ ಮಾಂದ್ಯ ಮಕ್ಕಳಿದ್ದಾರೆ, ಲಕ್ಷ ಲಕ್ಷ ಮಂದಿ ಗುಣಪಡಿಸಲಾಗದ ಆನುವಂಶಿಕ ವ್ಯಾಧಿಗಳಿಂದ ಬಳಲುವ ಮಕ್ಕಳಿದ್ದಾರೆ ಮತ್ತು ಅಂತಹವರ ಸಂತಾನ ಶಕ್ತಿಯನ್ನು ಹರಣ ಮಾಡುವುದು ಅನಿವಾರ್ಯವಾಗಿದೆ ಎಂಬ ಭಾವನೆ ಯಾರಲ್ಲಾದರೂ ಮೂಡಲೇಬೇಕು. ಕುಷ್ಠರೋಗ, ಕ್ಷಯರೋಗ ಮತ್ತು ನಾನಾ ರೀತಿಯ ಗುಹ್ಯ ರೋಗಗಳನ್ನು ಹೊತ್ತುಕೊಂಡೇ ಭೂಮಿಗೆ ಬರುವ ಮಕ್ಕಳ ಜನನವನ್ನು ತಡೆಯುವುದು ಇದರ ಉದ್ದೇಶ ಎಂದು ಈ ಬಗ್ಗೆ ಮಾತನಾಡಿದ್ದಾರೆ. ಸನ್ಮಾನ್ಯ ಸದಸ್ಯರಿಗೆ ಈ ಕುರಿತ ಅಂಕಿ-ಅಂಶಗಳು ಸಿಕ್ಕಿದ್ದಾದರೂ ಎಲ್ಲಿಂದ ಎಂಬುದು ನನಗೆ ವಿಸ್ಮಯವಾಗಿದೆ. ಈ ವಿಷಯ ಕುರಿತು ಮಾತನಾಡಿದವರು ಸಂತತಿ ವಿಜ್ಞಾನದ ಬಗ್ಗೆ ನಿಜವಾಗಿಯೂ ಅಧ್ಯಯನ ನಡೆಸಿದ್ದಾರೆಯೇ ಎಂಬುದನ್ನು ನಾನು ತಿಳಿಯಬಯಸುತ್ತೇನೆ. ಈ ಸದನದಲ್ಲಿನ ಇತರ ಎಲ್ಲ ಸದಸ್ಯರಂತೆ ನಾನು ಈ ವಿಷಯದಲ್ಲಿ ಅಷ್ಟೇ ಕಾಳಜಿ ಹೊಂದಿದ್ದೇನೆ. ಇಂತಹ ರೋಗಿಗಳು ಪಡುವ ಯಾತನೆ ನನಗೆ ಗೊತ್ತು. ಅದರ ನಿವಾರಣೆಗಾಗಿ ಏನನ್ನಾದರೂ ಮಾಡಲೇಬೇಕೆಂಬ ಕಾತರ ಎಲ್ಲರಂತೆ ನನ್ನಲ್ಲಿಯೂ ಇದೆ. ಆದರೆ ಇದಕ್ಕೆ ಸರಿಯಾದ ಮಾರ್ಗಗಳನ್ನು ಯೋಚಿಸಬೇಕಾಗಿದೆ. ಅದೇ ರೀತಿ ಅದರ ನಿರ್ಮೂಲನೆಯ ಉಪಾಯಗಳನ್ನು ಕಂಡುಕೊಳ್ಳಬೇಕಾಗಿದೆ.

---

* ಗುಣ ಪಡಿಸಲಾಗದ ರೋಗಗಳಿಂದ ಹಾಗೂ ಬುದ್ಧಿ ಭ್ರಮಣೆಯಿಂದ ಬಳಲುತ್ತಿರುವ ವಯಸ್ಕರನ್ನು ಸಂತಾನಶಕ್ತಿ ಹರಣಕ್ಕೆ ಒಳಪಡಿಸುವುದಕ್ಕೆ ಸಂಬಂಧಿಸಿದಂತೆ ಶ್ರೀಮತಿ. ಲೀಲಾವತಿ ಮುನ್ಷಿ ಅವರು ಮಂಡಿಸಿದ ಖಾಸಗಿ ನಿರ್ಣಯ ಕುರಿತು ನಡೆದ ಚರ್ಚೆಗೆ ಉತ್ತರ ನೀಡುತ್ತಾ (ರಾಜ್ಯಸಭೆ ಚರ್ಚೆ, ಆಗಸ್ಟ್ 28, 1953, ಸಿಸಿ 6633-43).

ಈ ನಿಟ್ಟಿನಲ್ಲಿ ನಾನು ವೈದ್ಯಕೀಯ ವಿಜ್ಞಾನವನ್ನೇ ಮೊರೆ ಹೋಗಬೇಕಾಗಿದೆ. ಆದರೆ ಮನೋವೈಕಲ್ಯ ಹೊಂದಿರುವವರು ಅಥವಾ ಕುಷ್ಠ ವ್ಯಾಧಿಯಿಂದ ನರಳುತ್ತಿರುವವರು ಅಥವಾ ಕ್ಷಯರೋಗಕ್ಕೆ ಈಡಾದವರು ಅಥವಾ ಗುಪ್ತ ರೋಗಗಳಿಂದ ಬಳಲುತ್ತಿರುವವರು ಎಂದೂ ಈ ವ್ಯಾಧಿಗಳಿಂದ ಗುಣಮುಖರಾಗುವುದಿಲ್ಲ ಮತ್ತು ಇಂತಹ ವ್ಯಾಧಿಗ್ರಸ್ತರು ಅವರ ರೋಗಗಳನ್ನು ತಮ್ಮ ಮಕ್ಕಳಿಗೂ ಬಳುವಳಿಯಾಗಿ ರವಾನಿಸುತ್ತಾರೆ ಎಂಬುದನ್ನು ಜನರು ಹೇಗೆ ಹೇಳುತ್ತಾರೋ ನನಗೆ ಅರ್ಥವಾಗುವುದಿಲ್ಲ. ಹೀಗೆ ವೈದ್ಯಕೀಯವಾಗಿ ಸಾಬೀತಾಗದಂತಹ, ಇಂತಹ ಒಂದು ನಿರ್ಣಯ ಸಿಂಧುವಾಗುವುದಾದರೂ ಹೇಗೆ ? ಮನೋವೈಕಲ್ಯಕ್ಕೆ ಅಥವಾ ಬುದ್ಧಿಭ್ರಮಣೆಗೆ ಒಳಗಾದ ಯಾವನೇ ವ್ಯಕ್ತಿ ಎಂದೂ ಗುಣಮುಖನಾಗುವುದಿಲ್ಲವೆಂದು ಯಾವ ವೈದ್ಯನೂ ಹೇಳಲಾರ. ಅದೇ ರೀತಿ ಕ್ಷಯರೋಗಿಯೊಬ್ಬ ಅದು ಅಂತಿಮ ಘಟ್ಟ ತಲುಪದ ಹೊರತು ಗುಣಮುಖನಾಗಲಾರ ಎಂದು ಯಾವ ವೈದ್ಯನೂ ಹೇಳಲಾರ.

ಮಾನ್ಯ ಸದಸ್ಯರೆಲ್ಲರೂ ಈ ವಿಷಯದಲ್ಲಿ ಹೇಳಿದ್ದೆಲ್ಲವನ್ನು ನಾನು ಅತ್ಯಂತ ತಾಳ್ಮೆಯಿಂದ ಆಲಿಸಿದ್ದೇನೆ. ನನ್ನ ಮಾನ್ಯ ಮಿತ್ರರಾದ ಖ್ವಾಜ ಇನಾಯಿತ್ ಉಲ್ಲಾ * ಅವರು ಎತ್ತಿದ ಪ್ರಶ್ನೆಗೆ ನಾನು ಉತ್ತರಿಸುತ್ತೇನೆ. ಕುಷ್ಠರೋಗವು ಸಾಂಕ್ರಾಮಿಕ ಎಂದಾಗಲಿ ಮತ್ತು ಅನುವಂಶಿಕ ಎಂದಾಗಲಿ ಜಗತ್ತಿನ ಯಾವುದೇ ವೈದ್ಯರು ಹೇಳಿಲ್ಲ. ತಿದ್ದುಪಡಿಗಳನ್ನು ಸೂಚಿಸಿರುವ ಮಾನ್ಯ ಸದಸ್ಯರು ಅನುವಂಶಿಕ ವ್ಯಾಧಿಗಳ ಬಗ್ಗೆಯೂ ಇಲ್ಲಿ ಪ್ರಸ್ತಾಪಿಸಿದ್ದಾರೆ. ಅನುವಂಶಿಕ ಅಂಧತ್ವವು ಈ ಸಾಲಿಗೆ ಸೇರಿದೆ. ಹಾಗಿದ್ದಲ್ಲಿ ಅನುವಂಶಿಕ ಅಂಧತ್ವ ಹೊಂದಿರುವವರ ಸಂತತಿ ಶಕ್ತಿಯನ್ನು ಹರಣ ಮಾಡಬೇಕೆಂದು ನೀವು ಉದ್ದೇಶಿಸಿದ್ದೀರಾ ? ಎಂದು ನಾನು ಕೇಳಬಯಸುತ್ತೇನೆ. ಆದ್ದರಿಂದ ಇಂತಹ ವಿಷಯಗಳಲ್ಲಿ ನಾವು ವೈಜ್ಞಾನಿಕ ದೃಷ್ಟಿಕೋನವನ್ನು ಹೊಂದಿರುವುದು ಅಗತ್ಯವಾಗಿದೆ. ಜನಸಂಖ್ಯೆಯ ಹೆಚ್ಚಳವನ್ನು ಇಂತಹ ನಿರ್ಣಯಗಳಿಂದ ಅಥವಾ ಈ ವ್ಯಾಧಿಗಳನ್ನು ನರಳುತ್ತಿರುವವರ ಸಂತಾನ ಶಕ್ತಿ ಹರಣ ಮಾಡುವುದರಿಂದ ಅಥವಾ ಬುದ್ಧಿ ಮಾಂದ್ಯರನ್ನು ಇಂತಹ ಶಸ್ತ್ರ ಕ್ರಿಯೆಗೆ ಒಳಪಡಿಸುವುದರಿಂದ ತಡೆಯಲಾರಿರಿ ಎಂಬ ಅಂಶವನ್ನು ನೀವು ನೆನಪಿಟ್ಟುಕೊಳ್ಳಬೇಕು. ನೀವು ದೇಶದಲ್ಲಿನ ಜನಗಣತಿಯ ಅಂಕಿ ಅಂಶಗಳನ್ನು ನೋಡಿದರೆ ದೇಶದಲ್ಲಿನ ಮೂವತ್ತಾರು ಕೋಟಿ ಜನಸಂಖ್ಯೆಯಲ್ಲಿ ಈ ವ್ಯಾಧಿಗಳಿಂದ ನರಳುತ್ತಿರುವವರ ಸಂಖ್ಯೆ ಐವತ್ತು ಲಕ್ಷವನ್ನೂ ದಾಟುವುದಿಲ್ಲ ಎಂಬುದು ನಿಮಗೆ ತಿಳಿಯುತ್ತದೆ. ಅದೇ ರೀತಿ ತಮ್ಮ ಮಕ್ಕಳನ್ನೇ ಸಾಕಿ ಸಲಹಲು ಸಾಮರ್ಥ್ಯವಿಲ್ಲದ ಕಡು ಬಡವರ ಬಗ್ಗೆ ನೀವೇನು ಹೇಳುತ್ತೀರಿ? ಅಂತಹ ತಂದೆ ತಾಯಿಗಳನ್ನು ನೀವು ಸಂತಾನ ಹರಣ ಚಿಕಿತ್ಸೆಗೆ ಒಳಪಡಿಸಲು ಅಪೇಕ್ಷಿಸುತ್ತೀರಾ? ಅನೇಕ ಸಂದರ್ಭಗಳಲ್ಲಿ ಕುಷ್ಠರೋಗ ಪೀಡಿತರಿಗೆ ಹುಟ್ಟುವ ಮಕ್ಕಳೇ ಹೆಚ್ಚು ಆರೋಗ್ಯವಂತರಾಗಿರುತ್ತಾರೆ. ಅಂತಹ ಮಕ್ಕಳನ್ನು ಯಾವುದೇ ಸೋಂಕಿಗೆ ಅವಕಾಶವಿಲ್ಲದಂತಹ ವಾತಾವರಣದಲ್ಲಿ ಬೆಳೆಯಗೊಟ್ಟರೆ ಅವರು ಇತರರಿಗಿಂತಲೂ ಹೆಚ್ಚಿನ ಆರೋಗ್ಯವಂತರಾಗುತ್ತಾರೆ. ಅದೇ ರೀತಿ ಕಡು ಬಡವರಿಗೆ ತಮ್ಮ ಜೀವನವನ್ನೇ ನಿರ್ವಹಿಸುವ ಸಾಮರ್ಥ್ಯವಿಲ್ಲದರಿಗೆ ಮತ್ತು ಪೌಷ್ಟಿಕಾಂಶದ ಕೊರತೆಯಿಂದ ಬಳಲುವ ಗರ್ಭಿಣಿಯರಿಗೆ ಹುಟ್ಟುವ ಮಕ್ಕಳು ತೀರಾ

---

* ಈ ಚರ್ಚೆಯಲ್ಲಿ ಮಧ್ಯಪ್ರವೇಶಿಸಿ ಮಾತನಾಡಿದ ಖ್ವಾಜ ಇನಾಯಿತ್ ಉಲ್ಲಾ ಅವರು " ಇವುಗಳನ್ನು ಗುಣಪಡಿಸುವ ಔಷಧಿಗಳಿಲ್ಲ " ಎಂದಿದ್ದಾರೆ.

ರೋಗಿಷ್ಟರಾಗುವ ಸಂಭವ ಇರುತ್ತದೆ. ಹಾಗಾಗಿ ಜನಸಂಖ್ಯೆಯ ಸಮಸ್ಯೆಯನ್ನು ಬಗೆಹರಿಸುವಲ್ಲಿ ಇಂತಹ ಬರಿಯ ಮೇಲ್ನೋಟದ ಅಧ್ಯಯನದಿಂದ ಯಾವ ಪ್ರಯೋಗವೂ ಆಗುವುದಿಲ್ಲ. ಈ ನಿರ್ಣಯಕವನ್ನು ಮಂಡಿಸಿದ ಗೌರವಾನ್ವಿತ ಸದಸ್ಯರು ಮತ್ತು ಅದನ್ನು ಬೆಂಬಲಿಸಿದ ಇತರ ಸದಸ್ಯರ ಉದ್ದೇಶ ಈ ವ್ಯಾಧಿಗಳಿಂದ ಬಳಲುತ್ತಿರುವ ಜನರಿಗೆ ಸಹಾಯ ಮಾಡಬೇಕು ಎಂಬುದಕ್ಕಿಂತ ಜನಸಂಖ್ಯೆಯ ಸ್ಫೋಟವನ್ನು ತಡೆಯುವುದರ ಕಡೆಗೆ ಇದೆ ಎಂದು ನಾನು ತಿಳಿಯುತ್ತೇನೆ. ಈ ವ್ಯಾಧಿಗಳ ನಿಯಂತ್ರಣಕ್ಕಾಗಿ ಶ್ರಮಿಸುತ್ತಿರುವ ನನಗೆ ಮತ್ತು ನನ್ನ ಸಹೋದ್ಯೋಗಿಗಳಿಗೆ ಮತ್ತು ವಿವಿಧ ರಾಜ್ಯಗಳ ನಿಯಂತ್ರಣದಲ್ಲಿ ಜನತೆ ಸಹಾಯ ಮಾಡಬೇಕೆಂಬುದು ಸರ್ಕಾರದ ಆಶಯವಾಗಿದೆ. ನನಗೂ ಎಲ್ಲಕ್ಕಿಂತ ಇದು ಮುಖ್ಯವಾಗಿದೆ. ನಾನು ಈ ಸಮಸ್ಯೆಯನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡಲು ಮತ್ತು ಅದೇ ನೆಲೆಯಲ್ಲಿ ಪರಿಹಾರ ಕಂಡುಕೊಳ್ಳಲು ಬಯಸುತ್ತೇನೆ. ಹಾಗಾಗಿ ಈ ವಿಷಯದಲ್ಲಿ ಜಗತ್ತಿನಾದ್ಯಂತ ಪ್ರಚಲಿತವಿರುವ ತಜ್ಞ ವೈದ್ಯರ ಅಭಿಪ್ರಾಯವನ್ನು ತಮ್ಮ ಮುಂದಿಡಲು ಪ್ರಯತ್ನಿಸಿದ್ದೇನೆ.

ಈ ವಿಷಯದಲ್ಲಿ ಅಮೆರಿಕ, ಸ್ವಿಟ್ಜರ್‌ಲ್ಯಾಂಡ್, ಡೆನ್ಮಾರ್ಕ್ ಮತ್ತಿತರ ರಾಷ್ಟ್ರಗಳಲ್ಲಿ ಅನುಸರಿಸುತ್ತಿರುವ ಮಾರ್ಗಗಳನ್ನು ನಾವು ಅನುಸರಿಸಲು ಸಾಧ್ಯವೇ ಎಂಬ ಪ್ರಶ್ನೆಯು ಇಲ್ಲಿ ಉದ್ಭವಿಸುತ್ತದೆ. ನಮ್ಮ ದೇಶದಲ್ಲಿನ ಸ್ಥಿತಿಗತಿಗಳು ಮತ್ತು ನಮಗೆ ಲಭ್ಯವಿರುವ ಸಂಪನ್ಮೂಲಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬೇಕಾಗುತ್ತದೆ. ಸಂತಾನ ಶಕ್ತಿ ಹರಣ ಶಸ್ತ್ರಕ್ರಿಯೆಯಲ್ಲಿ ಸೂಕ್ಷ್ಮವಾದ ಮನೋ ವೈಜ್ಞಾನಿಕ ಅಂಶವೂ ಸೇರಿಕೊಂಡಿದೆ ಎಂಬುದನ್ನು ನಾನು ತಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಅದರಲ್ಲೂ ಅದು ಬಲವಂತದಿಂದ ಕಾರ್ಯರೂಪಕ್ಕೆ ತಂದರೆ ಅದರ ಪರಿಣಾಮ ಏನಾದೀತು ಎಂಬುದನ್ನು ಮಾನ್ಯ ಸದಸ್ಯರು ಯೋಚಿಸಬೇಕು. ಒಬ್ಬ ಕುಷ್ಟರೋಗಿ ಸಂತಾನ ಹರಣ ಶಸ್ತ್ರಕ್ರಿಯೆಗೆ ಒಳಗಾಗಲು ನಿರಾಕರಿಸಿದಲ್ಲಿ ನೀವು ಏನು ಮಾಡುತ್ತೀರಿ ? ಆಗ ನೀವು ಅವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವಿರಾ ? ಈ ರೀತಿಯ ಹಿಂಸಾಚಾರದಲ್ಲಿ ಸರ್ಕಾರ ನಿರತವಾದಲ್ಲಿ ನಾನು ಅಂತಹ ಸರ್ಕಾರದ ಒಂದು ಭಾಗವಾಗಿರಲು ಎಂದೂ ಬಯಸುವುದಿಲ್ಲ ಎಂಬ ಅಂಶವನ್ನು ಮನವರಿಕೆ ಮಾಡಿಕೊಡಲು ಬಯಸುತ್ತೇನೆ. ಈ ಸಂದರ್ಭದಲ್ಲಿ ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರ ಹೆಸರನ್ನು ಪ್ರಸ್ತಾಪಿಸಿರುವುದಕ್ಕೆ ನಾನು ವಿಷಾದಿಸುತ್ತೇನೆ. ಮಹಾತ್ಮಾಜಿಯವರು ಅನೇಕ ಅವ್ಯವಹಾರಿಕ ವಿಚಾರಧಾರೆಗಳನ್ನು ಹೊಂದಿದ್ದರು ಎಂದು ಅವರ ಬಗ್ಗೆ ಟೀಕಿಸಲಾಗಿದೆ. ಆದರೆ ಮಹಾತ್ಮಾ ಗಾಂಧೀಜಿಯವರು ಸಾರಿದ ಎಲ್ಲ ಆದರ್ಶಗಳನ್ನು ನಾನು ಸಂಪೂರ್ಣವಾಗಿ ಸಮರ್ಥಿಸುತ್ತೇನೆ. ಒಂದು ವೇಳೆ ಗಾಂಧೀಜಿಯವರು ಬದುಕಿದ್ದರೆ ಈ ರೀತಿಯ ನಿರ್ಣಯವನ್ನು ಅವರು ಖಂಡಿತವಾಗಿ ವಿರೋಧಿಸುತ್ತಿದ್ದರು. ದೇಶದ ಜನಸಂಖ್ಯೆಯನ್ನು ನಿಯಂತ್ರಿಸುವ ವಿಷಯದಲ್ಲಿ ಗಾಂಧೀಜಿಯವರು ತಳೆದಿದ್ದ ಧೋರಣೆ ನ್ಯಾಯೋಚಿತವಾದುದೆಂದು ನಾನು ಭಾವಿಸಿದ್ದೇನೆ. ದೇವರು ಮನುಷ್ಯನಿಗೆ ಸ್ವಯಂ ಸಂಯಮದ ಶಕ್ತಿಯನ್ನು ಕೊಟ್ಟಿದ್ದಾನೆ. ಅದು ಅವರ ಕರ್ತವ್ಯವಾಗಿದೆ ಮತ್ತು ಅದನ್ನು ಬಳಸುವುದು ಅವರ ಹಕ್ಕಾಗಿದೆ. ದೇಶಕ್ಕೆ ಸೇವೆ ಸಲ್ಲಿಸಬೇಕೆಂಬ ಇಚ್ಛೆ ಇದ್ದರೆ ನೀವು ಸ್ವಯಂ ಸಂಯಮ ಸಾಧ್ಯವಿಲ್ಲ ಎಂದು ನೀವು ಹೇಳಲೇಬಾರದು. ನಿಮಗೆ ಅದನ್ನು ಸಾಧಿಸುವುದು ಸಾಧ್ಯವಿಲ್ಲವೆಂದಾದರೆ ನೀವು ಅತ್ಯಂತ ಸಣ್ಣವರಾಗುತ್ತೀರಿ. ಈ ಸಂತಾನ ಹರಣ ಶಸ್ತ್ರಕ್ರಿಯೆಗೆ ಒಳಗಾದವರಲ್ಲಿ ಸ್ವಲ್ಪಮಟ್ಟಿನ ಅಪೂರ್ಣತೆಯ ಭಾವನೆಯು ಕಾಡುತ್ತದೆ. ಕಳೆದ ವರ್ಷ ಮುಂಬಯಿಯಲ್ಲಿ ನಡೆದ ಸಮ್ಮೇಳನದಲ್ಲಿ

ಭಾಗವಹಿಸಲು ಬಂದಿದ್ದ ಡಾ. ಗಾಂಬೈ ಅವರೊಂದಿಗೆ ನಾನು ಈ ವಿಷಯವನ್ನು ಚರ್ಚಿಸಿದ್ದೇನೆ. ಅದಲ್ಲದೆ ಯಾಂತ್ರಿಕ ಗರ್ಭ ನಿರೋಧಕಗಳ ಪ್ರತಿಪಾದಕರಾದ ಡಾ. ಹಿಲೀನಾ ರೈಟ್ ಮತ್ತು ಇತರರೊಂದಿಗೂ ನಾನು ಮಾತನಾಡಿದ್ದೇನೆ. " ನಿಮ್ಮ ದೇಶಕ್ಕೆ ಬಂದು ಇಲ್ಲಿನ ಪರಿಸ್ಥಿತಿಯನ್ನು ನೋಡಿದ ಮೇಲೆ ಆ ವಿಧಾನಗಳನ್ನು ಬಳಸುವುದು ಭಾರತದಲ್ಲಿ ಸಾಧ್ಯವಿಲ್ಲವೆಂಬುದು ನಮಗೆ ಮನವರಿಕೆಯಾಗಿದೆ " ಎಂದು ಅವರಲ್ಲಿ ಪ್ರತಿಯೊಬ್ಬರು ಅಭಿಪ್ರಾಯ ಪಟ್ಟಿದ್ದಾರೆ. ನಾವು ಈಗ ಈ ಪ್ರಶ್ನೆಯ ಸಾಧ್ಯಾಸಾಧ್ಯತೆಯ ಬಗ್ಗೆ ಪರಿಶೀಲಿಸೋಣ. ಈ ನಿರ್ಣಯವನ್ನು ಬೆಂಬಲಿಸಿದ ಸದನದ ಸನಸ್ಯರಿಗೆ ಈ ಕುರಿತ ಕಾಯ್ದೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ಎಷ್ಟೊಂದು ಅಗಾಧ ಸ್ವರೂಪದ ಆಡಳಿತ ಯಂತ್ರ ಬೇಕೆಂಬ ಪರಿಜ್ಞಾನವಾದರೂ ಇದೆಯೇ ? ಬ್ರಿಟನ್‌ನಲ್ಲಿ ಕೂಡಾ, ಈ ನಿರ್ಣಯವನ್ನು ಮಂಡಿಸಿದ ಮಾನ್ಯ ಸದಸ್ಯರು ಹೇಳಿರುವಂತೆ ಸಂತಾನಶಕ್ತಿ ಹರಣ ಕಾರ್ಯಕ್ರಮದ ಇಲಾಖಾ ಸಮಿತಿಯು ಸ್ವಯಂ ಪ್ರೇರಿತ ತಳಹದಿಯ ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಬೇಕಾದ ಕಾನೂನನ್ನು ತರುವಂತೆ ಶಿಫಾರಸು ಮಾಡಿದ್ದಾರೆ. ಆದರೆ ಹಲವಾರು ಕಠಿಣತೆಗಳಿಂದಾಗಿ ಸಂತಾನ ಶಕ್ತಿ ಹರಣ ಕಾರ್ಯಕ್ರಮವನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗಲಿಲ್ಲ ಎಂಬುದು ಈ ನಿರ್ಣಯ ಮಂಡಿಸಿದ ಸದಸ್ಯರಿಗಾಗಲಿ ಅಥವಾ ಈ ಸದನದ ಸದಸ್ಯರಿಗಾಗಲಿ ತಿಳಿದಿದೆಯೇ ? ಅದಕ್ಕೆ ಒಂದು ಕಾರಣ ಸಾಕಷ್ಟು ಸಂಖ್ಯೆಯಲ್ಲಿ ಅರ್ಹತೆ ಹೊಂದಿದ ವೈದ್ಯಕೀಯ ಸಿಬ್ಬಂದಿಯ ಕೊರತೆ. ಇಂಗ್ಲೆಂಡ್‌ನಲ್ಲಿಯೇ ಈ ಪರಿಸ್ಥಿತಿ ಎಂದಾದರೆ ನಮ್ಮ ದೇಶದಲ್ಲಿ ಈ ಕಾರ್ಯಕ್ರಮದ ಅನುಷ್ಠಾನ ಸಾಧ್ಯವಾಗುವುದಾದರೂ ಹೇಗೆ ? ಎಂಬುದನ್ನು ನೀವು ಊಹಿಸಬಹುದು. ಇಂಗ್ಲೆಂಡ್‌ನಲ್ಲಿ ಪ್ರತಿ 300 - 400 ಮಂದಿಗೆ ಒಬ್ಬ ವೈದ್ಯನಿದ್ದಾನೆ. ಆದರೆ ನಮ್ಮ ದೇಶದಲ್ಲಿ ಆರ ರಿಂದ ಏಳುಸಾವಿರ ಮಂದಿಗೆ ಒಬ್ಬ ವೈದ್ಯನಿದ್ದಾನೆ ಮತ್ತು ಅವರೆಲ್ಲರೂ ನಗರಗಳಲ್ಲೇ ನೆಲೆಸಿದ್ದಾರೆ. ಹಾಗಿರುವಾಗ ಬಹುಸಂಖ್ಯಾತರು ನೆಲೆಸಿರುವ ಗ್ರಾಮಾಂತರ ಪ್ರದೇಶದ ಪರಿಸ್ಥಿತಿ ಏನು ? ಅಲ್ಲಿ ಎಷ್ಟು ಮಂದಿ ಕುಷ್ಟರೋಗಿಗಳಿದ್ದಾರೆ ? ಎಷ್ಟು ಮಂದಿ ಮನೋ ರೋಗಿಗಳಿದ್ದಾರೆ? ಎಂಬುದನ್ನು ಪತ್ತೆ ಹಚ್ಚುವವರು ಯಾರು ? ಅಲ್ಲಿ ಕ್ಷಯರೋಗಿಗಳು ಎಷ್ಟು ಮಂದಿ ಇದ್ದಾರೆ ಎಂಬುದನ್ನು ಕಂಡು ಹಿಡಿಯುವವರು ಯಾರು ? ಇದು ನಿಜಕ್ಕೂ ತೀರಾ ಅಸಂಭವವಾದ ಕಾರ್ಯಭಾರ - ಏಕೆಂದರೆ ಈ ನಿರ್ಣಯವನ್ನು ಅಂಗೀಕರಿಸಿದ್ದರೂ ಅದನ್ನು ಕಾರ್ಯಗತಗೊಳಿಸಲು ಆಗುವುದಿಲ್ಲ. ಅಮೆರಿಕದಂತಹ ದೇಶಗಳಲ್ಲಿ ಕೂಡಾ ವೈದ್ಯ ವಿಜ್ಞಾನ ಇಂದಿನ ಪ್ರಗತಿ ಸಾಧಿಸುವ ಮೊದಲೇ ಇಂತಹ ಕಾಯ್ದೆಗಳನ್ನು ತರಲಾಗಿತ್ತು. ಅಂತಹ ಮುಂದುವರಿದ ರಾಷ್ಟ್ರದಲ್ಲಿ ಅಲ್ಲಿರುವ ಕಾಯ್ದೆಗಳ ರೀತ್ಯಾ ಎಷ್ಟು ಮಂದಿಯನ್ನು ಸಂತಾನ ಹರಣ ಚಿಕಿತ್ಸೆಗೆ ಗುರಿಪಡಿಸಲಾಗಿದೆ ಎಂದು ಕೇಳಿದರೆ ಬಹುಶಃ ಇಲ್ಲವೇ ಇಲ್ಲ ಎಂಬಷ್ಟು ಪ್ರಮಾಣದಲ್ಲಿ. ಹಾಗಾಗಿ ಇಂದಿನ ಸನ್ನಿವೇಶದಲ್ಲಿ ಯಾವುದೇ ಸಮಸ್ಯೆಯನ್ನು ಅದು ಮೇಲ್ನೋಟಕ್ಕೆ ಕಂಡಷ್ಟು ಸುಲಭವಾಗಿ ಬಗೆಹರಿಸಲು ಸಾಧ್ಯವಿಲ್ಲ. ಹಾಗಾಗಿ ನಾವು ಅಂತಹ ಸಾಹಸಕ್ಕೆ ಮುಂದಾಗದಿರುವುದೇ ಒಳಿತೆಂಬುದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ. ಮಿತಿಮೀರಿದ ಜನಸಂಖ್ಯೆಯ ಸಮಸ್ಯೆಯನ್ನು ನಮ್ಮ ಸುಶಿಕ್ಷಿತ ಮಹಿಳೆಯರೇ ಹೇಳುವಂತೆ ಯಾಂತ್ರಿಕ ಗರ್ಭನಿರೋಧಕಗಳಿಂದ ಬಗೆಹರಿಸಲು ಸಾಧ್ಯ ಎಂದು ಪದೇ ಪದೇ ನನಗೆ ಸಲಹೆ ನೀಡಲಾಗಿದೆ. ಇದು ಮೇಲ್ನೋಟಕ್ಕೆ ತುಂಬಾ ಸರಳವಾಗಿ ಕಂಡರೂ ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಗುರಿಪಡಿಸುವುದನ್ನು ಅನುಷ್ಠಾನಕ್ಕೆ ತರಲು ಸಾಧ್ಯವಿಲ್ಲ. ಯಾವುದೇ ನಿರ್ದಿಷ್ಟ ರೂಪದ ಮನೋವೈಕಲ್ಯವನ್ನು ಅನುವಂಶಿಕ ಎಂದು ಪತ್ತೆ ಹಚ್ಚುವುದು ಯಾವ

ವೈದ್ಯರಿಗೂ ಸಾಧ್ಯವಾಗುವುದಿಲ್ಲ. ಅತ್ಯಂತ ಆರೋಗ್ಯವಂತ ದಂಪತಿಗಳಿಗೆ ಹುಟ್ಟಿದ ಎಷ್ಟೋ ಮಕ್ಕಳು ಬುದ್ಧಿಮಾಂದ್ಯರಾಗಿರುವುದನ್ನು ನಾವು ನೋಡುತ್ತೇವೆ. ಸರ್ಕಾರದಲ್ಲಿ ಅತ್ಯುಚ್ಚ ಹುದ್ದೆಯಲ್ಲಿರುವ ತಂದೆ ತಾಯಿಗಳಿಗೆ ಹುಟ್ಟಿದ ಮಕ್ಕಳು ಈ ರೀತಿ ಆಗಿರುವ ಎರಡು ಪ್ರಕರಣಗಳು ನನ್ನ ಗಮನಕ್ಕೆ ಬಂದಿದೆ. ದಂಪತಿಗಳನ್ನು ಇಂತಹ ಮಕ್ಕಳಿಗೆ ಜನ್ಮ ನೀಡಿರುವುದಕ್ಕಾಗಿ ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಗುರಿಪಡಿಸಲು ಸಾಧ್ಯವೇ ? ಈ ಮನೋವೈಕಲ್ಯ ಎಂಬುದು ವಂಶಪಾರಂಪರ್ಯದಿಂದ ಬರುವಂತಹುದೆಂದು ಯಾವೊಬ್ಬ ವೈದ್ಯನೂ ಹೇಳುವುದಿಲ್ಲ ಮತ್ತು ಬುದ್ಧಿಮಾಂದ್ಯದ ಮಕ್ಕಳು ಬುದ್ಧಿಮಾಂದ್ಯರಾಗಿಯೇ ಇರಬೇಕಾಗಿಲ್ಲ. ಒಬ್ಬ ಮನುಷ್ಯನಿಗೆ ಒಬ್ಬ ಬುದ್ಧಿ ಮಾಂದ್ಯ ಮಗನಿದ್ದ. ಆ ಬುದ್ಧಿಮಾಂದ್ಯ ಮಗನಿಗೆ ಏಳು ಮಂದಿ ಮಕ್ಕಳಿದ್ದರು. ಆ ವ್ಯಕ್ತಿ ತನ್ನ ಮಗನನ್ನು ಹಾಗೂ ಈ ಏಳು ಮಂದಿ ಮೊಮ್ಮಕ್ಕಳನ್ನು ನೋಡಿಕೊಳ್ಳಬೇಕಾಗಿತ್ತು. ಆ ಏಳು ಮಂದಿ ಮೊಮ್ಮಕ್ಕಳು ಬುದ್ಧಿಮಾಂದ್ಯರಾಗಿರಲಿಲ್ಲ. ಅಂತಹ ದೃಷ್ಟಾಂತವೊಂದು ನಮ್ಮೆಲ್ಲರಿಗೂ ಗೊತ್ತಿದೆ. ಆದರೆ ಮಾನ್ಯ ಸದಸ್ಯರು ಈ ಸೂಕ್ಷ್ಮವಾದ ಪ್ರಶ್ನೆಯನ್ನು ಅತ್ಯಂತ ವಿವೇಚನೆ ಮತ್ತು ಸರಿಯಾದ ದೃಷ್ಟಿಕೋನದಿಂದ ಪರಿಶೀಲಿಸಬೇಕು. ಜನಸಮುದಾಯಕ್ಕೆ ಸೇರಿದ ಈ ವರ್ಗದವರ ಸಮಸ್ಯೆಗಳನ್ನು ನಾವು ಈ ಹಿನ್ನಲೆಯಿಂದ ಅಭ್ಯಸಿಸಬೇಕು. ನಾನು ಈಗಾಗಲೇ ಹೇಳಿರುವಂತೆ ಕಾರ್ಯಸಾಧ್ಯತೆಯ ದೃಷ್ಟಿಯಿಂದಲೂ ಯೋಚಿಸಬೇಕು ಇಂತಹ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸರ್ಕಾರಕ್ಕಿರುವ ಸಂಪನ್ಮೂಲಗಳ ಇತಿಮಿತಿಗಳನ್ನು ನಾವು ಅರಿತುಕೊಳ್ಳಬೇಕು. ಈ ಸಮಸ್ಯೆಗಳನ್ನು ಬಗೆಹರಿಸಲು ಸಾಕಷ್ಟು ಸಂಖ್ಯೆಯ ತಜ್ಞರು ನಮ್ಮಲ್ಲಿದ್ದಾರೆ. ಒಬ್ಬ ವ್ಯಕ್ತಿ ಮನೋ ವೈಕಲ್ಯ ಹೊಂದಿದ್ದಾನೆಯೇ ? ಮತ್ತು ಈ ಮನೋವೈಕಲ್ಯ ಗುಣಪಡಿಸಲು ಸಾಧ್ಯವಿರುವಂತಹುದೇ ಅಲ್ಲವೇ ಎಂಬುದನ್ನು ನಿಷ್ಕರ್ಷಿಸುವಂತಹ ವೈದ್ಯರು ಅಷ್ಟು ಸಂಖ್ಯೆಯಲ್ಲಿ ನಮ್ಮಲ್ಲಿಲ್ಲ. ಆಸ್ತಿಯ ಉತ್ತರಾಧಿಕಾರವನ್ನು ನಿರ್ಧರಿಸುವ ಸಂದರ್ಭದಲ್ಲಿ ಮತ್ತು ಅಂತಹ ಇತರ ಸಂದರ್ಭಗಳಲ್ಲಿ ನಮ್ಮಲ್ಲಿ ಉದ್ಭವಿಸುವ ಸಮಸ್ಯೆಗಳು ಮತ್ತು ಮೊಕದ್ದಮೆಗಳ ಪ್ರಮಾಣ ಎಷ್ಟೊಂದು ಅಗಾಧ ಪ್ರಮಾಣದಲ್ಲಿದೆ ಮತ್ತು ಅಂತಹ ಸಂದರ್ಭಗಳಲ್ಲಿ ಆಗುವ ಅನ್ಯಾಯವನ್ನು ನಾವು ಸುಲಭವಾಗಿ ಊಹಿಸಬಹುದು. ತಮ್ಮ ಖಾಸಗಿ ಪ್ರಯೋಜನಕ್ಕಾಗಿ ಮಹಿಳೆ ಅಥವಾ ಪುರುಷ ಇಂತಿಂತಹವರನ್ನು ಸಂತಾನ ಶಕ್ತಿ ಹರಣ ಪ್ರಕ್ರಿಯೆಗೆ ಒಳಪಡಿಸಬೇಕೆಂದು ಕಾತರರಾಗಿರುವ ಪ್ರಕರಣಗಳು ನಮ್ಮಲ್ಲಿ ಸಾಕಷ್ಟಿವೆ. ನಾವೊಂದು ಆರೋಗ್ಯ ಪೂರ್ಣ ರಾಷ್ಟ್ರ ನಿರ್ಮಿಸಬೇಕೆಂಬ ವಿಷಯದಲ್ಲಿ ನನಗೂ ಸಂಪೂರ್ಣ ಕಾಳಜಿ ಮತ್ತು ಆಸಕ್ತಿ ಇದೆ. ಆದರೆ ಅದನ್ನು ಸಾಧಿಸಲು ಇತರ ಹಲವು ಮಾರ್ಗಗಳು ಇವೆ ಎಂಬುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು.

" ಕ್ಷಯರೋಗಿಗಳಿಗೆ ಸರಿಯಾದ ಚಿಕಿತ್ಸೆ ನೀಡಲು ನಮ್ಮಿಂದ ಸಾಧ್ಯವಿಲ್ಲ ಅಂತಹವರನ್ನು ಸಂತಾನ ಶಕ್ತಿ ಹರಣ ಕ್ರಿಯೆಗೆ ಒಳಪಡಿಸುವುದು ಒಳ್ಳೆಯದು " ಇಂತಹ ಸಲಹೆಯೂ ಸದನದ ಮುಂದಿದೆ. ಈ ಅಭಿಪ್ರಾಯವನ್ನೂ ನಾನು ಒಪ್ಪುತ್ತೇನೆ. ದೇಶದಲ್ಲಿರುವ ಎಲ್ಲ ಕ್ಷಯರೋಗಿಗಳಿಗೆ ಸೂಕ್ತ ಚಿಕಿತ್ಸೆ ಒದಗಿಸುವ ಸಾಮರ್ಥ್ಯ ನಮ್ಮಲ್ಲಿಲ್ಲ. ನಿಜಕ್ಕೂ ಇದು ದುರಂತವಾಗಿದೆ ಮತ್ತು ಈ ದುರಂತವನ್ನು ನಾವು ನಿವಾರಿಸಲೇ ಬೇಕು. ಇದನ್ನು ನಾವು ಸುಧಾರಿಸುವುದಾದರೂ ಹೇಗೇ? ಇದಕ್ಕಾಗಿ ನಾವು ಹೆಚ್ಚು ಹೆಚ್ಚು ಹಣವನ್ನು ಆರೋಗ್ಯದ ಮೇಲೆ ವಿನಿಯೋಗಿಸಬೇಕು ಕುಷ್ಟರೋಗಿಗಳಿಗೆ ನಾವು ಪ್ರತ್ಯೇಕ ವಸತಿಗಳನ್ನು ನಿರ್ಮಿಸಿಕೊಡಬೇಕು. ಅದೇ ರೀತಿ ಕ್ಷಯ ರೋಗಪೀಡಿತರಿಗೆ ಊರಿನ ಹೊರಗೆ ಪ್ರತ್ಯೇಕ ವಾರ್ಡ್‌ಗಳನ್ನು ನಿರ್ಮಿಸಬೇಕು. ಕ್ಷಯರೋಗಿಗಳ

ಚಿಕಿತ್ಸಾಲಯದಲ್ಲಿ ಕ್ಷಯರೋಗಿಗಳಿಗೆ ಒಂದು ಮಗು ಜನಿಸಿದ ನಿದರ್ಶನವನ್ನು ಅಪವಾದಗಳಲ್ಲಿ ಅಪವಾದ ಎಂದು ತಿಳಿಯಬೇಕು. ಏಕೆಂದರೆ ದೇಶದಲ್ಲಿ ನಾನು ಭೇಟಿ ನೀಡದಿರುವ ಕ್ಷಯರೋಗಿಗಳ ಒಂದೇ ಒಂದು ನಿದರ್ಶನವು ನನ್ನ ಗಮನಕ್ಕೆ ಬಂದಿಲ್ಲ. ಕುಷ್ಠರೋಗಿಗಳಿಗೆ ಮಕ್ಕಳಾಗುವುದನ್ನು ನಾನು ನೋಡಿದ್ದೇನೆ. ಕುಷ್ಠ ವ್ಯಾಧಿ ಪೀಡಿತ ಮಹಿಳೆಯೊಬ್ಬಳ ಕೈಯಲ್ಲಿ ಮಗುವೊಂದನ್ನು ನೋಡಿ ಈ ನಿರ್ಣಯವನ್ನು ಮಂಡಿಸಿದ ಮಾನ್ಯ ಸದಸ್ಯರಿಗೆ ಎಷ್ಟರಮಟ್ಟಿಗೆ ವೇದನೆಯಾಗಿದೆಯೋ ಅದನ್ನು ಕಂಡು ನಾನು ಅಷ್ಟೇ ವೇದನೆ ಅನುಭವಿಸಿದ್ದೇನೆ. ಈ ನಿರ್ಣಯ ಮಂಡಿಸಿದ ಮಾನ್ಯ ಸದಸ್ಯೆ ಆ ಮಹಿಳೆಯನ್ನು ಸಂತಾನಶಕ್ತಿ ಹರಣ ಚಿಕಿತ್ಸೆಗೆ ಒಳಪಡಿಸಲು ಬಯಸಿರಬಹುದು. ಆದರೆ ನಾನು ಆ ಮಗುವನ್ನು ರೋಗದಿಂದ ಬೇರ್ಪಡಿಸಿ ಅದನ್ನು ದೇಶದ ಆರೋಗ್ಯವಂತ ಪೌರರನ್ನಾಗಿ ಪರಿವರ್ತಿಸಲು ಬಯಸುತ್ತೇನೆ. ಕುಷ್ಠ ವ್ಯಾಧಿ ಪೀಡಿತರಿಗೆ ಅತ್ಯುತ್ತಮ ಚಿಕಿತ್ಸೆ ಒದಗಿಸುವುದು ನಮ್ಮ ಕರ್ತವ್ಯವಾಗಿದೆ. ಹಣಕಾಸು ಮತ್ತು ಇತರ ಸಂಪನ್ಮೂಲಗಳ ವಿಷಯದಲ್ಲಿ ನಮಗೆ ಪರಿಮಿತಿಗಳಿದ್ದರೂ ಕೂಡಾ ನಾವು ಕ್ಷಯರೋಗಿಗಳ ಶುಶ್ರೂಷೆಯಲ್ಲಿ ಬಹಳಷ್ಟು ಪ್ರಗತಿ ಸಾಧಿಸಿದ್ದೇವೆ. ದೇಶಕ್ಕೆ ಸ್ವಾತಂತ್ರ್ಯ ದೊರೆತ ಸಂದರ್ಭದಲ್ಲಿ ನಾವು ಕ್ಷಯರೋಗ ನಿವಾರಣಾ ಕಾರ್ಯ ಕೈಗೆತ್ತಿಕೊಂಡಾಗ ನಮ್ಮಲ್ಲಿದ್ದ ಹಾಸುಗೆಗಳ ಸಂಖ್ಯೆ ಐದು ಸಾವಿರ ಮಾತ್ರವೇ ಆಗಿತ್ತು. ಈಗ ಆ ಸಂಖ್ಯೆ ನಾಲ್ಕು ಪಟ್ಟು ಹೆಚ್ಚಿದೆ. ನಮ್ಮ ದೊಡ್ಡ ಪಟ್ಟಣಗಳಲ್ಲೆಲ್ಲ ನಾವು ಕ್ಷಯರೋಗ ಚಿಕಿತ್ಸಾ ಕೇಂದ್ರಗಳನ್ನು ತೆರೆದಿದ್ದೇವೆ. ಈಗ ಕ್ಷಯರೋಗ ಪ್ರಕರಣಗಳನ್ನು ಸರಿಯಾದ ಸಮಯದಲ್ಲೇ ಪತ್ತೆ ಹಚ್ಚಲಾಗುತ್ತಿದ್ದು ಸಕಾಲದಲ್ಲೇ ಅವರಿಗೆ ಚಿಕಿತ್ಸೆಯೂ ದೊರೆಯುತ್ತಿದೆ. ದೇಶಾದ್ಯಂತದ ಕ್ಷಯರೋಗಿಗಳ ಎಲ್ಲ ಅಗತ್ಯಗಳನ್ನು ನಾವು ಪೂರೈಸುತ್ತಿದ್ದೇವೆ. ಕ್ಷಯರೋಗಿಗಳು ಸ್ವಯಂ ಪ್ರೇರಣೆಯಿಂದ ಈ ಚಿಕಿತ್ಸಾಲಯಗಳಿಗೆ ಬಂದು ಈ ಪ್ರಯೋಜನ ಪಡೆಯುತ್ತಿದ್ದಾರೆ. ಕಳೆದ ಮೂರು ವರ್ಷಗಳಿಂದ ಇದಕ್ಕೆ ಸಂಬಂಧಿಸಿದ ಅಂಕಿ - ಅಂಶಗಳನ್ನು ಸಂಗ್ರಹಿಸಲಾಗುತ್ತಿದೆ. ನಮ್ಮ ಈ ಪ್ರಯತ್ನ ಸಾಗರದಲ್ಲಿನ ಒಂದು ಹನಿ ಎಂಬುದು ನಮಗೆ ಗೊತ್ತಿದೆ. ಇಂತಹ ಹನಿಗಳೇ ಸೇರಿ ಸಾಗರವಾಗುತ್ತದೆ ಎಂಬುದನ್ನು ನಾವು ತಿಳಿಯಬೇಕು. ಈ ವಿಷಯದಲ್ಲಿ ನನಗೆ ಹತಾಶೆಯ ಪ್ರಶ್ನೆಯೇ ಇಲ್ಲ. ಕ್ಷಯ ರೋಗಗಳ ಪಿಡುಗನ್ನು ನಾವು ನಿವಾರಿಸಿಯೇ ನಿವಾರಿಸುತ್ತೇವೆ ಎಂಬ ದೃಢ ವಿಶ್ವಾಸ ನನ್ನದು. ನಮಗೆ ಸಾಕಷ್ಟು ಹಣ ದೊರೆತರೆ ಇದೇ ರೀತಿ ಕುಷ್ಠ ರೋಗವನ್ನು ನಾವು ನಿರ್ಮೂಲನಗೊಳಿಸಬಲ್ಲೆವು. ಜನರನ್ನು ಅವರ ಇಚ್ಛೆಗೆ ವಿರುದ್ಧವಾಗಿ ನಿರ್ವೀರ್ಯರನ್ನಾಗಿ ಮಾಡುವ ಬದಲು ಈ ಸಮಸ್ಯೆಯನ್ನು ಈ ವಿಧಾನಗಳಿಂದ ನಿಭಾಯಿಸುವುದು ಎಷ್ಟೋ ಹೆಚ್ಚು ಉತ್ತಮವಾದ ಮಾರ್ಗವಾಗಿದೆ. ಸದನವು ಇಂತಹ ನಿರ್ಣಯವನ್ನು ಅಂಗೀಕರಿಸಿದಲ್ಲಿ ಅದು ನಮ್ಮನ್ನು ತೀರಾ ಅಪಾಯಕಾರಿಯಾದ ಒಂದು ದಾರಿಗೆ ಹಚ್ಚುವುದು. ನಮ್ಮ ಸದನದ ಎಷ್ಟು ಮಂದಿ ಸದಸ್ಯರು ಜನತೆಗೆ ಈ ವಿಷಯದಲ್ಲಿ ತಿಳುವಳಿಕೆ ನೀಡಲು ಸಿದ್ಧರಿದ್ದಾರೆ. ನಾವು ಜನರ ಬಳಿಗೆ ಹೋಗಿ ಕುಷ್ಠ ವ್ಯಾಧಿಯಿಂದ ಬಳಲುತ್ತಿರುವವರನ್ನು ಗುರುತಿಸಿ ಮತ್ತು ಆ ವ್ಯಾಧಿ ತಮಗೆ ಇದೆ ಎಂದು ಬಹಿರಂಗ ಪಡಿಸುವಂತೆ ಮಾಡಿದರೆ ಅದಕ್ಕಿಂತ ಉತ್ತಮವಾದ ಮಾರ್ಗ ಇನ್ನೊಂದಿಲ್ಲ. ಈ ಮಾದರಿಯ ನಿರ್ಣಯವೊಂದು ಅಂಗೀಕೃತವಾದರೆ ಈ ವ್ಯಾಧಿಗಳ ನಿವಾರಣೆಗಾಗಿ ನಡೆಸುವ ಎಲ್ಲ ಪ್ರಯತ್ನಗಳಿಗೂ ನಾವೇ ಕಲ್ಲು ಹಾಕಿದಂತಾಗುವುದು ಎಂದು ಮಾನ್ಯ ಸದಸ್ಯರೊಬ್ಬರು ಹೇಳಿರುವುದು ಸರಿಯಾಗಿಯೇ ಇದೆ. ಜನರಿಗೆ ಕ್ಷಯ, ಕುಷ್ಠ ಹಾಗೂ ಸಮಸ್ತ ರೋಗಗಳ ವಿಷಯದಲ್ಲಿ ತಿಳುವಳಿಕೆ ನೀಡುವ, ರೋಗದ ಲಕ್ಷಣಗಳು ಕಂಡು

ಬಂದ ತಕ್ಷಣವೇ ಆಸ್ಪತ್ರೆಗೆ ಬರುವಂತೆ ಮತ್ತು ಅವುಗಳಿಗೆ ಪ್ರಾಥಮಿಕ ಹಂತದಲ್ಲಿಯೇ ಚಿಕಿತ್ಸೆ ಪಡೆಯುವಂತೆ ಅರಿವು ಮೂಡಿಸುವ ನಮ್ಮೆಲ್ಲ ಪ್ರಯತ್ನಗಳಿಗೂ ಅವಕಾಶವೇ ಇಲ್ಲದಂತಾಗುತ್ತದೆ. ಅಂದರೆ ಈ ವ್ಯಾಧಿಗಳ ಪತ್ತೆ ಹಚ್ಚುವಿಕೆ, ಪ್ರತಿಬಂಧಿಸುವಿಕೆ ಮತ್ತು ಅವುಗಳಿಗೆ ಚಿಕಿತ್ಸೆ ನೀಡುವ ಎಲ್ಲ ದಾರಿಗಳು ಮುಚ್ಚಿ ಹೋಗುವುದು. ಈ ಎಲ್ಲ ವ್ಯಾಧಿಗಳು ರಹಸ್ಯವಾಗಿಯೇ ಉಳಿದರೆ ಅವುಗಳಿಂದ ಸಂಭವಿಸುವ ಸೋಂಕಿನ ಭಯವು ಈಗಿನದ್ದಕ್ಕಿಂತ ಎಷ್ಟೋ ಪಾಲು ಹೆಚ್ಚಾಗುವುದು.

ಸದನದ ಬಹುತೇಕ ಸದಸ್ಯರು ಅದರಲ್ಲೂ ವಿಶೇಷತಃ ಮಹಿಳಾ ಸದಸ್ಯರು ಕ್ಷಯರೋಗ ಪೀಡಿತರು ರೋಗ ಗುಣವಾಗುವ ತನಕ ಕಡ್ಡಾಯವಾಗಿ ಮದುವೆಯಾಗದಂತೆ ನಿರ್ಬಂಧಿಸುವ ಶಾಸನವೊಂದನ್ನು ತರಬೇಕೆಂಬ ವಿಷಯದಲ್ಲಿ ತೀವ್ರ ಕಾತರ ಹೊಂದಿದ್ದಾರೆಂದು ನನಗೆ ಗೊತ್ತಿದೆ. ಕ್ಷಯ ರೋಗ ಸೋಂಕು ತಟ್ಟದಂತೆ ಅದನ್ನು ಪ್ರತಿಬಂಧಿಸುವ ಸಲುವಾಗಿ ಇಂತಹ ಕ್ರಮ ಅಗತ್ಯ ಎಂಬುದನ್ನು ನಾನು ಒಪ್ಪುತ್ತೇನೆ. ಕುಷ್ಠ ರೋಗದಿಂದ ಬಳಲುತ್ತಿರುವವರು ಮದುವೆಯಾಗದಂತೆ ಮತ್ತು ಅದು ಗುಣಮುಖವಾಗುವವರೆಗೆ ಗಂಡ - ಹೆಂಡತಿಯರು ಪ್ರತ್ಯೇಕವಾಗಿ ಇರುವಂತೆ ನಿರ್ಬಂಧಿಸುವ ಒಂದು ಕಾಯ್ದೆಯನ್ನು ತರುವ ವಿಚಾರವನ್ನು ಕೂಡಾ ನಾನು ಬೆಂಬಲಿಸಲು ಸಿದ್ಧನಾಗಿದ್ದೇನೆ. ಅದೇ ರೀತಿ ಗುಹ್ಯರೋಗದಿಂದ ಬಳಲುತ್ತಿರುವವರ ವಿಚಾರದಲ್ಲೂ ಇದೇ ರೀತಿಯ ಕ್ರಮವನ್ನು ಅನುಸರಿಸಲು ಸಿದ್ಧನಿದ್ದೇನೆ. ಆದರೆ ಅಂತಹ ಕ್ರಮವಾದರೂ ನಮ್ಮ ದೇಶದಲ್ಲಿ ಕಾರ್ಯ ಸಾಧುವೆ ಎಂಬುದು ನನ್ನ ಪ್ರಶ್ನೆಯಾಗಿದೆ. ನಮ್ಮ ದೇಶದಲ್ಲಿ ಅಷ್ಟೊಂದು ದೊಡ್ಡ ಪ್ರಮಾಣದ ನಗರಗಳಿಲ್ಲ. ರಾಜಧಾನಿ ದೆಹಲಿಯನ್ನೇ ನೈಜ ಭಾರತ ಎಂದು ನಾವು ಪರಿಗಣಿಸುವ ಹಾಗಿಲ್ಲ. ನಮ್ಮ ದೇಶವು ಹಳ್ಳಿಗಳಿಂದ ಕೂಡಿದೆ. ಹಾಗಾಗಿಯೇ ಇಂತಹ ನಿರ್ಣಯಗಳ ಅನುಷ್ಠಾನ ಅಸಾಧ್ಯವಾಗಿದೆ. ಇಂತಹ ನಿರ್ಣಯಗಳನ್ನು ತರುವಾಗ ಸಮಗ್ರ ಪರಿಕಲ್ಪನೆಯೇ ಇರುವುದಿಲ್ಲ. ಗ್ರಾಮೀಣ ಭಾರತದ ಅಗತ್ಯಗಳನ್ನು ಪೂರೈಸಬಲ್ಲಷ್ಟು ಪ್ರಮಾಣದಲ್ಲಿ ಸರಕಾರ ಸಂಪನ್ಮೂಲಗಳನ್ನು ಹೊಂದಿದೆಯೇ ಎಂಬುದರ ಸರಿಯಾದ ಗ್ರಹಿಕೆ ಇಲ್ಲದೆಯೇ ಇಂತಹ ನಿರ್ಣಯಗಳನ್ನು ಮಂಡಿಸಿದರೆ ಅದು ಫಲಕಾರಿಯಾಗುವುದಿಲ್ಲ. ನಮ್ಮ ದೇಶದ ಜನರು ಬುದ್ಧಿಶಾಲಿಗಳಾಗಿದ್ದಾರೆ. ಅವರಿಗೂ ಅನೇಕ ವಿಷಯಗಳಲ್ಲಿ ತಮ್ಮದ್ದೇ ಆದ ದೃಷ್ಟಿಕೋನ ಇರುತ್ತದೆ. ವಿಚಾರ ಮಾಡುವ ಪ್ರಜ್ಞೆಯೂ ಇರುತ್ತದೆ. ಗ್ರಾಮಗಳಲ್ಲಿನ ಕಡು ಬಡವರ ಬಳಿಗೆ ಹೋಗಿ ನೋಡಿ. ಅವರಲ್ಲಿ ಈ ವಿಷಯದ ಬಗ್ಗೆ ತಮ್ಮದ್ದೇ ಆದ ಅಭಿಪ್ರಾಯಗಳನ್ನು ಹೊಂದಿರುವುದನ್ನು ನೀವು ಖಂಡಿತವಾಗಿಯೂ ಕಾಣುತ್ತೀರಿ. ಈ ನಿರ್ಣಯವನ್ನು ಬಹುಶಃ ಯಾರೂ ಸಮರ್ಥಿಸಲಾರರು. ಅಂದರೆ ಅದಕ್ಕೆ ಎಲ್ಲಿಯೂ ಬೆಂಬಲ ಸಿಗಲಾರದು. ನಾವು ಜನತೆಯ ದೃಷ್ಟಿಯಿಂದ ಇಂತಹ ವಿಷಯಗಳನ್ನು ಪರಾಮರ್ಶಿಸಬೇಕು. ಅವರಿಗೆ ತಿಳುವಳಿಕೆ ನೀಡಿ ಕ್ರಮೇಣ ಅವರನ್ನು ನಮ್ಮ ದಾರಿಗೆ ತರಬೇಕು. ಈ ದಿಸೆಯಲ್ಲಿ ಕೆಲಸ ನಡೆಯುತ್ತಿದೆ. ಆದರೆ ಈ ದಿಸೆಯಲ್ಲಿ ಇನ್ನು ಬಹಳಷ್ಟನ್ನು ನಾವು ಸಾಧಿಸಬೇಕಾಗಿದೆ. ಯಾವುದೇ ಒಂದು ವಿಷಯವನ್ನಾದರೂ ನೀವು ಇನ್ನೊಬ್ಬರ ಮೇಲೆ ಹೇರುವುದು ಸಾಧ್ಯವಿಲ್ಲ. ನೀವು ನಿರೀಕ್ಷಿಸಿದಂತೆಯೇ ಅಥವಾ ನೀವು ಯೋಚಿಸಿದಂತೆಯೇ ಇನ್ನೊಬ್ಬರು ಯೋಚಿಸಬೇಕೆಂದಾಗಲಿ, ಕೆಲಸ ಮಾಡಬೇಕೆಂದಾಗಲಿ ಭಾವಿಸಬಾರದು. ನೀವು ಏನನ್ನು ಯೋಚಿಸುತ್ತೀರಿ ಮತ್ತು ಏನನ್ನು ಮಾಡಲು ಉದ್ದೇಶಿಸಿದ್ದೀರಿ ಎಂಬುದನ್ನು

ವ್ಯಾವಹಾರಿಕವಾದ ರೀತಿಯಲ್ಲಿ ಕಾರ್ಯರೂಪಕ್ಕೆ ತಂದಲ್ಲಿ ಮಾತ್ರವೇ ಜನರು ಅದನ್ನು ಒಪ್ಪಿಕೊಳ್ಳುವರು.

ಕುಷ್ಠರೋಗ ನಿವಾರಣೆಯ ಕಾರ್ಯಕ್ರಮದಲ್ಲಿ ಇಂದು ನಡೆಯುತ್ತಿರುವುದಾದರೂ ಏನು? ಕುಷ್ಠರೋಗದಿಂದ ನರಳುತ್ತಿರುವ ಗಂಡಸರು ಮತ್ತು ಹೆಂಗಸರನ್ನು ಬಹಿಷ್ಕೃತರಂತೆ ಮನೆಗಳಿಂದ ಹೊರಹಾಕಿರುವ ಪ್ರಕರಣಗಳು ಒಂದರ ಹಿಂದೆ ಒಂದರಂತೆ ನನ್ನ ಕಿವಿಗೆ ಬೀಳುತ್ತಲೇ ಇದೆ. ಅಂತಹವರು ನಮ್ಮ ಊರಿನ ರಸ್ತೆಗಳಲ್ಲಿ ಬಿಕ್ಷೆ ಬೇಡುತ್ತಿದ್ದಾರೆ. ಅಂತಹವರು ದೆಹಲಿಯಲ್ಲೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಅಂತಹವರು ತಮ್ಮ ಹೊಟ್ಟೆ ಹೊರೆಯಲು ಅದನ್ನೇ ವೃತ್ತಿಯಾಗಿ ಮಾಡಿಕೊಳ್ಳುವ ಅನಿವಾರ್ಯತೆ ಇದೆ. ಮೊನ್ನೆ ನಾನು ಕುಷ್ಠ ರೋಗಿಗಳ ಚಿಕಿತ್ಸಾಲಯವೊಂದಕ್ಕೆ ಹೋಗಿದ್ದಾಗ ಅಲ್ಲಿ ಸಂಪೂರ್ಣ ಗುಣಮುಖರಾದ ಇಬ್ಬರು ಮಹಿಳಾ ಕುಷ್ಠರೋಗಿಗಳನ್ನು ನೋಡಿದೆ. ಅವರಿಂದ ಸೋಂಕು ತಗಲುವ ಯಾವ ಸಾಧ್ಯತೆಗಳೂ ಇಲ್ಲವೆಂದು ವೈದ್ಯರು ದೃಢಪಡಿಸಿದ್ದಾರೆ. ಆದರೆ ಅವರು ಮರಳಿ ತಮ್ಮ ಗಂಡಂದಿರ ಬಳಿಗೆ ಹೋಗಲಾರರು. ಏಕೆಂದರೆ ಅವರ ಗಂಡಂದಿರು ಅವರನ್ನು ಸ್ವೀಕರಿಸಲು ಸಿದ್ಧರಿಲ್ಲ. ಹೀಗಾಗಿ ಇಂತಹ ಮಹಿಳೆಯರನ್ನು ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಗುರಿಪಡಿಸುವ ಅಥವಾ ಅವರನ್ನು ನಿರ್ವೀರ್ಯರನ್ನಾಗಿ ಮಾಡುವ ಈ ನಿರ್ಣಯದ ಪರವಾಗಿ ಮಾತನಾಡುವ ಬದಲು ಸದನದ ಮಹಿಳಾ ಸದಸ್ಯರು ಇಂತಹ ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಟ ನಡೆಸುವುದು ಹೆಚ್ಚು ಅಪೇಕ್ಷಣೀಯವಾಗಿದೆ. ಗುಣಮುಖರಾದ ಈ ಇಬ್ಬರು ಕುಷ್ಠರೋಗಿಗಳಿಗೆ ಉದ್ಯೋಗ ಅವಕಾಶ ಕಲ್ಪಿಸುಲು ಸಾಧ್ಯವಾದರೆ ಅದು ನನ್ನ ಅದೃಷ್ಟ ಎಂದು ನಾನು ಭಾವಿಸುತ್ತೇನೆ. ಅವರಿಂದು ಸಮಾಜದ ದುಡಿಯುವ ವರ್ಗಕ್ಕೆ ಸೇರಬೇಕು. ಅವರಿಗೆ ಮತ್ತೆಂದೂ ಈ ವ್ಯಾಧಿಯ ಸೋಂಕು ತಗಲುವುದಿಲ್ಲವೆಂಬ ವಿಶ್ವಾಸ ನನಗಿದೆ. ಹಾಗಾಗಿ ಅಂತಹ ವ್ಯಾಧಿ ಪೀಡಿತರನ್ನು ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಒಳಪಡಿಸುವುದು ಅತ್ಯಂತ ಕ್ರೂರ ಮತ್ತು ಅಮಾನವೀಯ ನಡವಳಿಕೆಯಾಗಿದೆ ಎಂಬ ಅಂಶವನ್ನು ನಾನು ಈ ಸಂದರ್ಭದಲ್ಲಿ ಒತ್ತಿ ಹೇಳುತ್ತಿದ್ದೇನೆ. ಈ ಸಮಸ್ಯೆಯನ್ನು ನಿವಾರಿಸುವ ನಿಟ್ಟಿನ ಮಾರ್ಗೋಪಾಯಗಳನ್ನು ಕಂಡು ಹಿಡಿಯಲು ಸದನದ ಸದಸ್ಯರನ್ನು ಭೇಟಿ ಮಾಡಿ ಚರ್ಚಿಸಲು ನಾನು ಸದಾ ಸಿದ್ಧಳಿದ್ದೇನೆ. ಆದರೆ ಈ ನಿರ್ಣಯವನ್ನು ಯಾವುದೇ ಕಾರಣಕ್ಕೂ ನಾನು ಬೆಂಬಲಿಸಲು ಸಿದ್ಧಳಿಲ್ಲ. ನಾನು ಮೊದಲೇ ಸ್ಪಷ್ಟಪಡಿಸಿರುವಂತೆ ಈ ನಿರ್ಣಯವು ವೈಜ್ಞಾನಿಕ ತಳಹದಿಯಲ್ಲಿ ಅವೈಜ್ಞಾನಿಕವಾಗಿದೆ. ನೈತಿಕ ದೃಷ್ಟಿಯಲ್ಲಿ ಅತ್ಯಂತ ಅನೈತಿಕವಾಗಿದೆ ಮತ್ತು ವ್ಯಾವಹಾರಿಕವಾದ ದೃಷ್ಟಿಯಿಂದ ಅವ್ಯವಹಾರಿಕವಾಗಿದೆ.

ಇನ್ನು ಈ ವಿಧೇಯಕಕ್ಕೆ ಸೂಚಿಸಿರುವ ವಿಷಯದಲ್ಲಿ ಹೇಳುವುದಾದರೆ ಸ್ವಯಂ ಪ್ರೇರಣೆಯಿಂದ ಸಂತಾನ ಶಕ್ತಿ ಹರಣ ಶಸ್ತ್ರಕ್ರಿಯೆಗೆ ಮುಂದಾಗುವವರ ಮೇಲೆ ಯಾವುದೇ ರೀತಿಯ ನಿಷೇಧ ಹೇರಲಾಗಿಲ್ಲ. ಪಟ್ಟಣಗಳಲ್ಲಿ ನೂರಾರು ಮಂದಿ ಅಂತಹ ಶಸ್ತ್ರಚಿಕಿತ್ಸೆಗೆ ಒಳಗಾಗುತ್ತಿದ್ದಾರೆ. ಹಾಗೆ ಅಪೇಕ್ಷಿಸಲು ಬರುವವರಿಗೆ ಅದರ ಪರಿಣಾಮಗಳ ಬಗ್ಗೆ ನಾನು ಎಚ್ಚರಿಸುತ್ತೇನೆ. ಆದರೆ ಸ್ವಯಂ ಪ್ರೇರಣೆಯಿಂದ ಅವರು ಮುಂದಾದಲ್ಲಿ ನಾನು ಅವರ ದಾರಿಗೆ ಅಡ್ಡ ಬರುವುದಿಲ್ಲ.

ಸಂದರಯ್ಯನವರು ಈ ನಿರ್ಣಯಕ್ಕೆ ಸೂಚಿಸಿರುವ ಗೊತ್ತುವಳಿ ಅರ್ಥಹೀನವಾಗಿದೆ.*

ಮಾನ್ಯ ಸದಸ್ಯರೊಬ್ಬರು ತಂದಿರುವ ತಿದ್ದುಪಡಿಯಲ್ಲಿ ಪ್ರೌಢರನ್ನು ನಿಸ್ಸತ್ವರನ್ನಾಗಿ ಮಾಡಬಾರದು ಎಂದು ಹೇಳಿದ್ದಾರೆ. ಈ ತಿದ್ದುಪಡಿಯನ್ನು ಸೂಚಿಸಿರುವ ಸದಸ್ಯರು ನಿಸ್ಸತ್ವ ಎಂಬ ಶಬ್ದವನ್ನು ನಿರ್ವೀರ್ಯ ಎಂಬ ಅರ್ಥದಲ್ಲಿ ಬಳಸಿದ್ದಾರೆಯೇ ? ಅಥವಾ ದೈಹಿಕವಾಗಿ ಅಥವಾ ಮಾನಸಿಕವಾಗಿ ಸಾಮರ್ಥ್ಯವನ್ನು ಕಳೆದುಕೊಂಡವರು ಎಂಬ ಅರ್ಥದಿಂದ ಬಳಸಿದ್ದಾರೆಯೇ ಎಂಬುದು ನನಗೆ ತಿಳಿದಿಲ್ಲ. ಹಾಗಾಗಿ ಈ ತಿದ್ದುಪಡಿಯಿಂದ ಏನಾದರೂ ಪ್ರಯೋಜನವಾಗುತ್ತದೆ ಎಂದಾಗಲಿ ಅಥವಾ ಅದು ಹೆಚ್ಚು ಅರ್ಥಪೂರ್ಣವಾಗಿದೆ ಎಂದಾಗಲಿ ಭಾವಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಸದನವು ಈ ನಿರ್ಣಯ ಮತ್ತು ಅದಕ್ಕೆ ಬಂದಿರುವ ತಿದ್ದುಪಡಿಗಳನ್ನು ತಿರಸ್ಕರಿಸುವುದೆಂದು ನಾನು ಭಾವಿಸುತ್ತೇನೆ.

---

* ಏಕೆಂದರೆ ಕುಷ್ಠರೋಗದಿಂದ ಬಳಲುತ್ತಿರುವವರನ್ನು ಸಂತಾನ ಶಕ್ತಿ ಹರಣ ಚಿಕಿತ್ಸೆಗೆ ಒಳಪಡುವಂತೆ ಅವರ ಮನ ಪರಿವರ್ತಿಸಲು ಸದನದ ಮಾನ್ಯ ಸದಸ್ಯರು ಮುಂದಾದರೆ ಅದಕ್ಕೆ ನಾನು ಏನನ್ನು ಹೇಳಲು ಬಯಸುವುದಿಲ್ಲ. ಆದರೆ ನಾನು ಈಗ ಹೇಳಿರುವ ಎಲ್ಲ ದೇಶಗಳಲ್ಲೂ ನನಗೆ ತಿಳಿದಿರುವಂತೆ ಅಂತಹ ನಿರ್ಬಂಧಕ ಕಾಯ್ದೆಗಳಿಲ್ಲ.

## 24. ಜಿನೀವಾ ಒಡಂಬಡಿಕೆ ವಿಧೇಯಕ *

ಮಾನ್ಯ ಉಪ ಸಭಾಪತಿಗಳೇ, ಮಾನ್ಯ ಸಚಿವರು ಅತ್ಯಂತ ಸಮರ್ಥವಾಗಿ ಸದನದಲ್ಲಿ ಮಂಡಿಸಿದ ಜಿನೀವಾ ಒಡಂಬಡಿಕೆ ವಿಧೇಯಕವನ್ನು ಬೆಂಬಲಿಸಲು ನನಗೆ ಅತ್ಯಂತ ಸಂತಸವಾಗುತ್ತಿದೆ. ಕಳೆದ ಹದಿನೈದು ವರ್ಷಗಳಿಂದ ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಮಿತಿಯೊಂದಿಗೆ ನಾನು ಹೊಂದಿರುವ ಅತ್ಯಂತ ನಿಕಟ ಸಂಪರ್ಕ ಮತ್ತು ನಮ್ಮದೇ ಆದ ಭಾರತೀಯ ರೆಡ್‌ಕ್ರಾಸ್ ಸಂಘಟನೆಯೊಂದಿಗೆ ಅದರ ಸ್ಥಾಪನೆಯ ಕಾಲದಿಂದಲೂ ನಾನು ಹೊಂದಿರುವ ಸಂಬಂಧಗಳ ಹಿನ್ನೆಲೆಯಲ್ಲಿ ಈ ಒಡಂಬಡಿಕೆಗಳ ವಿಷಯದಲ್ಲಿ ತೆಗೆದುಕೊಂಡಿರುವ ಪ್ರತಿಯೊಂದು ನಿರ್ಣಯವನ್ನು ನಾನು ತಿಳಿದಿದ್ದೇನೆ. ಯುದ್ಧಗಳು ಮತ್ತು ಒಟ್ಟಾರೆಯಾಗಿ ಇಡೀ ಜಗತ್ತಿನಲ್ಲಿ ಬದಲಾಗುತ್ತಿರುವ ಪರಿಸ್ಥಿತಿಯ ಬೆಳಕಿನಲ್ಲಿ ಈ ಒಡಂಬಡಿಕೆಗಳಲ್ಲಿ ಕೆಲವೊಂದು ಬದಲಾವಣೆಗಳನ್ನು ತರುವುದು ಅನಿವಾರ್ಯವಾಗಿದೆ. ರಣರಂಗದಲ್ಲಿ ಸೈನಿಕರು ಕೊಲ್ಲಲ್ಪಟ್ಟು, ಗಾಯಾಳುಗಳಾಗಿ ಯುದ್ಧಭೂಮಿಯಲ್ಲೇ ಯಾವ ಶುಶ್ರೂಷೆಯೂ ಇಲ್ಲದೆ ಅನಾಥರಾಗಿ ಯಾತನೆ ಪಡುತ್ತಿರುವುದನ್ನು ಕಂಡು ಮರುಗಿದ ವ್ಯಕ್ತಿಯೊಬ್ಬರ ಮಾನವೀಯ ಅನುಕಂಪದ ಫಲವಾಗಿ ರೆಡ್‌ಕ್ರಾಸ್ ಸಂಘಟನೆ ಅಸ್ತಿತ್ವಕ್ಕೆ ಬಂದಿತು ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಸಹಜವಾಗಿಯೇ ಪ್ರಥಮ ಒಡಂಬಡಿಕೆಯು ಗಾಯಾಳುಗಳಾಗಿ ಅಥವಾ ಅಸ್ವಸ್ಥರಾಗಿ ಬಿದ್ದ ಸೈನಿಕರ ರಕ್ಷಣೆಗೆ ಸಂಬಂಧಿಸಿದ್ದಾಗಿದೆ. ಅನಂತರದಲ್ಲಿ ಅದರ ಕಾರ್ಯಕ್ಷೇತ್ರ ಇನ್ನಷ್ಟು ವಿಸ್ತೃತಗೊಂಡಿತು. ಯುದ್ಧ ಭೂಮಿಯಲ್ಲಿ ಅಸ್ವಸ್ಥರಾಗಿ ಅಥವಾ ಗಾಯಾಳುಗಳಾಗಿ ಬಿದ್ದವರಿಗೆ ಸಹಾಯ ನೀಡುವ ನಿಟ್ಟಿನಲ್ಲಿ ಅದು ಕಾರ್ಯ ನಿರ್ವಹಿಸಲು ಪ್ರಾರಂಭಿಸಿತು. ನಂತರದಲ್ಲಿ ಅದರ ಸೇವೆ ಯುದ್ಧ ಕೈದಿಗಳಿಗೂ ಅನ್ವಯವಾಯಿತು. ಈ ಯುದ್ಧ ಕೈದಿಗಳಿಗೆ ಒದಗಿಸಲಾದ ರಕ್ಷಣೆಯು ನಂತರದಲ್ಲಿ ಜಗತ್ತಿನ ಸಾಮಾಜಿಕ ಪ್ರಜ್ಞೆ ವಿಸ್ತರಿಸಿದಂತೆ ಇನ್ನಷ್ಟು ಹೆಚ್ಚಿನ ವ್ಯಾಪ್ತಿಯನ್ನು ಪಡೆದು ರೆಡ್‌ಕ್ರಾಸ್‌ನಂತಹ ಸಂಘಟನೆ ಇನ್ನು ಹೆಚ್ಚಿನದನ್ನು ಮಾಡಬಹುದೆಂದು ಜನರು ಭಾವಿಸತೊಡಗಿದರು. ನಾಲ್ಕನೇ ಒಡಂಬಡಿಕೆಯು ಅದರ ಸೇವೆಯನ್ನು ಪೌರರಿಗೆ ವಿಸ್ತರಿಸಬೇಕೆಂದು ಅಭಿಪ್ರಾಯಕ್ಕೆ ಬಂದಿದೆ. ಮಾನ್ಯ ಸಚಿವರು ಪ್ರತಿಯೊಂದನ್ನು ಅತ್ಯಂತ ಸ್ಪಷ್ಟವಾಗಿ ಹೇಳಿದ್ದಾರೆ. ಹಾಗಾಗಿ ಅವರು ಹೇಳಿದುದನ್ನೇ ಪುನರುಚ್ಚರಿಸಲು ನಾವು ಬಯಸುವುದಿಲ್ಲ. ಆದರೆ ನನ್ನ ಮಾನ್ಯ ಮಿತ್ರರಾದ ಶ್ರೀ ಭೂಪೇಶ್ ಗುಪ್ತ ಅವರು ಹೇಳಿರುವ ವಿಚಾರಗಳಿಗೆ ಸಂಬಂಧಿಸಿದಂತೆ ಕೆಲವೊಂದು ಮಾತುಗಳನ್ನು ಆಡಲು ನಾನು ಇಚ್ಛಿಸುತ್ತೇನೆ. ಅವರು ಬಹಳಷ್ಟು ಮಾತನಾಡಿ "ಇಂತಹ ಒಡಂಬಡಿಕೆಗಳಿಂದ ಏನು ಪ್ರಯೋಜನ ? ಪ್ರತಿಯೊಬ್ಬರೂ ಅದನ್ನು ಅಲಕ್ಷಿಸುತ್ತಾರೆ" ಎಂದು ಹೇಳಿದ್ದಾರೆ. ಜಗತ್ತಿನಲ್ಲಿ ಕೆಟ್ಟದ್ದು ಯಾವಾಗಲೂ ಇದ್ದೇ ಇರುತ್ತದೆ. ಆದರೆ ಅದರ ವಿರುದ್ಧ ಒಳ್ಳೆಯತನ ಹೋರಾಟ ನಡೆಸಬಾರದು ಎಂದೇನಿಲ್ಲ. ಯುದ್ಧವು ಒಂದು ಮೃಗೀಯ ನಡವಳಿಕೆ. ಇಂತಹ ಯುದ್ಧದ ಸಂದರ್ಭದಲ್ಲಿ ಮನುಷ್ಯ ಪ್ರಾಣಿಯ ಮಟ್ಟಕ್ಕೆ ಇಳಿಯುತ್ತಾನೆ. ಆದರೆ ಮನುಷ್ಯ ಎಲ್ಲ ಕಾಲದಲ್ಲಿಯೂ ಪ್ರಾಣಿಯಂತೆಯೇ ವರ್ತಿಸಬೇಕಾಗಿಲ್ಲ. ಯುದ್ಧದಂತಹ

---

* ರಕ್ಷಣಾ ಸಚಿವ ಶ್ರೀ ವಿ.ಕೆ. ಕೃಷ್ಣ ಮೆನನ್ ಅವರು ಮಂಡಿಸಿದ ಜಿನೀವಾ ಒಡಂಬಡಿಕೆ ವಿಧೇಯಕ 1960 ಕುರಿತು ಮಾತನಾಡುತ್ತಾ ( ರಾಜ್ಯಸಭೆ ಚರ್ಚೆ, ಫೆಬ್ರವರಿ 16, 1960 ಸಿಸಿ 860 - 864).

ಅತ್ಯಂತ ಅನಾಗರಿಕ ಮತ್ತು ಬರ್ಬರ ವಿನಾಶಕಾರಿ ನಡವಳಿಕೆಯ ಯುದ್ಧದಲ್ಲಿಯೂ ಮನುಷ್ಯರು ಮತ್ತು ಸರ್ಕಾರಗಳು ಮಾನವೀಯ ನಡವಳಿಕೆಗಳನ್ನು ತೋರುವುದು ಸಾಧ್ಯ. ತನ್ನ ನೂರು ವರ್ಷಗಳ ಇತಿಹಾಸದಲ್ಲಿ ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆ ಇದನ್ನು ತೋರಿಸಿಕೊಟ್ಟಿದೆ. ಈ ನಿಟ್ಟಿನಲ್ಲಿ ಅದು ತಾನು ನಂಬಿದ ಮೌಲ್ಯಗಳತ್ತ ಜನರ ಗಮನವನ್ನು ಸೆಳೆದಿದೆ ಮತ್ತು ಈ ದಿಸೆಯಲ್ಲಿ ಮಹತ್ತರವಾದ ಕೊಡುಗೆಯನ್ನು ನೀಡಿದೆ. ವಿಶ್ವ ಸಂಸ್ಥೆಯೊಂದಿಗಾಗಲಿ, ಲೀಗ್ ಆಫ್ ನೇಷನ್ಸ್ ಸಂಘಟನೆಯೊಂದಿಗಾಗಲಿ ಸಹಮತ ಇಲ್ಲದ ದೇಶಗಳು ಆ ವೇದಿಕೆಗಳಿಂದ ಹೊರ ನಡೆದಿವೆ. ಆದರೆ ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆಯಿಂದ ಯಾವೊಂದು ರಾಷ್ಟ್ರವು  ಹೊರಬಂದಿದ್ದಿಲ್ಲ. ಹೀಗಾಗಿ ಅಂತರರಾಷ್ಟ್ರೀಯ ಸಂಘಟನೆ ವಿಶ್ವ ಸಂಸ್ಥೆಗಿಂತಲೂ ಹೆಚ್ಚು ಸದಸ್ಯರನ್ನು ಹೊಂದಿದೆ. ರೆಡ್‌ಕ್ರಾಸ್ ಸಂಘಟನೆಯ ಒಡಂಬಡಿಕಗಳನ್ನು ಅತ್ಯಂತ ಎಚ್ಚರದಿಂದ ರೂಪಿಸಲಾಗಿದೆ. ಹಲವು ತಿಂಗಳುಗಳು, ಹಲವು ವರ್ಷಗಳು ಸರಿದು ಹೋಗಬಹುದು. ಆದರೆ ರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆಯ ಸಮ್ಮತಿ ಪಡೆದೇ ನಮ್ಮ ಕೆಲಸ ಮುಂದುವರಿಯುವುದು ಮತ್ತು ಈ ನಿಟ್ಟಿನಲ್ಲಿ ಸಂಪೂರ್ಣ ಸರ್ವಾನುಮತ ಏರ್ಪಡಲಿದೆ. ಪ್ರತಿಯೊಂದು ಒಡಂಬಡಿಕೆಯನ್ನೂ ಮುನ್ನೆಚ್ಚರಿಕೆ, ಸಮಗ್ರ ವಿಶ್ಲೇಷಣೆ ಮತ್ತು ಪ್ರತಿಯೊಬ್ಬರ ಸಂಪೂರ್ಣ ಸಹಮತದಿಂದಲೇ ರೂಪಿಸಲಾಗಿದೆ. ಈ ವಿಧೇಯಕವನ್ನು ಸಂಸತ್ತಿನ ಮುಂದೆ ತರಲು ಭಾರತ ಸರ್ಕಾರ ಇಷ್ಟೊಂದು ದೀರ್ಘ ಅವಧಿಯನ್ನು ತೆಗೆದುಕೊಂಡಿದೆ ಎಂಬುದು ನಿಜಕ್ಕೂ ವಿಷಾದ ಪಡಬೇಕಾದ ಸಂಗತಿಯಾಗಿದೆ. ಒಡಂಬಡಿಕೆಗೆ 1949ರಲ್ಲೇ ಹಸ್ತಾಕ್ಷರವಾಗಿದ್ದು, ನಮ್ಮ ಸರ್ಕಾರವೂ ಅದರಲ್ಲಿ ಭಾಗಿಯಗಿತ್ತು. ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆಯು ರೂಪಿಸುವ ಒಡಂಬಡಿಕೆಗಳಲ್ಲಿ ಸದಸ್ಯ ರಾಷ್ಟ್ರಗಳ ಸರ್ಕಾರಗಳೆಲ್ಲವೂ ಭಾಗಿಯಾಗಿರುತ್ತದೆ. ಅದೇ ವೇಳೆಗೆ ರಾಷ್ಟ್ರೀಯ ರೆಡ್‌ಕ್ರಾಸ್ ಸೊಸೈಟಿಗಳೂ ಈ ಸಂಘಟನೆಯ ಸದಸ್ಯತ್ವ ಹೊಂದಿರುತ್ತವೆ. ಸೊಸೈಟಿಗಳು ಯಾವುದೇ ಹೊಣೆಗಾರಿಕೆಗಳನ್ನು ಹೊತ್ತಿರುವುದಿಲ್ಲ. ಈ ಒಡಂಬಡಿಕೆಗಳನ್ನು ಯುದ್ಧ ಅವಧಿಯಲ್ಲಿ ಅಲಕ್ಷಿಸಲು ಅಥವಾ ರದ್ದುಪಡಿಸಲು ಸಾಧ್ಯವಿದ್ದರೂ ಕೂಡಾ ಅಂತಾರಾಷ್ಟ್ರೀಯ ಸಂಘಟನೆ ಶಾಂತಿಯ ಕಾಲದಲ್ಲಿ ಬಹಳಷ್ಟು ಕೆಲಸವನ್ನು ಮಾಡುತ್ತದೆ ಎಂಬ ಅಂಶವನ್ನು ನಿಮ್ಮ ನೆನಪಿಗೆ ತರಲು ಬಯಸುತ್ತೇನೆ. ಇಂದಿಗೂ ಅಲ್ಜೀರಿಯಾದ ಶಿಬಿರಗಳಲ್ಲಿರುವ ಯುದ್ಧ ಕೈದಿಗಳ ವಿಷಯದಲ್ಲಿ ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಘಟನೆ ಬಹಳಷ್ಟು ಕೆಲಸ ಮಾಡುತ್ತಿದೆ. ಯುದ್ಧ ಕೈದಿಗಳ ವಿಷಯದಲ್ಲಿ ರೆಡ್‌ಕ್ರಾಸ್ ಅತ್ಯುತ್ತಮ ಶಿಫಾರಸುಗಳನ್ನು ಮಾಡಿದೆ. ಈ ದಿಸೆಯಲ್ಲಿ ಅದು ಏಕೋಭಾವದಿಂದ ಕಾರ್ಯ ನಿರ್ವಹಿಸುತ್ತಿದೆ. ಅಲ್ಜೀರಿಸ್‌ನಲ್ಲಿನ ಕೈದಿಗಳ ಶಿಬಿರದಲ್ಲಿ ಯುದ್ಧ ಕೈದಿಗಳನ್ನು ಸಂದರ್ಶಿಸಿದ ಸಮಿತಿಯು ಈಚೆಗೆ ಸಲ್ಲಿಸಿರುವ ವರದಿಯಿಂದ ಈ ಅಂಶವನ್ನು ನೀವು ಮನಗಾಣಬಹುದು. ಪಕ್ಷಪಾತದ ಪ್ರಶ್ನೆಯೇ ಇಲ್ಲ. ರೆಡ್‌ಕ್ರಾಸ್ ಯಾರ ಪಕ್ಷವನ್ನೂ ವಹಿಸುವುದಿಲ್ಲ. ರಾಜಕೀಯದಲ್ಲಿ ಅದಕ್ಕೆ ಆಸಕ್ತಿಯೂ ಇಲ್ಲ. ರೆಡ್‌ಕ್ರಾಸ್ ಸಂಘಟನೆಯ ಆದರ್ಶಗಳನ್ನೇ ಪಾಲಿಸುತ್ತದೆ. ನಿಮಗೇ ಗೊತ್ತಿರುವಂತೇ ಸಂಘಟನೆಯ ಧ್ಯೇಯಗಳು ಸೀಮಿತವಾಗಿವೆ ಮತ್ತು ಅವು ಮಾನವೀಯ ಅಗತ್ಯಗಳನ್ನಷ್ಟೇ ದೃಷ್ಟಿಯಲ್ಲಿಟ್ಟುಕೊಂಡಿರುತ್ತದೆ. ಸಚಿವರು ಹೇಳಿರುವಂತೆ ರೂಢಿಯಲ್ಲಿರುವ ಕಾನೂನು ಕಾಯ್ದೆಗಳಂತೆ ಇದು ನೈತಿಕತೆಗೆ ಹೆಚ್ಚಿನ ಒತ್ತು ಕೊಡುತ್ತದೆ. ಯಾವುದೇ ದೇಶದ ಅಥವಾ

ಅಂತಾರಾಷ್ಟ್ರೀಯ ಕಾಯ್ದೆಯಿರಲಿ ನೈತಿಕತೆಗೇ ಅಲ್ಲಿ ಆದ್ಯತೆ. ಹೀಗೆ ನಾವು ಈ ಒಡಂಬಡಿಕೆಗಳನ್ನು ಅಂತಹ ಸ್ಫೂರ್ತಿ, ಆದರ್ಶಗಳಿಂದ ನೋಡಬೇಕು. ಈ ವಿಧೇಯಕದಲ್ಲಿ ಒಳಗೊಂಡಿರುವ ಪ್ರತಿಯೊಂದನ್ನು ನಾವು ಈ ಸ್ಫೂರ್ತಿಯಿಂದ ಸ್ವೀಕರಿಸಬೇಕು.

ಈ ಸಂದರ್ಭದಲ್ಲಿ ನಾನು ಸಚಿವರಲ್ಲಿ ಒಂದು ವಿನಂತಿ ಮಾಡಿಕೊಳ್ಳಲು ಬಯಸುತ್ತೇನೆ. ಎರಡು ವರ್ಷಗಳ ಹಿಂದೆ ಜರುಗಿದ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಈ ಒಡಂಬಡಿಕೆಗೆ ಸಂಬಂಧಿಸಿದ ನಿಯಮಾವಳಿಗಳ ಕರಡನ್ನು ರಾಷ್ಟ್ರೀಯ ರೆಡ್‌ಕ್ರಾಸ್ ಸೊಸೈಟಿಗಳು ಮತ್ತು ಸರ್ಕಾರಗಳ ಅಂಗೀಕಾರಕ್ಕಾಗಿ ಕಳುಹಿಸಿಕೊಡಲಾಯಿತು. ಅದಕ್ಕೆ ಮುನ್ನ ಸುಮಾರು ಒಂದೂವರೆ ವರ್ಷಗಳ ಕಾಲ ವ್ಯಾಪಕ ಚರ್ಚೆ ನಡೆಸಿ, ಬೇರೆ ಬೇರೆ ರಾಷ್ಟ್ರಗಳು, ಸರ್ಕಾರಗಳು ಮತ್ತು ರೆಡ್‌ಕ್ರಾಸ್ ಸಂಘಟನೆಗಳ ಜೊತೆ ಸಮಾಲೋಚಿಸಿಯೇ ಈ ನಿಯಮಾವಳಿಗಳನ್ನು ರೂಪಿಸಲಾಗಿತ್ತು. ಈ ನಿಯಮಗಳು ಮಾನವೀಯ ಆದರ್ಶಗಳು ಮತ್ತು ಅಗತ್ಯಗಳಿಗೆ ಅನುಗುಣವಾಗಿದ್ದು ಯುದ್ಧದ ದುಷ್ಪರಿಣಾಮಗಳಿಂದ ನಾಗರಿಕರನ್ನು ಸಂರಕ್ಷಿಸುವುದೇ ಇವುಗಳ ಲಕ್ಷ್ಯವಾಗಿದೆ.

ಪರಿಣಾಮ ಯುದ್ಧಗಳನ್ನು ತಡೆಹಿಡಿಯುವ ನಿಟ್ಟಿನಲ್ಲಿ ಶೃಂಗ ಸಮ್ಮೇಳನಗಳು ಅಥವಾ ಇತರ ನಿರ್ಧಾರಗಳನ್ನು ತೆಗೆದುಕೊಳ್ಳುವುದಕ್ಕೆ ಬಹಳ ಮೊದಲೇ ಯಾವುದೇ ಒಂದು ರಾಷ್ಟ್ರ ಅಣು ಸಮರಕ್ಕೆ ಮುಂದಾದಲ್ಲಿ ಅದರ ಪರಿಣಾಮಗಳನ್ನು ಪರಾಮರ್ಶಿಸಲು ನಾವು ಸಮಿತಿಗಳನ್ನು ರೂಪಿಸಿಕೊಂಡಿದ್ದೇವೆಯೆಂಬ ಅಂಶವನ್ನು ಸದನಕ್ಕೆ ನೆನೆಪಿಸಬಯಸುತ್ತೇನೆ. ಪರಮಾಣು ಸಮರ ತಂತ್ರದ ವಿರುದ್ಧ ಪರಮಾಣು ಪರೀಕ್ಷಾ ಸ್ಫೋಟಗಳ ವಿರುದ್ಧ, ಜೈವಿಕ ಸಮರ ತಂತ್ರಗಳ ವಿರುದ್ಧ, ರಾಸಾಯನಿಕ ಸಮರ ತಂತ್ರದ ವಿರುದ್ಧ ಮತ್ತು ಇಂತಹ ಇತರ ಹೇಯ ತಂತ್ರಗಳ ವಿರುದ್ಧ ಸರ್ವಾನುಮತದ ನಿರ್ಣಯಗಳನ್ನು ಅಂಗೀಕರಿಸಿದ ಸಂಸ್ಥೆ ಎಂದರೆ ರೆಡ್‌ಕ್ರಾಸ್ ಸಂಸ್ಥೆಯೊಂದೇ ಆಗಿದೆ. ಅದು ಎಲ್ಲ ಸಂದರ್ಭಗಳಲ್ಲೂ ಒಂದೇ ಧ್ವನಿಯಲ್ಲಿ ಮಾತನಾಡಿದೆ. ಈ ನಿರ್ಣಯಗಳಿಗೆ ಯಾರೂ ಕಿವಿಗೊಡದಿರಬಹುದು. ಆದರೆ ಈ ಸಂಸ್ಥೆಯು ಇಡೀ ಜಗತ್ತಿನ ಗಮನವನ್ನು ತನ್ನೆಡೆಗೆ ಸೆಳೆದುಕೊಂಡಿದೆ ಮತ್ತು ವಿಶ್ವಸಂಸ್ಥೆಯ ಮಹಾ ಕಾರ್ಯದರ್ಶಿಗಳು ಈ ನಿರ್ಣಯಗಳ ವಿಷಯದಲ್ಲಿ ಭಾರೀ ಶ್ಲಾಘನೆ ವ್ಯಕ್ತಪಡಿಸಿದ್ದಾರೆ. ಈ ಕರಡು ನಿಯಮಗಳು ಬೇರೆ ಬೇರೆ ಸರ್ಕಾರಗಳ ಪರಿಶೀಲನೆಗೆ ಒಳಪಟ್ಟು ಇವುಗಳನ್ನು ಸರ್ಕಾರಗಳು ಅಂಗೀಕರಿಸಿದ ಬಳಿಕ ನಾವು ಮತ್ತೊಂದು ನಿರ್ಣಯವನ್ನು ಮಂಡಿಸುವ ಮೂಲಕ ಸಂಸತ್ತಿನಲ್ಲಿ ಅವುಗಳನ್ನು ಸ್ಥಿರೀಕರಿಸಬೇಕಾಗಿದೆ. ಒಟ್ಟಿನಲ್ಲಿ ಮಾನವ ಸಮುದಾಯದ ಅವಶ್ಯಕತೆಗಳಿಗೆ ಸಂಬಂಧಿಸಿದ ವಿಚಾರದಲ್ಲಿ - ಜಗತ್ತಿನ ಯಾವುದೇ ದೇಶದ ಜನಸಂಖ್ಯೆಯ, ಯಾವುದೇ ಒಂದು ಭಾಗದ ಸಂರಕ್ಷಣೆಯ ವಿಷಯದಲ್ಲಿ - ಆಯಾ ರಾಷ್ಟ್ರದ ರಕ್ಷಣಾ ಖಾತೆಯು ಸಹಜವಾಗಿಯೇ ಸಹಾಯ ನೀಡಲು ಮುಂಬರಬೇಕಿತ್ತು. ಹೀಗಾಗಿ ಮಾನ್ಯ ರಕ್ಷಣಾ ಸಚಿವರು ಈ ಕರಡು ನಿಯಮಗಳನ್ನು ಪರಿಶೀಲಿಸಿ ಅವುಗಳನ್ನು ಅನುಮೋದಿಸಬೇಕೆಂದು ನಾನು ಈ ಸಂದರ್ಭದಲ್ಲಿ ಕೇಳಿಕೊಳ್ಳುತ್ತಿದ್ದೇನೆ. ಕಳೆದ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಬೇರೆ ಬೇರೆ ರಾಷ್ಟ್ರಗಳ ಸರ್ಕಾರಗಳು ಈ ನಿಯಮಗಳಿಗೆ ಅನುಮೋದನೆ ನೀಡಿವೆ. ಅದೇ ರೀತಿ ಭಾರತೀಯ ರೆಡ್‌ಕ್ರಾಸ್ ಸೊಸೈಟಿಯು ಈ

ನಿಯಮಾವಳಿಯನ್ನು ಆರೋಗ್ಯ ಸಚಿವ ಖಾತೆಗೆ ಅನುಮೋದನೆಗಾಗಿ ಸಲ್ಲಿಸಿದೆ. ಈ ನಿರ್ಣಯಗಳ ಪ್ರತಿಗಳನ್ನು ವಿದೇಶಾಂಗ ಖಾತೆಗೂ ಕಳುಹಿಸಿದ್ದೇವೆ. ನಿರ್ಣಯಗಳ ಪ್ರತಿಗಳು ರಕ್ಷಣಾ ಖಾತೆಗೆ ತಲುಪಿಯೇ ಇಲ್ಲವೇ ನನಗೆ ತಿಳಿದಿಲ್ಲ. ಈ ಪ್ರತಿಗಳು ತಲುಪದೇ ಇದ್ದಲ್ಲಿ ನಾನು ತಕ್ಷಣವೇ ಅವುಗಳನ್ನು ರಕ್ಷಣಾ ಖಾತೆಗೆ ಕಳುಹಿಸಿಕೊಡಲಿದ್ದೇನೆ. ಈ ಕರಡು ನಿಯಮಾವಳಿಗಳಿಗೆ ಸರ್ಕಾರದ ಅನುಮತಿ ದೊರೆಯುವಂತೆ ಈ ಕಾರ್ಯವನ್ನು ತ್ವರಿತಗೊಳಿಸಲು ನಾನು ಈ ಸಂದರ್ಭದಲ್ಲಿ ಸಚಿವರನ್ನು ಮತ್ತೊಮ್ಮೆ ವಿನಂತಿಸಿಕೊಳ್ಳುತ್ತೇನೆ. ಈ ನಿಯಮಾವಳಿಗೆ ಭಾರತ ಸರ್ಕಾರವು ಬದ್ಧವಾಗಿದೆ ಎಂಬುದನ್ನು ಅಂತಾರಾಷ್ಟ್ರೀಯ ಸಮಿತಿಗೆ ತಿಳಿಸುವುದು ನನ್ನ ಕರ್ತವ್ಯವಾಗಿದೆ. ಈ ವಿಷಯದಲ್ಲಿ ಯಾವುದೇ ರೀತಿಯ ವಿಳಂಬವಾದಲ್ಲಿ ಅದು ದುರಾದೃಷ್ಟಕರ. ಈ ವಿಧೇಯಕಕ್ಕೆ ಸಂಬಂಧಿಸಿದಂತೆ ಇಷ್ಟೊಂದು ವಿಳಂಬ ಏಕಾಯಿತೋ ನನಗೆ ಗೊತ್ತಿಲ್ಲ. ಆದರೆ ಸರ್ಕಾರದ ಔಪಚಾರಿಕ ಅನುಮೋದನೆಯನ್ನು ಇನ್ನಷ್ಟು ವಿಳಂಬಿಸಬಾರದು. ಏಕೆಂದರೆ ಸರ್ಕಾರ ಅದಕ್ಕೆ ಈಗಾಗಲೇ ಅಂಗೀಕಾರ ನೀಡಿದೆ. ಇಷ್ಟು ವಿಷಯಗಳನ್ನು ಸದನದ ಮುಂದಿಡುವ ಮೂಲಕ ಈ ವಿಧೇಯಕವನ್ನು ಬೆಂಬಲಿಸಲು ನನಗೆ ಅತ್ಯಂತ ಹರ್ಷವಾಗುತ್ತಿದೆ. ಸದನವು ಅದನ್ನು ಸರ್ವಾನುಮತದಿಂದ ಅಂಗೀಕರಿಸುವುದೆಂದೂ ನಾನು ನಂಬಿದ್ದೇನೆ. *

---

* ನಂತರ ಈ ವಿಧೇಯಕವು ಸರ್ವಾನುಮತದಿಂದ ಅಂಗೀಕೃತವಾಯಿತು.

## ಸಾಮಾಜಿಕ ಮತ್ತು ಶೈಕ್ಷಣಿಕ ವಿಷಯಗಳು

### 25. ವರದಕ್ಷಿಣೆ ನಿಷೇಧ ವಿಧೇಯಕ --- 1959 *

ಈ ಸ್ವರೂಪದ ವಿಧೇಯಕದ ಔಚಿತ್ಯ ಮತ್ತು ಅದರ ಹಿಂದಿರುವ ವಿವೇಕವನ್ನು ಪ್ರಶ್ನಿಸಲು ನಾನು ಇಲ್ಲಿ ನಿಂತಿದ್ದೇನೆ. [illegible] ಸಮಾಜ ಸುಧಾರಕಿಯಾಗಿ ನಾನು ಕೆಲಸ ಮಾಡಿದವಳು. ಮಹಿಳೆಯರು ಮತ್ತು ಮಕ್ಕಳ ಸೇವೆಯಲ್ಲಿ ನನ್ನ ಕೂದಲು ಬೆಳ್ಳಗಾಗಿದೆ. ಆದರೆ ಇದೀಗ ಮಂಡಿಸಿರುವ ವಿಧೇಯಕವು ತಾನು ಇರಿಸಿಕೊಂಡಿರುವ ಧ್ಯೇಯೋದ್ದೇಶಗಳನ್ನು ಸಾಧಿಸುವುದಿಲ್ಲವೆಂಬುದು ನನ್ನ ಖಚಿತ ಅಭಿಪ್ರಾಯವಾಗಿದೆ. ಈ ಸಂಬಂಧದಲ್ಲಿ ಆಂಧ್ರಪ್ರದೇಶ ಮತ್ತು ಬಿಹಾರ ರಾಜ್ಯಗಳಲ್ಲಿ ಈಗಿರುವ ಕಾಯ್ದೆಗಳು ಸಂಪೂರ್ಣ ವಿಫಲವಾಗಿರುವ ಹಿನ್ನೆಲೆಯಲ್ಲಿ ಭಾರತ ಸರ್ಕಾರವು ಅಖಿಲ ಭಾರತ ವ್ಯಾಪ್ತಿಯ ಕಾಯ್ದೆಯೊಂದನ್ನು ರೂಪಿಸುವ ಒತ್ತಡಕ್ಕೆ, ಒಳಗಾಗಿ ಈ ವಿಧೇಯಕವನ್ನು ಮಂಡಿಸಲು ಮುಂದಾಯಿತೋ ಹೇಗೆ ಎಂದು ನಾನು ಚಕಿತಪಟ್ಟಿದ್ದೇನೆ. ಬಿಹಾರ ಮತ್ತು ಆಂಧ್ರ ಪ್ರದೇಶಗಳಲ್ಲಿ ಈಗಿರುವ ಕಾಯ್ದೆಗಳಿಂದ ಅಂತಹ ಪ್ರಯೋಜನಗಳೇನೂ ಆಗಿಲ್ಲ. ಬಹುಶಃ ಒಂದೋ ಎರಡೋ ಪ್ರಕರಣಗಳಲ್ಲಿ ಮೊಕದ್ದಮೆ ಹೂಡಿರಬಹುದು. ಆದರೆ ಒಂದೇ ಒಂದು ಪ್ರಕರಣದಲ್ಲೂ ಶಿಕ್ಷೆಯಂತೂ ಆಗಿಲ್ಲ. ಆದರೆ ನಾವು ಎಷ್ಟೇ ಪ್ರಯತ್ನಿಸಿದರೂ ನನ್ನ ತಿಳುವಳಿಕೆಯಂತೆ ಅದನ್ನು ನಿರ್ಮೂಲಿಸಲು ಸಾಧ್ಯವಾಗದಿದ್ದಲ್ಲಿ, ಒಂದು ವೇಳೆ ಇದನ್ನು ಆಯ್ಕೆ ಸಮಿತಿಯ ಮುಂದೆ ಕಳುಹಿಸಿದರೂ ಕೂಡಾ ಅದರಿಂದೇನು ಪ್ರಯೋಜನವಾಗದೆಂಬ ಅಂಶವನ್ನು ನಾನು ಮಾನ್ಯ ಕಾನೂನು ಸಚಿವರ ಗಮನಕ್ಕೆ ತರಲು ಬಯಸುತ್ತೇನೆ. ಒಂದು ವೇಳೆ ಈ ವಿಧೇಯಕ ಅಂಗೀಕೃತವಾದರೆ ಅದನ್ನು ಯಾವ ರೀತಿಯಲ್ಲೂ ಜಾರಿಗೆ ತರುವುದು ಮಾತ್ರ ಎಂದೆಂದಿಗೂ ಸಾಧ್ಯವೇ ಇಲ್ಲ. ಈ ಕಾಯ್ದೆಯನ್ನು ತಂದರೆ ಅದನ್ನು ಜಾರಿಗೊಳಿಸುವುದು ನಿಮ್ಮಿಂದ ಸಾಧ್ಯವೇ ? ಒಂದು ನಿರ್ದಿಷ್ಟ ಕುಟುಂಬಕ್ಕೆ ಸೇರಿದ ನ್ಯಾಯಾಲಯಕ್ಕೆ ಹೋಗಿ ಹುಡುಗನ ತಂದೆ ಇಷ್ಟು ಹಣವನ್ನು ವರದಕ್ಷಿಣೆಯಾಗಿ ಕೇಳಿದರು ಎಂದು ಮೊಕದ್ದಮೆ ಹೂಡಲು ಸಾಧ್ಯವೇ? ಖಂಡಿತ ಇಲ್ಲ. ಒಂದು ವೇಳೆ ನಾನು ಹಾಗೆ ಮಾಡಿದರೆ ? ನನ್ನ ಮಗಳು ಅವಿವಾಹಿತಳಾಗಿಯೇ ಉಳಿದುಬಿಡುತ್ತಾಳೆ.

ವರದಕ್ಷಿಣೆಗೆ ಸಂಬಂಧಿಸಿದಂತೆ ನಮ್ಮ ಪರಿಸ್ಥಿತಿ ಎಷ್ಟೊಂದು ಭಯಾನಕವಾಗಿದೆ. ದೇಶದ ಜನಸಂಖ್ಯೆಯಲ್ಲಿ ಶೇ.80ರಷ್ಟು ಮಂದಿ ಅಥವಾ ಅದಕ್ಕಿಂತ ಹೆಚ್ಚು ಮಂದಿ ಕಡು ಬಡವರಾಗಿದ್ದಾರೆ. ಅದರಲ್ಲಿ ಹೆಚ್ಚಿನವರಿಗೆ ಇನ್ನೂರು ರೂಪಾಯಿ ಅಥವಾ ಮುನ್ನೂರು ರೂಪಾಯಿಗಿಂತ ಹೆಚ್ಚು ಖರ್ಚು ಮಾಡಬಾರದೆಂದು ನಾನು ಬಡವರಿಗೆ ಹೇಳುತ್ತಲೇ ಬಂದಿದ್ದೇನೆ. ಈ ವಿಷಯದಲ್ಲಿ ಅವರ ಮನ ಒಲಿಸಲು ಪ್ರಯತ್ನಿಸುತ್ತಲೇ ಬಂದಿದ್ದೇನೆ. ಸ್ವಲ್ಪ ಮಟ್ಟಿಗೆ ಯಶಸ್ಸನ್ನೂ ಸಾಧಿಸಿದ್ದೇನೆ. ಇವರಲ್ಲಿ ಅನೇಕರು ಮದುವೆಗಾಗಿ 500 ರೂಪಾಯಿಗಳಷ್ಟು ಹಣವನ್ನು ಕೂಡಿಟ್ಟಿದ್ದಾರೆ. ಆದರೆ ನಾನು ಅವರ ಮನ ಒಲಿಸಿದ ಪರಿಣಾಮವಾಗಿ ಅಷ್ಟು ಹಣವನ್ನು ಖರ್ಚು ಮಾಡುವುದಿಲ್ಲ.

---

* ನಂತರ ಕಾನೂನು ಸಚಿವ ಎ.ಕೆ. ಸೇನ್ ಅವರು ಮಂಡಿಸಿದ ವಿಧೇಯಕದ ಕುರಿತು ಮಾತನಾಡುತ್ತಾ. (ರಾಜ್ಯಸಭೆ ಚರ್ಚೆ, ಆಗಸ್ಟ್ 31 1959 ಸಿಸಿ 2393 - 2397 ಮತ್ತು 2569 - 71).

ಅಂತಹ ಕೆಲವು ಮದುವೆಗಳಿಗೂ ನಾನು ಹೋಗಿದ್ದೇನೆ. ಅವರು ಗಂಡಿನ ಕಡೆಯವರಿಗೆ ಒಂದು ಊಟ ಮತ್ತು ಅಳಿಯನಿಗೆ ಸಣ್ಣ ಉಡುಗೊರೆಯನ್ನಷ್ಟೇ ನೀಡಿದ್ದಾರೆ. ಭಾರತೀಯ ಸನಾತನ ಸಂಪ್ರದಾಯದಂತೆ ಮಗಳಿಗೆ ಏನನ್ನು ಕೊಡಲು ಶಕ್ತರೋ ಅಷ್ಟನ್ನು ಕೊಟ್ಟಿದ್ದಾರೆ. ಹೀಗಿರುವಾಗ ಶಾಸನವೊಂದನ್ನು ತರುವ ಮೂಲಕ ಈ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಾದೀತೆ ? ಎಂಬುದನ್ನು ನಾವು ಯೋಚಿಸಬೇಕು.

ನನ್ನ ಸೋದರಿಯರು - ಅವರಲ್ಲಿ ಒಬ್ಬರು ಇಂದು ಇಲ್ಲೇ ಇದ್ದಾರೆ - ಭಾರತೀಯ ಜೀವನದ ಬಗ್ಗೆ ಇಲ್ಲಿ ಕೆಟ್ಟ ಚಿತ್ರಣ ನೀಡಿರುವುದು ನನಗೆ ನಿಜಕ್ಕೂ ಆಶ್ಚರ್ಯ ಉಂಟುಮಾಡಿದೆ. ನಮ್ಮ ದೇಶದಲ್ಲಿ ಮದುವೆಯಾಗಿರುವ ಹುಡುಗಿಯರಾರೂ ಸಂತುಷ್ಟರಾಗಿಲ್ಲ ಅಥವಾ ಅವರೆಲ್ಲರೂ ಈ ಪರಿಸ್ಥಿತಿಯ ಬಲಿ ಪಶುಗಳಾಗಿದ್ದಾರೆ ಎಂಬುದನ್ನು ನಾನು ಒಪ್ಪುವುದಿಲ್ಲ. ಪ್ರಗತಿ ಹೊಂದಿದಂತೆ ನಾವು ನಮ್ಮ ವ್ಯಕ್ತಿತ್ವವನ್ನೂ, ನಮ್ಮ ದೃಷ್ಟಿಕೋನವನ್ನೂ ಬದಲಿಸಿಕೊಳ್ಳಬೇಕಾಗಿದೆ. ನಮ್ಮ ಧೋರಣೆಯನ್ನೂ, ಬದುಕನ್ನು ಕುರಿತ ಕಲ್ಪನೆ, ರೀತಿ ನೀತಿಗಳನ್ನು ಬದಲಿಸಬೇಕಾಗಿದೆ. ನಾವಿಂದು ವೈಜ್ಞಾನಿಕ ಯುಗದಲ್ಲಿದ್ದೇವೆ. ಇನ್ನೂ ಹೆಚ್ಚು ಚಲನಶೀಲ ಯುಗವನ್ನು ಎದುರು ನೋಡುತ್ತಿದ್ದೇವೆ. ಎಲ್ಲ ಕ್ಷೇತ್ರಗಳಲ್ಲೂ ಬಹಳಷ್ಟನ್ನು ಸಾಧಿಸುವ ಹುಮ್ಮಸ್ಸಿನಲ್ಲಿದ್ದೇವೆ. ನೀವು ನಿಮ್ಮ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುತ್ತಾ ಹೋದಂತೆ ಈ ಪಿಡುಗುಗಳು ತಾನಾಗಿಯೇ ನಿವಾರಣೆಯಾಗುವುವು. ನಿಮ್ಮ ಹೆಣ್ಣು ಮಕ್ಕಳನ್ನು ಉದ್ಯೋಗ ನಿರ್ವಹಿಸಲು ಸಮರ್ಥರಾಗುವಂತೆ ಮಾಡಿ ಆಗ ವರದಕ್ಷಿಣೆ ಪದ್ಧತಿ ತಾನಾಗಿಯೇ ಹೋಗುತ್ತದೆ. ವರದಕ್ಷಿಣೆ ರೂಢಿಯಲ್ಲಿರುವುದು ಮಧ್ಯಮ ವರ್ಗದವರಲ್ಲಿ ಮಾತ್ರ. ಶ್ರೀಮಂತರಿಗೆ ಅದು ಅನ್ವಯವಾಗುವುದಿಲ್ಲ. ಬಡವರಿಗೂ ಅನ್ವಯಿಸುವುದಿಲ್ಲ. ಮಧ್ಯಮ ವರ್ಗದವರಲ್ಲಿ ದುರಾಸೆ ಪೀಡಿತರು, ಅತಿ ಮಹತ್ವಾಕಾಂಕ್ಷಿಗಳು ಈ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ತಂದೆ ತಾಯಂದಿರು ತಮ್ಮ ಮಕ್ಕಳ ಹಿತಾಸಕ್ತಿಯನ್ನೇ ಮುಂದಿಟ್ಟುಕೊಂಡು ಪರಿಸ್ಥಿತಿಯ ಲಾಭ ಪಡೆಯಲು ಮುಂದಾಗುತ್ತಾರೆ. ಇದಕ್ಕೆ ಮದುವೆಯಾಗುವ ಗಂಡು ಹೆಣ್ಣುಗಳಿಗಿಂತಲೂ ಅವರ ತಂದೆ ತಾಯಂದಿರೇ ಹೊಣೆಗಾರರಾಗಿದ್ದಾರೆ. ಹುಡುಗನ ತಂದೆ ತಾಯಿ ವರದಕ್ಷಿಣೆ ಕೇಳಿದರೆ ಹುಡುಗಿಯ ತಂದೆ 'ವರದಕ್ಷಿಣೆ ನೀಡುವುದಿಲ್ಲ' ಎಂಬ ದಾರ್ಷ್ಟ್ಯ ತೋರಬೇಕು. ತನ್ನ ಮಗಳು ಮದುವೆಯಾಗದೆ ಉಳಿದಾಳೆಂದು ಹತಾಶರಾಗಬಾರದು. ಒಟ್ಟಿನಲ್ಲಿ ತಂದೆ - ತಾಯಂದಿರ ದೃಷ್ಟಿಕೋನವೇ ಈ ವಿಷಯದಲ್ಲಿ ಬದಲಾಗಬೇಕಾಗಿದೆ. ಮಗಳಿಗೆ ಮದುವೆ ಮಾಡಬೇಕು ಎಂಬುದೇ ಇಲ್ಲಿ ಮುಖ್ಯವಾಗಬಾರದು. ಅವಳಿಗೆ ಮದುವೆಯನ್ನೇ ಏಕೆ ಮಾಡಬೇಕು ? ಅವಳು ಸ್ವಾವಲಂಬಿಯಾಗುವಂತೆ ಬೆಳೆಸಿದರೆ ಅದೇ ಭವಿಷ್ಯವನ್ನು ಕಲ್ಪಿಸುವುದು. ನಮ್ಮ ಇಂದಿನ ದಿನಗಳಲ್ಲಿ ಯುವತಿಯರಿಗೆ ತಮ್ಮ ಗಂಡಂದಿರನ್ನು ಆಯ್ದುಕೊಳ್ಳಲು ಮುಕ್ತ ಅವಕಾಶ ಮಾಡಿಕೊಡಬೇಕು. ಅಂದಾಗ ಮಾತ್ರ ವರದಕ್ಷಿಣೆ ಅಂತ್ಯ ಕಂಡೀತು.

ನಮ್ಮ ಕಾಯ್ದೆ ಪುಸ್ತಕದಲ್ಲಿ ಶಾರದಾ ಕಾಯ್ದೆ ಎಂಬ ಹೆಸರಿನ ಕಾಯ್ದೆ ಒಂದುಂಟು. ಆದರೆ ಪ್ರತಿ ವರ್ಷ ರಾಜಸ್ಥಾನದಲ್ಲಿ ಪುಟ್ಟ ಪುಟ್ಟ ಶಿಶುಗಳೇ ವಿವಾಹ ಬಂಧನಕ್ಕೆ ಒಳಗಾಗುತ್ತಿರುವ ಸುದ್ದಿಗಳನ್ನು ಕೇಳುತ್ತಿರುತ್ತೇವೆ. ಇಂತಹ ಒಂದೇ ಒಂದು ಪ್ರಕರಣದಲ್ಲಾದರೂ ನಾವು ಕಾನೂನು ಕ್ರಮ ಕೈಗೊಂಡಿದ್ದೇವೆಯೇ ? ಖಂಡಿತಾ ಇಲ್ಲ. ಇಂತಹವರು, ನಿರಕ್ಷರಿಗಳಾಗಿದ್ದರೆ, ಅಶಿಕ್ಷಿತರಾಗಿದ್ದರೆ

ಅವರನ್ನು ನಿಭಾಯಿಸುವುದು ಬಹಳ ಕಷ್ಟ. ಅಂತಹ ಸಂದರ್ಭಗಳಲ್ಲಿ ಸಂಬಂಧಪಟ್ಟ ವ್ಯಕ್ತಿಗಳ ಮನೋಸ್ಥಿತಿಯನ್ನು ವಿಶ್ಲೇಷಿಸಬೇಕಾಗುತ್ತದೆ. ದುರದೃಷ್ಟವಶಾತ್ ನಮ್ಮ ಹುಡುಗಿಯರು ಪಡೆಯಬೇಕಾದ ವಿದ್ಯಾಭ್ಯಾಸವನ್ನು ಪಡೆದುಕೊಳ್ಳುತ್ತಿಲ್ಲ. ಪ್ರತಿಯೊಬ್ಬ ಹುಡುಗಿಯೂ ಅವರಿಗೆ ಉದ್ಯೋಗ ಕೊಡಬಹುದಾದಂತಹ ಶಿಕ್ಷಣ ನೀಡುವಂತೆ ಶಿಕ್ಷಣ ಖಾತೆಗೆ ನಾವು ಮನವಿ ಮಾಡಿಕೊಳ್ಳಬೇಕು ಮತ್ತು ಹುಡುಗಿಯನ್ನು ನಾವು ಹೇಗೆ ಬೆಳೆಸಬೇಕೆಂದರೆ ಪ್ರತಿಯೊಬ್ಬರು ಅವರನ್ನು ಮದುವೆಯಾಗಲು ಸಂತೋಷದಿಂದ ಮುಂದೆ ಬರುವಂತಿರಬೇಕು. ಈಗ ತರಲು ಉದ್ದೇಶಿಸಿರುವ ಕಾಯ್ದೆಯಿಂದ ನೀವು ಏನನ್ನೂ ಸಾಧಿಸುವುದಿಲ್ಲ. ಅದಕ್ಕೆ ಬದಲಾಗಿ ಮಹಿಳಾ ಸಂಘಟನೆಗಳು ಅಂತಹವರ ಬಳಿಗೆ ಹೋಗಿ ಮನ ಒಲಿಸುವ ಕೆಲಸ ಮಾಡಬೇಕೆಂದು ನಾನು ಸರ್ಕಾರವನ್ನು ವಿನಂತಿಸುತ್ತಿದ್ದೇನೆ. ಜೀವನದಲ್ಲಿರುವ ಪ್ರತಿಯೊಂದು ಕೆಡುಕಿಗೂ ಕಾಯ್ದೆಯೇ ಉತ್ತರ ಎಂದು ಭಾವಿಸಿದರೆ ಅದು ತಪ್ಪು. ಕಾಯ್ದೆಯಿಂದ ಯಾವುದೇ ಸಮಸ್ಯೆಯನ್ನು ಬಗೆಹರಿಸುವುದು ಸಾಧ್ಯವಿಲ್ಲ. ಅಂತಹ ಕಾಯ್ದೆಗಳು ಇಂತಹ ಸಾಮಾಜಿಕ ಪಿಡುಗುಗಳನ್ನು ನಿವಾರಿಸುವ ಬದಲಾಗಿ ಅವು ಭೂಗತವಾಗಿ ಇನ್ನಷ್ಟು ಕ್ರಿಯಾಶೀಲವಾಗುವಂತೆ ಮಾಡುತ್ತವೆ. ಪಾನ ನಿಷೇಧವನ್ನು ಜಾರಿಗೆ ತಂದು ನಾವು ಇದನ್ನು ಕಂಡಿದ್ದೇವೆ. ಇಂತಹ ಕಾಯ್ದೆಯನ್ನು ನಾವು ತಂದದ್ದಾದರೆ ವರದಕ್ಷಿಣೆ ಪಿಡುಗು ನಿವಾರಣೆಯಾಗುವುದಕ್ಕೆ ಬದಲಾಗಿ ಅದು ಇನ್ನಷ್ಟು ತೀವ್ರಗೊಳ್ಳುವುದು. ಸಾಮಾಜಿಕ ಸುಧಾರಣೆಗಳನ್ನು ತರುವ ಮಾರ್ಗವಂತೂ ಇದಲ್ಲ. ನಾವು ಮಾತು ಮಾತಿಗೆ ನಮ್ಮ ಸಹೋದರಿಯರಿಗೆ ರಕ್ಷಣೆ ಬೇಕು, ರಕ್ಷಣೆ ಬೇಕು, ರಕ್ಷಣೆ ಬೇಕು ಎಂದು ಹೇಳುತ್ತಾ ಹೋಗುತ್ತಿದ್ದೇನೆ. ಆದರೆ ನನ್ನ ದೃಷ್ಟಿ ಅದಲ್ಲ. ಬದಲಾಗಿ ಅವರು ತಮ್ಮನ್ನು ತಾವು ಸಂರಕ್ಷಿಸಿಕೊಳ್ಳಲು ಸಮರ್ಥರಾಗಬೇಕು. ಬಲವಂತವಾಗಿ ಯಾರನ್ನೋ ಮದುವೆಯಾಗುವ ನಿರ್ಬಂಧಕ್ಕೆ ಒಳಗಾಗುವ ಹುಡುಗಿಯರು - ವರದಕ್ಷಿಣೆ ನೀಡಲೇಬೇಕಾದ ಬಲವಂತಕ್ಕೆ ಕಟ್ಟುಬಿದ್ದ ಹುಡುಗಿಯರ ತಂದೆ - ತಾಯಂದಿರು ಯಾವ ಕಾರಣಕ್ಕೂ ಆತ್ಮಹತ್ಯೆ ಮಾಡಿಕೊಳ್ಳಬಾರದು. ಬದಲಾಗಿ ನಾವು ಮದುವೆಯಾಗುವುದಿಲ್ಲ ಎಂದು ಖಂಡಾಖಂಡಿತವಾಗಿ ಹೇಳಬೇಕು. ನಾನು ಅಪೇಕ್ಷಿಸುವುದು ಇದನ್ನು ಗಾಂಧೀಜಿಯವರು ಕಲಿಸಿಕೊಟ್ಟಂತೆ ಅಬಲೆಯರನ್ನಲ್ಲ, ಸಬಲೆಯರನ್ನು ಸೃಷ್ಟಿಸಬೇಕು. ಹಾಗಾಗಿ ಈ ವಿಧೇಯಕವನ್ನು ಪುನರ್ ಪರಿಶೀಲಿಸುವಂತೆ ಮತ್ತು ವಿಧೇಯಕವನ್ನು ಹಿಂದಕ್ಕೆ ಪಡೆಯುವಂತೆ ಕಾನೂನು ಸಚಿವರನ್ನು ವಿನಂತಿಸಿಕೊಳ್ಳುತ್ತಿದ್ದೇನೆ. ಈ ಪಿಡುಗು ಅದನ್ನು ಚಿತ್ರಿಸಿರುವಷ್ಟು ಭಯಾನಕವಾಗಿಯೂ ಇಲ್ಲ. ವರದಕ್ಷಿಣೆ ಪಿಡುಗಿನಿಂದ ನಾವು ಹಲವು ಮಂದಿಯನ್ನು ಮುಕ್ತಗೊಳಿಸಿದ್ದೇವೆ. ಅನೇಕ ಸ್ಥಳಗಳಲ್ಲಿ ನಾವು ಈ ಪದ್ಧತಿಯನ್ನು ನಿಲ್ಲಿಸಿದ್ದೇವೆ. ಮಗುವಿಗೆ ಮದುವೆ ಮಾಡಲು ಹೊರಟಿದ್ದ ಒಬ್ಬರಿಗೆ "ವರದಕ್ಷಿಣೆ ನೀಡಲು ಸಾಮರ್ಥ್ಯ ಇಲ್ಲದಂತಹ ಮತ್ತು ಅದಕ್ಕಾಗಿ ಸಾಲ ಮಾಡಬೇಕಾದ ಪರಿಸ್ಥಿತಿ ಇರುವ ಪೋಷಕರಿಂದ ವರದಕ್ಷಿಣೆ ಅಪೇಕ್ಷಿಸುವುದು ತಪ್ಪು. ಅದು ದುಷ್ಟತನ " ಎಂದು ನಾನು ಹೇಳಿದ್ದೆ. ಹಾಗೆ ಹೇಳಿದ್ದರಿಂದ ಒಳ್ಳೆಯ ಪರಿಣಾಮವೂ ಆಯಿತು. ಆದರೆ ದುರಾದೃಷ್ಟವಶಾತ್ ನಮ್ಮ ಮಹಿಳೆಯರು, ನಮ್ಮ ಮಹಿಳಾ ಸಂಘಟನೆಗಳು ಗೊತ್ತುವಳಿಗಳನ್ನು ಅಂಗೀಕರಿಸುವುದರಲ್ಲಷ್ಟೇ ತೃಪ್ತಿಪಡುತ್ತಾರೆ. ಕಾಯ್ದೆಗಳನ್ನು ರೂಪಿಸುವುದರಲ್ಲೇ ಸಂತೃಪ್ತಿ ಪಡೆಯುತ್ತಾರೆ. ನಮ್ಮಲ್ಲಿ ವಂಶಪಾರಂಪರ್ಯದ ಆಸ್ತಿ ಹಕ್ಕಿನ ರಕ್ಷಣೆಗೆ ಸಂಬಂಧಿಸಿದಂತೆ ಕಾಯ್ದೆ ಇದೆ. ವಂಶಪಾರಂಪರ್ಯದ ಆಸ್ತಿಯಲ್ಲಿ ಮಹಿಳೆಯರಿಗೆ ಸರಿಸಮಾನ ಹಕ್ಕು ನೀಡುವ ಕಾಯ್ದೆಗಳಿವೆ. ಪುರುಷರಿಗೆ ಸರಿ ಸಮಾನರಾಗಿ ಶಿಕ್ಷಣ ಪಡೆಯುವ, ಸಮನ ಅವಕಾಶ ಪಡೆಯುವ ಹಕ್ಕುಗಳು ಇವೆ. ಈ ಹಕ್ಕುಗಳಿಂದಾಗಿ ಅವರು ಸ್ವಾವಲಂಬಿಗಳಾಗಿದ್ದಾರೆ. ಅಂತಹ ಸುಧಾರಣೆಗಳು

ವರದಕ್ಷಿಣೆಯ ಪಿಡುಗನ್ನು ನಿವಾರಿಸಬಲ್ಲವೇ ಹೊರತು ಇಂತಹ ವಿಧೇಯಕಗಳಲ್ಲ. * ಇಂತಹ ಕಾಯ್ದೆಗಳಿಂದ ಪ್ರತಿಯೊಬ್ಬರೂ ತಪ್ಪಿಸಿಕೊಳ್ಳುತ್ತಾರೆ ಮತ್ತು ಈ ನಿರ್ಬಂಧಗಳಿಗೆ ಯಾರೊಬ್ಬರೂ ಕಿವಿಗೊಡುವುದಿಲ್ಲ. ಇದರಿಂದ ಆಗುವುದಾದರೂ ಏನು ? ಸರ್ಕಾರಕ್ಕೆ ಕೆಟ್ಟ ಹೆಸರು ಬರುತ್ತದೆ, ಕಾಯ್ದೆಗೆ ಕೆಟ್ಟ ಹೆಸರು ಬರುತ್ತದೆ. ಅಷ್ಟೇ ಅಷ್ಟು ಮಾತ್ರವಲ್ಲ ಕಾಯ್ದೆಯ ದುರುಪಯೋಗವಾಗುತ್ತದೆ. ಅಂಥವರಿಗೆ ಕಾಯ್ದೆಯಿಂದ ತಪ್ಪಿಸಿಕೊಳ್ಳಲು ನಾವೇ ಅವಕಾಶ ಕಲ್ಪಿಸಿಕೊಟ್ಟಂತಾಗುತ್ತದೆ. ಸಮಾಜದಲ್ಲಿ ಎಲ್ಲ ಬಗೆಯ ಕೆಡುಕುಗಳಿಗೂ ಇದರಿಂದ ದಾರಿ ಮಾಡಿಕೊಟ್ಟಂತಾಗುತ್ತದೆ. ಹಾಗಾಗಿ ಇಂತಹ ವಿಷಯಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸಬೇಕೇ ಹೊರತು ಬೇರಾವ ಕ್ರಮದಿಂದಲೂ ಸಮಾಜ ಸುಧಾರಣೆಯನ್ನು ತರುವುದು ಸಾಧ್ಯವಾಗುವುದಿಲ್ಲ. ಯಾವೊಂದು ಶಾಸನದಿಂದಲೂ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸಲು ಬರುವುದಿಲ್ಲ ಎಂಬುದನ್ನು ತಮಗೆ ವಿನಯಪೂರ್ವಕವಾಗಿ ಅರಿಕೆ ಮಾಡಿಕೊಳ್ಳುತ್ತಿದ್ದೇನೆ. ಶಾಸನಗಳಿಂದ ಯಾವುದೇ ಪ್ರಯೋಜನವೂ ಆಗದು. ಬದಲಾಗಿ ಅದು ಜೀವನವನ್ನು ಇನ್ನಷ್ಟು ಕಠಿಣಗೊಳಿಸುವುದು. ಹಾಗಾಗಿ ಈ ವಿಧೇಯಕವನ್ನು ಹಿಂತಗೆದುಕೊಳ್ಳಬೇಕೆಂದು ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ.

ಸಮಾಜದಲ್ಲಿ ಹಾಸುಹೊಕ್ಕಾಗಿರುವ ವರದಕ್ಷಿಣೆ ಪದ್ಧತಿಯ ವಿರುದ್ಧ ಈಗ ಇನ್ನಷ್ಟು ಜನಾಭಿಪ್ರಾಯ ನಿರ್ಮಾಣವಾಗಿದೆ. ಕಳೆದ ನಲವತ್ತು ವರ್ಷಗಳಿಂದ ಈ ದುಷ್ಟ ಪದ್ಧತಿಯ ವಿರುದ್ಧ ಪ್ರಚಾರ ನಡೆಸಿದ್ದೇವೆ. ಹೀಗಾಗಿಯೇ ಬಿಹಾರ ಸರ್ಕಾರ ಅಂತಹ ವಿಧೇಯಕವನ್ನು ತಂದಾಗ ನಾವು ಅದನ್ನು ಸ್ವಾಗತಿಸಿದೆವು. ಅದೇ ರೀತಿ ಆಂಧ್ರಪ್ರದೇಶ ಸರ್ಕಾರ ವಿಧೇಯಕ ತರಲು ಉದ್ದೇಶಿಸಿದಾಗಲೂ ನಾವು ಅದನ್ನು ಅಭಿನಂದಿಸಿದೆವು. ಆದರೆ ಆದದ್ದೇನು ? ಬಿಹಾರದಲ್ಲಾಗಲಿ, ಆಂಧ್ರಪ್ರದೇಶದಲ್ಲಾಗಲಿ ಏನಾಯಿತು ? ಏನೂ ಆಗಲಿಲ್ಲ. ಈಗಲೂ ಕೂಡಾ, ಅಂದರೆ ಈ ವಿಧೇಯಕವನ್ನು ತಂದರೂ ಸಹ ನಾವು ಯಾವುದೇ ರೀತಿಯ ಪರಿಣಾಮವನ್ನು ಕಾಣಲಾರೆವು.

* * ಸಮಾಜ ಸುಧಾರಣೆಯ ವಿಷಯದಲ್ಲಿ ಜೀವನದುದ್ದಕ್ಕೂ ನಾನು ಅತೀವವಾದ ಆಸಕ್ತಿ ವಹಿಸಿದವಳು. ಇಂದು ಕೂಡಾ ನಮ್ಮ ಸಮಾಜದಲ್ಲಿ ನುಸುಳಿಕೊಂಡಿರುವ ಇಂತಹ ಎಲ್ಲ ಅತಿರೇಕಗಳನ್ನು ನಿರ್ಮೂಲನೆಗೊಳಿಸುವ ವಿಚಾರದಲ್ಲಿ ಅಷ್ಟೇ ಆಸಕ್ತಿಯನ್ನು ಹೊಂದಿರುವವಳು. ಆದರೆ ಈಗ ನಾವು ತರಲು ಉದ್ದೇಶಿಸಿರುವ ವಿಧೇಯಕದ ಬಗ್ಗೆ ಇದುವರೆಗೆ ನಮಗೆ ಯಾವ ರೀತಿಯಿಂದಲೂ ಮನವರಿಕೆಯಾಗಿಲ್ಲ. ಯಾವ ಉದ್ದೇಶವನ್ನು ಸಾಧಿಸುವ ಸಲುವಾಗಿ ಸರ್ಕಾರ ಈ ವಿಧೇಯಕವನ್ನು ತಂದಿತ್ತೋ ಆ ಉದ್ದೇಶವನ್ನು ಈ ವಿಧೇಯಕ ಖಂಡಿತಕ್ಕೂ ಸಾಧಿಸುವುದಿಲ್ಲ. ದೇಶದಲ್ಲಿ ಎಷ್ಟು ಪ್ರಮಾಣದಲ್ಲಿ ವರದಕ್ಷಿಣೆ ಪ್ರಕರಣಗಳು ಸಂಭವಿಸುತ್ತಿವೆ ಎಂಬುದನ್ನು ಸರ್ಕಾರ ಪರಿಶೀಲಿಸಿದೆಯೇ ? ಅಥವಾ ದೇಶದ ಜನಸಂಖ್ಯೆಯಲ್ಲಿ ಶೇಕಡಾವಾರು ಎಷ್ಟು ಮಂದಿ ಈ ವರದಕ್ಷಿಣೆಯ ಪಿಡುಗಿಗೆ ಗುರಿಯಾಗಿದ್ದಾರೆ ? ಎಂಬುದನ್ನು ತಿಳಿಯಲು ನಾನು ಬಯಸುತ್ತೇನೆ. ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ

---

* ಶಾಸನವೊಂದನ್ನು ತರುವ ಮೂಲಕ ಸಾಮಾಜಿಕ ಅಭಿಪ್ರಾಯವನ್ನು ರೂಪಿಸುವುದು ಅಗತ್ಯವಾಗಿತ್ತೇ ? ಎಂದು ಶ್ರೀ ಶೀಲ ಚಂದ್ರ ಯಾಜಿ ಅವರ ಪ್ರಶ್ನೆಗೆ ಉತ್ತರಿಸುತ್ತಾ.

* * 1959ರ ಆಗಸ್ಟ್ 21ರಂದು ರಾಜ್ಯಸಭೆಯಲ್ಲಿ ಮುಂದುವರಿದ ಚರ್ಚೆಯಲ್ಲಿ ಮಾತನಾಡುತ್ತಾ.

ವಾಸವಾಗಿರುವ ಶೇ.85ರಷ್ಟು ಜನರು ವರದಕ್ಷಿಣೆಯ ಪಿಡುಗಿನಿಂದ ಅಷ್ಟರಮಟ್ಟಿಗೆ ಬಾಧಿತರಾಗಿಲ್ಲ. ದೇಶದ ಜನಸಂಖ್ಯೆಯಲ್ಲಿ ಬಹುತೇಕ ಮಂದಿಗೆ ಮದುವೆಯಾಗುವುದಕ್ಕೆ ಇನ್ನೂರರಿಂದ ಮುನ್ನೂರು ರೂಪಾಯಿ ಖರ್ಚು ಮಾಡುವುದೇ ಕಷ್ಟವಾಗಿದೆ. ಸ್ಥಿತಿವಂತರಾಗಿರುವ ಮತ್ತು ವರದಕ್ಷಿಣೆ ನೀಡುವ ಸಾಮರ್ಥ್ಯ ಇರುವ ಶೇ 15ರಷ್ಟು ಜನರು ಮಾತ್ರ ಈ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಈಗ ನಾವು ಸಮಾಜದಲ್ಲಿ ನಗಣ್ಯ ಪ್ರಮಾಣದಲ್ಲಿರುವ ವರ್ಗದವರಿಗಾಗಿ ಈ ಕಾನೂನನ್ನು ತರಲು ಹೊರಟಿದ್ದೇವೆ. ಸಮಾಜ ಸುಧಾರಕರೂ ಕೂಡಾ ತಮ್ಮ ಹೆಣ್ಣು ಮಕ್ಕಳು ಹೆಚ್ಚು ಸುಖಜೀವನಕ್ಕೆ ಹೋಗಬೇಕೆಂಬ ಅಭಿಲಾಷೆಯಿಂದ ಮದುವೆ ಮಾಡುವಾಗ ವರದಕ್ಷಿಣೆಯನ್ನು ನೀಡಿಯೇ ನೀಡುತ್ತಾರೆ. ಇದನ್ನು ತಡೆಯಲು ಹೇಗೆ ಸಾಧ್ಯ ? ತಮಗೆ ಬೇಕಾದುದನ್ನು ಪಡೆದುಕೊಳ್ಳಲು ಈ ರೀತಿಯ ಪ್ರವೃತ್ತಿಯನ್ನು ತಡೆಯುವುದಾದರೂ ಹೇಗೆ ? ಮದುವೆ ನಿಜವಾಗಿ ನಡೆಯುವುದಕ್ಕೆ ಎರಡೋ ಮೂರೋ ವರ್ಷಗಳ ಮುಂಚಿತವಾಗಿಯೇ ಅಥವಾ ಮದುವೆಯಾದ ಒಂದೆರಡು ವರ್ಷಗಳ ಅನಂತರವೂ ಅವರು ವರದಕ್ಷಿಣೆ ನೀಡಬಹುದು. ಅದು ಇಲ್ಲಿ ಮುಖ್ಯವಲ್ಲ. ಆದರೆ ವರದಕ್ಷಿಣೆ ಪದ್ಧತಿ ಮುಂದುವರಿಯುವುದು ಅದನ್ನು ನಿಲ್ಲಿಸಲೂ ಬರುವುದಿಲ್ಲ. ಇದು ಸಹಜವೂ ಆಗಿದೆ. ತಮ್ಮ ಹೆಣ್ಣು ಮಕ್ಕಳಿಗಾಗಿ ಜನರು ವರದಕ್ಷಿಣೆ ನೀಡಲು ಕಾತರರಾಗಿರುತ್ತಾರೆ ಮತ್ತು ತಮ್ಮ ಮಕ್ಕಳಿಗಾಗಿ ತಮ್ಮ ಬಳಿ ಇರುವ ಆಸ್ತಿಯನ್ನು ಕೊಡಲು ಇಷ್ಟಪಟ್ಟರೆ ಅದಕ್ಕೆ ಅವಕಾಶ ಇರಲೇಬೇಕು. ನಮ್ಮಲ್ಲಿ ನಡೆಯುವ ಬಹುತೇಕ ಮದುವೆಗಳಲ್ಲಿ ಬಹುತೇಕ ಜನರು ತೀರಾ ಪರಿಮಿತ ಪ್ರಮಾಣದಲ್ಲಿ ಖರ್ಚು ಮಾಡುತ್ತಾರೆ ಎಂಬ ಅಂಶವನ್ನು ನಾವು ಗಮನಿಸಬೇಕು. ಕಾಯ್ದೆಯೊಂದರ ಮೂಲಕ ರಾತ್ರಿ ಬೆಳಗಾಗುವುದರೊಳಗಾಗಿ ಜನರನ್ನು ಒಳ್ಳೆಯವರನ್ನಾಗಿ ಪರಿವರ್ತಿಸುವ ವಿಚಾರದಲ್ಲೂ ನನಗೆ ನಂಬಿಕೆ ಇಲ್ಲ. ಹಾಗಾಗಿ ನಾವು ಜನರಲ್ಲಿರುವ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸುವುದೊಂದೇ ಇದಕ್ಕೆ ಪರಿಹಾರ ಮಾರ್ಗವಾಗಿದೆ. ನಿನ್ನೆ ದೆಹಲಿಯಲ್ಲೊಂದು ಮದುವೆ ಇತ್ತು. ಮದುವೆ ನಡೆಯುತ್ತಿದ್ದಾಗಲೇ ಹುಡುಗನ ತಂದೆ ತಾಯಿ ಹುಡುಗಿಯ ತಂದೆ ತಾಯಿಯನ್ನು ವರದಕ್ಷಿಣೆಗಾಗಿ ಆಗ್ರಹಪಡಿಸಿದರು. "ವರದಕ್ಷಿಣೆಯನ್ನು ನಾವು ಹೇಗಿದ್ದರೂ ಕೊಡಲೇಬೇಕು. ಇಲ್ಲದಿದ್ದರೆ ಮದುವೆ ಅರ್ಧದಲ್ಲೇ ನಿಂತು ಹೋಗುತ್ತದೆಯಲ್ಲ?" ಎಂದು ವರದಕ್ಷಿಣೆ ಕೊಡಲೂ ಸಮ್ಮತಿಸಿದರು. ಮದುವೆ ಸಾಂಗವಾಗಿ ನಡೆಯಿತು. ಸಹಜವಾಗಿಯೇ ಹುಡುಗನ ತಂದೆ ತಾಯಿ ವಧುವನ್ನು ಮನೆಗೆ ಕರೆತರುವಂತೆ ಹೇಳಿದರು. ಆದರೆ ಹುಡುಗ ಅದನ್ನು ನೇರವಾಗಿ ನಿರಾಕರಿಸಿದ. "ನಾನೂ ಬರುವುದಿಲ್ಲ. ಅವಳನ್ನು ಕರೆತರುವುದಿಲ್ಲ. ನೀವು ನನ್ನನ್ನು ಹುಡುಗಿಯ ತಂದೆ ತಾಯಿಗೆ ಮಾರಿದ್ದೀರಾ. ಹೀಗಾಗಿ ನಾನು ಅವಳ ಜೊತೆಯಲ್ಲೇ ಇರುತ್ತೇನೆ. ನಿಮ್ಮಲ್ಲಿಗೆ ಮರಳಿ ಬರುವ ಪ್ರಶ್ನೆಯೇ ಇಲ್ಲ" ಎಂದು ಖಡಾಖಂಡಿತವಾಗಿ ಹೇಳಿದ. ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸುವ ರೀತಿ ಇದು ಎಂದು ನಾನು ಭಾವಿಸಿದ್ದೇನೆ. ಆ ಹುಡುಗ ಮತ್ತೆಂದೂ ತನ್ನ ತಂದೆ ತಾಯಿಯ ಬಳಿಗೆ ಹೋಗಲಿಲ್ಲ. ಅಷ್ಟೇ ಅಲ್ಲ ಹೆತ್ತವರು ಪಡೆದುಕೊಂಡ ವರದಕ್ಷಿಣೆಯನ್ನು ಹಿಂದಿರುಗಿಸುವುದಾಗಿಯೂ ಆಶ್ವಾಸನೆ ಕೊಟ್ಟ. ಈ ಹುಡುಗ ಈ ವಿಧೇಯಕದ ಮೂಲಕ ಸರ್ಕಾರ ಸಮಾಜಕ್ಕೆ ಕೊಡಲಿರುವ ಕೊಡುಗೆಗಿಂತ ಎಷ್ಟೋ ದೊಡ್ಡ ಮೊತ್ತದ ಕೊಡುಗೆ ನೀಡಿದ್ದಾನೆಂಬುದು ನನ್ನ ಅಭಿಪ್ರಾಯವಾಗಿದೆ. ಈ ಸಮಸ್ಯೆಗೆ ಪರಿಹಾರ ಶಾಸನವಂತೂ ಅಲ್ಲವೇ ಅಲ್ಲ. ಇದು ಈ ಪಿಡುಗನ್ನು ನಿಲ್ಲಿಸುವುದಕ್ಕೆ ಬದಲಾಗಿ ಜನರು ಕಾಯ್ದೆಯಿಂದ ತಪ್ಪಿಸಿಕೊಳ್ಳುವಂತೆ ಮಾಡುತ್ತದೆ. ಕಾಯ್ದೆಯ ಕಣ್ಣು ತಪ್ಪಿಸಿ ತೆರೆಮರೆಯಲ್ಲಿ ನಡೆಯುವ ಇಂತಹ

ವ್ಯವಹಾರಗಳನ್ನು ಪತ್ತೆ ಹಚ್ಚುವುದು ಅತ್ಯಂತ ಕಠಿಣ. ಒಂದು ವೇಳೆ ನೀವು ಈ ವಿಧೇಯಕವನ್ನು ಅಂಗೀಕರಿಸಿ ಅದನ್ನು ಕಾಯ್ದೆ ಪುಸ್ತಕದಲ್ಲಿ ಸೇರಿಸಿದರೂ ಕೂಡಾ ಅದನ್ನು ಜಾರಿಗೊಳಿಸಲು ಸಮರ್ಥರಾಗುವುದಿಲ್ಲ ಮತ್ತು ಯಾವ ಉದ್ದೇಶವನ್ನು ಇಟ್ಟುಕೊಂಡು ಈ ವಿಧೇಯಕ ರೂಪಿಸಿದ್ದೀರೋ ಆ ಉದ್ದೇಶವೂ ಈಡೇರುವುದಿಲ್ಲ. ಹಾಗಾಗಿ ಈ ವಿಧೇಯಕವು ಯಾವುದೇ ರೀತಿಯ ಫಲಿತಾಂಶವನ್ನು ನೀಡುವುದಿಲ್ಲ. ಬದಲಾಗಿ ಜನರ ಸಾಮಾಜಿಕ ಪ್ರಜ್ಞೆಯನ್ನು ಎಚ್ಚರಿಸುವ ಕೆಲಸ ಮಾಡಿ. ವಾಸ್ತವವಾಗಿ ನೀವು ಮಾಡಬೇಕಾದದ್ದು ಅದನ್ನೇ. ನಾವು ಜನರ ಜೊತೆ ಸೇರಿ ಕೆಲಸ ಮಾಡಬೇಕು. ಸದನದ ಮಹಿಳಾ ಸದಸ್ಯರು, "ಈ ದೇಶ ಹೆಣ್ಣು ಮಕ್ಕಳ ಹೊರೆಯನ್ನು ಹೊರಲಾಗದೆ ತತ್ತರಿಸುತ್ತಿದೆ ಮತ್ತು ವರದಕ್ಷಿಣೆಯ ದುಷ್ಟ ಪದ್ಧತಿ ಹೆಣ್ಣುಮಕ್ಕಳ ತಂದೆ ತಾಯಂದಿರನ್ನು ಜಗತ್ತಿನಿಂದಲೇ ನಿರ್ಮೂಲನೆಗೊಳಿಸುವ ಮಟ್ಟಕ್ಕೆ ಮುಟ್ಟಿದೆ" ಎಂದು ಹೇಳಿದ್ದಾರೆ. ವಾಸ್ತವವಾಗಿ ವರದಕ್ಷಿಣೆ ಪದ್ಧತಿ ಜನಸಂಖ್ಯೆಯ ಒಂದು ಅತಿ ಸಣ್ಣ ಸಮುದಾಯಕ್ಕೆ ಮಾತ್ರವೇ ಸೀಮಿತವಾಗಿದೆ. ನಾನೀಗಾಗಲೇ ಹೇಳಿರುವಂತೆ ಕಾಯ್ದೆಯು ನಮಗೆ ಈ ವಿಷಯದಲ್ಲಿ ದಾರಿ ತೋರಿಸಲಾರದು. ನಾವು ಜನರ ಮಧ್ಯೆ ಇದ್ದು ಅವರಿಗೆ ತಿಳುವಳಿಕೆ ನೀಡುವ ಮೂಲಕ ವರದಕ್ಷಿಣೆ ಸಮಸ್ಯೆಯನ್ನು ನಿವಾರಿಸಬೇಕು. ನಾನು ಇತ್ತೀಚೆಗೆ ಎಂಟು, ಹತ್ತು ಮಂದಿಯ ಮನೆಗಳಿಗೆ ಭೇಟಿ ನೀಡಿದೆ ಮತ್ತು ಅವರ ಮದುವೆ ವೆಚ್ಚವನ್ನು ಶೇ. 60ರಷ್ಟು ತಗ್ಗಿಸುವಂತೆ ಅವರ ಮನ ಒಲಿಸಿದೆ. ಅವರು ನಾನು ಹೇಳಿದ್ದನ್ನು ಒಪ್ಪಿಕೊಂಡರು. ಮದುವೆಗೆ ಐನೂರು ರೂಪಾಯಿ ಖರ್ಚು ಮಾಡುತ್ತಿದ್ದ ಬಡವರು ಅದನ್ನು 200 ರೂಪಾಯಿಗಳಿಗೆ ಇಳಿಸಿದರು. ವರದಕ್ಷಿಣೆ ಪದ್ಧತಿಯನ್ನಾಗಲಿ ಅಥವಾ ಇತರ ಯಾವುದೇ ಪಿಡುಗನ್ನಾಗಲಿ ನೀವು ನಿರ್ಮೂಲನೆಗೊಳಿಸಲು ಇದೇ ಸರಿಯಾದ ಮಾರ್ಗ. ಹೊಸ ಹೊಸ ಕಾಯ್ದೆಗಳನ್ನು ತಂದಂತೆ ಅವುಗಳನ್ನು ಮುರಿಯುವ ಪರಿಪಾಠವೂ ಬೆಳೆಯುತ್ತಿದೆ ಎಂಬುದನ್ನೂ ನೀವು ನೆನಪಿಟ್ಟುಕೊಳ್ಳಬೇಕು. ಬಿಹಾರ ಮತ್ತು ಆಂಧ್ರ ಪ್ರದೇಶಗಳಲ್ಲಿ ಈಗಾಗಲೇ ನಿಮಗೆ ಈ ಅನುಭವ ಆಗಿದೆ. ಅಲ್ಲಿ ಕಾಯ್ದೆಗಳನ್ನು ತಂದು ಆದದ್ದಾದರೂ ಏನು ? ವಾಸ್ತವವಾಗಿ ಅದರಿಂದ ಏನನ್ನೂ ಸಾಧಿಸಲು ಆಗಲಿಲ್ಲ. ಇದರಿಂದ ಸಮಯ ಹಾಗೂ ಹಣ ಎರಡೂ ವ್ಯರ್ಥ. ಅಂದರೆ ಸರ್ಕಾರದ ಹಣ ಮತ್ತು ಸಾರ್ವಜನಿಕರ ಹಣ ಎರಡೂ ಪೋಲು ಮತ್ತೆ ಮತ್ತೆ ಕಾಯ್ದೆಗಳನ್ನು ಮಾಡಿ ಅವುಗಳನ್ನು ಕಾಯ್ದೆ ಸಂಪುಟಗಳಲ್ಲಿ ಸೇರಿಸುವ ಇಂತಹ ಕ್ರಮದಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ನಾನು ನನ್ನ ಮಗಳ ಮದುವೆಯನ್ನು ಇಂತಹ ಹುಡುಗನೊಂದಿಗೆ ಮಾಡಬೇಕೆಂದು ನಿರ್ಧರಿಸಿದರೆ ಅದನ್ನು ಹೇಗಾದರೂ ಮಾಡಿಯೇ ಮಾಡುತ್ತೇನೆ. ಮದುವೆಗೆ ಹೊರಡುವ ಯಾರೊಬ್ಬರೂ ಈ ವಿಧೇಯಕದ ವಿಧಿಗಳ ಉಲ್ಲಂಘನೆ ಆದಾಗ ಪರಸ್ಪರರ ವಿರುದ್ಧ ನ್ಯಾಯಾಲಯಕ್ಕೆ ಹೋಗುವುದಿಲ್ಲ. ಹಾಗಾಗಿ ಯುವ ಸಮುದಾಯದ ಮನಸ್ಸನ್ನು ಒಲಿಸಿಕೊಳ್ಳಿ. ನಮ್ಮ ಎಲ್ಲ ಯುವಕರು ಪ್ರಜ್ಞಾವಂತರಾಗಿದ್ದಾರೆ

* ನಂತರ 1959ರ ಡಿಸೆಂಬರ್ 16ರಂದು ಈ ವಿದೇಯಕವನ್ನು ಅಂಗೀಕರಿಸಲಾಯಿತು.

ಮತ್ತು ಇಂತಹ ದುಷ್ಟ ಪದ್ಧತಿಯ ವಿರುದ್ಧ ಹೆಚ್ಚು ಹೆಚ್ಚು ಜಾಗೃತರಾಗುತ್ತಿದ್ದಾರೆ. ವಾಸ್ತವವಾಗಿ ಈ ಪದ್ಧತಿಯನ್ನು ಪ್ರತಿರೋಧಿಸಬೇಕಾಗಿರುವವರು ಅವರೇ. ಇಂತಹ ವಿಷಯಗಳಲ್ಲಿ ಈ ರೀತಿ ವ್ಯಕ್ತಿಗಳ ಮೇಲೆ ನಿಯಂತ್ರಣ ಹೇರುವುದು ತಪ್ಪು ಎಂದು ನಾನು ಮತ್ತೆ ಮತ್ತೆ ಹೇಳಲು ಇಚ್ಛಿಸುತ್ತೇನೆ. ಸರ್ಕಾರವು ತನ್ನ ನಿಯಂತ್ರಣವನ್ನು ಎಲ್ಲ ಕಡೆಗೂ ವಿಸ್ತರಿಸಲು ಹೊರಟಿರುವಂತೆ ತೋರುತ್ತದೆ. ಇದು ಸರಿಯಲ್ಲ. ನಿಮ್ಮ ಸರ್ಕಾರಿ ನೌಕರರಿಗೆ ಅವರ ಹೆಂಡತಿಯರನ್ನು ಸರಿಯಾಗಿ ನೋಡಿಕೊಳ್ಳುವಂತೆ ಮೊದಲು ಹೇಳಿ. ಜಗತ್ತಿನ ಇತರ ಯಾವುದೇ ರಾಷ್ಟ್ರದಲ್ಲೂ ಹೀಗೆ ನಡೆಯುತ್ತಿರುವುದನ್ನು ನಾನು ಎಂದೂ ಕೇಳಿಯೇ ಇಲ್ಲ. ಸರ್ಕಾರದ ನಿಯಂತ್ರಣ ಎಷ್ಟು ಕಡಿಮೆ ಇರುತ್ತದೆಯೋ ಅಷ್ಟು ಒಳ್ಳೆಯದು. ಅತಿಯಾದ ನಿಯಂತ್ರಣ ಇಲ್ಲದಿರುವುದೇ ಉತ್ತಮ ಆಡಳಿತ. ಈಗ ಮಂಡಿಸಿರುವ ವಿಧೇಯಕವನ್ನು ನಾನು ವಿರೋಧಿಸುತ್ತಿರುವುದು ಇದೇ ಕಾರಣಕ್ಕೆ. ಯಾವ ಉದ್ದೇಶಕ್ಕಾಗಿ ಈ ವಿಧೇಯಕ ತರಲಾಗುತ್ತಿದೆಯೋ ಆ ಉದ್ದೇಶವನ್ನು ಈ ವಿಧೇಯಕ ಸಾಧಿಸುವುದಿಲ್ಲ ಎಂಬುದು ನನ್ನ ಖಚಿತ ಅಭಿಪ್ರಾಯವಾಗಿದೆ.*

---

* ನಂತರ 1959ರ ಡಿಸೆಂಬರ್ 16ರಂದು ಈ ವಿಧೇಯಕವನ್ನು ಅಂಗೀಕರಿಸಲಾಯಿತು.

## 26. ಅನಾಥಾಲಯ ವಿಧೇಯಕ *

ಇವತ್ತು ಬೆಳಿಗ್ಗೆ ಸದನದಲ್ಲಿ ಮಾತನಾಡುವ ಇಚ್ಛೆ ನನಗಿರಲಿಲ್ಲ. ಆದರೆ ಮಕ್ಕಳ ದೈಹಿಕ ಮಾನಸಿಕ ಮತ್ತು ಆಧ್ಯಾತ್ಮಿಕ ಯೋಗಕ್ಷೇಮ ಚಿಂತನೆ ನನ್ನ ಮಹತ್ತರವಾದ ಕಾಳಜಿಯಾಗಿರುವುದರಿಂದ ಮತ್ತು ಸದನದಲ್ಲಿ ಮಾನ್ಯ ಸದಸ್ಯರು ಮಾಡಿರುವ ಭಾಷಣಗಳಿಂದ ಪ್ರೇರಿತಳಾಗಿ ನಾನೀಗ ಇಲ್ಲಿ ಮಾತನಾಡಲು ನಿಂತಿದ್ದೇನೆ. ಸದನದಲ್ಲಿ ಇದು ನಡೆದ ಚರ್ಚೆಯಲ್ಲಿ ಮಕ್ಕಳ ಸಂರಕ್ಷಣೆಗಾಗಿ ಸರ್ಕಾರ ಏನನ್ನಾದರೂ ಮಾಡಲೇಬೇಕು ಎಂಬ ಉದ್ದೇಶದಿಂದ ಮಂಡಿಸಿರುವ ಈ ವಿಧೇಯಕದ ಬಗ್ಗೆ ಮಾನ್ಯ ಸದಸ್ಯರು ತೋರಿರುವ ಕಳಕಳಿ ಮತ್ತು ಕಾತರವನ್ನು ಕಂಡು ನಾನು ಪುಳಕಗೊಂಡಿದ್ದೇನೆ. ನನ್ನ ಸಹೋದ್ಯೋಗಿಯಾಗಿರುವ ಮಾನ್ಯ ಆರೋಗ್ಯ ಸಚಿವರು ಈ ವಿಧೇಯಕವನ್ನು ರೂಪಿಸಿದ್ದು ಅದು ಸಮಗ್ರ ರೂಪದಲ್ಲಿರುವುದು ನನಗೆ ಅತ್ಯಂತ ಸಂತಸದ ವಿಷಯವಾಗಿದೆ. ಈ ವಿಧೇಯಕವು ಮಕ್ಕಳಿಗೆ ಇದುವರೆಗೂ ಇಲ್ಲದಿದ್ದ ರಕ್ಷಣೆಯನ್ನು ಒದಗಿಸುತ್ತದೆ ಎಂಬುದು ನನ್ನ ಸಂತಸಕ್ಕೆ ಕಾರಣವಾಗಿದೆ. ಈ ವಿಷಯದಲ್ಲಿ ಸಂಸತ್ತಿನಲ್ಲಿ ಮಾತನಾಡಿದ ಮಹಿಳಾ ಸದಸ್ಯರು ಇದು ಅಂತಹ ಮಹತ್ವದ ಮಸೂದೆಯಾಗಿದೆ ಎಂದು ಹೇಳಿರುವುದನ್ನು ನಾನು ಆಲಿಸಿದ್ದೇನೆ. ಅದೇನಿದ್ದರೂ ಈ ವಿಧೇಯಕ ಅನಾಥ ಮಕ್ಕಳ ರಕ್ಷಣೆಗಾಗಿ ರೂಪಿತವಾದುದಾಗಿದೆ. ಒಂದು ಮಗುವಿಗೆ ತಂದೆ ತಾಯಿ ಇಲ್ಲದಿರಬಹುದು. ಆದರೆ ಅಂತಹ ಮಗುವನ್ನು ಬಂಧುಗಳು ನೋಡಿಕೊಳ್ಳಬಹುದು. ಆದರೆ ನೂರಾರು, ಸಾವಿರಾರು, ಲಕ್ಷಾಂತರ ಮಂದಿ ಮಕ್ಕಳಿಗೆ ಅಂತ ಅದೃಷ್ಟ ಇರುವುದಿಲ್ಲ. ವಾಸ್ತವವಾಗಿ ಹೆಚ್ಚಿನ ರಕ್ಷಣೆಯ ಅಗತ್ಯವಿರುವ ಇಂತಹ ಮಕ್ಕಳ ಸಂರಕ್ಷಣೆಗೆ ಸ್ವಯಂ ಸೇವಾ ಸಂಘಟನೆಗಳು ಮುಂದಾಗುತ್ತಿರುವುದು ಸಂತಸದ ವಿಷಯವಾಗಿದೆ. ಆದೇ ವೇಳೆಗೆ ಅನಾಥ ಮಕ್ಕಳಿಗಾಗಿ ಸಮಗ್ರ ಕಾಯ್ದೆಯೊಂದು ಕಾರ್ಯರೂಪಕ್ಕೆ ಬರುವ ಮೊದಲೇ ಇಂತಹ ಸೇವಾ ಕಾರ್ಯದಲ್ಲಿ ನಿರತರಾಗಿರುವ ಸ್ವಯಂಸೇವಾ ಸಂಘಟನೆಗಳ ಯೋಜನಾ ವರದಿಯಲ್ಲಿ ನಾಲ್ಕು ಕೋಟಿ ರೂಪಾಯಿಗಳನ್ನು ಪ್ರತ್ಯೇಕವಾಗಿ ಮೀಸಲಿಡಲಾಗಿದೆಯೆಂಬ ಅಂಶವನ್ನು ಸದನದ ಮಾನ್ಯ ಸದಸ್ಯರ ಗಮನಕ್ಕೆ ತರಲು ನಾನು ಬಯಸುತ್ತೇನೆ. ಈ ಸದನದ ಮಾನ್ಯ ಸದಸ್ಯರು ಅದರಲ್ಲೂ ಕುರಿತಾಗಿ ಮಹಿಳಾ ಸಂಸತ್ ಸದಸ್ಯರು ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿನ ಇತರ ಮಹಿಳೆಯರು ಮಕ್ಕಳ ಯೋಗಕ್ಷೇಮಕ್ಕಾಗಿ ಶ್ರಮಿಸುತ್ತಿರುವ ಸಂಘಟನೆಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿ ನೀಡಬೇಕು. ಯೋಜನಾ ಆಯೋಗದ ವರದಿಯಲ್ಲಿ ಒದಗಿಸಿರುವ ಈ ಹಣವನ್ನು ಬಳಸಿಕೊಂಡು ಈ ಸಂಘಟನೆಗಳು ತಮ್ಮ ಚಟುವಟಿಕೆಗಳನ್ನು ವಿಸ್ತರಿಸಿಕೊಳ್ಳಬಹುದಾಗಿದೆ. ಮಕ್ಕಳ ಸಂರಕ್ಷಣೆಯು ಸಂಪೂರ್ಣವಾಗಿ ಸರ್ಕಾರದ ಹೊಣೆಗಾರಿಕೆಯಾಗಿದೆ. ಮಗುವೊಂದು ಅನಾಥವಾಗಿರಲಿ ಅದು ಅಂಗವಿಕಲವಾಗಿರಲಿ ಅಥವಾ

---

* ತಂದೆ ತಾಯಿಯಂದಿರನ್ನು ಕಳೆದುಕೊಂಡ ಮತ್ತು ಸರಿಯಾದ ರೀತಿಯ ಪಾಲನೆ ಪೋಷಣೆಗೆ ಅವಕಾಶ ಇಲ್ಲದ ಮಕ್ಕಳ ಲಾಲನೆ - ಪಾಲನೆ ಮತ್ತು ಶಿಕ್ಷಣಕ್ಕೆ ಅವಕಾಶ ಕಲ್ಪಿಸುವ ಸಲುವಾಗಿ ಶ್ರೀ ಎಂ. ಎಲ್. ದ್ವಿವೇದಿಯವರು ಮಂಡಿಸಿದ ಖಾಸಗಿ ಮಸೂದೆಯ ಮೇಲಿನ ಚರ್ಚೆಯಲ್ಲಿ ಸದಸ್ಯರು ಎತ್ತಿದ ಪ್ರಶ್ನೆಗೆ ಉತ್ತರಿಸುತ್ತಾ (ಲೋಕಸಭೆ ಚರ್ಚೆ 1953, ಏಪ್ರಿಲ್ 24, ಸಿಸಿ 5048-5049)

ಇನ್ನಾವುದೇ ಕಾರಣದಿಂದ ಅಶಕ್ತರಾಗಿರಲಿ ಅಂತಹ ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಸರ್ಕಾರದ ಹೊಣೆಗಾರಿಕೆಯಾಗಿದೆ. ಆದರೆ ಈ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸ್ವಯಂ ಸೇವಾ ಸಂಘಟನೆಗಳಿಂದ ಈ ವಿಷಯದಲ್ಲಿ ಅವುಗಳಿಗಿರುವ ಅಧಿಕಾರ, ಸಂಪನ್ಮೂಲ ಮತ್ತು ಇತರ ಸೌಕರ್ಯ ಸವಲತ್ತುಗಳನ್ನು ಸರ್ಕಾರ ತನ್ನ ಕೈಗೆ ತೆಗೆದುಕೊಳ್ಳುವುದಕ್ಕೂ ನನ್ನ ಸಮ್ಮತಿ ಇಲ್ಲ. ಬದಲಾಗಿ ಈ ಸಂಸ್ಥೆಗಳು ತಮ್ಮ ಕಾರ್ಯ ಚಟುವಟಿಕೆಗಳನ್ನು ಮುಂದುವರಿಸಿಕೊಂಡು ಹೋಗಬೇಕೆಂಬುದೇ ನನ್ನ ಆಶಯವಾಗಿದೆ. ಈ ಸಂಘಟನೆಗಳು ಈ ಕ್ಷೇತ್ರದಲ್ಲಿ ತಾವು ನಡೆಸುತ್ತಿರುವ ಕಾರ್ಯ ಚಟುವಟಿಕೆಗಳನ್ನು ಸರ್ಕಾರದ ಗಮನಕ್ಕೆ ತರಬಹುದು. ಈ ಕ್ಷೇತ್ರದಲ್ಲಿ ಯಾವ ಸಂಘಟನೆಗಳು ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ ಎಂದು ಹೇಳಲು ಅವರೇ ಸಮರ್ಥರಾಗಿರುತ್ತಾರೆ. ಮಕ್ಕಳ ಯೋಗಕ್ಷೇಮಕ್ಕಾಗಿ ಭಾರತೀಯ ಮಕ್ಕಳ ಕಲ್ಯಾಣ ಮಂಡಳಿ ಇದ್ದು, ನಾನೇ ಅದರ ಅಧ್ಯಕ್ಷೆಯಾಗಿದ್ದೇನೆ. ಈ ಕ್ಷೇತ್ರದಲ್ಲಿ ಬಲ್ಕಾನ್-ಜಿ ಬಾರಿ ಎಂಬ ಸಂಸ್ಥೆಯೊಂದು ಅಖಿಲ ಭಾರತ ಮಟ್ಟದಲ್ಲಿ ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸುತ್ತಿದೆ. ಅದೇ ರೀತಿ ಮದ್ರಾಸ್‌ನಲ್ಲಿ ಅಶೋಕ ವಿಹಾರ ಎಂಬ ಸಂಘಟನೆಯೊಂದು ಪ್ರಶಂಸನೀಯವಾದ ಕಾರ್ಯ ನಿರ್ವಹಿಸುತ್ತಿದೆ. ಮುಂಬಯಿ, ಕಲ್ಕತ್ತಾ ಮತ್ತು ದೇಶದ ಇತರ ಕಡೆಗಳಲ್ಲೂ ಇಂತಹ ಅನೇಕ ಸಂಘಟನೆಗಳಿದ್ದು, ಅವು ಮಕ್ಕಳ ಕಲ್ಯಾಣಕ್ಕಾಗಿ ಕಾರ್ಯ ನಿರ್ವಹಿಸುತ್ತಿವೆ. ನಾವು ಈ ವಿಧೇಯಕವನ್ನು ಅದು ಅನಾಥರಿಗಾಗಿಯೇ ಇರುವ ಮಸೂದೆ ಎಂದು ಸಂಕುಚಿತ ದೃಷ್ಟಿಯಿಂದ ನೋಡಬಾರದು. ಬದಲಾಗಿ ಅದನ್ನು ಸಮಗ್ರ ದೃಷ್ಟಿಯಿಂದ ಪರಿಶೀಲಿಸಬೇಕು. ಸರ್ಕಾರವು ಈಗಾಗಲೇ ಮಕ್ಕಳ ಕಾಯ್ದೆಯೊಂದನ್ನು ಸಿದ್ಧಪಡಿಸಿದೆ. ಹಾಗಾಗಿ ಸರ್ಕಾರವು ಮಕ್ಕಳ ಹಿತಚಿಂತನೆಯ ಪ್ರಶ್ನೆಯನ್ನು ಸಮಗ್ರ ದೃಷ್ಟಿಯಿಂದ ನೋಡುವುದೆಂದು ನಾನು ದೃಢ ವಿಶ್ವಾಸ ಹೊಂದಿದ್ದೇನೆ. ಆದರೆ ಅದೇ ವೇಳೆಗೆ ಈ ನಿಟ್ಟಿನಲ್ಲಿ ಯೋಜನಾ ಆಯೋಗವು ನಮಗೆ ಕಲ್ಪಿಸಿಕೊಡುತ್ತಿರುವ ಅವಕಾಶದ ಸಂಪೂರ್ಣ ಪ್ರಯೋಜನ ಪಡೆಯಬೇಕೆಂದೂ ಕೇಳಿಕೊಳ್ಳುತ್ತೇನೆ.

## 27. ಅನಾಥಾಲಯಗಳು ಮತ್ತು ಇತರ ಧಾರ್ಮಿಕ ದತ್ತಿ ಸಂಸ್ಥೆಗಳ (ನಿರ್ವಹಣೆ ಮತ್ತು ನಿಯಂತ್ರಣ) ವಿಧೇಯಕ - 1950*

ಈ ವಿಧೇಯಕದ ಕುರಿತು ಮಾತನಾಡಲು ನನಗೆ ಒಂದಿಷ್ಟು ಅವಕಾಶ ಕೊಟ್ಟಿರುವುದಕ್ಕಾಗಿ ನಾನು ಅತ್ಯಂತ ಸಂತುಷ್ಟಳಾಗಿದ್ದೇನೆ. ನಾನು ಈ ವಿಧೇಯಕವನ್ನು ಮತ್ತೆ ಮತ್ತೆ ಓದಿ ನೋಡಿದ್ದೇನೆ. ಆದರೆ ನಾನು ಈ ವಿಧೇಯಕದ ಪರವಾಗಿಲ್ಲ ಎಂಬುದನ್ನು ಇದೇ ಸಂದರ್ಭದಲ್ಲಿ ಸ್ಪಷ್ಟ ಪಡಿಸುತ್ತಿದ್ದೇನೆ. ಇದು ರಾಜ್ಯ ಸರ್ಕಾರಗಳು ಪರಿಶೀಲಿಸಬೇಕಾದ ವಿಷಯ ಎಂದು ನನಗಿಂತಲೂ ಮೊದಲು ಮಾತನಾಡಿದ ಇಬ್ಬರು ಭಾಷಣಕಾರರ ಅಭಿಪ್ರಾಯವನ್ನು ನಾನು ಸಂಪೂರ್ಣವಾಗಿ ಸಮ್ಮತಿಸುತ್ತೇನೆ. ಈ ಉದ್ದೇಶಕ್ಕಾಗಿ ಮಂಡಳಿಗಳನ್ನು ರಚಿಸುವಂತೆ ರಾಜ್ಯ ಸರ್ಕಾರಗಳನ್ನು ಕೇಳಲು ಕೇಂದ್ರಕ್ಕೆ ಅಧಿಕಾರವಿಲ್ಲ ಎಂಬುದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ. ಈ ಕ್ಷೇತ್ರದಲ್ಲಿನ ಎಲ್ಲ ಸಂಸ್ಥೆಗಳು ಮಹಿಳೆಯರು ಮತ್ತು ಮಕ್ಕಳ ಅಗತ್ಯಗಳನ್ನು ಈಡೇರಿಸುವ ನಿಟ್ಟಿನಲ್ಲಿ ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿಲ್ಲ ಎಂದು ನಾನು ಭಾವಿಸಿದ್ದೇನೆ. ಆದರೆ ಅಧಿಕಾರ ಇದೆ ಎಂಬ ಕಾರಣಕ್ಕಾಗಿ ಪ್ರತಿಯೊಂದರ ಮೇಲೂ ಸರಕಾರ ನಿಯಂತ್ರಣ ಹೊಂದಿರಬೇಕಾದ ಅಗತ್ಯವಿಲ್ಲ. ಜೀವನದುದ್ದಕ್ಕೂ ನಾನು ಓರ್ವ ಸಾಮಾಜಿಕ ಕಾರ್ಯಕರ್ತೆಯಾಗಿ ದುಡಿದಿದ್ದೇನೆ. ಸಮಾಜ ಸೇವೆಗೆ ತಮ್ಮ ಸೇವೆಯನ್ನು ಮುಡುಪಿಟ್ಟ ಮಹನೀಯರು ಮಹಿಳೆಯರು ಮಕ್ಕಳ ಯೋಗಕ್ಷೇಮಕ್ಕಾಗಿ ಎಷ್ಟೊಂದು ಕೆಲಸ ಮಾಡಿದ್ದಾರೆ ಎಂಬುದನ್ನು ನಾನು ನೋಡಿದ್ದೇನೆ. ಇಂತಹ ಸಂಸ್ಥೆಗಳು ಮಹಿಳೆಯರು ಮತ್ತು ಮಕ್ಕಳಿಗೆ ಸಂಬಂಧಿಸಿದ ಎಲ್ಲ ಸಮಸ್ಯೆಗಳನ್ನು ಎತ್ತಿಕೊಂಡಿವೆ ಮತ್ತು ಅವುಗಳ ಪರಿಹಾರಕ್ಕಾಗಿ ಶ್ರಮಿಸಿವೆ. ಪ್ರತಿಯೊಂದು ರಾಜ್ಯದಲ್ಲೂ ಮಕ್ಕಳ ಕಾಯ್ದೆಗಳಿದ್ದು, ಅವು ಮಕ್ಕಳ ಎಲ್ಲ ಅಗತ್ಯಗಳನ್ನು ಪೂರೈಸಿವೆ. ಈ ಸಂಸ್ಥೆಗಳು ಮಕ್ಕಳ ಶೋಷಣೆಗೆ ಕಾರಣವಾಗಿದ್ದರೆ ಅವುಗಳನ್ನು ನಿಯಂತ್ರಿಸುವ ಅಧಿಕಾರ ಈ ಕಾಯ್ದೆಗಳಿಗಿದೆ. ಮಹಿಳೆಯರ ವಿಷಯದಲ್ಲೂ ಇದೇ ಮಾತು ಅನ್ವಯವಾಗುತ್ತದೆ.

ಇಂತಹ ವಿಷಯಗಳಲ್ಲಿ ಸಾಮಾಜಿಕ ಜಾಗೃತಿಯನ್ನು ಉಂಟು ಮಾಡುವುದು ಅತ್ಯುತ್ತಮ ಮಾರ್ಗವಾಗಿದೆ. ಯಾವ ಸರ್ಕಾರದಲ್ಲಿ ನಿಯಂತ್ರಣ ಕಡಿಮೆ ಇರುತ್ತದೆಯೋ ಅದೇ ಅತ್ಯುತ್ತಮ ಸರ್ಕಾರ ಎಂಬ ಸೂಕ್ತಿಯನ್ನು ನಾನಿಂದು ಇನ್ನಷ್ಟು ಒತ್ತುಕೊಟ್ಟು ಪುನರುಚ್ಚರಿಸುತ್ತೇನೆ. ಆದರೆ ಭಾರತ ಸರ್ಕಾರ ಶಾಸನಗಳನ್ನು ರೂಪಿಸುವುದರಲ್ಲೇ ವಿಶೇಷ ಆಸಕ್ತಿ ತಳೆದಿದೆ. ಹೀಗೆ ಮಾಡುವ ಮೂಲಕ ಜನರ ಕ್ರಿಯಾಶೀಲತೆಯನ್ನೇ ಅದು ಸಾಯಿಸುತ್ತದೆ ಎಂದು ಹೇಳಲು ನನಗೆ ನಿಜಕ್ಕೂ ವಿಷಾದವೆನಿಸುತ್ತದೆ. ನಮ್ಮಲ್ಲಿ ಮಹಿಳೆಯರ ಮತ್ತು ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವ

---

* ಅನಾಥಾಲಯಗಳು ಮತ್ತು ನಿರ್ಲಕ್ಷಿತ ಮಹಿಳೆಯರು ಅಥವಾ ಮಕ್ಕಳ ಆಶ್ರಯಧಾಮಗಳು ಹಾಗೂ ಇಂತಹ ಸಂಸ್ಥೆಗಳ ಉಸ್ತುವಾರಿ ಮತ್ತು ನಿಯಂತ್ರಣ ಹಾಗೂ ಅದಕ್ಕೆ ಸಂಬಂಧಪಟ್ಟ ವಿಷಯಗಳಿಗೆ ಶ್ರೀ ಕೈಲಾಶ್ ಬಿಹಾರಿ ಅವರು ಮಂಡಿಸಿದ ಖಾಸಗಿ ವಿಧೇಯಕದ ಮೇಲಿನ ಚರ್ಚೆಯಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತಾ (ರಾಜ್ಯಸಭೆ ಚರ್ಚೆ ಆಗಸ್ಟ್ 21, 1959, ಸಿಸಿ 1389-1392)

ನಿಟ್ಟಿನಲ್ಲಿ ಹಲವಾರು ಸಮಾಜ ಸೇವಾ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. ದೇಶದಲ್ಲಿ ಮಹಿಳೆಯರು ಮತ್ತು ಮಕ್ಕಳ ಶೋಷಣೆ ಯಾವ ಮಟ್ಟದಲ್ಲಿ, ಎಷ್ಟರ ಮಟ್ಟಿಗೆ ನಡೆಯುತ್ತಿದೆ? ಎಂಬುದನ್ನು ತೀರ್ಮಾನಿಸಬೇಕಾದವರೂ ಸಾಮಾಜಿಕ ಕಾರ್ಯಕರ್ತರೇ. ಈಗ ಉದ್ದೇಶಿಸಿರುವ ರೀತಿಯ ಮಂಡಳಿಗಳನ್ನು ರಚಿಸುವಾಗ ಅಂತಹ ಮಂಡಳಿಗಳ ಅಗತ್ಯ ಇದೆಯೇ ಎಂಬ ಬಗ್ಗೆ ರಾಜ್ಯ ಸರ್ಕಾರಗಳು ಸಾಮಾಜಿಕ ಕಾರ್ಯಕರ್ತರೊಂದಿಗೆ ಸಮಾಲೋಚಿಸಿವೆಯೇ ಎಂಬುದನ್ನು ನಾನು ತಿಳಿಯಬಯಸುತ್ತೇನೆ. ರಾಜ್ಯಗಳು ಅಂತಹ ಮಂಡಳಿಗಳನ್ನು ಹೊಂದಿರಬೇಕೆಂದು ಕೇಂದ್ರ ಸರ್ಕಾರವು ಶಾಸನವೊಂದನ್ನು ತರುವುದಕ್ಕೆ ಮೊದಲು ಈ ವಿಷಯದ ನಿಷ್ಕರ್ಷೆಯಾಗಬೇಕು. ಆದರೆ ತಮ್ಮ ಹಕ್ಕುಗಳ ಮೇಲೆ ಅತಿಕ್ರಮಣ ನಡೆಯುವುದನ್ನು ರಾಜ್ಯ ಸರ್ಕಾರಗಳು ಖಂಡಿತವಾಗಿಯೂ ಪ್ರತಿಭಟಿಸುವು ಎಂದು ನಾನು ಭಾವಿಸಿದ್ದೇನೆ. ಒಂದು ವೇಳೆ ಅವು ಹಾಗೆ ಮಾಡಿದರೂ ಅದು ತಪ್ಪಲ್ಲ. ಈ ವಿದ್ಯಾರ್ಹತೆಗಳ ಬಗ್ಗೆ ನನಗೆ ಕಿಂಚಿತ್ತೂ ಸಂದೇಹವಿಲ್ಲ. ಆದರೆ ಈ ವಿಧೇಯಕದ ಹಲವು ಖಂಡಗಳು ಗೊಂದಲಕ್ಕೆ ಎಡೆ ಮಾಡಿಕೊಡುವ ರೀತಿಯಲ್ಲಿವೆ. ಹಾಗಾಗಿ ಅದನ್ನು ಕಾಯಿದೆಯಾಗಿ ಜಾರಿಗೆ ತಂದರೆ ಅದು ಇನ್ನಷ್ಟು ಗೊಂದಲಕ್ಕೆ ಕಾರಣವಾಗುತ್ತದೆ. "ಮಾನ್ಯತೆ ಪಡೆದ ಅನಾಥಾಶ್ರಮಕ್ಕೆ ಸೇರಿಸಿಕೊಂಡ ಪ್ರತಿಯೊರ್ವ ಮಹಿಳೆ ಮತ್ತು ಮಗುವಿಗೆ ಶಿಕ್ಷಣ ನೀಡುವುದು. ತರಬೇತಿ ನೀಡುವುದು, ವಸತಿ ಒದಗಿಸುವುದು, ಬಟ್ಟೆ ಬರೆಗಳನ್ನು ಒದಗಿಸುವುದು ಹಾಗೂ ಆಹಾರವನ್ನು ಪೂರೈಸುವುದು ಪ್ರತಿಯೊಬ್ಬ ವ್ಯವಸ್ಥಾಪಕನ ಕರ್ತವ್ಯವಾಗಿರುತ್ತದೆ" ಎಂದು ನಾವು ಈ ವಿಧೇಯಕದಲ್ಲಿ ಹೇಳಿದ್ದೇವೆ. ನಮ್ಮಲ್ಲಿ ಸಂಘಗಳ ನೋಂದಣಿ ಕಾಯ್ದೆಯನ್ವಯ ನೋಂದಣಿ ಹೊಂದಿರುವ ಹಲವಾರು ಸಂಘ ಸಂಸ್ಥೆಗಳಿವೆ. ಅವು ಮೇಲೆ ಹೇಳಿದ ಎಲ್ಲ ಹೊಣೆಗಾರಿಕೆಯನ್ನು ಹೊಂದಿವೆ. ಹಾಗಿರುವಾಗ ಈ ವಿಷಯದಲ್ಲಿ ಕೇಂದ್ರ ಮಧ್ಯ ಪ್ರವೇಶಿಸುವ ಅಗತ್ಯವೇನು ? ದೇಶದಲ್ಲಿನ ಮಕ್ಕಳ ಅನಾಥಾಲಯಗಳು ಮತ್ತು ಮಹಿಳೆಯರ ಆಶ್ರಯ ಧಾಮಗಳಲ್ಲಿ ಯಾವುವು ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ ಎಂಬುದು ನನಗೆ ಗೊತ್ತಿಲ್ಲ. ತಮ್ಮ ಬಳಿ ಇದಕ್ಕೆ ಸಂಬಂಧಿಸಿದ ಮಾಹಿತಿಗಳೇನಾದರೂ ಇವೆಯೇ? ಆದರೆ ನೂರಾರು ಸಂಸ್ಥೆಗಳು ಈ ಕ್ಷೇತ್ರದಲ್ಲಿ ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸುತ್ತಿರುವುದು ನನಗೆ ಗೊತ್ತಿದೆ. ಅಂತಹ ಅನಾಥಾಶ್ರಮಗಳಿಗೆ ಆಡಳಿತ ಮಂಡಳಿಗಳಲ್ಲಿ ನಾನೂ ಓರ್ವ ಸದಸ್ಯೆಯಾಗಿರುವುದರಿಂದ ನನಗೆ ಈ ವಿಷಯ ಗೊತ್ತಿದೆ. ಹಾಗಾಗಿಯೇ ಈ ವಿಷಯದಲ್ಲಿ ಸರ್ಕಾರದ ಹಸ್ತಕ್ಷೇಪವನ್ನು ನಾನು ವಿರೋಧಿಸುತ್ತೇನೆ. ಏಕೆಂದರೆ ಈ ರೀತಿಯ ನಿಯಂತ್ರಣವನ್ನು ತಂದಾಗ ವ್ಯವಸ್ಥಾಪಕರು ಏನು ಮಾಡಬೇಕು, ಏನನ್ನು ಮಾಡಬಾರದು ಎಂಬುದನ್ನು ಸರ್ಕಾರವೇ ತಾಕೀತು ಮಾಡುತ್ತದೆ. ಈ ವಿಧೇಯಕದ ಧ್ಯೇಯೋದ್ದೇಶಗಳ ಪ್ರಸ್ತಾವನೆಯಲ್ಲಿ ಹೀಗೆ ಹೇಳಲಾಗಿದೆ:

"ಇಂತಹ ಸಂಸ್ಥೆಗಳ ಸಂಘಟನೆಗೆ ಸಂಬಂಧಿಸಿದಂತೆ, ಈಗ ಅಸ್ತಿತ್ವದಲ್ಲಿರುವ ಯಾವುದೇ ಅನಾಥಾಲಯ, ಸೇವಾಸಂಸ್ಥೆಗಳ ಸ್ವರೂಪವನ್ನು ಹಾಗೆಯೇ ಉಳಿಸಿಕೊಳ್ಳಬೇಕು. ಆದರೆ ಅವುಗಳ ಆಡಳಿತವನ್ನು ಚುನಾಯಿತ ಆಡಳಿತ ಸಮಿತಿಯ ಮೂಲಕ ಕ್ರಮಬದ್ಧಗೊಳಿಸಲು ಅವಕಾಶ ಕಲ್ಪಿಸಬೇಕು"

ಒಂದು ಅನಾಥಾಶ್ರಮವು ಸರಿಯಾಗಿ ಕೆಲಸ ಮಾಡುತ್ತಿದ್ದರೆ ಅದಗ ಆಡಳಿತ ಚೆನ್ನಾಗಿರಲೇಬೇಕು. ಹಾಗಿರುವಾಗ ಅವುಗಳನ್ನು ಕ್ರಮಬದ್ಧಗೊಳಿಸುವುದಾದರೂ ಏಕೆ ? ಅದನ್ನು ಕ್ರಮಬದ್ಧಗೊಳಿಸಲು ನಿಮಗೆ ಹಕ್ಕೆಲ್ಲಿದೆ ? ಎಲ್ಲಕ್ಕಿಂತ ಮೇಲಾಗಿ ಈ ರೀತಿಯ ಸಂಸ್ಥೆಗಳು ಸಾರ್ವಜನಿಕರ ದೇಣಿಗೆಗಳಿಂದಲೇ ನಡೆಯುವಂಥವು ಎಂಬುದೂ ನಮ್ಮ ನೆನಪಿನಲ್ಲಿರಬೇಕು.

ಈ ಮಂಡಳಿಗಳನ್ನು ರಚಿಸಿದಾಕ್ಷಣ ಅವು ಅನಾಥಾಶ್ರಮಗಳ ಕಾರ್ಯ ನಿರ್ವಹಣೆಯಲ್ಲಿ ಮಧ್ಯ ಪ್ರವೇಶಿಸಿ ಕ್ರಮೇಣ ಎಲ್ಲ ವಿಷಯಗಳಲ್ಲೂ ಹಸ್ತಕ್ಷೇಪ ನಡೆಸಲು ಪ್ರಾರಂಭಿಸುತ್ತವೆ. ಇದು ಖಂಡಿತ ಒಳ್ಳೆಯದಲ್ಲ. ಇದು ಖಾಸಗಿಯವರ ಕ್ರಿಯಾಶೀಲತೆ ಮತ್ತು ಉತ್ಸಾಹವನ್ನೇ ನಾಶಗೊಳಿಸುತ್ತದೆ; ಎಲ್ಲ ವಿಷಯಗಳಲ್ಲಿ ಸರ್ಕಾರದ ನಿಯಂತ್ರಣ ಯಾವುದೇ ಕಾರಣಕ್ಕೂ ಸಮರ್ಥನೀಯವಲ್ಲ.* ಇಂತಹ ವಿಷಯಗಳನ್ನು ಮಹಿಳಾ ಸಂಘಟನೆಗಳಿಗೆ, ಸ್ವಯಂ ಸೇವಾ ಸಂಸ್ಥೆಗಳಿಗೆ ಬಿಟ್ಟುಬಿಡಿ. ಅಂಥ ಕೆಲಸಗಳನ್ನು ಮಾಡುವಂತೆ ಅವುಗಳಿಗೆ ಮನವಿ ಮಾಡಿಕೊಳ್ಳಿ; ಈ ಕ್ಷೇತ್ರಕ್ಕೆ ಸಂಬಂಧಿಸಿದ ಮಾಹಿತಿಗಳೇನಾದರೂ ನಿಮ್ಮ ಬಳಿ ಇದ್ದರೆ ಅವುಗಳನ್ನು ಈ ಸಂಸ್ಥೆಗಳ ಗಮನಕ್ಕೆ ತನ್ನಿ. ಅಗತ್ಯ ಇದ್ದರೆ ರಾಜ್ಯ ಸಾರ್ಕಾರಗಳ ಗಮನಕ್ಕೂ ತನ್ನಿ. ಆದರೆ ಯಾವ ಕಾರಣಕ್ಕೂ ಇಂತಹ ಕಾಯ್ದೆಗಳನ್ನು ಅಂಗೀಕರಿಸಲು ಹೋಗಬೇಡಿ. ಮೇಲಾಗಿ ಈ ಮಾದರಿಯ ವಿಧೇಯಕಗಳ ಪರಾಮರ್ಶೆಗಾಗಿ ಆಯ್ಕೆ ಸಮಿತಿಗಳ ಮೇಲೆ ಹಣವನ್ನು ಪೋಲು ಮಾಡುವ ಅಗತ್ಯವೇನು? ಇದು ಅಕ್ಷರಶಃ ಹಣದ ದುಂದುವೆಚ್ಚವಾಗಿದೆ. ವ್ಯರ್ಥ ಕಾಲ ಹರಣವಾಗಿದೆ. ಈ ನಿಟ್ಟಿನಲ್ಲಿ ಸಾರ್ವಜನಿಕರು ಖಾಸಗಿ ನೆಲೆಯಲ್ಲಿ ದೇಶವೇ ಹೆಮ್ಮೆ ಪಡುವ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅಂತಹ ಸಂಸ್ಥೆಗಳಲ್ಲಿ ನಾವು ಮಧ್ಯ ಪ್ರವೇಶಿಸುವುದು ಸರಿಯಾದ ಕ್ರಮವಲ್ಲ ಎಂಬುದೇ ನನ್ನ ಅಭಿಪ್ರಾಯವಾಗಿದೆ. ಅಂತಾರಾಷ್ಟ್ರೀಯ ಮಟ್ಟದಲ್ಲೂ ನಮ್ಮ ಮಹಿಳೆಯರು ಸಮಾಜ ಸೇವೆಗಾಗಿ ತಮ್ಮ ಸಮಯವನ್ನು ಮೀಸಲಿಡುತ್ತಿದ್ದಾರೆಂದು ನಾವು ಹೆಮ್ಮೆ ಪಟ್ಟುಕೊಳ್ಳಬಹುದು ಅಂತಾರಾಷ್ಟ್ರೀಯ ಸಮುದಾಯದಲ್ಲಿ ತಲೆ ಎತ್ತಿ ನಿಲ್ಲಬಹುದು. ಜಗತ್ತಿನ ಯಾವ ದೇಶದಲ್ಲೂ ಇಂತಹ ಸಮಾಜ ಕಲ್ಯಾಣ ಮಂಡಳಿ ಅಸ್ತಿತ್ವದಲ್ಲಿಲ್ಲ. ಒಂದು ವೇಳೆ ಯಾವುದೇ ಒಂದು ಅನಾಥಾಲಯ ಸರಿಯಾಗಿ ಕಾರ್ಯ ನಿರ್ವಹಿಸುವುದಿಲ್ಲವೆಂದಾದಲ್ಲಿ ಅದಕ್ಕೆ ಅನುದಾನ ನೀಡುವುದಿಲ್ಲ ಎಂದು ಹೇಳಬಹುದು. ಕೇಂದ್ರ ಸಮಾಜಕಲ್ಯಾಣ ಮಂಡಳಿಯು ಎಲ್ಲ ರಾಜ್ಯಗಳಲ್ಲಿ ತನ್ನ ಶಾಖೆಗಳನ್ನು ಹೊಂದಿದೆ. ಅದು ಸಂಬಂಧಪಟ್ಟ ರಾಜ್ಯಗಳಿಗೆ ಹೋಗಿ "ಇಂತ ಸಂಸ್ಥೆ ಅಥವಾ ಅನಾಥಾಲಯ ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಇಲ್ಲಿಯ ನಿವಾಸಿಗಳನ್ನು ಶೋಷಿಸಲಾಗುತ್ತಿದೆ. ಹಾಗಾಗಿ ತಕ್ಷಣ ಇಂತಹ ಸಂಸ್ಥೆಗಳ ವಿರುದ್ಧ ಕ್ರಮ ತೆಗೆದುಕೊಳ್ಳಿ" ಎಂದು ಹೇಳಬಹುದಾಗಿದೆ. ಅಂತಹ ಕ್ರಮ ತೆಗೆದುಕೊಳ್ಳುವುದು ಸರ್ಕಾರದ ಅಧಿಕಾರ ಕಕ್ಷೆಯೊಳಗೇ ಇದೆ. ಆದಕ್ಕೆ ಇಂತಹ ಒಂದು ಶಾಸನದ ಅಗತ್ಯವಾದರೂ ಏಕೆ ? ಇಂತಹ ಒಂದು ಕಾಯ್ದೆಯನ್ನು ತರುವುದಕ್ಕೆ ಅಥವಾ ತರಬೇಕೆಂದು ಬಯಸುವುದಕ್ಕೆ ನಾನು ಸಂಪೂರ್ಣ ವಿರೋಧಿಯಾಗಿದ್ದೇನೆ. ಇದರಿಂದ ರಾಜ್ಯಗಳ ಅಧಿಕಾರವನ್ನು ಅತಿಕ್ರಮಿಸಿದಂತಾಗುತ್ತದೆ. ಈ ಕ್ಷೇತ್ರದಲ್ಲಿ ಖಾಸಗಿ

---

* ಮೇಲುಸ್ತುವಾರಿ ಮತ್ತು ನಿಯಂತ್ರಣ ಅವಶ್ಯವಿರುವ ಕೆಲವು ಸೇವಾ ಸಂಸ್ಥೆಗಳಿವೆ ಎಂದು ಶ್ರೀ ಅಕ್ಬರ್ ಅಲಿಖಾನ್ ಅವರು ವ್ಯಕ್ತಪಡಿಸಿದ ಅಭಿಪ್ರಾಯಕ್ಕೆ ಸ್ಪಷ್ಟನೆ ನೀಡುತ್ತಾ.

ಪ್ರಯತ್ನಗಳಿಗೆ ಸ್ವಯಂಸೇವಾ ಸಂಸ್ಥೆಗಳ ಕಾರ್ಯ ನಿರ್ವಹಣೆಗೆ ಅವಕಾಶ ಕೊಡಬೇಕೆಂಬುದು ನನ್ನ ವಿನಮ್ರ ಮನವಿಯಾಗಿದೆ. ಅನಾಥರ ಸೇವೆಯಲ್ಲಿ ನಮ್ಮ ದೇಶ ಹೆಮ್ಮೆ ಪಡುವಂತಹ ದಾಖಲೆ ಹೊಂದಿದೆ. ಒಂದು ವೇಳೆ ಸರಿಯಾಗಿ ಕಾರ್ಯ ನಿರ್ವಹಿಸದ ಸಂಸ್ಥೆಗಳಿದ್ದರೆ ಅದನ್ನು ಸಂಬಂಧಪಟ್ಟ ರಾಜ್ಯ ಸರ್ಕಾರದ ಗಮನಕ್ಕೆ ತರುವುದು ಸಮಾಜ ಕಲ್ಯಾಣ ಮಂಡಳಿಯ ಕರ್ತವ್ಯವಾಗಿದೆ. ಅಂತ ಅಕ್ರಮಗಳು ನಡೆದಲ್ಲಿ ಅದನ್ನು ಸಂಬಂಧಪಟ್ಟ ಅಧಿಕಾರಸ್ಥರ ಗಮನಕ್ಕೆ ತಂದು ಶಿಕ್ಷೆ ವಿಧಿಸುವುದೂ ಅಪೇಕ್ಷಣೀಯವೇ ಆಗಿದೆ. ಅದಕ್ಕೆ ಆಯಾ ರಾಜ್ಯಗಳಲ್ಲಿ ಸಾಕಷ್ಟು ಕಾನೂನು ಕಾಯ್ದೆಗಳಿವೆ. ಸರಿಯಾಗಿ ಕಾರ್ಯನಿರ್ವಹಿಸದ ಅನಾಥಾಲಯಗಳು ಮತ್ತು ಸಮಾಜ ಸೇವಾ ಸಂಸ್ಥೆಗಳ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಎಲ್ಲಾ ರಾಜ್ಯ ಸರ್ಕಾರಗಳು ತತ್ಸಂಬಧಿಥಾಕಾಯ್ದೆಗಳನ್ನು ಹೊಂದಿವೆ. ಇಂತಹ ಒಂದು ಮಸೂದೆಯನ್ನು ತರುತ್ತಿರುವುದಕ್ಕೆ ಸಮರ್ಥನೆ ಒದಗಿಸಬಲ್ಲ ಯಾವುದೇ ಸಕಾರಣ ನಮ್ಮ ಮುಂದಿಲ್ಲ. ಹಾಗಾಗಿ ಈ ವಿಧೇಯಕವನ್ನು ಪರಿಶೀಲನೆಗಾಗಿ ಆಯ್ಕೆ ಸಮಿತಿಗೆ ಶಿಫಾರಸು ಮಾಡುವ ಅಗತ್ಯವೂ ನನಗೆ ಕಾಣುವುದಿಲ್ಲ. ಹಾಗಾಗಿ ನಾನು ಈ ವಿಧೇಯಕವನ್ನು ಸ್ಪಷ್ಟವಾಗಿ ವಿರೋಧಿಸುತ್ತೇನೆ.

---

* ಶಿಕ್ಷಣ ಸಚಿವೆ ಡಾ. ಕೆ.ಎಲ್. ಶ್ರೀಮತಿ ಅವರು ಮುಂಡಿಸಿದ ಪ್ರಸ್ತಾವನೆ ಕುರಿತು ಮಾತನಾಡುತ್ತಾ (ರಾಜ್ಯ ಸಭೆ ಚರ್ಚೆ ಫೆಬ್ರವರಿ 15, 1955. ಸಿಸಿ 702-704)

## 28. ಮಕ್ಕಳ ವಿಧೇಯಕ 1959 *

ಮಾನ್ಯ ಉಪಾಧ್ಯಕ್ಷರೇ, ಈ ವಿಧೇಯಕವನ್ನು ಬಹುಶಃ ಯಾರೂ ವಿರೋಧಿಸಲಾರರು. ಮಾನ್ಯ ಸಚಿವರೇ ಹೇಳಿದಂತೆ ಇದು ಬಹಳ ಹಿಂದೆಯೇ ಬರಬೇಕಾಗಿದ್ದ ವಿಧೇಯಕ. ಕೇಂದ್ರ ಸರ್ಕಾರ ಎಲ್ಲ ರಾಜ್ಯಗಳೊಂದಿಗೆ ಈ ವಿಷಯದಲ್ಲಿ ಸಮಾಲೋಜನೆ ನಡೆಸಿ ಏಕರೂಪದ ಕಾಯ್ದೆಯೊಂದನ್ನು ತರುವ ಅಗತ್ಯವನ್ನು ಮನಗಂಡಿರಬೇಕೆಂದು ನಾನು ಭಾವಿಸಿದ್ದೇನೆ. ನನಗಿಂತಲೂ ಮೊದಲು ಮಾತನಾಡಿದ ಭಾಷಣಕಾರರೆಲ್ಲರೂ ಈ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಮಕ್ಕಳ ಯೋಗಕ್ಷೇಮಕ್ಕಾಗಿ ಕಾಯ್ದೆಗಳನ್ನು ರೂಪಿಸಬೇಕೆಂದು ಬಹಳ ಹಿಂದಿನಿಂದಲೇ ಒತ್ತಾಯಿಸುತ್ತಾ ಬಂದವರಲ್ಲಿ ನಾನೂ ಒಬ್ಬಳಾಗಿದ್ದೇನೆ. ಈಗಾಗಲೇ ಮುಂಬೈ ಮತ್ತು ಮದ್ರಾಸ್ ರಾಜ್ಯಗಳಲ್ಲಿ ಜಾರಿಗೆ ಬಂದಿರುವ ಕಾಯ್ದೆಗಳು ಮಕ್ಕಳ ಕಲ್ಯಾಣಕ್ಕಾಗಿ ಬಹಳಷ್ಟು ಕೆಲಸ ಮಾಡಿವೆ. ಈ ವಿಧೇಯಕಕ್ಕೆ ಸಂಬಂಧಿಸಿದ ಎಲ್ಲ ಖಂಡಗಳನ್ನೂ ಜಂಟಿ ಆಯ್ಕೆ ಸಮಿತಿ ಸಮಗ್ರ ದೃಷ್ಟಿಕೋನದಿಂದ ಪರಿಶೀಲಿಸಿದೆ. ಈ ವಿಧೇಯಕವನ್ನು ಕಾರ್ಯರೂಪಕ್ಕೆ ತರುವ ನಿಟ್ಟಿನಲ್ಲಿ ಮಾನ್ಯ ಸಚಿವರು ಮತ್ತು ಅವರ ಖಾತೆ ನೀಡಬೇಕಾದ ಗಮನವನ್ನು ನೀಡಿದೆಯೇ ಎಂದು ನಾನು ಕೇಳಬಯಸುತ್ತೇನೆ ? ಅದರ ನಿರ್ವಹಣೆಗೆ ಆಡಳಿತಗಾರರ ನೇಮಕ ಆಗಬೇಕು. ದಂಡಾಧಿಕಾರಿಗಳ-ಮ್ಯಾಜಿಸ್ಟ್ರೇಟರುಗಳ ನೇಮಕ ಆಗಕಬೇಕಾಗುತ್ತದೆ; ಮಕ್ಕಳ ನಿರೀಕ್ಷಣಾಲಯಗಳು ಬೇಕಾಗುತ್ತವೆ; ಈ ಮಕ್ಕಳಿಗಾಗಿ ವಿಶೇಷ ಶಾಲೆಗಳನ್ನು ತೆರೆಯಬೇಕಾಗುತ್ತದೆ. ಈ ಶಾಲೆಗಳನ್ನು ನಡೆಸುವವರು ಯಾರು? ಈ ನಿರೀಕ್ಷಣಾಲಯಗಳ ಉಸ್ತುವಾರಿ ನಡೆಸುವವರು ಯಾರು ? ಅಲ್ಲಿ ಮಕ್ಕಳಿಗೆ ಸರಿಯಾದ ಪಾಲನೆ-ಪೋಷಣೆ, ಪ್ರೀತಿ, ವಾತ್ಸಲ್ಯ ಸಿಗುತ್ತಿದೆಯೇ ಎಂದು ನೋಡಿಕೊಳ್ಳುವವರು ಯಾರು? ಮಕ್ಕಳು ಬಾಲಾಪರಾಧಿಗಳಾಗಿದ್ದಲ್ಲಿ ಅವರನ್ನು ಸರಿ ದಾರಿಗೆ ತರಲು, ಅವರ ಅಗತ್ಯಗಳನ್ನು ನೋಡಿಕೊಳ್ಳಲು ಅಲ್ಲಿ ಯಾರಿರುತ್ತಾರೆ? ಇಂತಹ ಮಕ್ಕಳಿಗೆ ಇತರ ಎಲ್ಲಕ್ಕಿಂತ ಹೆಚ್ಚಾಗಿ ಮನೋ ವೈಜ್ಞಾನಿಕ ಚಿಕಿತ್ಸೆ ಕೂಡಾ ಅಗತ್ಯ ಎಂಬುದನ್ನು ಸರ್ಕಾರ ಮನಗಂಡಿದೆಯೇ? ಸಚಿವೆಯಾಗಿ ಜಗತ್ತಿನಾದ್ಯಂತ ಪ್ರವಾಸ ಕೈಗೊಳ್ಳುವ ಅವಕಾಶ ನನಗೆ ಸಿಕ್ಕಿದೆ. ಇಂತಹ ಸಂದರ್ಭದಲ್ಲಿ ನಾನು ಮಕ್ಕಳ ಯೋಗಕ್ಷೇಮ ಕೇಂದ್ರಗಳ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿ ಅಂತಹ ಕೇಂದ್ರಗಳಿಗೆ ಭೇಟಿ ನೀಡಿ ಅದು ಕಾರ್ಯ ನಿರ್ವಹಿಸುವ ರೀತಿಯನ್ನು ಗಮನಿಸಿದ್ದೇನೆ. ಮೊನ್ನೆ ಮೊನ್ನೆಯಷ್ಟೇ ನಾನು ನ್ಯೂಜಿಲ್ಯಾಂಡ್‌ಗೆ ಹೋಗಿದ್ದೆ. ನಾನು ಅಲ್ಲಿ ವಿಲಕ್ಷಣ ವ್ಯಾಧಿಯಿಂದ ನರಳುತ್ತಿದ್ದ ಮಕ್ಕಳ ವಿಶೇಷ ಶುಶ್ರೂಷಾ ಕೇಂದ್ರವೊಂದಕ್ಕೆ ಭೇಟಿ ನೀಡಿದ್ದೆ. ಈ ಮಕ್ಕಳನ್ನು ನೋಡಿಕೊಳ್ಳಲು ಸರಿಯಾದ ತರಬೇತಿ ಹೊಂದಿದ ಮಹಿಳೆಯರು-ಸಾಮಾನ್ಯವಾಗಿ ಮಹಿಳೆಯರನ್ನೇ ಅಲ್ಲಿ ನೇಮಿಸಿಕೊಳ್ಳತ್ತಾರೆ-ದೊರೆಯದಿರುವುದು ತಮ್ಮ ದೊಡ್ಡ ಸಮಸ್ಯೆಯಾಗಿದೆ ಎಂದು ಅಲ್ಲಿ ನನಗವರು ಹೇಳಿದರು. ಎಲ್ಲ ದೇಶಗಳಲ್ಲಿ ಈ ವಿಷಯದಲ್ಲಿ ಇದೇ ರೀತಿಯ ಸಮಸ್ಯೆ ಇರುವುದು ನನ್ನ ಗಮನಕ್ಕೆ ಬಂದಿದೆ. ನಾನು ಭೇಟಿ ನೀಡಿದ ದೇಶಗಳಲ್ಲಿ ಹೆಚ್ಚು ಕಡಿಮೆ ಎಲ್ಲ ಕಡೆ ಇದೇ ಪರಿಸ್ಥಿತಿ ಇತ್ತು. ವಿದೇಶಗಳಲ್ಲಿ ಬಾಲಪರಾಧಿಗಳ ಅನೇಕ ಕೇಂದ್ರಗಳಿಗೆ ನಾನು ಭೇಟಿ ನೀಡಿದ್ದೇನೆ. ನ್ಯಾಯಾಲಯಗಳಲ್ಲಿ ಮ್ಯಾಜಿಸ್ಟ್ರೇಟರು ಅವರ ವಿಚಾರಣೆ ನಡೆಸುವುದನ್ನು ಕಂಡಿದ್ದೇನೆ. ಎಲ್ಲ ಕಡೆಯಲ್ಲೂ ಕಂಡು ಬಂದ ಸಮಸ್ಯೆ ಎಂದರೆ ತರಬೇತಿ ಹೊಂದಿದ ಸಿಬ್ಬಂದಿಗಳ ಕೊರತೆ. ಅದೇ ರೀತಿ ವಿಧೇಯಕವನ್ನು ಅಂಗೀಕರಿಸಿ ಅದನ್ನು ಕಾರ್ಯರೂಪಕ್ಕೆ ತರುವಾಗ ವಿಶೇಷ ಶಾಲೆಗಳನ್ನು ನಡೆಸಲು, ನಿರೀಕ್ಷಣಾಲಯಗಳನ್ನು ನಿರ್ವಹಿಸಲು ಹಾಗೂ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಲು ಅಗತ್ಯವಿರುವ ಪರಿಣಿತ ಸಿಬ್ಬಂದಿಯನ್ನು ಹೊಂದಿರಲು ನಮಗೆ ಸಾಧ್ಯವಾದೀತೇ? ನಾವು ಈ ವಿಧೇಯಕದ ಮೂಲಕ ಮಕ್ಕಳಿಗೆ ಅವರ ಅವಶ್ಯಕತೆಗಳನ್ನೂ ಪೂರೈಸಲು ಮತ್ತು ಅವರಿಗೆ ಬೇಕಾದ ಎಲ್ಲ ರೀತಿಯ ಸೇವೆಗಳನ್ನು ಒದಗಿಸಲು ಉದ್ದೇಶಿಸಿದ್ದೇವೆ. ಆದರೆ ಇದಾವನ್ನೂ

ಸೂಕ್ತ ತರಬೇತಿ ಹೊಂದಿದ ಸಿಬ್ಬಂದಿಗಳಿಲ್ಲದೆ ಕಾರ್ಯರೂಪಕ್ಕೆ ತರಲು ಸಾಧ್ಯವಾಗುವುದಿಲ್ಲ. ಈ ವಿಷಯದಲ್ಲಿ ಪರಿಣಿತ ಸಂಘ ಸಂಸ್ಥೆಗಳು ಮತ್ತು ವಿಶ್ವ ಸಂಸ್ಥೆಯಂತಹ ಸಂಘಟನೆಗಳು ಕಲ್ಪಿಸಿಕೊಟ್ಟಿರುವ ಸೌಕರ್ಯಗಳನ್ನು ನಾವು ಬಳಸಿಕೊಂಡಿದ್ದೇವೆಯೇ ಎಂಬ ವಿಷಯದಲ್ಲಿಯೂ ನನಗೆ ಸಂದೇಹವಿದೆ. ಈ ಕ್ಷೇತ್ರದಲ್ಲಿ ವಿಶೇಷ ತರಬೇತಿಯನ್ನು ಪಡೆಯುವ ಸಲುವಾಗಿ ವಿದೇಶಗಳಿಗೆ ಹೋಗಲು ಅಂತ ಸಂಸ್ಥೆಗಳಿಂದ ಸಿಗುವ ವಿದ್ಯಾರ್ಥಿ ವೇತನ ಮತ್ತಿತರ ಸೌಲಭ್ಯಗಳನ್ನು ಬಳಸಿಕೊಳ್ಳಲು ನಾವು ಯೋಚಿಸಿದ್ದೇವೆಯೇ? ಈ ಬಗ್ಗೆಯೂ ನನಗೆ ಅನುಮಾನ ಉಂಟು. ಮಹಿಳೆಯರು ಅಂತಹ ತರಬೇತಿಯನ್ನು ಪಡೆದು ಬಂದರೆ ಇಲ್ಲಿನ ಬಾಲಪರಾಧಿಗಳ ನಿರೀಕ್ಷಣಾಲಯಗಳ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಲು ಅವರು ಸಮರ್ಥರಾಗುವರು ಅದೇ ರೀತಿ ತರಬೇತಿ ಹೊಂದಿದ ಸಿಬ್ಬಂದಿ ಇದ್ದರೆ ನ್ಯಾಯಾಲಯಗಳಲ್ಲಿ ಸಮರ್ಪಕ ವಾತಾವರಣ ನಿರ್ಮಾಣವಾಗುವುದು. ಆಡಳಿತಾಧಿಕಾರಿ ಎಂದರೆ 'ನಮ್ಮಲ್ಲಿ ಕೆಲವು ಮಕ್ಕಳಿದ್ದಾರೆ. ನಾವು ಇವರಿಗಾಗಿ ವಿಶೇಷ ಸೌಕರ್ಯಗಳನ್ನು ಕಲ್ಪಿಸಿದ್ದೇನೆ' ಎಂದು ಹೇಳಿಕೊಳ್ಳಲು ಇರುವ ಒಬ್ಬ ವ್ಯಕ್ತಿಯಲ್ಲ. ವಿಶೇಷ ಬಾಲ ಕೇಂದ್ರಗಳನ್ನು ನಡೆಸಲು ವಿಶೇಷ ತರಬೇತಿ ಹೊಂದಿದ ಸಿಬ್ಬಂದಿ ಬೇಕು. ಅದೇ ರೀತಿ ಬಾಲ ನಿರೀಕ್ಷಣಾಲಯಗಳಿಗೂ ವಿಶೇಷ ತರಬೇತಿ ಹೊಂದಿದ ಸಿಬ್ಬಂದಿಯೇ ಬೇಕು. ಮನಃಶಾಸ್ತ್ರದಲ್ಲಿ, ವೈದ್ಯ ಪದ್ಧತಿಗಳಲ್ಲಿ ಮತ್ತು ಮಕ್ಕಳ ವಿಷಯದಲ್ಲಿ ಹೆಚ್ಚಿನ ಪರಿಣತಿ ಹೊಂದಿದವರು ಇಲ್ಲಿ ಬೇಕಾಗುತ್ತವೆ. ಮಕ್ಕಳು ಯಾವ ಕಾರಣದಿಂದಾಗಿ ಅಪರಾಧಿಗಳಾಗಿದ್ದಾರೆಯೆಂಬುದನ್ನು ಅರಿಯುವ ಸಾಮರ್ಥ್ಯ ಇರುವ ತಜ್ಞರು ಇಲ್ಲಿ ಅಗತ್ಯ. ಮಗು ಯಾವ ಪರಿಸರದಲ್ಲಿ ಬೆಳೆದು ಹಾಗಾಗಿದೆ ಎಂಬ ಪರಿಜ್ಞಾನ ಅಗತ್ಯ. ಅದೇ ರೀತಿ ಮಕ್ಕಳ ಅನಾಥಾಲಯಗಳಿಗೆ ಬರಲು ಕಾರಣವಾದ ಆರ್ಥಿಕ ಅಂಶಗಳು ಯಾವುದೆಂಬುದನ್ನೂ ಅವರು ಅರಿತುಕೊಂಡಿರಬೇಕಾಗುತ್ತದೆ. ಮಕ್ಕಳ ಕಲ್ಯಾಣ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಈ ಎಲ್ಲ ಅರ್ಹತೆಗಳೂ ಇರಬೇಕು. ಮೊನ್ನೆ ನಾನು ಬಿಕ್ಷಾಟನೆ ವೃತ್ತಿಗೆ ಅತುಕೊಳ್ಳಲಿದ್ದ ಮಗುವೊಂದನ್ನು ರಕ್ಷಿಸಿದೆ. ವಿಷಯ ತಿಳಿದೊಡನೆಯೇ ನಾನು ಮಗುವಿನ ತಂದೆ, ತಾಯಿ ವಾಸವಾಗಿದ್ದಲ್ಲಿಗೆ ಹೋಗಿದೆ. ಅವರು ವಾಸಿಸುತ್ತಿದ್ದ ಪರಿಸರ ಬೀಭತ್ಸವಾಗಿತ್ತು. ಭಿಕ್ಷೆ ಎತ್ತುವುದು ಅನಿವಾರ್ಯವೇ ಆಗಿದ್ದರೂ ಕೂಡಾ ಮಗುವನ್ನು ಬೇಡಲು ಬಿಡಬಾರದೆಂದು ನಾನು ಹೇಗೋ ಅವರ ಮನ ಒಲಿಸಿದೆ. ನನ್ನ ಅದೃಷ್ಟಕ್ಕೆ ಅವರು ಒಪ್ಪಿಕೊಂಡರು. ನಾವು ಈಗ ತಂದಿರುವ ವಿಧೇಯಕವನ್ನು ಯಶಸ್ವಿಯಾಗಿ ಕಾರ್ಯ ರೂಪಕ್ಕೆ ತರಬೇಕಾದರೆ ಉತ್ಸಾಹ ಮಾತ್ರವಲ್ಲ. ಈ ವಿಷಯದಲ್ಲಿ ವಿಶೇಷ ತರಬೇತಿ ಹೊಂದಿದ ಕಾರ್ಯಕರ್ತರೂ ನಮಗೆ ಬೇಕಾಗುತ್ತಾರೆ. ನಾವು ಈಗ ಉದ್ದೇಶಿಸಿರುವ ಕಾರ್ಯಭಾರವನ್ನು ಕೈಗೆತ್ತಿಕೊಳ್ಳಲು ಸಿದ್ಧರಾಗಿರುವ ವಿಶೇಷ ಸಿಬ್ಬಂದಿಯನ್ನು ನಾವು ತಯಾರು ಮಾಡಿದ್ದೇವೆಯೇ ಎಂಬುದನ್ನು ಸಚಿವರು ತಮ್ಮ ಪ್ರತ್ಯುತ್ತರದಲ್ಲಿ ಹೇಳಬೇಕೆಂದು ನಾನು ಕೇಳಿಕೊಂಡಿದ್ದೇನೆ. ಈಗ ನಾವು ಮಂಡಿಸಿರುವ ವಿಧೇಯಕವು ಒಂದು ಮಾದರಿ ಕಾಯ್ದೆಯೆನಿಸಿ ಕೇಂದ್ರಾಡಳಿತ ಪ್ರದೇಶಗಳಲ್ಲಿನ ಮಕ್ಕಳಿಗಾಗಿ ಹಮ್ಮಿಕೊಂಡಿರುವ ಎಲ್ಲ ಯೋಜನೆಗಳು ರಾಜ್ಯಗಳಿಗೆ ಅನುಸರಿಸಲು ಯೋಗ್ಯ ಎಂಬುದು ಸಾಬೀತಾದಲ್ಲಿ ಎಲ್ಲ ರಾಜ್ಯ ಸರ್ಕಾರಗಳು ತಾವಾಗಿಯೇ ಇದೇ ಮಾದರಿಯ ಕಾಯ್ದೆಗಳನ್ನು ತರುವಂತೆ ನಮ್ಮನ್ನು ಕೇಳಬಹುದು. ಅಷ್ಟು ಮಾತ್ರವಲ್ಲ ಇಡೀ ದೇಶಕ್ಕೆ ಅನ್ವಯವಾಗುವಂತೆ ಏಕರೂಪದ ಕಾಯ್ದೆಯೊಂದನ್ನು ತರುವಂತೆ ನಮಗೆ ಸೂಚಿಸಬಹುದು. ಆದರೆ ಒಟ್ಟಿನಲ್ಲಿ ಈ ವಿಧೇಯಕದ ಯಶಸ್ಸು ಸಂಪೂರ್ಣವಾಗಿ ತರಬೇತಾದ ಸಿಬ್ಬಂದಿಯನ್ನೇ ಅವಲಂಬಿಸಿದೆಯೆಂಬ ಅಂಶವನ್ನು ನಾನು ಮತ್ತೊಮ್ಮೆ ಇಲ್ಲಿ ಸ್ಪಷ್ಟಪಡಿಸಬಯಸುತ್ತೇನೆ.

* 1960ರ ಫೆಬ್ರವರಿ 15ರಂದು ಈ ವಿಧೇಯಕವನ್ನು ಅಂಗೀಕರಿಸಲಾಯಿತು.

## 29. ವಿಶ್ವವಿದ್ಯಾನಿಲಯ ಅನುದಾನ ಆಯೋಗದ ವರದಿ*

ಸನ್ಮಾನ್ಯ ಅಧ್ಯಕ್ಷರೇ, ನಾನು ಮಾತನಾಡಲು ಆರಂಭಿಸುವ ಮೊದಲು ಈ ವರದಿಯನ್ನು ಹಾರ್ದಿಕವಾಗಿ ಸ್ವಾಗತಿಸುತ್ತೇನೆ. ಆಯೋಗವು ತನ್ನ ವರದಿಯಲ್ಲಿ ಅನೇಕ ಮೂಲಭೂತ ಪ್ರಶ್ನೆಗಳನ್ನು ಎತ್ತಿದೆಯಲ್ಲದೆ ಹಲವಾರು ಉಪಯುಕ್ತ ಸಲಹೆಗಳನ್ನು ನೀಡಿದೆ. ನನ್ನ ಸನ್ಮಾನ್ಯ ಮಿತ್ರರಾದ ಡಾ: ಕುಂಜ್ರು ಅವರು ನಿನ್ನೆ ಹೇಳಿದ ಪ್ರತಿಯೊಂದು ಮಾತೂ ನನಗೆ ಸಂಪೂರ್ಣ ಸಹಮತವಾಗಿದೆ. ಈ ವರದಿಯಲ್ಲಿನ ಶಿಫಾರಸುಗಳು ದೇಶದ ಭವಿಷ್ಯ ಮತ್ತು ಕ್ಷೇಮ ಚಿಂತನೆಯ ದೃಷ್ಟಿಯಿಂದ ಅತ್ಯಂತ ಪ್ರಾಮುಖ್ಯದ್ದಾಗಿವೆ.

ದೇಶಕ್ಕೆ ಅಗತ್ಯವಿರುವ ವಿದ್ಯಾವಂತರನ್ನು ಸೃಷ್ಟಿಸುವಲ್ಲಿ, ಪುರುಷರು ಮತ್ತು ಸ್ತ್ರೀಯರಿಗೆ ಸಮಾನತೆ ಕಲ್ಪಿಸುವಲ್ಲಿ ವಿಶ್ವವಿದ್ಯಾನಿಲಯಗಳು ವಹಿಸುವ ಪಾತ್ರವನ್ನು ಅಲ್ಲಗಳೆಯಲು ಯಾರಿಂದಲೂ ಸಾಧ್ಯವಿಲ್ಲ. ದೇಶದ ಅಭ್ಯುದಯ ಸಾಧನೆಯ ದಿಸೆಯಲ್ಲಿ ಕರ್ತವ್ಯ ಪ್ರಜ್ಞೆ ಮತ್ತು ಹೊಣೆಗಾರಿಕೆ ಹೊಂದಿರುವ ಉತ್ತಮ ಪೌರರನ್ನು ನಿರ್ಮಿಸುವಲ್ಲಿ ವಿಶ್ವವಿದ್ಯಾಲಯಗಳು ವಹಿಸುವ ಪಾತ್ರ ಪ್ರಶ್ನಾತೀತವಾಗಿದೆ.

ನನಗೆ ದೊರೆತಿರುವ ಪರಿಮಿತ ಕಾಲಾವಕಾಶದಲ್ಲಿ ಕೆಲವೊಂದು ಅಂಶಗಳನ್ನು ಒತ್ತಿಹೇಳಲು ಬಯಸುತ್ತೇನೆ. ಇವುಗಳಲ್ಲಿ ಕೆಲವನ್ನು ಈಗಾಗಲೇ ಇತರರು ಹೇಳಿದ್ದರೂ ಕೂಡಾ ನಾನು ಮತ್ತೊಮ್ಮೆ ಅವುಗಳನ್ನು ಪ್ರಸ್ತಾಪಿಸ ಬಯಸುತ್ತೇನೆ. ವಿಶ್ವವಿದ್ಯಾಲಯಗಳಲ್ಲಿನ ವಿದ್ಯಾರ್ಥಿ ಮತ್ತು ಬೋಧಕರ ನಡುವಣಾ ಅನುಪಾತವು ತೃಪ್ತಿದಾಯಕವಾಗಿಲ್ಲ ಮಾತ್ರವಲ್ಲ ಅದು ಗಾಬರಿ ಹುಟ್ಟಿಸುವಂತಿದೆ. ಪ್ರತಿಯೊಂದು ಕ್ಷೇತ್ರದಲ್ಲಿಯೂ ಅಗಾಧ ಪ್ರಗತಿ ಸಾಧಿಸುತ್ತಿರುವ ಇಂದಿನ ಜಗತ್ತಿನಲ್ಲಿ ಶಿಕ್ಷಣದ ಮಟ್ಟವನ್ನು ಎತ್ತರಿಸದಿರಲು ಸಾಧ್ಯವೇ ಇಲ್ಲ. ನಮ್ಮ ಯುವಜನರಿಗೆ ಜ್ಞಾನ ಸಂಪಾದನೆಯ ಎಲ್ಲ ಅವಕಾಶ ಮತ್ತು ಸೌಕರ್ಯಗಳನ್ನು ನಾವು ಕಲ್ಪಿಸಿಕೊಡಲೇಬೇಕು. ಅಂತಹ ಸೌಕರ್ಯಗಳಿಲ್ಲದಿದ್ದರೆ ಶಿಕ್ಷಣವು ತನ್ನ ಗುಣಮಟ್ಟವನ್ನು ಕಾಯ್ದುಕೊಳ್ಳುವುದಾದರೂ ಹೇಗೆ ಸಾಧ್ಯ? ಈಗಿರುವ ಪರಿಸ್ಥಿತಿಯಲ್ಲಿ ವಿದ್ಯಾರ್ಥಿಗಳು ಅಂತಹ ಶಿಕ್ಷಣವನ್ನು ಪಡೆದುಕೊಳ್ಳುವುದಾದರೂ ಹೇಗೆ ? ನಮ್ಮ ಮುಂದೆ ಇರುವ ಸಮಸ್ಯೆ ಇದೇ ಆಗಿದೆ. ಎಲ್ಲ ಕಡೆಗಳಲ್ಲಿರುವ ಇಂಗ್ಲಿಷ್ ಶಿಕ್ಷಣದ ಮಟ್ಟ ಕುಸಿಯುತ್ತಿದೆ. ವಿದ್ಯಾರ್ಥಿಗಳಿಗೆ ಉಪನ್ಯಾಸಗಳನ್ನು ಅನುಸರಿಸಲು ಸಾಧ್ಯವಾಗುತ್ತಿಲ್ಲ ಮತ್ತು ವಿದ್ಯಾರ್ಥಿಗಳ ಜ್ಞಾನದ ಸಾಮಾನ್ಯ ಮಟ್ಟ ಕುಸಿಯುತ್ತಿದೆ ಎಂಬ ಮಾತುಗಳನ್ನು ಕೇಳುತ್ತಿದ್ದೇನೆ. ಅನೇಕ ಕಡೆಗಳಲ್ಲಿ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ಸೌಕರ್ಯ ಇಲ್ಲ. ಯುವಕರಿಗೆ ವಿಚಾರ ವಿನಿಮಯಕ್ಕೆ ಅವಕಾಶವೇ ಇಲ್ಲ. ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ನಡುವೆ ಇರಬೇಕಾದ ಸಂಪರ್ಕದ ಕೊರತೆಯನ್ನು ನಾವು ಎದುರಿಸುತ್ತಿದ್ದೇವೆ. ಗ್ರಂಥಾಲಯಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪುಸ್ತಕಗಳು ಸಿಗುತ್ತಿಲ್ಲ. ಪ್ರಯೋಗಶಾಲೆಗಳಲ್ಲಿ ಬಳಸುವ ಸಾಧನ-ಸಲಕರಣೆಗಳು ಸಾಕಷ್ಟು ಪ್ರಮಾಣದಲ್ಲಿ ಇರುವುದಿಲ್ಲ. ಸಹಜವಾಗಿಯೇ ಇವೆಲ್ಲದರ ಒಟ್ಟಾರೆ ಫಲಿತಾಂಶವೆಂದರೆ ಶಿಕ್ಷಣದ ಮಟ್ಟ

---

* ಕೇಂದ್ರ ಶಿಕ್ಷಣ ಸಚಿವ ಡಾ|| ಕೆ.ಎಲ್. ಶ್ರೀಮಾಲಿ ಅವರು ಮಂಡಿಸಿದ ವಿಶ್ವವಿದ್ಯಾನಿಲಯ ಅನುದಾನ ಆಯೋಗದ ವರದಿಯ ಕುರಿತು ಮಾತನಾಡುತ್ತಾ (ರಾಜ್ಯ ಸಭೆ ಚರ್ಚೆ, ಏಪ್ರಿಲ್ 23, 1958, ಸಿಸಿ1 82-186)

ಕುಸಿಯುವುದು. ಬೋಧನೆ ಮತ್ತು ಕಲಿಕೆ ಎರಡೂ ದಾರಿತಪ್ಪಿ ವಿದ್ಯಾಕ್ಷೇತ್ರದಲ್ಲಿ ಅಶಿಸ್ತು ಬೆಳೆಯುತ್ತಿದೆ. ಇಂತಹ ಹತಾಶೆಯ ವಾತಾವರಣದಲ್ಲಿ ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳು ತಾವೇ ತೊಂದರೆಗೆ ಒಳಗಾಗುತ್ತಾರೆ. ಜ್ಞಾನದ ಹಸಿವು ಎಲ್ಲೆಡೆ ಕಂಡು ಬರುತ್ತಿದೆ ಮತ್ತು ಮಾಧ್ಯಮಿಕ ಶಿಕ್ಷಣ ವಿಸ್ತರಿಸುತ್ತಾ ಹೋದಂತೆ ಅದು ಕ್ಷಿಪ್ರಗತಿಯಿಂದ ಬೆಳೆಯುತ್ತಿದೆ. ಆದರೆ ಮಾಧ್ಯಮಿಕ ಶಿಕ್ಷಣದ ಪ್ರಮುಖ ಘಟ್ಟಗಳಲ್ಲಿ ವಿದ್ಯಾರ್ಥಿಗಳ ಸಾಮರ್ಥ್ಯ ಮತ್ತು ಅರ್ಹತೆಯನ್ನು ಸರಿಯಾಗಿ ಅಳೆದು ನೋಡುವ ವ್ಯವಸ್ಥೆ ನಮ್ಮಲ್ಲಿ ಇಲ್ಲ ಎಂಬುದನ್ನು ನಾವು ಒಪ್ಪಿಕೊಳ್ಳಲೇ ಬೇಕಾಗಿದೆ. ವಿದ್ಯಾರ್ಥಿಗಳ ಆಸಕ್ತಿ ಮತ್ತು ಅರ್ಹತೆಗಳನ್ನು ಗುರುತಿಸುವ ಕೆಲಸ ಈ ಹಂತದಲ್ಲಿ ನಡೆಯಬೇಕು. ಅಂತಹ ವ್ಯವಸ್ಥೆ ನಮ್ಮಲ್ಲಿ ಇಲ್ಲದಿರುವ ಕಾರಣದಿಂದಲೇ ಗೊತ್ತು ಗುರಿ ಇಲ್ಲದೆ ವಿದ್ಯಾರ್ಥಿಗಳು ವಿಶ್ವವಿದ್ಯಾಲಯಗಳಿಗೆ ಹರಿದು ಬರುವಂತಾಗಿದೆ. ಅಂಥವರಿಗೆ ವಿಶ್ವವಿದ್ಯಾಲಯಗಳಿಗೆ ಬದಲಾಗಿ ಬೇರೆ ಸಂಸ್ಥೆಗಳಲ್ಲಿ ಕಲಿಯುವ ಅಥವಾ ತರಬೇತಿ ಹೊಂದುವ ಅವಕಾಶ ದೊರೆತಿದ್ದರೆ ಅವರಿಂದ ವಿಶ್ವವಿದ್ಯಾಲಯಗಳಲ್ಲಿ ಪದವಿಗಳನ್ನು ಪಡೆದವರಿಗಿಂತ ಹೆಚ್ಚಿನದನ್ನು ನಿರೀಕ್ಷಿಸಬಹುದಿತ್ತು. ಜಗತ್ತಿನ ಮುಂದುವರಿದ ಎಲ್ಲ ದೇಶಗಳಲ್ಲೂ ವಿದ್ಯಾರ್ಥಿಗಳ ಪ್ರವೃತ್ತಿ ಮತ್ತು ಮನೋವೃತ್ತಿಗಳನ್ನು ಸೂಕ್ತವಾದ ಹಂತದಲ್ಲೇ ಅಭ್ಯಸಿಸಿ ಅವರನ್ನು ಆ ದಾರಿಗೆ ಹಚ್ಚಲಾಗುತ್ತಿದೆ. ವಿದ್ಯಾರ್ಥಿ ಸರಿಯಾದ ವೃತ್ತಿಪರ ಶಿಕ್ಷಣವನ್ನು ಆಯ್ದುಕೊಳ್ಳುವಂತೆ ಅವರ ತಂದೆ-ತಾಯಿಯಂದಿರಿಗೂ ಸಲಹೆ ಮತ್ತು ಮಾರ್ಗದರ್ಶನ ಅಲ್ಲಿ ನೀಡಲಾಗುತ್ತಿದೆ. ಇಂದು ವಿವಿಧ ವೃತ್ತಿಗಳನ್ನು ಕಲಿಯಲು ನಮ್ಮ ವಿದ್ಯಾರ್ಥಿಗಳಿಗೆ ಸಾಕಷ್ಟು ಸಂಖ್ಯೆಯಲ್ಲಿ ಪಾಲಿಟೆಕ್ನಿಗಳನ್ನು ಸ್ಥಾಪಿಸುವ ತುರ್ತು ಅಗತ್ಯವಿದೆ. ಹಾಗಾದಲ್ಲಿ ನಮ್ಮ ಹುಡುಗ-ಹುಡುಗಿಯರು ಅನೇಕ ಹೊಸ ಕಸುಬುಗಳನ್ನು, ವೃತ್ತಿಗಳನ್ನು ಅವಲಂಬಿಸಲು ಮತ್ತು ಅದರಿಂದ ಲಾಭ ಹೊಂದಲು ಅನುಕೂಲವಾಗುತ್ತದೆ. ಆದರೆ ನಮ್ಮ ದೇಶದಲ್ಲಿ ಇಂದು ಏನು ನಡೆಯುತ್ತಿದೆ ? ಪ್ರತಿಯೊಬ್ಬರೂ ಪದವೀಧರ ಸಮೂಹವನ್ನು ಸೇರುತ್ತಿದ್ದಾರೆ. ಅವರಿಂದಾಗಿ ನಿರುದ್ಯೋಗಿಗಳ ಒಂದು ದೊಡ್ಡ ಸಮುದಾಯವೇ ನಿರ್ಮಾಣವಾಗಿದೆ. ಇದು ನಿಜಕ್ಕೂ ಅತ್ಯಂತ ಅಪಾಯಕಾರಿ ಬೆಳವಣಿಗೆ. ಹೀಗಾಗಿ ಮಾಧ್ಯಮಿಕ ಶಿಕ್ಷಣ ಮತ್ತು ವಿಶ್ವವಿದ್ಯಾಲಯದ ಶಿಕ್ಷಣದ ನಡುವೆ ಹೆಚ್ಚಿನ ಸಮನ್ವಯ ವರ್ತಮಾನ ಒಂದು ತುರ್ತು ಅಗತ್ಯವಾಗಿದ್ದು ಅದನ್ನು ಸಾಮಾನ್ಯ ಶಿಕ್ಷಣದ ಮಟ್ಟವನ್ನು ಎತ್ತರಿಸುವ ಮೂಲಕ, ಹರಿಹರೆಯದವರ ಸಾಮರ್ಥ್ಯವನ್ನು ಸಮರ್ಥವಾಗಿ ಅಳೆಯುವ ಮೂಲಕ, ಲಂಡನ್ ಪಾಲಿಟೆಕ್ನಿಕ್‌ನಂತಹ ಅತ್ಯಾಧುನಿಕ ಶಾಲೆಗಳನ್ನು ತೆರೆಯುವ ಮೂಲಕ, ಮಾಧ್ಯಮಿಕ ಶಿಕ್ಷಣದ ಅವಧಿಯನ್ನು 18 ವರ್ಷಗಳಿಗೆ ವಿಸ್ತರಿಸುವ ಮೂಲಕ ಮತ್ತು ಮೂರು ಈ ವರ್ಷಗಳ ಪದ್ದತಿಯನ್ನು ಸ್ವೀಕರಿಸುವ ಮೂಲಕ ಅವನ್ನು ಸಾಧಿಸಬೇಕಾಗಿದೆ. ಈಗಾಗಲೇ ಬಹುತೇಕ ವಿಶ್ವವಿದ್ಯಾಲಯಗಳು ಇದನ್ನು ಅಂಗೀಕರಿಸಿದ್ದು ಇತರ ವಿಶ್ವವಿದ್ಯಾಲಯಗಳು ಅತಿಶೀಘ್ರದಲ್ಲೇ ಈ ಮಾದರಿಯನ್ನು ಅನುಸರಿಸಲಿವೆ ಎಂದು ಹೇಳಲು ನನಗೆ ಅತ್ಯಂತ ಸಂತಸವಾಗುತ್ತಿದೆ.

ನಾನು ಈವರೆಗೆ ಹೇಳಿದ್ದೆಲ್ಲವೂ ಕಾರ್ಯರೂಪಕ್ಕೆ ಬರಬೇಕೆಂಬುದು ನನ್ನ ಆಸೆ. ಆದರೆ ಹೇಗೆ ಎಂಬುದೇ ಇಲ್ಲಿ ಪ್ರಶ್ನೆಯಾಗಿದೆ. ಉತ್ತಮ ದರ್ಜೆಯ ಅಧ್ಯಾಪಕರನ್ನು ತಯಾರು ಮಾಡಲು ಇನ್ನೂ ಹೆಚ್ಚು ವಿಸ್ತೃತವಾದ ಮತ್ತು ಗತಿಶೀಲವಾದ ಆಂದೋಲನವೊಂದನ್ನು ನಡೆಸುವುದು

ಅಗತ್ಯವಾಗಿದೆ ಎಂದು ನಾನು ಭಾವಿಸಿದ್ದೇನೆ. ನಮ್ಮ ಶಿಕ್ಷಣದ ಮಟ್ಟವನ್ನು ಎತ್ತರಿಸುವ ನಿಟ್ಟಿನಲ್ಲಿ ದೇಶದ ಯಾವದೇ ಭಾಗದಿಂದಾದರೂ ಅಧ್ಯಾಪಕ ಸಿಬ್ಬಂದಿಯನ್ನು ಕರೆತರಲು ನಾನು ಹಿಂದೆ ಸರಿಯುವುದಿಲ್ಲ. ಯಾವುದೇ ವಿಶ್ವವಿದ್ಯಾಲಯದಿಂದಲಾದರೂ ಅಥವಾ ಅಗತ್ಯ ಬಿದ್ದರೆ ವಿದೇಶದಿಂದಾದರೂ ಅಂತಹ ಸಿಬ್ಬಂದಿಯನ್ನು ಕರೆಸಿಕೊಳ್ಳಲು ನಾನು ಸಿದ್ಧನಿದ್ದೇನೆ. ಶಿಕ್ಷಣ ಕ್ಷೇತ್ರದಲ್ಲಿನ ನಮ್ಮ ಅಗತ್ಯಗಳನ್ನು ಪೂರೈಸಲು ಸಮರ್ಥರಾಗುವವರೆಗೂ ನಾವು ಈ ರೀತಿ ಮಾಡಲೇಬೇಕು. ಜನ ಸಮುದಾಯದ ಹಿತಸಾಧನೆಯ ಪ್ರಶ್ನೆ ಬಂದಾಗ ಅಲ್ಲಿ ಸಂಕುಚಿತ ಪ್ರತ್ಯೇಕತಾವಾದಕ್ಕೆ ಅವಕಾಶ ಬರಬಾರದು. ಇವತ್ತು ನಮ್ಮ ದೇಶದಲ್ಲಿ ಏನಾಗುತ್ತಿದೆ? ನಮ್ಮ ವೈದ್ಯಕೀಯ ಕಾಲೇಜುಗಳ ಪ್ರಥಮ ಶ್ರೇಣಿಯ ಓರ್ವ ಅಧ್ಯಾಪಕ ಇನ್ನೊಂದು ರಾಜ್ಯಕ್ಕೆ ಸೇರಿದವನೆಂಬ ಒಂದೇ ಕಾರಣಕ್ಕಾಗಿ ಅತನನ್ನು ಕೈಬಿಟ್ಟು ತಮ್ಮ ರಾಜ್ಯಕ್ಕೆ ಸೇರಿದವರು ಎಂಬ ಏಕೈಕ ಕಾರಣಕ್ಕಾಗಿ ಮೂರನೇ ದರ್ಜೆಯ ಅಧ್ಯಾಪಕರನ್ನು ನೇಮಿಸಿಕೊಂಡಿದ್ದ ಪ್ರಕರಣವನ್ನು ಆರೋಗ್ಯ ಖಾತೆಯ ಸಚಿವೆಯಾಗಿ ಸ್ವತಃ ನಾನು ಕಂಡಿದ್ದೇನೆ. ಇದು ತಪ್ಪು. ಇಂತಹುದನ್ನು ನಾವು ಸರಿಪಡಿಸಲೇಬೇಕು.

ಭಾಷೆಯ ವಿಷಯದಲ್ಲಿ ಹೇಳುವುದಾದರೆ ಅದು ವಿವಾದಾತ್ಮಕ ವಿಷಯ ಎಂಬುದು ನನಗೆ ಗೊತ್ತು. ಹಾಗಾಗಿ ಈ ವಿಷಯದಲ್ಲಿ ಹೆಚ್ಚೇನನ್ನೂ ಹೇಳಲು ನಾನು ಬಯಸುವುದಿಲ್ಲ. ಇಷ್ಟನ್ನು ಮಾತ್ರ ಹೇಳುತ್ತೇನೆ. ಈ ವಿಷಯದಲ್ಲಿ ನಾವು, ನಮ್ಮ ಪ್ರಾದೇಶಿಕ ಭಾಷೆಗಳು ಅತ್ಯುತ್ಸಾಹಕ್ಕೆ ಅವಕಾಶ ನೀಡಬಾರದು. ಇಂಗ್ಲಿಷ್ ನೀಡುವ ಆದ್ಯತೆಯಿಂದ ನಮ್ಮ ರಾಷ್ಟ್ರಭಾಷೆಗೆ, ಅದೇ ರೀತಿ ಪ್ರಾದೇಶಿಕ ಭಾಷೆಗಳಿಗೆ ಅನ್ಯಾಯ ಆಗಬಾರದು. ಅಗತ್ಯ ಬಿದ್ದರೆ ಸಂವಿಧಾನಕ್ಕೆ ತಿದ್ದುಪಡಿ ತಂದು ಈಗಿರುವ ಭಾಷೆಗಳ ಜೊತೆಗೆ ಇಂಗ್ಲಿಷ್‌ನ್ನು ಸೇರಿಸಬಹುದೆಂಬುದು ನನ್ನ ಪ್ರಾಮಾಣಿಕ ಅಭಿಪ್ರಾಯವಾಗಿದೆ. ಅಂದರೆ ಇಂಗ್ಲೀಷ್ ಭಾಷೆಯನ್ನು ಸಂವಿಧಾನದ ಎಂಟನೇ ಷೆಡ್ಯೂಲ್‌ನಲ್ಲಿ ಸೇರಿಸಬೇಕು. ರಾಷ್ಟ್ರಭಾಷೆಯಂತೆ ಎಳವೆಯಲ್ಲಿಯೇ ಮಕ್ಕಳಿಗೆ ಇಂಗ್ಲಿಷನ್ನೂ ಕಲಿಸಬೇಕು.

ವಿದ್ಯೆಯ ದೇಗುಲಗಳಂತಿರುವ ಈ ವಿಶ್ವವಿದ್ಯಾಲಯಗಳನ್ನು ರಾಜಕೀಯದ ಕೆಸರಿಸನಿಂದ ಹೊರತೆಗೆಯಬೇಕಾದ ಅಗತ್ಯವನ್ನು ನಾನು ಮತ್ತೊಮ್ಮೆ ಒತ್ತಿಹೇಳುತ್ತಿದ್ದೇನೆ. ನನ್ನ ಸನ್ಮಿತ್ರರಾದ ಡಾ|| ಕುಂಝು ಅವರು ಇದನ್ನು ನಿನ್ನೆ ಅತ್ಯಂತ ಸಮರ್ಥವಾಗಿ ಪ್ರತಿಪಾದಿಸಿದ್ದಾರೆ. ಅವರು ಹೇಳಿರುವ ಒಂದೊಂದು ಶಬ್ದವನ್ನು ನಾನು ಅನುಮೋದಿಸುತ್ತೇನೆ. ನಮ್ಮ ವಿಶ್ವವಿದ್ಯಾಲಯಗಳು ರಾಜಧಾನಿ ನಗರಗಳಿಂದ ದೂರವಿರಬೇಕು ಎಂದು ನನಗನಿಸುತ್ತಿದೆ. ಇದು ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಅತ್ಯಂತ ಆದರ್ಶಪ್ರಾಯವಾದ ವಾತಾವರಣವನ್ನು ಕಲ್ಪಿಸುತ್ತದೆ. ವಿಶ್ವವಿದ್ಯಾಲಯಗಳ ವ್ಯವಸ್ಥೆಯಲ್ಲಿ ಆರೋಗ್ಯಕರ ಪರಂಪರೆಯೊಂದನ್ನು ಹುಟ್ಟುಹಾಕುವಲ್ಲಿ ಅತ್ಯಂತ ಪರಿಣಾಮಕಾಗಿ ಪಾತ್ರವಹಿಸುತ್ತದೆ. ರಾಜ್ಯಗಳ ರಾಜಧಾನಿಗಳಲ್ಲಿ ಏರುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ

ವಸತಿ ಕಲ್ಪಿಸಿಕೊಡುವುದು ಸರಕಾರದ ಆದ್ಯತೆಗಳಲ್ಲಿ ಒಂದಾಗಿದೆ. ಇಂತಹ ಪರಿಸ್ಥಿತಿಯಲ್ಲಿ ರಾಜ್ಯ ಸರ್ಕಾರಗಳು ವಿಶ್ವವಿದ್ಯಾಲಯಗಳ ವಸತಿಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡು ಅಲ್ಲಿನ ಕಾಲೇಜುಗಳನ್ನು ನಗರಗಳ ಹೊರಗಿನ ಹೊಸ ಪ್ರದೇಶಗಳಿಗೆ ವರ್ಗಾಯಿಸಬಾರದೇಕೆ? ನನ್ನ ಅಭಿಪ್ರಾಯದಂತೆ ವಿಶ್ವವಿದ್ಯಾಲಯಗಳು ರಾಜಧಾನಿಗಳ ಪರಿಮಿತಿಯಲ್ಲಿ ಇರಲೇಬಾರದು. ಹೊಸ ಕಾಲೇಜುಗಳನ್ನು ಅಲ್ಲಿ ನಿರ್ಮಿಸಲೇಬಾರದು

ಚರ್ಚೆಯಲ್ಲಿ ಮಾತನಾಡಿದ ಅನೇಕರು ವಿವಿಧ ಶಿಕ್ಷಣ ಮಟ್ಟಗಳಲ್ಲಿ ಸಮನ್ವಯ ಸಾಧಿಸುವುದರ ಕುರಿತೂ ಪ್ರಸ್ತಾಪಿಸಿದ್ದಾರೆ. ಇದು ಅತ್ಯಂತ ಪ್ರಮುಖವಾದ ಅಂಶವಾಗಿದೆ ಎಂದು ನಾನು ಭಾವಿಸಿದ್ದೇನೆ. ವಿಶ್ವವಿದ್ಯಾಲಯಗಳ ಶಿಕ್ಷಣವನ್ನು ಸರ್ಕಾರದ ನಿಯಂತ್ರಣಕ್ಕೆ ಒಳಪಡಿಸುವುದಾದರೆ ಅದಕ್ಕೆ ನನ್ನ ಕಡೆಯಿಂದ ಯಾವ ಆಕ್ಷೇಪವೂ ಇಲ್ಲ. ಶಿಕ್ಷಣ ಮಟ್ಟದಲ್ಲಿ ಏಕರೂಪತೆ ಸಾಧಿಸುವುದು ಮತ್ತು ಗುಣಮಟ್ಟವನ್ನು ಕಾಯುವುದು ಅದರ ಉದ್ದೇಶವಾಗಿದೆ ಎಂದು ನಾನು ನಂಬಿದ್ದೇನೆ. ವಿದ್ಯಾರ್ಥಿಗಳೊಂದಿಗೆ ಅಪವಿತ್ರ ಮೈತ್ರಿ ಹೊಂದಿ ಈ ಕ್ಷೇತ್ರದಲ್ಲಿ ರಂಪ ಎಬ್ಬಿಸುತ್ತಿರುವ ಪಕ್ಷ ರಾಜಕೀಯ ಮತ್ತು ಸ್ಥಳೀಯ ರಾಜಕೀಯದಿಂದ ಶಿಕ್ಷಣ ಕ್ಷೇತ್ರವನ್ನೂ ಮುಕ್ತಗೊಳಿಸುವುದೇ ಅದರ ಇಂಗಿತವಾಗಿದೆ ಎಂದು ನಾನು ಭಾವಿಸಿದ್ದೇನೆ. ಒಟ್ಟಿನಲ್ಲಿ ಇದು ಅತಿ ಶೀಘ್ರ ಪರಾಮರ್ಶೆಗೆ ಒಳಗಾಗಬೇಕಾದ ವಿಷಯವಾಗಿದೆ ಎಂದು ನಾನು ನಂಬಿದ್ದೇನೆ. ಅದೂ ಅಲ್ಲದೆ ಎಲ್ಲ ಬಗೆಯ ಶಿಕ್ಷಣ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಡುವುದು ಅತ್ಯಗತ್ಯವಾಗಿದೆ ಎಂಬುದನ್ನೂ ನಾನು ಒತ್ತಿ ಹೇಳುತ್ತೇನೆ. ವರದಿಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಅದರೂ ವೈದ್ಯಕೀಯ ಶಿಕ್ಷಣವನ್ನು ವಿಶ್ವವಿದ್ಯಾಲಯಗಳ ವ್ಯಾಪ್ತಿಯಿಂದ ಹೊರಗಿಟ್ಟಿರುವುದಕ್ಕೆ ಯಾವುದೇ ರೀತಿಯ ಸಮರ್ಥನೆ ಇಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಸಾಮಾನ್ಯ ಶಿಕ್ಷಣ ಕುರಿತಂತೆ ಆಯೋಗ ಮಾಡಿರುವ ಟೀಕೆ ಟಿಪ್ಪಣಿಗಳನ್ನು ನಾನು ಸಮರ್ಥಿಸುತ್ತೇನೆ. ಒಟ್ಟಿನಲ್ಲಿ ಯಾವುದೇ ಕಿಟಕಿ ಅಥವಾ ಬಾಗಿಲಿನಿಂದ ಬೆಳಕು ಬರುವುದಾದರೆ ಅದು ಸ್ವಾಗತಾರ್ಹ. ಇದರಿಂದ ನಮ್ಮ ಮನಸ್ಸು ಪ್ರಫುಲ್ಲಿತವಾಗುವುದು. ಒಟ್ಟಿನಲ್ಲಿ ವಿಶ್ವವಿದ್ಯಾಲಯಗಳು ಅತ್ಯುತ್ತಮ ತಲೆಮಾರನ್ನು ಸಾಧಿಸುವಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತದೆ.

ಈ ವರದಿಯಲ್ಲಿನ ಪ್ರಮುಖ ಅಂಶಗಳು ಮತ್ತು ಶಿಫಾರಸುಗಳಿಗೆ ಶಿಕ್ಷಣ ಖಾತೆಯಿಂದ ಸೂಕ್ತ ಮನ್ನಣೆ ಮತ್ತು ಪರಿಗಣನೆ ದೊರೆಯುವುದೆಂದು ನಾನು ಪ್ರಾಮಾಣಿಕವಾಗಿ ಭಾವಿಸಿದ್ದೇನೆ. ಕಳೆದೆರಡು ವರ್ಷಗಳ ಅವಧಿಯಲ್ಲಿ ಅತ್ಯಮೂಲ್ಯ ಕಾರ್ಯಭಾರವನ್ನು ನಿರ್ವಹಿಸಿರುವ ವಿಶ್ವವಿದ್ಯಾಲಯ ಅನುದಾನ ಆಯೋಗವು ಇದಕ್ಕೆ ಅಗತ್ಯವಿರುವ ಎಲ್ಲ ನೆರವನ್ನು ಸರ್ಕಾರದಿಂದ ಪಡೆಯಲು ಸಮರ್ಥವಾಗುವುದೆಂದು ನಾನು ನಂಬಿದ್ದೇನೆ.

# ನಗರ ಅಭಿವೃದ್ಧಿ

## 30. ದೆಹಲಿ ಅಭಿವೃದ್ಧಿ ಮಂಡಳಿ *

ಮಾನ್ಯ ಸಭಾಪತಿಗಳೇ, ಗೌರವಾನ್ವಿತ ಸದಸ್ಯರಾದ ಕೆ.ಬಿ.ಲಾಲ್ ಅವರು ಎರಡು ಪ್ರಶ್ನೆಗಳನ್ನು ಎತ್ತಿದ್ದಾರೆ. 1. ತನಿಖಾ ಸಮಿತಿಯ ವರದಿಯ ಮೇಲೆ ಸರ್ಕಾರ ಯಾವುದೇ ಕ್ರಮ ಕೈಗೊಂಡಿಲ್ಲ. 2. ಅಭಿವೃದ್ಧಿ ಮಂಡಳಿಯ ರದ್ದತಿಗೆ ಮಾಡಲಾಗಿರುವ ಒತ್ತಾಯ. ಈ ಎರಡು ವಿಷಯಗಳು ಒಂದಕ್ಕೊಂದು ಸಂಬಂಧ ಇಲ್ಲದವು. ಏಕೆಂದರೆ ಸಮಿತಿಯು ಮಂಡಳಿಯ ರದ್ದತಿಯ ವಿಷಯದಲ್ಲಿ ಯಾವ ಶಿಫಾರಸನ್ನೂ ಮಾಡಿಲ್ಲ. ಮಾನ್ಯ ಸದಸ್ಯರು ಎತ್ತಿರುವ ಪ್ರಶ್ನೆಗಳಿಗೆ ಪ್ರತ್ಯುತ್ತರ ನೀಡಲು ನನ್ನ ಬಳಿ ಹೆಚ್ಚಿನ ಸಮಯಾವಕಾಶ ಇಲ್ಲ. ಮೊದಲನೆಯದಾಗಿ ಅವರು ನೀಡಿರುವ ದಿನಾಂಕಗಳು ಸಂಪೂರ್ಣ ತಪ್ಪಾಗಿವೆ. ದೆಹಲಿ ಅಭಿವೃದ್ಧಿ ಮಂಡಳಿಯು ಭಾರತ ಸರ್ಕಾರದಿಂದ 1950ರ ಏಪ್ರಿಲ್ ತಿಂಗಳಲ್ಲಿ ಸ್ಥಾಪಿತವಾಯಿತು. ವರದಿ ಬಂದು ಎರಡು ವರ್ಷಗಳು ಸರಿದು ಹೋಗಿವೆ. ತನಿಖಾ ಸಮಿತಿಯು ಮಧ್ಯಂತರ ವರದಿಯನ್ನು ನೀಡಿದೆ - ಈ ಸಮಿತಿಯು ಮಾಡಿದ ಅತ್ಯುತ್ತಮ ಕೆಲಸಕ್ಕಾಗಿ ನಾನು ಬಹಿರಂಗವಾಗಿ ನನ್ನ ಕೃತಜ್ಞತೆಗಳನ್ನು ಸೂಚಿಸಲು ಬಯಸುತ್ತಿದ್ದೇನೆ-ಸಮಿತಿಯು ದಾಖಲೆ ಸಮಯದಲ್ಲಿ ತನ್ನ ವರದಿಯನ್ನು ಸಲ್ಲಿಸಿರುವುದಕ್ಕಾಗಿ ನಾನು ಈ ಸಮಿತಿಯ ಸದಸ್ಯರನ್ನು ಅಭಿನಂದಿಸುತ್ತೇನೆ. ಮಧ್ಯಂತರ ವರದಿ 1950ರ ಸೆಪ್ಟೆಂಬರ್ ತಿಂಗಳಲ್ಲಿ ನಮ್ಮ ಕೈ ಸೇರಿತು. ಮಧ್ಯಂತರ ವರದಿಯನ್ನು ಸಲ್ಲಿಸಿದ ಎರಡು ತಿಂಗಳುಗಳ ಒಳಗಾಗಿ ಅದು ಸೂಚಿಸಿದ ಎಲ್ಲ ಶಿಫಾರಸ್ಸುಗಳನ್ನು ನನ್ನ ಸಲಹೆಯ ಮೇರೆಗೆ ಸಚಿವ ಸಂಪುಟ ಸಭೆಯ ಮುಂದಿಟ್ಟು ಪರಿಶೀಲಿಸಲಾಯಿತು. ಈ ಎಲ್ಲಾ ಶಿಫಾರಸುಗಳನ್ನು ಅನುಷ್ಠಾನಗೊಳಿಸಲಾಗಿದ್ದು, ಅದಕ್ಕೆ ಅನುಗುಣವಾಗಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗಿದೆ. ಸಮಿತಿಯ ಪೂರ್ಣ ವರದಿಯು 1951ರ ಏಪ್ರಿಲ್ ತಿಂಗಳಲ್ಲಿ ಹಸ್ತಪ್ರತಿ ರೂಪದಲ್ಲಿ ನನ್ನ ಕೈ ಸೇರಿತು. ಮುದ್ರಿತ ಪ್ರತಿಗಳು 1951ರ ಜೂನ್ ತಿಂಗಳಲ್ಲಿ ಲಭ್ಯವಾದವು ಮತ್ತು ಅವುಗಳನ್ನು ಸಂಬಂಧಪಟ್ಟ ಸಚಿವರು, ಸ್ಥಳೀಯ ಆಡಳಿತ ವರ್ಗ ಹಾಗೂ ಸಂಬಂಧಪಟ್ಟ ಇತರ ಎಲ್ಲರಿಗೂ ರವಾನಿಸಲಾಯಿತು. ಸಂಬಂಧಪಟ್ಟವರು ಎರಡು ತಿಂಗಳುಗಳ ಕಾಲ ಅದರ ಪರಿಶೀಲನೆ ನಡೆಸಿದ್ದರು. 1951ರ ಆಗಸ್ಟ್ ತಿಂಗಳಲ್ಲಿ ನನ್ನ ಖಾತೆಯಲ್ಲಿ ಸಭೆಗಳು ಜರುಗಿದವು. ಈ ಸಂದರ್ಭದಲ್ಲಿ ಕೆಲವು ನಿರ್ದಿಷ್ಟ ತೀರ್ಮಾನಗಳಿಗೆ ಬರಲಾಯಿತು. ಅನಂತರ ಅವುಗಳನ್ನು ಮುಖ್ಯ ಆಯುಕ್ತರ ಶಿಫಾರಸು ಮತ್ತು ಪ್ರಸ್ತಾವಗಳಿಗಾಗಿ ಅವರ ಬಳಿಗೇ ಕಳುಹಿಸಿಕೊಡಲಾಯಿತು. ಅವುಗಳಲ್ಲಿ ಕೆಲವು ನಿರ್ಣಯಗಳನ್ನು ಅಧಿಕಾರಿಗಳ ಮಟ್ಟದ, ಇನ್ನೂ ಕೆಲವು ನಿರ್ಣಯಗಳನ್ನು ಶಾಸಕಾಂಗದ ನೆಲೆಯಲ್ಲಿ ಕಾರ್ಯರೂಪಕ್ಕೆ ತರಬೇಕಾಗಿತ್ತು. ಈ ಶಿಫಾರಸುಗಳಲ್ಲಿ ಹೆಚ್ಚಿನವು ಹಣಕಾಸಿಗೆ ಸಂಬಂಧಪಟ್ಟವು ಅಥವಾ ಶಾಸಕಾಂಗದ ತೀರ್ಮಾನಕ್ಕೆ

---

* ದೆಹಲಿ ಅಭಿವೃದ್ಧಿ ಮಂಡಳಿ ತನಿಖಾ ಸಮಿತಿಯು ಮಾಡಿದ ಶಿಫಾರಸುಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ 1952ರ ಜುಲೈ 29ರಂದು ಚುಕ್ಕೆ ಗುರುತಿನ (ಸಂಖ್ಯೆ: 70) ಪ್ರಶ್ನೆಗೆ ಸಂಬಂಧಿಸಿದಂತೆ ಶ್ರೀ ಕೆ.ಬಿ.ಲಾಲ್ ಮತ್ತಿತರರು ಎತ್ತಿದ ಪ್ರಶ್ನೆಗಳಿಗೆ ಉತ್ತರ ನೀಡುತ್ತಾ (ರಾಜ್ಯಸಭೆ ಚರ್ಚೆ, ಆಗಸ್ಟ್ 6, 1952, ಸಿಸಿ 3190-97).

ಸಂಬಂಧಪಟ್ಟವುಗಳಾಗಿದ್ದವು. ಕಾರ್ಯಾಂಗದ ವ್ಯಾಪ್ತಿಯ ನಿರ್ಣಯಗಳು ಕಾಲ ಕಾಲಕ್ಕೆ ಕಾರ್ಯರೂಪಕ್ಕೆ ಬರುವಂತಹವು. ಉಳಿದವು - ಹಣಕಾಸಿಗೆ ಸಂಬಂಧಿಸಿದವು. ಅವು ಮುಖ್ಯ ಆಯುಕ್ತರು ಕಾರ್ಯರೂಪಕ್ಕೆ ತರುವಂತಹವು. ಇದರಿಂದಾಗಿ ದೆಹಲಿ ರಾಜ್ಯದ ಒಟ್ಟಾರೆ ಚಿತ್ರವೇ ಬದಲಾಗಿತ್ತು. ದೆಹಲಿ ಆಡಳಿತವು ಈ ವರ್ಷದ ಏಪ್ರಿಲ್ ತಿಂಗಳಲ್ಲಿ ಅಸ್ತಿತ್ವಕ್ಕೆ ಬಂದಿತು. ಹಾಗಾಗಿ ಅದು ಈ ವರದಿಯನ್ನು ಪರಿಶೀಲಿಸುವವರೆಗೆ ಕಾದು ನೋಡುವುದು ಒಳಿತೆಂದು ಮುಖ್ಯ ಆಯುಕ್ತರು ಯೋಚಿಸಿದರು. ಹಾಗಾಗಿ ಈ ವಿಷಯದಲ್ಲಿ ನಾನು ಕಾಲಹರಣ ಮಾಡಲಿಲ್ಲ ಎಂಬುದು ನಿಮಗೀಗ ಮನವರಿಕೆ ಆಗಿರಬಹುದೆಂದು ಭಾವಿಸುತ್ತೇನೆ. ಈ ವರದಿಯ ಶಿಫಾರಸುಗಳ ಪರಿಶೀಲನೆಯಲ್ಲಿ ತ್ವರಿತವಾಗಿ ಕ್ರಮ ಕೈಗೊಳ್ಳಲಾಗಿದೆ. ಈ ದಿಸೆಯಲ್ಲಿ ಬಹಳಷ್ಟು ಕೆಲಸ ಮಾಡಲಾಗಿದೆ ಎಂಬುದನ್ನು ಸದನದ ಮಾನ್ಯ ಉಪಾಧ್ಯಕ್ಷರು ಮತ್ತು ಸದಸ್ಯರು ಈ ವೇಳೆಗೆ ಮನವರಿಕೆ ಮಾಡಿಕೊಂಡಿದ್ದಾರೆಂದು ನಾನು ಭಾವಿಸಿದ್ದೇನೆ. ದೆಹಲಿ ರಾಜ್ಯ ಅಸ್ತಿತ್ವಕ್ಕೆ ಬಂದೊಡನೆಯೇ ನಾವು ಮುಖ್ಯ ಆಯುಕ್ತರಿಗೆ ಪತ್ರ ಬರೆದು ಈ ಶಿಫಾರಸುಗಳನ್ನು ದೆಹಲಿ ರಾಜ್ಯದ ಸಚಿವರ ಮುಂದೆ ಮಂಡಿಸುವಂತೆ ಕೇಳಿಕೊಂಡೆವು. ಈ ವಿಷಯದಲ್ಲಿ ಹಲವು ಬಾರಿ ಚರ್ಚೆ ನಡೆಸಲಾಗಿದ್ದು, ಅದೀಗ ದೆಹಲಿ ರಾಜ್ಯ ವಿಧಾನಸಭೆಯ ಮುಂದಿದೆ ಎಂದು ಮುಖ್ಯ ಆಯುಕ್ತರು ದೂರವಾಣಿ ಮೂಲಕ ನನಗೆ ತಿಳಿಸಿದ್ದಾರೆ. ನಾನೀಗ ಈ ವಿಷಯದಲ್ಲಿ ಇನ್ನು ವಿಳಂಬ ಮಾಡಬಾರದೆಂದು ಪತ್ರ ಬರೆದಿದ್ದು ಈಗ ಸರ್ಕಾರದ ಮುಂದಿರುವ ಪ್ರಸ್ತಾವಗಳನ್ನು ಕ್ಷಿಪ್ರವಾಗಿ ಕಾರ್ಯರೂಪಕ್ಕೆ ತರಬೇಕೆಂದು ಕೇಳಿಕೊಂಡಿದ್ದೇನೆ. ಇದರಿಂದ ಸಮಿತಿಯ ಶಿಫಾರಸುಗಳಿಗೆ ಅನುಗುಣವಾಗಿ ಕ್ರಮ ಕೈಗೊಳ್ಳಲು ಅನುಕೂಲವಾಗುವುದು. ಒಟ್ಟಿನಲ್ಲಿ ನನ್ನ ಖಾತೆಯು ಸಮಿತಿಯ ಶಿಫಾರಸುಗಳನ್ನು ತಾತ್ವಿಕವಾಗಿ ಅಂಗೀಕರಿಸಿದೆ ಮತ್ತು ಈ ವರದಿಯು ಒಂದು ಅತ್ಯುತ್ತಮ ಕೆಲಸವನ್ನು ಮಾಡಿದೆ ಎಂದು ನಾನು ನಂಬಿದ್ದೇನೆ. ಆದರೆ ಇದರಲ್ಲಿ ಹಣಕಾಸಿಗೆ ಸಂಬಂಧಿಸಿದ ವಿಷಯಗಳು ಒಳಗೊಂಡಿರುವಾಗ ಮತ್ತು ಶಾಸಾನಾತ್ಮಕ ಕ್ರಮಗಳು ಅಗತ್ಯವಿರುವಾಗ ಕ್ಷಿಪ್ರ ಕಾರ್ಯಾಚರಣೆ ಸಾಧ್ಯವಿಲ್ಲ.

ದೆಹಲಿ ಅಭಿವೃದ್ಧಿ ಮಂಡಳಿಯ ಕುರಿತು ಹೆಚ್ಚು ತಿಳಿಯದಿರುವ ಸದನದ ಸದಸ್ಯರಿಗಾಗಿ ಕೆಲವೊಂದು ವಿಷಯಗಳನ್ನು ನಾನಿಲ್ಲಿ ಹೇಳಬಯಸುತ್ತೇನೆ. ದೆಹಲಿ ಅಭಿವೃದ್ಧಿ ಮಂಡಳಿಯನ್ನು 1937ರಲ್ಲಿ ರಚಿಸಲಾಯಿತು. ಇಲ್ಲಿನ ಕೊಳಚೆ ಪ್ರದೇಶಗಳನ್ನು ನಿರ್ಮೂಲನೆಗೊಳಿಸುವುದು ಮತ್ತು ಈಗ ನಾವು ಗ್ರೇಟರ್ ದೆಹಲಿ ಎಂದು ಕರೆಯುವ ದೆಹಲಿ ನಗರಕ್ಕೆ ವಸತಿ ನಿರ್ಮಾಣ ಯೋಜನೆಯೊಂದನ್ನು ರೂಪಿಸುವುದು ಅದರ ಉದ್ದೇಶವಾಗಿತ್ತು. 1939ರಲ್ಲಿ ಎರಡನೇ ಮಹಾಯುದ್ಧ ಆರಂಭವಾಯಿತು. ಯುದ್ಧದ ಈ ವರ್ಷಗಳಲ್ಲಿ ಅಭಿವೃದ್ಧಿ ಮಂಡಳಿಗೆ ತನ್ನ ಕಾರ್ಯಭಾರ ಮುಂದುವರೆಸುವುದು ಅಸಾಧ್ಯವಾಗಿ ಪರಿಣಮಿಸಿತು. 1945ರಲ್ಲಿ ಅದು ಪುನಃ ಕೆಲಸ ಪ್ರಾರಂಭಿಸಿತು. ಆಗ ಅದಕ್ಕೆ ಸ್ವಲ್ಪ ಜಮೀನನ್ನು ನೀಡಲಾಯಿತು. ಈ ಸ್ಥಳದಲ್ಲಿ ಕಟ್ಟಡಗಳನ್ನು ಕಟ್ಟಿಸಲು ಮುಂದಾಗುವವರಿಗೆ ಆ ಜಾಗವನ್ನು ಅದು ಮಾರಾಟ ಮಾಡಬೇಕಾಯಿತು. ಆದರಿಂದ ಬಂದ ವರಮಾನ ಮತ್ತು ಅದಕ್ಕೆ ನೀಡಲಾಗಿದ್ದ ಸಾಲದ ಮೊತ್ತದಿಂದ ಅಭಿವೃದ್ಧಿ ಯೋಜನೆಗಳನ್ನು ಮುಂದುವರೆಸಲು ಅನುಕೂಲವಾಯಿತು. 1947ರಲ್ಲಿ ಸ್ವಾತಂತ್ರ್ಯ ಬಂದಿತು. ಅನಂತದಲ್ಲಿ ದೆಹಲಿ ನಗರಕ್ಕೆ ನಿರಾಶ್ರಿತರು ಮಹಾಪೂರದಂತೆ ಹರಿದು ಬಂದಿರುವುದು

ಪ್ರತಿಯೊಬ್ಬರಿಗೂ ಗೊತ್ತಿರುವ ಸಂಗತಿ. ಇದರಿಂದಾಗಿ ಎಲ್ಲ ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಂಡವು. ಇನ್ನು ದೆಹಲಿಯಲ್ಲಿನ ನಿರ್ಮಾಣ ಕಾಮಗಾರಿಗಳಿಗೆ, ಅನೇಕ ಪ್ರದೇಶಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ದೆಹಲಿ ಅಭಿವೃದ್ಧಿ ಮಂಡಳಿಯನ್ನೇ ಬೊಟ್ಟಿಟ್ಟು ತೋರಿಸುವುದು ಸರಿಯಲ್ಲ ಎಂದು ನಾನು ಈ ಸಂದರ್ಭದಲ್ಲಿ ಮತ್ತೊಮ್ಮೆ ಒತ್ತಿ ಹೇಳಲು ಬಯಸುತ್ತೇನೆ. ದೆಹಲಿ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಪಡಿಸುವ ಉದ್ದೇಶದಿಂದ ತನ್ನ ವಶಕ್ಕೆ ತೆಗೆದುಕೊಂಡ ಅತ್ಯುತ್ತಮ ದರ್ಜೆಯ ಜಮೀನನ್ನು ಮಾತ್ರ ತಾನು ಈಗಾಗಲೇ ಅಭಿವೃದ್ಧಿ ಪಡಿಸಿದ ಜಮೀನಿನಲ್ಲಿ ಮೂರು ಎಕರೆಯನ್ನು ಪುನರ್‌ವಸತಿ ಸಚಿವಾಲಯಕ್ಕೆ ವರ್ಗಾಯಿಸಿತು. ಈ ಜಮೀನಿನಲ್ಲಿ ಒಳಚರಂಡಿ ವ್ಯವಸ್ಥೆಯನ್ನೂ ಅದು ಮಾಡಿತ್ತು. ಈಗ ಭಾರತ ಸರ್ಕಾರವು ಈ ಜಮೀನಿನಲ್ಲಿ ಪುನರ್‌ವಸತಿ ಖಾತೆಯ ಮೂಲಕ ಅಥವಾ ದೆಹಲಿ ಅಭಿವೃದ್ಧಿ ಮಂಡಳಿಯ ಮೂಲಕ ಕಟ್ಟಡಗಳನ್ನು ನಿರ್ಮಿಸಿತು ಎಂಬುದು ಇಲ್ಲಿ ಮುಖ್ಯ ವಿಷಯವಲ್ಲ. ಸಹಜವಾಗಿಯೇ ದೆಹಲಿ ಅಭಿವೃದ್ಧಿ ಮಂಡಳಿ ತನ್ನ ಜಮೀನನ್ನು ವರ್ಗಾಯಿಸಿದಾಗ ಅದರ ಸ್ಥಿತಿ ಇನ್ನಷ್ಟು ಹದಗೆಟ್ಟಿತು. ಮೊದಲಿಗೆ ಅಂದರೆ 1939 ರಿಂದ 1945ರ ಅವಧಿಯಲ್ಲಿ ಮೊದಲನೇ ಮಹಾಯುದ್ಧ ಕಾರಣದಿಂದಾಗ ಅದರ ಕಾರ್ಯ ಸ್ಥಗತಿಗೊಂಡಿತು. ಭಾರತದ ವಿಭಜನೆಯಿಂದ ದೆಹಲಿಗೆ ನಿರಾಶ್ರೀತರ ಮಹಾಪೂರವೇ ಹರಿದು ಬಂದ ಕಾರಣದಿಂದಾಗಿ ಮತ್ತೆ ಅವರ ಕೆಲಸ ಕಾರ್ಯಗಳಲ್ಲಿ ತಡೆ ಉಂಟಾಯಿತು. ಏನೇ ಇದ್ದರೂ ದೆಹಲಿ ಅಭಿವೃದ್ಧಿ ಮಂಡಳಿಯು ತನ್ನ ಬಳಿ ಇದ್ದ ಪರಿಮಿತ ಸಂಪನ್ಮೂಲಗಳ ಮಧ್ಯೆಯೇ ನಗರದಲ್ಲಿ ವಸತಿ ನಿರ್ಮಾಣಕ್ಕೆ ಬಹಳಷ್ಟು ದೊಡ್ಡ ಕೊಡುಗೆ ನೀಡಿದೆ ಮತ್ತು ನಗರವನ್ನು ಅಭಿವೃದ್ಧಿಪಡಿಸಿದೆ ಎಂಬ ಮಾತನ್ನು ನಾನಿಲ್ಲಿ ಮತ್ತೊಮ್ಮೆ ಒತ್ತಿ ಹೇಳುತ್ತೇನೆ. ದೆಹಲಿ ನಗರದಲ್ಲಿ ಏನೆಲ್ಲಾ ಕಾಮಗಾರಿಗಳು ನಡೆದಿವೆ ಎಂಬ ವಿವರಗಳನ್ನು ಓದಿ ಹೇಳಲು ನನಗೀಗ ಸಮಯವಿಲ್ಲ. ಆದರೆ ಈ ಪ್ರಶ್ನೆ ಎತ್ತಿದ ಸನ್ಮಾನ್ಯ ಸದಸ್ಯರಿಗೆ ದೆಹಲಿಯಲ್ಲಿ ಅಭಿವೃದ್ಧಿ ಮಂಡಳಿ ಕೈಗೆತ್ತಿಕೊಂಡಿರುವ ಕೆಲಸಗಳೇನು ಮತ್ತು ಭವಿಷ್ಯದಲ್ಲಿ ಅದು ಯಾವ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಲಿದೆ ಎಂಬಿತ್ಯಾದಿ ವಿವರಗಳ ಯಾದಿಯನ್ನು ಒಪ್ಪಿಸಲು ನಾನು ಸಿದ್ಧಳಿದ್ದೇನೆ. ದೆಹಲಿ ಅಭಿವದ್ಧಿ ಮಂಡಳಿಯು 1952-53 ಹಾಗೂ 1953-54 ಸಾಲಿನ ಕಾರ್ಯಕ್ರಮವನ್ನು ರೂಪಿಸಿದ್ದು, ಒಂದು ಲಕ್ಷ ಜನಸಂಖ್ಯೆಗೆ ವಸತಿ ಸೌಕರ್ಯ ಕಲ್ಪಿಸುವಂತೆ ಅದನ್ನು ವಿನ್ಯಾಸಗೊಳಿಸಲಾಗಿದೆ. ಜನ ಸಾಮಾನ್ಯರಿಗಾಗಿ ಮನೆ ನಿರ್ಮಾಣ ಯೋಜನೆ ಇದಾಗಿದೆ. ಇದರಿಂದ ಕೆಲವರಿಗೆ ಸ್ವಲ್ಪಮಟ್ಟಿನ ಅಸಮಧಾನ ಆಗಿರುವುದು ನಿಜ. ಆದರೆ ದೊಡ್ಡ ಸಂಖ್ಯೆ ನಿರಾಶ್ರೀತರು ಇಲ್ಲಿ ಜಮಾಯಿಸಿದ್ದು ಮತ್ತು ಸಿಕ್ಕ ಸಿಕ್ಕಲ್ಲಿ ಅನಧಿಕೃತ ಮನೆಗಳನ್ನು ಕಟ್ಟಿಕೊಂಡಿದ್ದು, ಮಂಡಳಿಗೆ ಭಾರೀ ದೊಡ್ಡ ಸಮಸ್ಯೆಯಾಗಿ ಪರಿಣಮಿಸಿತು. ಮಾನ್ಯ ಸದಸ್ಯರಾದ ಶ್ರೀ ಕೆ.ಬಿ.ಲಾಲ್ ಈ ಪ್ರಶ್ನೆಯಯನ್ನು ಎತ್ತಿರುವುದರಿಂದ ಮತ್ತು ಈ ಸಂಬಂಧದಲ್ಲಿ ಕೆಲವು ಆರೋಪಗಳನ್ನು ಮಾಡಿರುವುದರಿಂದ ಸತ್ಯಾಂಶವನ್ನು ಸದನದ ಗಮನಕ್ಕೆ ತರುವುದು ಕರ್ತವ್ಯವೆಂದು ಭಾವಿಸಿ ನಾನಿದನ್ನು ಹೇಳುತ್ತಿದ್ದೇನೆ. ದೆಹಲಿ ಅಭಿವೃದ್ಧಿ ಮಂಡಳಿಯು ತಮಗೆ ಕಿರುಕುಳ ನೀಡುತ್ತಿದೆ ಎಂದು ಮಾನ್ಯ ಸದಸ್ಯರು ಆರೋಪಿಸದೆ ಹೋಗಿದ್ದರೆ ನಾನು ಈ ವಿಷಯವನ್ನು ಪ್ರಸ್ತಾಪಿಸುತ್ತಲಿರಲಿಲ್ಲ. ಮಂಡಳಿಗೆ ಸೇರಿದ ಜಮೀನಿನಲ್ಲಿ ಮಾನ್ಯ ಸದಸ್ಯರೇ ಅನಧಿಕೃತ ಕಟ್ಟಡ ನಿರ್ಮಿಸಿದ್ದಾರೆ ಎಂಬ ಅಂಶವನ್ನಂತೂ ನಾನು ಸದನದ ಗಮನಕ್ಕೆ ತರಲೇಬೇಕಾಗಿದೆ. ಅದೂ ಅಲ್ಲದೆ ಸರ್ಕಾರಿ ಜಮೀನಿನಲ್ಲಿ ಅನಧಿಕೃತ ಕಟ್ಟಡಗಳ ನಿರ್ಮಾಣಕ್ಕೆ ಮುಂದಾಗುವವರ

ವಿರುದ್ಧ ಏನಾದರೂ ಕ್ರಮ ಕೈಗೊಳ್ಳಲೇಬೇಕು. ಸರ್ಕಾರದ ಯಾವುದೇ ಸಂಸ್ಥೆ ಯಾವುದೇ ಕಾರಣವಿಲ್ಲದೆ ಜನರಿಗೆ ಕಿರುಕುಳ ನೀಡುತ್ತಿದೆ ಎಂದು ಹೇಳುವುದು ಸರಿಯಲ್ಲ ಎಂಬ ಅಂಶವನ್ನೂ ನಾನು ಇದೇ ಸಂದರ್ಭದಲ್ಲಿ ಸದನದ ಗಮನಕ್ಕೆ ತರಲು ಇಚ್ಛಿಸುತ್ತೇನೆ. ನಾನು ಹೇಳಿರುವುದು ಸತ್ಯವಲ್ಲವೆಂದಾದಲ್ಲಿ ಅದನ್ನು ರುಜುವಾತು ಪಡಿಸಲು ನಾನು ಮಾನ್ಯ ಸದಸ್ಯರಿಗೆ ಸವಾಲು ಒಡ್ಡುತ್ತೇನೆ. ಅವರಿಗೆ ಯಾರು ಹೇಗೆ ಕಿರುಕುಳ ನೀಡಿದರು ಎಂಬುದನ್ನು ನಾನು ತಿಳಿಯ ಬಯಸುತ್ತೇನೆ. ಆದರೆ ಇದಕ್ಕೆ ವಿರುದ್ಧವಾಗಿ ನಾನು ನಿದರ್ಶನದ ಮೇಲೆ ನಿದರ್ಶನವನ್ನು ಕೊಡಬಲ್ಲೆ. ದೆಹಲಿ ಅಭಿವೃದ್ಧಿ ಮಂಡಳಿಯು ಜನರನ್ನು ಸಂತೃಪ್ತಿ ಪಡಿಸಲು ತನ್ನ ಮಿತಿಯನ್ನು ಮೀರಿ ಸಹಾಯ ಮಾಡಿದ, ನೂರಾರು, ಸಾವಿರಾರು ದೃಷ್ಟಾಂತಗಳನ್ನು ನಾನು ಕೊಡಬಲ್ಲೆ - ಇಲ್ಲಿ 'ಸಂತೃಪ್ತಿ ಪಡಿಸಲು' ಎಂಬ ಶಬ್ದವನ್ನು ಬಳಸಿದರೆ ಸರಿಯಾದೀತೋ ಇಲ್ಲವೋ ಎಂಬ ಅನುಮಾನ ನನಗೆ ಇದ್ದೇ ಇದೆ. ಬೇರಲ್ಲೂ ಸ್ಥಳ ಸಿಗದೆ ಇಲ್ಲಿಗೆ ಬಂದು ಅನಧಿಕೃತ ವಸತಿಗಳನ್ನು ನಿರ್ಮಿಸಿವರ ಸಮಸ್ಯೆಗಳು ಮತ್ತು ಕಠಿಣತೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಾನು ಈ ಮಾತನ್ನು ಹೇಳುತ್ತಿದ್ದೇನೆ. ನಾನು ಯಾವಾಗಲೂ ಅಂಥವರಿಗೆ ವಸತಿ ಸೌಕರ್ಯ ಕಲ್ಪಿಸಲು ಪ್ರಯತ್ನಿಸಿದ್ದೇನೆ. ಪರ್ಯಾಯ ವಸತಿ ವ್ಯವಸ್ಥೆ ಕಲ್ಪಿಸುವ ತನಕವೂ ಅವರನ್ನು ಎಂದೂ ಸ್ಥಳಾಂತರಿಸಿದ್ದಿಲ್ಲ. ಯಾರಿಂದಲೂ, ಯಾರ ಮೇಲೂ ಕಿರುಕುಳ ನಡೆದಿಲ್ಲ. ಆದರಲ್ಲೂ ಅಭಿವೃದ್ಧಿ ಮಂಡಳಿಯಿಂದ ಯಾರಿಗೂ ಕಿರುಕುಳವಾಗಿಲ್ಲ. ಬದಲಾಗಿ ಸಮಾಜ ವಿರೋಧಿ ಶಕ್ತಿಗಳಿಂದಾಗಿ ಅಭಿವೃದ್ಧಿ ಮಂಡಳಿಯ ಕೆಲಸ ಕಾರ್ಯಗಳಿಗೆ ತಡೆ ಉಂಟಾಗಿದೆ. ಈ ಸಮಾಜ ವಿರೋಧಿಗಳು ಯಾವುದೇ ಹಕ್ಕಿಲ್ಲದೆ ಅನಧಿಕೃತ ಕಟ್ಟಡಗಳನ್ನು ನಿರ್ಮಿಸಿ ಮಂಡಳಿಗೇ ಕಿರುಕುಳ ನೀಡಿವೆ. ಹಾಗಾಗಿ ಅತ್ಯಂತ ಕಠಿಣ ಕಾರ್ಯಭಾರವನ್ನು ನಿರ್ವಹಿಸಬೇಕಾಗಿರುವ ದೆಹಲಿ ಅಭಿವೃದ್ಧಿ ಮಂಡಳಿಯ ಬಗ್ಗೆ ಜನರು ಸಹಾನುಭೂತಿ ತಳೆಯಬೇಕಾಗಿದೆ. ನಾನು ಈಗಾಗಲೇ ವಿವರಿಸಿರುವ ಕಾರಣಗಳಿಂದಾಗಿ ಅಭಿವೃದ್ಧಿ ಮಂಡಳಿಯ ಕಾರ್ಯ ನಿರೀಕ್ಷಿಸಿದಂತೆ ಕ್ರಮಗತವಾಗಿ ನಡೆದಿಲ್ಲ ಎಂಬುದನ್ನೂ ನಾನು ಒಪ್ಪಿಕೊಳ್ಳುತ್ತೇನೆ.

ಈಗ ಪರಿಹಾರದ ಪ್ರಶ್ನೆಯನ್ನು ತೆಗೆದುಕೊಳ್ಳೋಣ. ಈಗ ಇರುವ ಕಾಯ್ದೆಯಂತೆ ಪರಿಹಾರವನ್ನು ಜಮೀನಿನ ಮಾರುಕಟ್ಟೆ ಬೆಲೆಗೆ ಅನುಗುಣವಾಗಿ ನಿಗದಿ ಪಡಿಸಲಾಗುತ್ತದೆ. ದೆಹಲಿ ಅಭಿವೃದ್ಧಿ ಮಂಡಳಿಯ ನಿವೇಶನ ಖರೀದಿಸಿದವರ ವಿರುದ್ಧ ನಾನು ಮಾಡಲಿರುವ ಇನ್ನೊಂದು ತಕರಾರೆಂದರೆ ಈ ನಿವೇಶನಗಳನ್ನು ಖರೀದಿಸಿದ ಅನೇಕರು ಅಲ್ಲಿ ಕಟ್ಟಡಗಳನ್ನು ಕಟ್ಟದಿರುವುದು. ಅವರಲ್ಲಿ ಅನೇಕರು ಸಟ್ಟಾಬಾಜಿ ವ್ಯವಹಾರದವರು; ಜಮೀನಿನ ಬೆಲೆ ಹೆಚ್ಚುತ್ತಾ ಹೋದಂತೆ ಹೆಚ್ಚಿನ ಬೆಲೆಗೆ ನಿವೇಶನಗಳನ್ನು ಮಾರಾಟ ಮಾಡುವುದು ಅವರ ದಂಧೆ. ಅಂಥಹವರನ್ನು ನಿವೇಶನಗಳಲ್ಲಿ ಏಕೆ ಯಾವುದೇ ನಿರ್ಮಾಣ ಕಾರ್ಯ ಕೈಗೊಂಡಿಲ್ಲ ಎಂದು ಪ್ರಶ್ನಿಸಿದರೆ 'ನಮ್ಮ ಬಳಿ ಕಟ್ಟಡ ಸಾಮಗ್ರಿಗಳಿಲ್ಲ' ಎಂಬ ನೆಪ ಅವರ ಬಳಿ ಸಿದ್ಧವಾಗಿರುತ್ತದೆ. ಕಟ್ಟಡದ ಸಾಮಗ್ರಿಗಳು ಧಾರಾಳವಾಗಿದ್ದಾಗಲೂ ಸಹ ಅನೇಕರು ಅದರ ಪ್ರಯೋಜನ ಪಡೆದುಕೊಂಡಿಲ್ಲ. ಅಂತಹ ಸನ್ನಿವೇಶದಲ್ಲಿ ಅಭಿವೃದ್ಧಿ ಮಂಡಳಿಯ ಕಾರ್ಯನಿರ್ವಹಣೆಗೆ ಅಡಚಣೆ ಉಂಟಾಗಿ ತಾನು ಉದ್ದೇಶಿಸಿದ್ದ ರೀತಿಯಲ್ಲಿ ಈ ಪ್ರದೇಶವನ್ನು ಅಭಿವೃದ್ಧಿ ಪಡಿಸುವುದು ಅಸಾಧ್ಯವಾಯಿತು. ಅಭಿವೃದ್ಧಿ ಮಂಡಳಿಯ ಮುಂದಿದ್ದ ಸಮಸ್ಯೆಗಳಲ್ಲಿ ಕೆಲವೊಂದು ಯಾರ

ನಿಯಂತ್ರಣವನ್ನು ನೀಗಿದಂತವು. ಅದೂ ಅಲ್ಲದೆ ಪರಿಹಾರ ನೀಡುವುದಕ್ಕಿರುವ ಪ್ರಶ್ನೆಗೆ ಅಭಿವೃದ್ಧಿ ಮಂಡಳಿಗೂ ಯಾವುದೇ ಸಂಬಂಧವಿಲ್ಲ ಎಂಬುದನ್ನು ಮಾನ್ಯ ಸದಸ್ಯರ ಗಮನಕ್ಕೆ ತರಲು ಬಯಸುತ್ತೇನೆ. ಈ ಕುರಿತು ಪ್ರಶ್ನೆಗಳು ಈಗಿರುವ ಕಾಯ್ದೆಯನ್ನೇ ಅವಲಂಬಿಸಿದೆ. ಆ ಸಂಬಂಧ ಕಾನೂನು ಸಂಬಂಧಿ ಕ್ರಮಗಳಿಗೆ ಭೂ ಸ್ವಾಧೀನತೆ ಅಧಿಕಾರಿಗಳೇ ಕಾರಣರಾಗಿದ್ದಾರೆ ಮತ್ತು ಅಭಿವೃದ್ಧಿ ಮಂಡಳಿಯು ಇಲ್ಲಿ ಈ ಕಾನೂನು ಕ್ರಮಗಳಲ್ಲಿ ಒಂದು ಅಂಗವಷ್ಟೇ ಆಗಿದ್ದು ಯಾವುದೇ ಪರಿಹಾರವನ್ನು ನಿರ್ಧರಿಸುವ ಅಧಿಕಾರ ಅದಕ್ಕಿಲ್ಲ.

ಇದೇ ವೇಳೆಯಲ್ಲಿ ಅತಿಕ್ರಮಣ ಪ್ರಕರಣಗಳ ಸಂಖ್ಯೆಯನ್ನು ನಾನು ತಮ್ಮ ಮುಂದಿಡಲು ಬಯಸುತ್ತಿದ್ದೇನೆ. 1949ರ ಅಂತ್ಯದವರೆಗೆ ಈ ಪ್ರಕರಣಗಳ ಸಂಖ್ಯೆ 6444; 1950ರ ಕೊನೆಯವರೆಗೆ 11,030, 1951ರವರೆಗೆ 13,845 ಮತ್ತು 1952ರ ಮಾರ್ಚ್‌ವರೆಗೆ 14,000 ಹೀಗೆ ಅತಿಕ್ರಮಣಗಳ ಸಂಖ್ಯೆ ಏರುತ್ತಲೇ ಹೋಗಿರುವುದನ್ನು ನೀವು ಗಮನಿಸಬಹುದು. ಇಂತಹ ಅತಿಕ್ರಮಣಗಳು ನಡೆಸದಂತೆ ಪದೇ ಪದೇ ವಿನಂತಿಸಿಕೊಂಡಿದ್ದರೂ ಅಂತಹ ಪ್ರಕರಣಗಳ ಸಂಖ್ಯೆ ತಗ್ಗಿಲ್ಲ. ಎಲ್ಲ ಸಾರ್ವಜನಿಕ ಜಮೀನುಗಳಲ್ಲೂ ಅಂದರೆ ಸರ್ಕಾರಿ ಜಮೀನಿನಲ್ಲಿ ಅಂತಹ ಅತಿಕ್ರಮಣ ಎಗ್ಗಿಲ್ಲದೆ ಸಾಗಿದೆ. ಈಗಾಗಲೇ ನಾನು ಹೇಳಿರುವಂತೆ ಎಲ್ಲ ರೀತಿಯ ರಿಯಾಯ್ತಿಗಳನ್ನು ನೀಡಲಾಗಿದೆ. ಬೇರೆ ಬೇರೆ ಸ್ಥಳಗಳಲ್ಲಿ ಸುಮಾರು ನಾಲ್ಕು ಸಾವಿರ ನಿವೇಶನಗಳನ್ನು ಮಾರಾಟ ಮಾಡಲಾಗಿದೆ. ಅವುಗಳಲ್ಲಿ ಅರ್ಧದಷ್ಟು ಖಾಲಿಯಾಗಿಯೇ ಬಿದ್ದಿವೆ. ಈ ನಿವೇಶನಗಳಲ್ಲಿ ಎಲ್ಲೂ ನಿರ್ಮಾಣ ಕಾಮಗಾರಿ ನಡೆದಿಲ್ಲ. ಅದಕ್ಕೆ ಅಭಿವೃದ್ಧಿ ಮಂಡಳಿಯನ್ನೇ ಹೊಣೆಯಾಗಿ ಮಾಡುವುದು ಸರಿಯಲ್ಲ.

ದೆಹಲಿ ಆಡಳಿತವು ಈ ಶಿಫಾರಸುಗಳನ್ನು ಪರಿಗಣಿಸಿದ ತಕ್ಷಣದಲ್ಲೇ ಭಾರತ ಸರ್ಕಾರವು ತನ್ನ ಯೋಜನೆಗಳನ್ನು ಒಂದೇ ಒಂದು ನಿಮಿಷ ಕೂಡಾ ತಡ ಮಾಡದೆ ಪ್ರಾರಂಭಿಸಲಿದೆ - ಅದು ಎಲ್ಲ ಶಿಫಾರಸ್ಸುಗಳನ್ನು ಅಂಗೀಕರಿಸಿದೆ ಎಂದು ನಾನು ಭಾವಿಸಿದ್ದೇನೆ. ದೆಹಲಿ ನಗರದಲ್ಲಿನ ವಸತಿ ಸಮಸ್ಯೆಯನ್ನೂ ಬಗೆಹರಿಸುವಲ್ಲಿ ನಾನು ಮಿಕ್ಕೆಲ್ಲವರಿಗಿಂತಲೂ ಹೆಚ್ಚು ಆಸಕ್ತನಾಗಿದ್ದೇನೆ ಎಂಬ ಅಂಶವನ್ನೂ ಜ್ಞಾಪಿಸ ಬಯಸುತ್ತೇನೆ. ಇದರೊಂದಿಗೆ ಕೊಳಚೆ ನಿರ್ಮೂಲನೆ ಸಮಸ್ಯೆ ಬಗ್ಗೆಯೂ ಗಮನ ಹರಿಸಬೇಕಾಗಿದೆ. ಅಲ್ಲಿನ ಪರಿಸ್ಥಿತಿಯನ್ನು ಯೋಚಿಸಿದರೆ ಅದು ನಮಗೆ ತೀವ್ರ ಕಳವಳ ಉಂಟು ಮಾಡುತ್ತದೆ. ಈ ಕೊಳಚೆ ಪ್ರದೇಶಗಳದ್ದೇ ಒಂದು ವಿಭಿನ್ನ ಸಮಸ್ಯೆಯಾಗಿದೆ. ಕೊಳಚೆ ಪ್ರದೇಶಗಳನ್ನು ನಿರ್ಮೂಲನೆಗೊಳಿಸಲು ಸಾಕಷ್ಟು ಪ್ರಮಾಣದಲ್ಲಿ ಸಹಾಯ ಧನ ಒದಗಿಸದ ಹೊರತು ಈ ಪ್ರದೇಶಗಳಲ್ಲಿ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಳ್ಳುವುದು ಸಾಧ್ಯವಿಲ್ಲ. ಆದರೂ ಅಲ್ಲಿನ ಪರಿಸ್ಥಿತಿಯನ್ನು ಸುಧಾರಿಸಲು ನಾನು ಕಾತರಳಾಗಿದ್ದೇನೆ. ಆದರೆ ಅಲ್ಲಿ ಅನಧಿಕೃತ ಎಂದು ನಾನು ಏಕೆ ಹೇಳುತ್ತಿದ್ದೇನೆಂದರೆ ಅಂತಹ ಕಟ್ಟಡಗಳು ಅಲ್ಲಿ ಬರಬಾರದಿತ್ತು ಎಂಬ ಕಾರಣಕ್ಕಾಗಿ. ಅದೂ ಅಲ್ಲದೆ ಅವು ನಗರಸಭೆಯ ಕಟ್ಟಡ ನಿರ್ಮಾಣ ನಿಬಂಧನೆಗಳನ್ನು ಉಲ್ಲಂಘಿಸಿರುವ ಕಾರಣದಿಂದ. ಮುಖ್ಯವಾಗಿ ಆರೋಗ್ಯ ಮತ್ತು ನೈರ್ಮಲ್ಯ ಪಾಲನೆಯ ವಿಷಯದಲ್ಲಿ ಅವು ಯಾವುದೇ ಕಟ್ಟುಪಾಡುಗಳಿಗೂ ಒಳಗಾಗದೆ ಮನಬಂದಂತೆ ನಿರ್ಮಾಣ ಕಾರ್ಯ ಕೈಗೆತ್ತಿಕೊಂಡಿವೆ. ಇವೆಲ್ಲವೂ ಈ ನಿಟ್ಟಿನಲ್ಲಿನ ಪ್ರತಿಯೊಬ್ಬರ ಕಾರ್ಯ ನಿರ್ವಹಣೆಯನ್ನು ಕಠಿಣಗೊಳಿಸಿತು. ಪುನರ್ ವಸತಿ ಖಾತೆಯು ಅನಧಿಕೃತ

ನಿರ್ಮಾಣಗಳಿಂದಾಗಿ ಇದೇ ರೀತಿ ತೊಂದರೆಗಳನ್ನು ಎದುರಿಸುತ್ತಿದೆ. ನೀವು ಯಾವುದೇ ಕಟ್ಟಡವನ್ನು 'ಕೆಡವಿ ಹಾಕಿರಿ' ಎಂದು ಹೇಳಿದಾಕ್ಷಣ ಜನರು ನಿಯೋಗಗಳನ್ನು ತೆಗೆದುಕೊಂಡು ಬರತೊಡಗುತ್ತಾರೆ. ಪ್ರತಿಭಟನೆ, ಮತ ಪ್ರದರ್ಶನ ಇತ್ಯಾದಿಗಳನ್ನು ಆರಂಭಿಸುತ್ತಾರೆ.

* * * * * *

ಸಾಕಷ್ಟು ಹಣಕಾಸು ಒದಗಿಸಿದಾಕ್ಷಣ ಮತ್ತು ಅಭಿವೃದ್ಧಿ ಮಂಡಳಿಯ ಶಿಫಾರಸುಗಳನ್ನು ದೆಹಲಿ ಆಡಳಿತವು ಅಂಗೀಕರಿಸಿದಾಕ್ಷಣ ಎಲ್ಲ ಯೋಜನೆಗಳು ವಿಳಂಬವಿಲ್ಲದೆ ಕಾರ್ಯಗತವಾಗುವುದು ಎಂದು ನಾನು ಭರವಸೆ ನೀಡುತ್ತೇನೆ. ಈ ಯೋಜನೆಗಳಿಗೆ ಎಷ್ಟೊಂದು ಹಣಕಾಸು ಬೇಕಾಗುತ್ತದೆ. ಈ ಹಣಕಾಸನ್ನು ಅಭಿವೃದ್ಧಿ ಮಂಡಳಿಯ ಕೈಗೆ ಕೊಟ್ಟಲ್ಲಿ ಮಾತ್ರವೇ ಈ ಯೋಜನೆಗಳನ್ನು ಕಾರ್ಯರೂಪಕ್ಕೆ ತರಬಹುದಾಗಿದೆ.

* * *

## 31. ದೆಹಲಿ ಮಹಾನಗರ ಪಾಲಿಕೆ ವಿಧೇಯಕ - 1957 *

ಈ ವಿಧೇಯಕವನ್ನು ಬೆಂಬಲಿಸಿ ಮಾತನಾಡಲು ಸಮಯ ನೀಡಿರುವುದಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಜಂಟಿ ಸಮಿತಿಯು ಪರಿಶೀಲನೆಗೆ ಒಳಪಟ್ಟು ಸೂಕ್ತ ತಿದ್ದುಪಡಿಗಳೊಂದಿಗೆ ಮಂಡಿಸಿರುವ ಈ ವಿಧೇಯಕವು ಬಹುಮಟ್ಟಿಗೆ ಲೋಕಸಭೆಯಲ್ಲಿ ಮಂಡಿಸಲ್ಪಟ್ಟ ವಿಧೇಯಕದ ಪರಿಷ್ಕೃತ ರೂಪವಾಗಿದೆ ಎಂದು ನಾನು ಭಾವಿಸುತ್ತೇನೆ. ದೆಹಲಿ ಮಹಾನಗರ ಪಾಲಿಕೆಯ ರಚನೆಯಲ್ಲಿ ನಾನು ಅತ್ಯಂತ ನಿಕಟವಾಗಿ ಕಾರ್ಯ ನಿರ್ವಹಿಸಿದ್ದೇನೆ. ನಾನು ಈ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳಲು ಇಚ್ಛಿಸುತ್ತೇನೆ. ದೇಶಕ್ಕೆ ಸ್ವಾತಂತ್ರ್ಯ ದೊರಕುವ ಮೊದಲೇ ದೆಹಲಿಯ ಆಡಳಿತವನ್ನು ಸುಧಾರಿಸುವ ವಿಚಾರ ಭಾರತ ಸರ್ಕಾರದ ಮುಂದಿತ್ತು. ಈ ಸಂಬಂಧದಲ್ಲಿ ಅತ್ಯಂತ ಸಮಗ್ರ ಸ್ವರೂಪದ ವರದಿಯೊಂದನ್ನು ಸಿದ್ಧಪಡಿಸಿ ಅದನ್ನು ಸ್ವಾತಂತ್ರ್ಯಾ ನಂತರದಲ್ಲಿ ಆರೋಗ್ಯ ಖಾತೆಯು ಅಮೂಲಾಗ್ರವಾಗಿ ಅಭ್ಯಸಿಸಿತು. ಆಗಲೇ ಅಸ್ತಿತ್ವದಲ್ಲಿದ್ದ ಅಭಿವೃದ್ಧಿ ಮಂಡಳಿಯು ನಿರೀಕ್ಷಿತ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿರಲಿಲ್ಲ. ಆದರ ಕೆಲವು ಪರಿಮಿತಿಗಳಿಂದಾಗಿ ಅದಕ್ಕೆ ನಿರೀಕ್ಷಿಸಿದ ಮಟ್ಟದಲ್ಲಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ದೆಹಲಿ ಅಭಿವೃದ್ಧಿ ಮಂಡಳಿಯು ಕಾರ್ಯ ನಿರ್ವಹಣೆಯನ್ನು ಪರಿಶೀಲಿಸುವ ಸಲುವಾಗಿ ಬಿರ್ಲಾ ಸಮಿತಿ ಎಂಬ ಹೆಸರಿನ ಸಮಿತಿಯೊಂದನ್ನು ನೇಮಿಸಲಾಯಿತು. ಅದು ಅತ್ಯುತ್ತಮ ವರದಿಯೊಂದನ್ನು ನೀಡಿತು ಮತ್ತು ಅನೇಕ ಸಲಹೆ ಸೂಚನೆಗಳನ್ನು ನೀಡಿತು. ಈ ಮಧ್ಯೆ ದೆಹಲಿ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಈ ಹಂತದಲ್ಲಿ ಮಹಾನಗರ ಪಾಲಿಕೆಯನ್ನು ವಸ್ತುತಃ ವಿಸರ್ಜಿಸಲಾಯಿತು. ನಾವು ಈ ವಿಧೇಯಕದಲ್ಲಿ ಉದ್ದೇಶಿಸಿರುವ ನಗರಪಾಲಿಕೆಯೊಂದು ಪ್ರಾರಂಭದಿಂದಲೇ ಇದ್ದಿದ್ದರೆ - ಅಂದರೆ ನಮಗೆ ಸ್ವಾತಂತ್ರ್ಯ ದೊರೆತಾಗಿನಿಂದಲೇ - ಬಹುಶಃ ದೆಹಲಿಯಲ್ಲಿ ಇಷ್ಟೊಂದು ಸಂಖ್ಯೆಯಲ್ಲಿ ಕೊಳಗೇರಿಗಳು ತಲೆ ಎತ್ತುತ್ತಲೇ ಇರಲಿಲ್ಲ. ಇದಲ್ಲದೆ ನಗರವು ಈಗಿರುವಂತೆ ಅಡ್ಡಾದಿಡ್ಡಿಯಾಗಿ ಬೆಳೆಯಲು ಅವಕಾಶ ಇರುತ್ತಿರಲಿಲ್ಲ. ದೆಹಲಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅನೇಕ ಸಮಿತಿಗಳು ಮತ್ತಷ್ಟು ಗೊಂದಲವನ್ನಷ್ಟೇ ಉಂಟು ಮಾಡಿವೆ. ದೆಹಲಿ ಮಹಾನಗರವು ಇಂದು ಹೊಸ ಶಕೆಯೊಂದನ್ನು ಪ್ರವೇಶಿಸುವ ಅಂಚಿನಲ್ಲಿದೆ ಎಂದು ನಾನು ಭಾವಿಸಿದ್ದೇನೆ. ಸಂಸತ್ತಿನ ಉಭಯ ಸದನಗಳಲ್ಲಿ ಈ ವಿಧೇಯಕದ ವಿರುದ್ಧ ಎತ್ತಲಾಗಿರುವ ಪ್ರಮುಖ ಆಕ್ಷೇಪಗಳಲ್ಲಿ ಒಂದು ನವದೆಹಲಿಯನ್ನೂ ಅದರ ವ್ಯಾಪ್ತಿಯಿಂದ ಹೊರಗಿಟ್ಟಿರುವುದು. ಎರಡನೆಯದು ಕೆಲವು ಗ್ರಾಮಾಂತರ ಪ್ರದೇಶಗಳನ್ನು ನಗರಪಾಲಿಕೆಯ ವ್ಯಾಪ್ತಿಗೆ ಒಳಪಡಿಸಿರುವುದು ಮತ್ತು ಮೂರನೆಯನದು ಕೆಲವು ಶಾಸನಾತ್ಮಕ ಅಂಶಗಳನ್ನು ಕುರಿತಾಗಿ ಹೇಳುವುದಾದರೆ ದೆಹಲಿ ಅಭಿವೃದ್ಧಿ ಮಂಡಳಿಯನ್ನು ನಗರಪಾಲಿಕೆ ವ್ಯಾಪ್ತಿಯಿಂದ ಹೊರಗಿಟ್ಟಿರುವುದು. ನವದೆಹಲಿಯನ್ನು ನಗರಪಾಲಿಕೆ ವ್ಯಾಪ್ತಿಗೆ ಒಳಪಡಿಸಬಾರದೆಂದು ಪ್ರತಿಪಾದಿಸಿದವರಲ್ಲಿ ನಾನೂ ಒಬ್ಬನಾಗಿದ್ದು, ಈ ಬಗ್ಗೆ ನಾನು ಬಹಳಷ್ಟು ವಾದಿಸಿದ್ದೆ. ಕೇಂದ್ರ ಸರ್ಕಾರದ ಕಛೇರಿಗಳಿರುವ ಪ್ರದೇಶಗಳು ಪಕ್ಷ ರಾಜಕೀಯದ ಕೆಸರನ್ನು ಅಂಟಿಸಿಕೊಳ್ಳಬಾರದು ಎಂದು ಬಲವಾಗಿ ಭಾವಿಸಿದ್ದೇನೆ.

---

* 1957ರ ದೆಹಲಿ ಮಹಾನಗರ ಪಾಲಿಕೆ ವಿಧೇಯಕ ಕುರಿತು ಮಾತನಾಡುತ್ತಾ (ರಾಜ್ಯಸಭೆ ಚರ್ಚೆ ಡಿಸೆಂಬರ್ 16, 1957, ಸಿಸಿ 2704-2707).

ವಾಷಿಂಗ್‌ಟನ್ ಮತ್ತು ಕ್ಯಾನ್‌ಬರಗಳು ರಾಜಕೀಯವನ್ನು ತಮ್ಮಿಂದ ದೂರ ಇರಿಸುವ ದಿಸೆಯಲ್ಲಿ ಅತ್ಯಂತ ಆರೋಗ್ಯಕರವಾದ ಪರಂಪರೆಯನ್ನು ಹಾಕಿಕೊಟ್ಟಿವೆ. ಅದನ್ನೇ ನಾವು ಇಲ್ಲಿ ಅನುಸರಿಸಿದರೆ ಒಳ್ಳೆಯದೆಂಬುದು ನನ್ನ ಅಭಿಪ್ರಾಯವಾಗಿದೆ. ನಾವು ಹಾಗೆ ಮಾಡುತ್ತೇವೆ ಎಂಬ ನಿರೀಕ್ಷೆಯೂ ನನಗಿದೆ. ಗ್ರಾಮಾಂತರ ಪ್ರದೇಶಗಳನ್ನು ನಗರಪಾಲಿಕೆ ವ್ಯಾಪ್ತಿಗೆ ಒಳಪಡಿಸುವ ವಿಷಯದಲ್ಲಿ ಹೇಳುವುದಾದರೆ ಅದೊಂದು ಒಳ್ಳೆಯ ಕ್ರಮವಾಗಿದೆ ಎಂಬುದೇ ನನ್ನ ಅಭಿಪ್ರಾಯವಾಗಿದೆ. ರಾಜಧಾನಿ ನಗರವು ವಿಸ್ತರಿಸುತ್ತಲೇ ಇರುತ್ತದೆ ಮತ್ತು ಅವರು ಎಷ್ಟೊಂದು ಕ್ಷಿಪ್ರಗತಿಯಿಂದ ವಿಸ್ತರಿಸುತ್ತದೆ ಎಂಬುದೇ ನಮಗೇ ಗೊತ್ತಿರುವುದಿಲ್ಲ. ದೆಹಲಿಯಂತೂ ಈಗಾಗಲೇ ಅತಿ ವೇಗವಾಗಿ ವಿಸ್ತರಿಸಿದೆ. ಅದರ ವಿಸ್ತರಣೆಗೆ ಇನ್ನು ಎಷ್ಟು ಎಕರೆ ಜಮೀನು ಬೇಕಾದೀತು ಎಂಬುದು ನಮಗೆ ಗೊತ್ತಿಲ್ಲ. ಅದಲ್ಲದೆ ಗ್ರಾಮಾಂತರ ಜನರ ಸಮಸ್ಯೆಗಳನ್ನು ಪರಿಚಯಿಸಿಕೊಳ್ಳುವುದು ನಗರವಾಸಿಗಳಾದ ನಮಗೆ ಅತ್ಯಗತ್ಯವೂ ಹೌದು. ಗ್ರಾಮಾಂತರ ಪ್ರದೇಶಗಳಿಗೆ ನಾವು ಏನನ್ನು ಮಾಡುತ್ತಿಲ್ಲ ಮತ್ತು ನಗರದ ಜನತೆ ಗ್ರಾಮಾಂತರ ಪ್ರದೇಶಗಳ ವಿಷಯದಲ್ಲಿ ಆಸಕ್ತಿ ಹೊಂದಿಲ್ಲ ಎಂಬ ಟೀಕೆಯಲ್ಲಿ ಸತ್ಯಾಂಶವಿಲ್ಲ. ನಗರಪಾಲಿಕೆ ವ್ಯಾಪ್ತಿಯಿಂದ ಹೊರಗಿರುವ ಶಾಸಕಾಂಗಗಳು ಶಾಸನಬದ್ಧ ಅಧಿಕಾರಗಳನ್ನು ಹೊಂದಿರುವ ಸಂಸ್ಥೆಗಳು. ಈ ಕ್ಷೇತ್ರದಲ್ಲಿ ತಮ್ಮದೇ ಆದ ರೀತಿಯ ಸೇವೆ ಸಲ್ಲಿಸುವುವು. ದೆಹಲಿ ಮಹಾನಗರದ ಭಾವೀ ಯೋಜನೆಗಳ ವಿಷಯದಲ್ಲಿ ಹೆಚ್ಚಿನ ನಿಖರತೆ ಮತ್ತು ಸಮನ್ವಯ ಇರಬೇಕೆಂಬ ದೃಷ್ಟಿಯಿಂದ ದೆಹಲಿ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾಗಿದೆ. ದೆಹಲಿಯಲ್ಲಿ ಅಡ್ಡಾದಿಡ್ಡಿಯಾಗಿ ಎದ್ದಿರುವ ಕಟ್ಟಡಗಳು ನಗರದ ಅಂದವನ್ನೇ ಕೆಡಿಸಿಬಿಟ್ಟಿವೆ. ಹಾಗಾಗಿ ಇಂತಹ ಒಂದು ಸಂಸ್ಥೆಯನ್ನು ಸ್ಥಾಪಿಸುವುದು ಅನಿವಾರ್ಯವಾಗಿತ್ತು. ಇಂತಹ ಸಂಸ್ಥೆಯೊಂದು ಅಸ್ತಿತ್ವಕ್ಕೆ ಬಂದಿರುವುದರಿಂದ ಆರೋಗ್ಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ನನಗಂತೂ ಬಹಳ ಹರ್ಷವಾಗಿದೆ. ಇದರಿಂದ ನಗರದಲ್ಲಿ ಬೇಕಾಬಿಟ್ಟಿ ಕಟ್ಟಡಗಳ ನಿರ್ಮಾಣ ಹಾಗೂ ಕೊಳಗೇರಿಗಳು ಹಬ್ಬುವುದು ನಿಂತೀತೆಂದು ನಾವು ಭಾವಿಸಿದ್ದೇನೆ. ಈ ಎಲ್ಲ ಅಂಗ ಸಂಸ್ಥೆಗಳು ಮತ್ತು ನಗರಪಾಲಿಕೆ ನಡುವೆ, ನಗರಪಾಲಿಕೆ ಮತ್ತು ನವದೆಹಲಿ ಸರ್ಕಾರದ ನಡುವೆ ಎಲ್ಲಾ ಕೆಲಸ ಕಾರ್ಯಗಳಲ್ಲೂ ಸೂಕ್ತ ಸಮನ್ವಯ ಸಾಧಿಸಿದರೆ ನಗರಪಾಲಿಕೆ ಯಶಸ್ಸು ಸಾಧಿಸುವುದರಲ್ಲಿ ಯಾವುದೇ ಸಂದೇಹವಿಲ್ಲ. ಅದೇ ರೀತಿ ಸರ್ಕಾರದ ಹಸ್ತಕ್ಷೇಪದಿಂದ ಕೆಲಸ ಕಾರ್ಯಗಳಲ್ಲಿ ನಾನಾ ರೀತಿಯ ತೊಡಕುಗಳು ಉದ್ಭವಿಸಬಹುದೆಂಬ ಭೀತಿಗೂ ಒಳಗಾಗಬೇಕಾಗಿಲ್ಲ. ಸ್ಥಳೀಯ ಸ್ವಯಮಾಡಳಿತ ವ್ಯವಸ್ಥೆಯಲ್ಲಿ ನಂಬಿಕೆ ಉಳ್ಳವಳು ನಾನು. ಉತ್ತಮ ಆಡಳಿತಕ್ಕೆ ಅದೇ ಮೂಲಾಧಾರವಾಗಿದೆ. ದೇಶಾದ್ಯಂತ ಇರುವ ಸ್ಥಳೀಯ ಆಡಳಿತದ ಅಂಗಗಳನ್ನು ಅಮಾನತ್ತಿನಲ್ಲಿಸಿರುವುದು ನನಗೆ ಅತ್ಯಂತ ದುಃಖದ ವಿಷಯವಾಗಿತ್ತು. ವಾಸ್ತವವಾಗಿ ಸ್ಥಳೀಯ ಅಂಗಗಳಿಗೆ ಇರಬೇಕಾದ ಅಧಿಕಾರವನ್ನು ರಾಜ್ಯ ಸರ್ಕಾರಗಳು ಕಸಿದುಕೊಳ್ಳಲು ಯತ್ನಿಸುತ್ತಿರುವುದು ಮತ್ತು ತೆರಿಗೆ ವಿಧಿಸುವ ಅಧಿಕಾರವನ್ನು ಅವುಗಳಿಗೆ ನೀಡದಿರುವುದು ಅವುಗಳು ಕಾರ್ಯ ನಿರ್ವಹಿಸದಂತೆ ಮಾಡುತ್ತವೆ. ಸಾಕಷ್ಟು ಹಣ ಇಲ್ಲದೆ ಹೊರತು ಅವುಗಳು ಕಾರ್ಯ ನಿರ್ವಹಿಸದಂತೆ ಮಾಡುತ್ತವೆ. ಸಾಕಷ್ಟು ಹಣ ಇಲ್ಲದ ಹೊರತು ಅವುಗಳು ಸಮರ್ಪಕವಾಗಿ ಕಾರ್ಯನಿರ್ವಹಿಸಲಾರವು. ಅದೇ ರೀತಿ ಅವುಗಳ ಮೇಲೆ ವಿಶ್ವಾಸವಿಡದ ಹೊರತು ಅವುಗಳಿಂದ ಏನನ್ನಾದರೂ ನಿರೀಕ್ಷಿಸುವಂತೆಯೂ ಇಲ್ಲ. ಕೊನೆಯದಾಗಿ, ಈ ಮಾದರಿಯ ವಿಧೇಯಕದಲ್ಲಿ ಪ್ರಸ್ತಾಪಿಸಲ್ಪಡುವ ಕೆಲವೊಂದು

ವಿಷಯಗಳನ್ನು ನಾನಿಲ್ಲಿ ಪ್ರಸ್ತಾಪಿಸಬಯಸುತ್ತೇನೆ. ಸ್ಥಳೀಯ ಸ್ವಯಮಾಡಳಿತಕ್ಕೆ ಉತ್ತೇಜನ ನೀಡುವ ದೃಷ್ಟಿಯಿಂದ ನಾನಿದನ್ನು ಹೇಳುತ್ತಿದ್ದೇನೆ. ಅಂತಹ ಒಂದು ಮಾರ್ಗವೆಂದರೆ ನಗರ ಪಾಲಿಕೆಗೂ ರಾಜಕೀಯ ಪಕ್ಷಗಳ ತಳಹದಿಯಲ್ಲಿ ಚುನಾವಣೆಗಳನ್ನು ನಡೆಸದಿರುವುದು. ಈ ವಿಷಯದಲ್ಲಿ ದೆಹಲಿಯೇ ಮುಂಚೂಣಿಯಲ್ಲಿ ನಿಲ್ಲಬೇಕು ಎಂದು ನಾನು ಬಯಸುತ್ತೇನೆ. ದೆಹಲಿಯಲ್ಲಿ ಸಾಕಷ್ಟು ಮಂದಿ ಪ್ರಜ್ಞಾವಂತ ನಾಗರಿಕರಿದ್ದಾರೆ. ಎಲ್ಲ ಸ್ಥಳೀಯ ಆಡಳಿತ ಅಂಗಗಳ ಉದ್ದೇಶ ಉತ್ತಮ ಪೌರ ಪ್ರಜ್ಞೆಯನ್ನು ಪ್ರೋತ್ಸಾಹಿಸುವುದು ಮತ್ತು ಅದಕ್ಕೆ ಹೆಚ್ಚಿನ ಉತ್ತೇಜನ ನೀಡುವುದು. ನಗರಪಾಲಿಕೆಯಲ್ಲಿ ಪಕ್ಷ ರಾಜಕೀಯಕ್ಕೆ ಅವಕಾಶ ಕೊಟ್ಟರೆ ಅರ್ಹ ಪೌರರು ಚುನಾವಣೆಗಳಲ್ಲಿ ಆಯ್ಕೆಯಾಗುವುದು ಕಷ್ಟವಾಗುತ್ತದೆ. ಹಾಗಾಗಿ ದೆಹಲಿ ಮಹಾನಗರ ಪಾಲಿಕೆಯು ದೇಶದ ಉಳಿದೆಲ್ಲ ನಗರಪಾಲಿಕೆಗಳಿಗೆ ಒಂದು ಮಾದರಿಯಾಗಿ ನಿಲ್ಲಬೇಕೆಂದು ನಾನು ಬಯಸುತ್ತೇನೆ. ನಮ್ಮ ಕಾಯ್ದೆ ಸಂಪುಟಗಳಲ್ಲಿರುವ ಎಲ್ಲ ನಗರಪಾಲಿಕೆ ಕಾಯ್ದೆಗಳನ್ನು ನಾವು ಪರಿಶೀಲಿಸಿದಾಗ ಮುಂಬೈ ನಗರ ಪಾಲಿಕೆಯ ಕಾಯ್ದೆಗಳು ಅತ್ಯುತ್ತಮವಾದವು ಎಂದು ನಾನು ತೀರ್ಮಾನಿಸಿದೆ. ಹಾಗಾಗಿ ಮುಂಬೈ ನಗರಪಾಲಿಕೆ ಕಾಯ್ದೆಯನ್ನು ಅನುಕರಿಸಲು ಅಥವಾ ಅದೇ ರೀತಿಯ ಕಾಯ್ದೆ ರೂಪಿಸಲು ನಾವು ಮುಂದಾದೆವು. ಮುಂಬೈ ಮಹಾನಗರ ಪಾಲಿಕೆ ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸುತ್ತಿದೆ. ಅದಕ್ಕೆ ಒಂದು ಶತಮಾನದ ಹಿನ್ನೆಲೆಯಿದೆ. ದೆಹಲಿಯು ಹೊಸ ನಗರಪಾಲಿಕೆಯಾಗಿದ್ದು, ಅದು ನಮಗೆ ಉತ್ತಮ ಪರಂಪರೆ ಹಾಕಿಕೊಡಲಿದೆ ಎಂದು ನಾನು ಭಾವಿಸಿದ್ದೇನೆ. ನಮ್ಮಲ್ಲಿ ಅರ್ಹತೆ ಹೊಂದಿದ ಸಾಕಷ್ಟು ಮಂದಿ ಯುವಕರು ಮತ್ತು ಯುವತಿಯರು ಇದ್ದಾರೆ. ಅಂಥವರು ಯಾವುದೇ ಪಕ್ಷಕ್ಕೆ ಸೇರಿದರವಾದರೂ ಅಡ್ಡಿ ಇಲ್ಲ. ಅದೇ ರೀತಿ ಸ್ಥಳೀಯ ಸ್ವಯಮಾಡಳಿತದಲ್ಲಿ ಮಹಿಳೆಯರು ಹೆಚ್ಚು ಹೆಚ್ಚಿನ ಸಂಖ್ಯೆಯಲ್ಲಿ ಭಾಗಿಗಳಾಗಬೇಕು ಎಂಬುದೇ ನನ್ನ ಮಹದಾಸೆಯಾಗಿದೆ. ಅಂತಹವರು ನಗರಪಾಲಿಕೆಯ ಸದಸ್ಯರಾದಾಗ ತಾನಾಗಿಯೇ ಅದರ ಕಾರ್ಯ ಕ್ಷಮತೆ ಹೆಚ್ಚುವುದು. ಈ ದೃಷ್ಟಿಯಿಂದ ದೆಹಲಿ ನಗರಪಾಲಿಕೆಗೆ ಉಜ್ವಲ ಭವಿಷ್ಯವಿದೆ ಎಂದು ನಾನು ಭಾವಿಸಿದ್ದೇನೆ. *

---

* ಅನಂತರ ವಿಧೇಯಕವನ್ನು ಅಂಗೀಕರಿಸಲಾಯಿತು.

## 32. ದೆಹಲಿ ಅಭಿವೃದ್ಧಿ ವಿಧೇಯಕ - 1957 *

ಈ ವಿಧೇಯಕವನ್ನು ಬೆಂಬಲಿಸಿ ಮಾತನಾಡಲು ನನಗೆ ಅವಕಾಶ ಕಲ್ಪಿಸಿಕೊಟ್ಟದ್ದಕ್ಕಾಗಿ ನಾನು ಅತ್ಯಂತ ಸಂತುಷ್ಟಳಾಗಿದ್ದೇನೆ.

ದೆಹಲಿ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಈ ಸದನದ ಮುಂದೆ ಮಂಡಿಸಲು ದೊರೆತಿರುವ ಈ ಅವಕಾಶಕ್ಕಾಗಿ ನಾನು ಸಂತಸ ಪಡುತ್ತೇನೆ. ದೇಶದ ರಾಜಧಾನಿ ದೆಹಲಿಗೆ ಒಂದೇ ಪ್ರಾಧಿಕಾರ ಇರಬೇಕೆಂಬ ಉದ್ದೇಶದಿಂದ ಈ ಖಾಯಂ ಸ್ವರೂಪದ ದೆಹಲಿ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾಯಿತು. ಹಾಗಾಗಿ ಈ ವಿಧೇಯಕವನ್ನು ನಾನು ಸ್ವಾಗತಿಸುತ್ತೇನೆ.

ಹಿಂದಿನ ದೆಹಲಿ ಅಭಿವೃದ್ಧಿ ಮಂಡಳಿಯ ವೈಫಲ್ಯಗಳ ಬಗ್ಗೆ ಬಹಳಷ್ಟನ್ನು ಹೇಳಲಾಗಿದೆ. ಎರಡೂ ಸದನಗಳಲ್ಲಿ ನಾನು ಅದನ್ನು ಸಮರ್ಥಿಸಿಕೊಳ್ಳಬೇಕಾದ ಅನೇಕ ಸಂದರ್ಭಗಳು ಬಂದಿವೆ. ಯಾವುದೇ ಒಂದು ಸಂಸ್ಥೆಯನ್ನು ಅದರ ಪರಿಮಿತಿಗಳ ಅರಿವಿಲ್ಲದೇ ಟೀಕಿಸುವುದು ಸುಲಭ. ಈ ಕಾರಣಕ್ಕಾಗಿ ನಾನು ಹಲವು ಸಲ ಅದರ ಸಮರ್ಥನೆಗೆ ನಿಲ್ಲಬೇಕಾಯಿತು. ಜನರು ಈಗ ಅಸ್ತಿತ್ವದಲ್ಲಿರುವ ಕಾಯ್ದೆಗಳನ್ನು ಉಲ್ಲಂಘಿಸುತ್ತಿರುವ ಕಾರಣದಿಂದ ನಿರೀಕ್ಷಿತ ರೀತಿಯ ಪ್ರಗತಿಯನ್ನು ಸಾಧಿಸಲು ಅದಕ್ಕೆ ಸಾಧ್ಯವಾಗಲಿಲ್ಲ. ಜನರೇ ನಾನಾ ರೀತಿಯಿಂದ ಅದರ ಕೆಲಸ ಕಾರ್ಯಗಳಿಗೆ ಅಡ್ಡಿಯಾಗಿ ನಿಂತರು. ಈ ಕಾರಣದಿಂದಲೇ ನಾನು ಅದನ್ನು ಸಮರ್ಥಿಸುವುದು ಅನಿವಾರ್ಯವಾಯಿತು. ವಾಸ್ತವವಾಗಿ ದೆಹಲಿ ಅಭಿವೃದ್ಧಿ ಮಂಡಳಿಯೊಂದೇ ಲಾಭದ ದೃಷ್ಟಿಯಿಂದ ಕೆಲಸ ಮಾಡಿದ್ದಲ್ಲ. ಅದರಿಂದ ನಿವೇಶನಗಳನ್ನು ಕೊಂಡುಕೊಂಡ ಜನರೂ ಅಲ್ಲಿ ಕಟ್ಟಡಗಳನ್ನು ನಿರ್ಮಿಸದೆ ಬರಿಯ ಲಾಭಗಳಿಸುವ ಉದ್ದೇಶದಿಂದ ಅವುಗಳನ್ನು ಹಾಗೇ ಉಳಿಸಿಕೊಂಡಿದ್ದರು. ವಾಸ್ತವವಾಗಿ ಜನರೇ ಲಾಭ ಬಡುಕರಾಗಿದ್ದಾರೆ. ದೆಹಲಿ ಅಭಿವೃದ್ಧಿ ಮಂಡಳಿ ಲಾಭಗಳಿಸುವ ಉದ್ದೇಶದ ಸಂಸ್ಥೆ ಎಂಬ ಆರೋಪವನ್ನು ನಾನು ಯಾವ ಕಾರಣಕ್ಕೂ ಒಪ್ಪಿಕೊಳ್ಳುವುದಿಲ್ಲ.

ಈ ಪ್ರಾಧಿಕಾರವು ಅಧಿಕಾರಸ್ಥರನ್ನು ಮಾತ್ರವೇ ಒಳಗೊಂಡಿರುವಂತಹುದಲ್ಲ. ನಾವು ಕೆಲವೊಂದು ಸ್ಲೋಗನ್‌ಗಳಿಗೆ ಜೋತು ಬಿದ್ದಿದ್ದೇವೆ. ಎಲ್ಲ ಸರ್ಕಾರಿ ನೌಕರರು, ಅಧಿಕಾರಿ ಶಾಹಿಗಳು ಜನರ ಹಿತಾಸಕ್ತಿಗಳಿಗೆ ವಿರುದ್ಧವಾಗಿಯೇ ಕೆಲಸ ಮಾಡುವವರು ಎಂಬ ಗ್ರಹಿಕೆಯೂ ಅವುಗಳಲ್ಲಿ ಒಂದಾಗಿದೆ. ಆದರೆ ನಾನು ಈ ಆರೋಪವನ್ನು ಖಂಡಿಸುತ್ತೇನೆ. ದೆಹಲಿ ಕೇಂದ್ರಾಡಳಿತ ಪ್ರದೇಶದ ಆಡಳಿತಾಧಿಕಾರಿಗಳು ಈ ಪ್ರಾಧಿಕಾರದ ಪದನಿಮಿತ್ತ ಅಧ್ಯಕ್ಷರಾಗಿರುತ್ತಾರೆ. ಉಪಾಧ್ಯಕ್ಷರನ್ನು ಕೇಂದ್ರ ಸರ್ಕಾರ ನೇಮಿಸಲಿದೆ. ಅದೇ ರೀತಿ ಹಣಕಾಸು ಖಾತೆಯಿಂದ ಒಬ್ಬ ಸದಸ್ಯರು ಇನ್ನೋರ್ವ ಇಂಜಿನಿಯರ್ ಕೂಡಾ ಈ ಪ್ರಾಧಿಕಾರದಲ್ಲಿ

* ಗೃಹ ಖಾತೆಯ ಸಚಿವರಾದ ಶ್ರೀ ಆರ್.ಎನ್.ದಾತಾರ್ ಅವರು ಮಂಡಿಸಿದ ದೆಹಲಿ ಅಭಿವೃದ್ಧಿ ವಿಧೇಯಕ ಮೇಲಿನ ಗೊತ್ತುವಳಿ ಮೇಲಣ ಚರ್ಚೆಯಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತಾ (ರಾಜ್ಯಸಭೆ ಚರ್ಚೆ, ಡಿಸೆಂಬರ್ 20, 1959, ಸಿಸಿ 3503 -4)

ಇರುವರು. ಇವರ ಜೊತೆ ದೆಹಲಿ ನಗರಪಾಲಿಕೆಯು ಇಬ್ಬರು ಸದಸ್ಯರು ಈ ಪ್ರಾಧಿಕಾರದಲ್ಲಿರುತ್ತಾರೆ. ಅವರು ಖಂಡಿತವಾಗಿಯೂ 'ಅಧಿಕಾರ' ಶಾಹಿಗಳಾಗಿರುವುದಿಲ್ಲ. ಅವರೊಂದಿಗೆ ಸಲಹಾ ಸಮಿತಿಯ ಓರ್ವ ಪ್ರತಿನಿಧಿಯೂ ಇರುತ್ತಾರೆ. ಇವರೂ ನೌಕರ ಶಾಹಿಗಳಲ್ಲ. ಈ ಪ್ರತಿನಿಧಿಗಳನ್ನು ಕೇಂದ್ರ ಸರ್ಕಾರ ನಾಮಕರಣ ಮಾಡುವುದಿಲ್ಲ. ಈ ಸಲಹಾ ಸಮಿತಿಯು ತಜ್ಞರನ್ನೇ ಒಳಗೊಂಡಿದ್ದು, ಅದರ ಸದಸ್ಯರು ಪ್ರಾಧಿಕಾರಕ್ಕೆ ಸರಿಯಾದ ಸಲಹೆ ಮತ್ತು ಮಾರ್ಗದರ್ಶನ ನೀಡಲು ಎಲ್ಲ ರೀತಿಯ ಅರ್ಹತೆ ಹೊಂದಿದವರಾಗಿರುತ್ತಾರೆ.

ಯಾವುದೇ ಒಂದು ಆಡಳಿತ ವ್ಯವಸ್ಥೆಯಲ್ಲಿ ಕಾರ್ಯ ನಿರ್ವಾಹಕ ಅಧಿಕಾರಿಗಳೇ ಹೆಚ್ಚಾದರೆ ಯಾವ ಕೆಲಸವೂ ಸುಸೂತ್ರವಾಗಿ ನಡೆಯುವುದಿಲ್ಲ. ಅವರ ಸಂಖ್ಯೆ ಪರಿಮಿತವಾಗಿದ್ದರೆ ಕೆಲಸ ಕಾರ್ಯಗಳು ಹೆಚ್ಚು ಕ್ಷಿಪ್ರವಾಗಿ ನಡೆಯುತ್ತವೆ. ಹಾಗಾಗಿ ಈ ವಿಷಯದಲ್ಲಿ ಮಾನ್ಯ ಸದಸ್ಯರು ವ್ಯಕ್ತಪಡಿಸಿರುವ ಆತಂಕ, ಭೀತಿಗೆ ಯಾವ ಕಾರಣಗಳೂ ಇಲ್ಲ.

ದೆಹಲಿ ಅಭಿವೃದ್ಧಿ ಪ್ರಾಧಿಕಾರವು ಅತ್ಯಂತ ವಿಳಂಬಗತಿಯಿಂದ ಕಾರ್ಯ ನಿರ್ವಹಿಸುತ್ತಿದೆ ಎಂದು ಆರೋಪಿಸಲಾಗಿದೆ. ಅಭಿವೃದ್ಧಿ ಪ್ರಾಧಿಕಾರದ ಕಡೆಯಿಂದ ಆಗಿರುವ ವಿಳಂಬಕ್ಕೆ ಈಗಿರುವ ಕಾಯ್ದೆಗಳನ್ನು ಜನರು ಪಾಲಿಸದಿರುವುದೇ ಕಾರಣವಾಗಿದೆ ಎಂಬುದು ನನ್ನ ಸ್ಪಷ್ಟ ಅಭಿಪ್ರಾಯ. ಜನರು ಅನುಮತಿ ಇಲ್ಲದೆಯೇ ಕಟ್ಟಡಗಳನ್ನು ಕಟ್ಟುತ್ತಾರೆ. ಅಂತಹ ನಿರ್ಮಾಣಗಳು ನಕ್ಷೆಗಳಿಗೆ ಸರಿಯಾಗಿ ಇರುವುದಿಲ್ಲ ಮತ್ತು ಪ್ರಾಧಿಕಾರಕ್ಕೆ ಎಲ್ಲ ರೀತಿಯ ಕಿರುಕುಳವನ್ನು ಅವರು ನೀಡುತ್ತಿದ್ದಾರೆ. ಎಷ್ಟೇ ಬಾರಿ ಎಚ್ಚರಿಕೆ ನೀಡಿದರೂ ಜನರು ಮತ್ತೆ ಮತ್ತೆ ಕಾಯ್ದೆಗಳನ್ನು ಉಲ್ಲಂಘಿಸುತ್ತಲೇ ಇರುತ್ತಾರೆ. ಇದೀಗ ಇಡೀ ದೆಹಲಿಗೆ ಒಂದೇ ಪ್ರಾಧಿಕಾರ ಅಸ್ತಿತ್ವಕ್ಕೆ ಬಂದಿರುವುದು ನನಗೆ ಸಂತಸ ಉಂಟು ಮಾಡಿದೆ. ಆದರೆ ಪ್ರಾಧಿಕಾರಕ್ಕೆ ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸಲು ಅವಕಾಶ ನೀಡದೇ ಹೋದರೆ ದೆಹಲಿ ಅಭಿವೃದ್ಧಿ ಹೊಂದುವುದು ಅಸಾಧ್ಯವಾಗಿದೆ ಎಂಬುದು ನನ್ನ ದೃಢ ಅಭಿಪ್ರಾಯವಾಗಿದೆ. ಹಾಗಾಗಿ ಈ ಪ್ರಾಧಿಕಾರಕ್ಕೆ ಎಲ್ಲ ರೀತಿಯ ಸಹಾಯ ಸಹಕಾರಗಳು ದೊರಕುತ್ತವೆ ಎಂದು ನಾನು ನಂಬಿದ್ದೇನೆ. ದೆಹಲಿಯ ಅಭಿವೃದ್ಧಿ ಸಾಧನೆಯ ನಿಟ್ಟಿನಲ್ಲಿ ಕೆಲಸ ಮಾಡಲು ಹಲವಾರು ಸಂಸ್ಥೆಗಳಿದ್ದವು. ಅವುಗಳ ವೈಫಲ್ಯದಿಂದಾಗಿ ಅವ್ಯವಸ್ಥೆ ಹಾಗೂ ಕೊಳಚೆ ಪ್ರದೇಶಗಳು ನಿರ್ಮಾಣಗೊಂಡವು.

ದೆಹಲಿಯ ಅಭಿವೃದ್ಧಿಗಾಗಿ ಮಾಸ್ಟರ್ ಪ್ಲಾನ್ ರೂಪಿಸಲು ಹತ್ತು ವರ್ಷಗಳು ಬೇಕಾಗಬಹುದೆಂದು ಕೆಲವರು ವ್ಯಂಗ್ಯವಾಡಿದ್ದಾರೆ. ರಾಜಧಾನಿಗಳಿಗಾಗಿ ರೂಪಿಸುವ ಮಾಸ್ಟರ್ ಪ್ಲಾನ್‌ಗಳು ರೂಪುಗೊಳ್ಳಲು ಕಾಲಾವಕಾಶ ಬೇಕಾಗುತ್ತದೆ. ಈಗಾಗಲೇ ಸ್ಥೂಲವಾದ ಯೋಜನೆಯೊಂದನ್ನು ರೂಪಿಸಲಾಗಿದೆ. ಅದನ್ನು ಮಾನ್ಯ ಸದಸ್ಯರು ಮತ್ತೊಮ್ಮೆ ಪರಾಂಬರಿಸಬೇಕೆಂದು ನಾನು ಈಗ ಮತ್ತೆ ಅವರನ್ನು ವಿನಂತಿಸಿಕೊಳ್ಳುತ್ತಿದ್ದೇನೆ. ಇಂತಹ ವಿಷಯಗಳಲ್ಲಿ ತೋರಿಸಬೇಕಾದ ಆಸಕ್ತಿಯನ್ನು ಸದಸ್ಯರು ತೋರಿಸುತ್ತಿಲ್ಲ. ಆದರೆ ಯಾವುದೇ ವಿಧೇಯಕ ಬಂದಾಗ ಇಂತಹ ಟೀಕೆಗಳು ಸಿದ್ಧವಾಗಿರುತ್ತವೆ.

ಈಗಲಾದರೂ ಈ ವಿಧೇಯಕ ಬಂದಿರುವುದಕ್ಕೆ ನಾನು ಹರ್ಷ ಪಡುತ್ತೇನೆ. ಇದರಲ್ಲಿ ವಿವಾದಾಸ್ಪದವಾಗಬಲ್ಲ ಯಾವ ಅಂಶಗಳೂ ಇಲ್ಲ. ಹಾಗಾಗಿ ನಾನು ಈ ವಿಧೇಯಕವನ್ನು ಬೆಂಬಲಿಸುತ್ತಿದ್ದೇನೆ. *

* 1959ರ ಡಿಸೆಂಬರ್ 21ರಂದು ಈ ವಿಧೇಯಕವನ್ನು ಅನುಮೋದಿಸಿ ಅಂಗೀಕರಿಸಲಾಯಿತು.

## 33. ಸರ್ಕಾರಿ ಸ್ಥಳಗಳ (ತೆರವು) ತಿದ್ದುಪಡಿ ವಿಧೇಯಕ *

ಮಾನ್ಯ ಅಧ್ಯಕ್ಷರೇ, ಈ ವಿಷಯಕ್ಕೆ ಸಂಬಂಧಿಸಿದಂತೆ ಅದರ ಎಲ್ಲ ಸೂಕ್ಷ್ಮ ವಿವರಗಳನ್ನು ನೀಡುವುದು ಕಠಿಣವಾದ ಕಾರಣ ನಾನು ಕೆಲವೇ ಕೆಲವು ಮಾತುಗಳಲ್ಲಿ ಈ ವಿಧೇಯಕದ ಸಾಧಕ - ಬಾಧಕಗಳನ್ನು ಸದನದ ಮುಂದಿಡುತ್ತಿದ್ದೇನೆ.

ಮೊಟ್ಟ ಮೊದಲಲ್ಲಿ ನಾನು ಈ ಸಂಬಂಧದಲ್ಲಿ ನಡೆದ ಸಭೆಗಳು ಮತ್ತು ಅಲ್ಲಿ ನೀಡಲಾದ ಆಶ್ವಾಸನೆಗಳ ಬಗೆಗೆ ಪ್ರಸ್ತಾಪಿಸಬಯಸುತ್ತೇನೆ. ಕೊಳಚೆ ನಿರ್ಮೂಲನೆಗೆ ಸಂಬಂಧಿಸಿದಂತೆ ದೆಹಲಿ ಅಭಿವೃದ್ಧಿ ಮಂಡಳಿಯು ದೆಹಲಿ ಪೌರರಿಂದ ಸಲಹೆಗಳನ್ನು ಪಡೆಯುವುದೆಂದು ನೀಡಲಾಗಿರುವ ಆಶ್ವಾಸನೆಗಳತ್ತ ನಾವೀಗ ಗಮನ ಹರಿಸೋಣ. ಕೊಳಚೆ ಪ್ರದೇಶಗಳ ನಿರ್ಮೂಲನೆಗೆ ಮುಂದಾಗುವಾಗ ಕೊಳಚೆ ನಿವಾಸಿಗಳಿಗೆ ಉತ್ತಮ ವಾಸ್ತವ್ಯದ ವಾತಾವರಣ ಕಲ್ಪಿಸಿಕೊಡಲು ನಾವು ಸಮರ್ಥರಾಗಿರಬೇಕು ಮತ್ತು ಒಕ್ಕಲೆಬ್ಬಿಸಿದ ಮಂದಿಯ ಪುನರ್ ವಸತಿ ಸ್ಥಳಗಳಿಗೆ ಸಾಧ್ಯವಾದಷ್ಟು ಸಮೀಪದಲ್ಲಿ ಉದ್ಯೋಗಕ್ಕೆ ಬದಲಿ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕೆಂಬ ಉದ್ದೇಶದಿಂದ ಇಂತಹ ಆಶ್ವಾಸನೆ ನೀಡಲಾಯಿತು. ರಾಜಧಾನಿಯಲ್ಲಿ ಎಲ್ಲೆಲ್ಲಿ ಕೊಳಚೆ ಪ್ರದೇಶಗಳಿವೆ ಎಂಬುದನ್ನು ತಿಳಿದುಕೊಂಡಿರುವ ಮತ್ತು ನಿರಾಶ್ರಿತರ ಸಮಸ್ಯೆಗಳ ಪರಿಚಯ ಇರುವ ಪೌರರಿಂದಲೇ ಸಲಹೆಯನ್ನು ಪಡೆದುಕೊಂಡು ಕಾರ್ಯ ನಿರ್ವಹಿಸುವುದು ಈ ಆಶ್ವಾಸನೆಯ ಉದ್ದೇಶವಾಗಿದೆ.

ಈ ಕುರಿತು ಚರ್ಚೆಗಳು ನಡೆದು ಬಹಳಷ್ಟು ದಿನಗಳು ಕಳೆದಿವೆ ಮತ್ತು ಬಹಳಷ್ಟು ಬದಲಾವಣೆಗಳೂ ಆಗಿವೆ ಎಂಬ ಅಂಶವನ್ನು ನಾನು ಈ ಸಂದರ್ಭದಲ್ಲಿ ತಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಇದಾದ ನಂತರದಲ್ಲಿ ದೆಹಲಿ ಅಭಿವೃದ್ಧಿ ಪ್ರಾಧಿಕಾರ ಅಸ್ತಿತ್ವಕ್ಕೆ ಬಂದಿದ್ದು, ಅದಕ್ಕೆ ಸದಸ್ಯರೂ ನಿಯುಕ್ತರಾಗಿದ್ದಾರೆ. ಅವರಲ್ಲಿ ದೆಹಲಿ ರಾಜ್ಯದ ನಗರಾಭಿವೃದ್ಧಿ ಸಚಿವರು ಮತ್ತಿತರರು ಸೇರಿದ್ದಾರೆ. ಅಭಿವೃದ್ಧಿ ಮಂಡಳಿಯು ಈಗ ನಿವೇಶನಗಳನ್ನು ಮಾರಾಟ ಮಾಡುತ್ತಿಲ್ಲ. ಅಭಿವೃದ್ಧಿ ಮಂಡಳಿಯ ಅಧ್ಯಕ್ಷರು ಈ ಪ್ರಾಧಿಕಾರದ ಕಾರ್ಯದರ್ಶಿಯೂ ಆಗಿದ್ದಾರೆ. ಕೊಳಚೆ ನಿರ್ಮೂಲನೆಗೆ ಸಂಬಂಧಿಸಿದ ಎಲ್ಲ ಯೋಜನೆಗಳು ಮತ್ತು ವಸತಿ ನಿರ್ಮಾಣದ ಎಲ್ಲ ಯೋಜನೆಗಳು ಈ ಪ್ರಾಧಿಕಾರದ ಅನುಮತಿಯನ್ನು ಪಡೆದೇ ಮುಂದುವರಿಯಬೇಕಾಗಿವೆ. ಹೀಗಾಗಿ ಹಿಂದಿನ ದಿನಗಳಲ್ಲಿ ಇರುವುದಕ್ಕಿಂತ ಈಗ ಪರಿಸ್ಥಿತಿ ಸಂಪೂರ್ಣ ಭಿನ್ನವಾಗಿದೆ.

ಬದಲಿ ವಸತಿಯ ವ್ಯವಸ್ಥೆಯನ್ನು ಮಾಡಿದ ಹೊರತು ಯಾರನ್ನೂ ಒಕ್ಕಲೆಬ್ಬಿಸುವುದಿಲ್ಲ ಎಂದು ನಾನು ಮತ್ತೊಮ್ಮೆ ಸದಸ್ಯರಿಗೆ ಆಶ್ವಾಸನೆ ನೀಡುತ್ತೇನೆ. ಬದಲಿ ವಸತಿ ವ್ಯವಸ್ಥೆ ಕಲ್ಪಿಸದೆ ನಾವು ಇದುವರೆಗೆ ಯಾರೊಬ್ಬರನ್ನು ಒಕ್ಕಲೆಬ್ಬಿಸಿಲ್ಲ. ಆರೋಗ್ಯ ರಕ್ಷಣೆಯ ಮಾನದಂಡಗಳ

---

* ಕಾಮಗಾರಿ, ವಸತಿ ಮತ್ತು ಸರಬರಾಜು ಸಚಿವ ಶ್ರೀ ಸರ್ದಾರ್ ಸ್ವರ್ಣ ಸಿಂಗ್ ಅವರು ಮಂಡಿಸಿದ ಸರ್ಕಾರಿ ಸ್ಥಳಗಳ (ತೆರವು) ತಿದ್ದುಪಡಿ ವಿಧೇಯಕ ಚರ್ಚೆ ಕಾಲಕ್ಕೆ ಸದಸ್ಯರು ಎತ್ತಿದ ಪ್ರಶ್ನೆಗಳಿಗೆ ಉತ್ತರಿಸುತ್ತಾ (ಲೋಕಸಭೆ ಚರ್ಚೆ, ಆಗಸ್ಟ್ 22, 1956, ಸಿಸಿ 4057 - 4065) ಸ್ಥಳ ಮಾರಾಟ ಮಾಡಿದ ವ್ಯಕ್ತಿಯ ಹೆಸರಿನ ಬಗ್ಗೆ ಶ್ರೀ ಫಿರೋಜ್ ಗಾಂಧಿ ಅವರು ಎತ್ತಿದ ಆಕ್ಷೇಪಕ್ಕೆ ಸ್ಪಷ್ಟೀಕರಣ ನೀಡುತ್ತಾ.

ಪ್ರಕಾರ ಐದು ಸಾವಿರ ಮಂದಿಗೆ ಮಾತ್ರವೇ ಸ್ಥಳಾವಕಾಶ ಇರುವ ಪ್ರದೇಶದಲ್ಲಿ ಹತ್ತು ಸಾವಿರ ಮಂದಿ ವಾಸವಾಗಿದ್ದಾರೆ. ಸಹಜವಾಗಿಯೇ ಇನ್ನುಳಿದ ಐದು ಸಾವಿರ ಮಂದಿಯನ್ನು ಇನ್ನೊಂದು ಸ್ಥಳಕ್ಕೆ ಸ್ಥಳಾಂತರಿಸಬೇಕಾಗುತ್ತದೆ. ಹಾಗಾಗಿ ಬದಲಿ ವ್ಯವಸ್ಥೆಯನ್ನು ಯೋಚಿಸಿಕೊಂಡು ಕೊಳಚೆ ನಿರ್ಮೂಲನಕ್ಕೆ ಮುಂದಾಗಬೇಕಾಗುತ್ತದೆ. ಹಾಗಾಗಿ ಕೊಳಚೆ ಪ್ರದೇಶಗಳನ್ನು ಏಕಾಏಕಿ ನಿರ್ಮೂಲನೆಗೊಳಿಸಲು ಬರುವುದಿಲ್ಲ. ಅದೇ ರೀತಿ ಮಿತಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಜನವಸತಿ ಇರುವಲ್ಲೂ ಅದೇ ಸಮಸ್ಯೆ ಎದುರಾಗುತ್ತದೆ. ಇಂತಹ ಕೊಳಚೆ ಪ್ರದೇಶಗಳಿಂದ ಜನರನ್ನು ವರ್ಗಾಯಿಸಬೇಕಾದಾಗ ಕೆಲವರಿಗಾದರೂ ತೊಂದರೆ ಆಗಿಯೇ ಆಗುತ್ತದೆ. ಕೊಳಚೆ ಪ್ರದೇಶಗಳಿಂದ ಜನರನ್ನು ಸ್ಥಳಾಂತರಿಸುವಾಗ ಸಾಧ್ಯವಾದಷ್ಟು ಮಟ್ಟಿಗೆ ನಿರ್ವಸಿತರಿಗೆ ಅವರ ದೈನಂದಿನ ಜೀವನೋಪಾಯಕ್ಕೆ ಅವಕಾಶ ಇರುವ ಸ್ಥಳಗಳಲ್ಲೇ ವಸತಿಗಳನ್ನು ನೀಡಲಾಗುವುದು. ದೆಹಲಿ ಅಭಿವೃದ್ಧಿ ಮಂಡಳಿಯು ಈ ಸದನದಲ್ಲಿ ನೀಡಿರುವ ಯಾವೊಂದು ಆಶ್ವಾಸನೆಯನ್ನೂ ಮುರಿದಿಲ್ಲ ಎಂಬ ಅಂಶವನ್ನು ನಾನು ಮತ್ತೊಮ್ಮೆ ಇಲ್ಲಿ ಸ್ಪಷ್ಟಪಡಿಸ ಬಯಸುತ್ತೇನೆ. ದೆಹಲಿ ಅಭಿವೃದ್ಧಿ ಪ್ರಾಧಿಕಾರದಲ್ಲಿ ಮೂವರು ಸಂಸತ್ ಸದಸ್ಯರು ಶ್ರೀಮತಿ ಸುಭದ್ರಾ ಜೋಶಿ, ಶ್ರೀ ನವಲ್ ಪ್ರಭಾಕರ್ ಮತ್ತು ಶ್ರೀ ಕೈಲಾಸ್ ಬಿಹಾರಿ ಲಾಲ್ ಇದ್ದಾರೆ. ಅಂದರೆ ಈ ಸಮಿತಿಯಲ್ಲಿ ಸಂಸತ್ತಿಗೂ ಸೂಕ್ತ ಪ್ರಾತಿನಿಧ್ಯ ದೊರೆತಿದ್ದು ನಾವು ನಿರ್ಧಾರ ತೆಗೆದುಕೊಳ್ಳುವ ಪ್ರತಿಯೊಂದು ಸಂದರ್ಭದಲ್ಲೂ ಅವರು ಸಲಹೆ ನೀಡುತ್ತಾರೆ.

ನನ್ನ ಮಾನ್ಯ ಸಹೋದ್ಯೋಗಿ ಕಾಮಗಾರಿ, ವಸತಿ ಮತ್ತು ನಾಗರಿಕ ಪೂರೈಕೆ ಖಾತೆ ಸಚಿವರು ಹೇಳಿರುವ ಪ್ರತಿಯೊಂದು ಮಾತನ್ನು ನಾನು ಸಮರ್ಥಿಸುತ್ತೇನೆ ಎಂದು ನಾನಿಲ್ಲಿ ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ. ನೀಡಿರುವ ಆಶ್ವಾಸನೆಗಳನ್ನು ಯಾವುದೇ ಕಾರಣಕ್ಕೂ ಮುರಿಯುವ ಉದ್ದೇಶ ನನಗಿಲ್ಲ. ಈ ತನಕವೂ ಯಾವುದೇ ಆಶ್ವಾಸನೆಯನ್ನೂ ಮುರಿದಿಲ್ಲ. ಮುಂದೆಯೂ ಯಾವುದೇ ಆಶ್ವಾಸನೆಯನ್ನು ಮುರಿಯುವುದಿಲ್ಲ. ನಾವೀರ್ವರೂ ಪಂಜಾಬಿಗಳಾಗಿದ್ದು, ನಿರಾಶ್ರಿತರ ವಿಷಯದಲ್ಲಿ ಇತರ ಎಲ್ಲರಿಗಿಂತ ಹೆಚ್ಚಿನ ನೋವು ಆಗುವುದು ನಮ್ಮಿಬ್ಬರಿಗೇ ಎಂಬುದನ್ನು ನಾನು ತಮಗೆ ನೆನಪಿಸಬಯಸುತ್ತೇನೆ. ಯಾವುದೇ ವಿಷಯದಲ್ಲೂ ನಿರಾಶ್ರಿತರಿಗೆ ತೊಂದರೆ ಉಂಟು ಮಾಡುವುದಾಗಲಿ ಅಥವಾ ನೋವು ಉಂಟು ಮಾಡುವುದಾಗಲಿ ನಮ್ಮ ಉದ್ದೇಶವಲ್ಲ. ಅಭಿವೃದ್ಧಿ ಮಂಡಳಿಯು ಸರ್ಕಾರದ ಒಂದು ಶಾಸನಾತ್ಮಕ ಅಂಗವಾಗಿರುವುದರಿಂದ ಅದಕ್ಕೆ ಸರ್ಕಾರಕ್ಕೆ ಇರುವಷ್ಟೇ ಅಧಿಕಾರ ಇರಬೇಕೆಂಬುದು ನನ್ನ ಅಭಿಮತವಾಗಿದೆ. ಅಭಿವೃದ್ಧಿ ಮಂಡಳಿಗೆ ಈ ಅಧಿಕಾರಗಳು ಇಲ್ಲವೆಂದಾದಲ್ಲಿ ಅದು ಪಕ್ಷಪಾತದ ಧೋರಣೆ ಆಗುವುದು. ಹೀಗಾಗಿ ನಾನು ಮತ್ತು ನನ್ನ ಮಾನ್ಯ ಸಹೋದ್ಯೋಗಿ ಸಚಿವರು ನೀಡಿರುವ ಆಶ್ವಾಸನೆಯ ಹಿನ್ನೆಲೆಯಲ್ಲಿ ಸದನವು ಈ ವಿಧೇಯಕವನ್ನು ಅಂಗೀಕರಿಸುವುದೆಂದು ನಂಬಿದ್ದೇನೆ.

ಈ ಪ್ರದೇಶದಲ್ಲಿ ನನಗೆ ಗೊತ್ತಿರುವಂತೆ ನಾವು ಯಾರಿಗೂ ನಿವೇಶನಗಳನ್ನು ಮಾರಾಟ ಮಾಡಿಲ್ಲ. * ಅಭಿವೃದ್ಧಿ ಮಂಡಳಿಯು ಬಾವಾ ಬಚಿತ್ತರ್‌ಸಿಂಗ್ ಅವರಿಗೆ ಈಚೆಗೆ ಯಾವುದೇ

* ಸ್ಥಳ ಮಾರಾಟ ಮಾಡಿದ ವ್ಯಕ್ತಿಯ ಬಗ್ಗೆ ಶ್ರೀ ಫಿರೋಜ್ ಗಾಂಧಿಯವರು ಎತ್ತಿದ ಪ್ರಶ್ನೆಗೆ ಸ್ಪಷ್ಟೀಕರಣ ನೀಡುತ್ತಾ.

ಜಮೀನನ್ನು ಮಾರಾಟ ಮಾಡಿಲ್ಲ. ಇನ್ನು ನಿರ್ಮಾಣಕ್ಕೆ ಸಂಬಂಧಿಸಿದ ವಿಷಯದಲ್ಲಿ ಹೇಳುವುದಾದರೆ ಯಾವುದೇ ಕಟ್ಟಡವನ್ನು ದೆಹಲಿ ಅಭಿವೃದ್ಧಿ ಪ್ರಾಂತೀಯ ಪ್ರಾಧಿಕಾರದ ಗಮನಕ್ಕೆ ತಾರದೇ ನಿರ್ಮಿಸಬಾರದೆಂಬ ಬಗ್ಗೆ ಕಟ್ಟುನಿಟ್ಟಿನ ನಿರ್ಬಂಧಗಳನ್ನು ವಿಧಿಸಲಾಗಿದೆ. ನನಗೆ ನೆನಪಿರುವ ಮಟ್ಟಿಗೆ ಸದಸ್ಯರು ಪ್ರಸ್ತಾಪಿಸಿದ ಜಮೀನು ದೆಹಲಿ ಅಭಿವೃದ್ಧಿ ಮಂಡಲಿಯದೇ ಆಗಿದೆ. ಹಾಗಿರುವ ಪಕ್ಷದಲ್ಲಿ ಇದುವರೆಗೆ ಅಂತಹ ಯಾವುದೇ ಮಾರಾಟ ನಡೆದಿಲ್ಲ.

ನಿರ್ವಸಿತರಲ್ಲಿ ಯಾರೊಬ್ಬರನ್ನು ಹತ್ತು ಮೈಲುಗಳಾಚೆಗೆ ಸ್ಥಳಾಂತರಿಸುವುದಿಲ್ಲ; * ಜೀವನೋಪಾಯಕ್ಕೆ ಯಾವ ಮಾರ್ಗವೂ ಇಲ್ಲದ ಸ್ಥಳಗಳಿಗೆ ಯಾರನ್ನೂ ಸ್ಥಳಾಂತರಿಸುವುದಿಲ್ಲ. ಈ ಪ್ರದೇಶದ ಇಂತೀಂಥಾ ಸ್ಥಳಾ ಇಂತೀಂಥಾ ಉದ್ದೇಶಕ್ಕಾಗಿ ನಿಗದಿಪಡಿಸಲಾಗಿದೆ ಎಂಬುದನ್ನು ಹೇಳಲು ನನ್ನ ಬಳಿ ಯಾವ ಅಂಕಿ ಸಂಖ್ಯೆಗಳೂ ಲಭ್ಯವಿಲ್ಲ. ಇಂತೀಂಥಾ ಜಾಗ ಮೈದಾನಗಳಿಗಾಗಿ, ಉದ್ಯಾನವನಗಳಿಗಾಗಿ ಮೀಸಲಿರಿಸಲಾಗಿದೆ ಎಂಬುದನ್ನು ನಿಖರವಾಗಿ ಸೂಚಿಸುವ ಯಾವ ಅಂಕಿ ಅಂಶಗಳೂ ನನ್ನ ಬಳಿ ಇಲ್ಲ. ಈಗ ಅಲ್ಲಿರುವ ಎಲ್ಲರೂ ತಮಗಾಗಿ ಕಟ್ಟಿಕೊಂಡಿರುವ ಗುಡಿಸಲುಗಳು ಅನಧಿಕೃತವಾದವುಗಳೇ ಆಗಿವೆ. ಈ ವಿಷಯದಲ್ಲಿ ಸಂಬಂಧಪಟ್ಟವರು ವಿವರಣೆ ನೀಡಬೇಕೆಂದು ನಾನು ಕೇಳಿದ್ದೇನೆ. ನೀವು ಈ ಪ್ರಕರಣದಲ್ಲಿ ವಿಶೇಷ ಆಸಕ್ತಿ ಹೊಂದಿರುವುದರಿಂದ ನಾನು ಈ ವಿನಂತಿಯನ್ನು ಮಾಡಿಕೊಳ್ಳುತ್ತಿದ್ದೇನೆ. ಅಲ್ಲಿರುವ ಎಲ್ಲ ನಿರ್ಮಾಣಗಳು ಅನಧಿಕೃತವೇ ಆಗಿವೆ. ಆದರೆ ನಾವು ಅಂಥವರ ವಿರುದ್ಧ ಯಾವುದೇ ಕ್ರಮವನ್ನು ಕೈಗೊಂಡಿಲ್ಲ. ಅಲ್ಲಿಂದ ಯಾರನ್ನು ಸ್ಥಳಾಂತರಿಸಲೂ ಇಲ್ಲ. ಈ ವಸತಿಗಳು ಸ್ಮಶಾನದ ಬಳಿ ಇವೆ. ಸ್ಮಶಾನವು ಒಂದು ಪವಿತ್ರ ಸ್ಥಳವಾಗಿದ್ದು, ಈ ಮಾದರಿಯ ಜೋಪಡಿಗಳು ಅಥವಾ ಕಟ್ಟಡಗಳು ಅಲ್ಲಿರಬಾರದು. ಸ್ಮಶಾನದ ಆಸುಪಾಸಿನಲ್ಲಿ ಬಯಲು ಪ್ರದೇಶ ಇರಬೇಕು. ಈ ವಿಷಯದಲ್ಲಿ ನಾನು ಮತ್ತೊಮ್ಮೆ ಎಲ್ಲ ವಿವರಗಳನ್ನು ತಮ್ಮ ಮುಂದಿಡಲು ಸಿದ್ಧಳಿದ್ದೇನೆ. ಈ ಸಂಬಂಧದಲ್ಲಿ ಸ್ವತಃ ನಿರಾಶ್ರಿತರನ್ನು ಅಥವಾ ಅಲ್ಲಿಗೆ ಬರಲು ಸಿದ್ಧರಿರುವ ಸಂಸತ್ ಸದಸ್ಯರಲ್ಲಿ ಕೆಲವರನ್ನು ನನ್ನ ಬಳಿಗೆ ಬಂದು ಈ ಸಮಸ್ಯೆಯನ್ನು ಬಗೆಹರಿಸುವ ನಿಟ್ಟಿನಲ್ಲಿ ತಮ್ಮ ಸಲಹೆ - ಸೂಚನೆಗಳನ್ನು ನೀಡುವಂತೆ ಕೇಳಿಕೊಳ್ಳವುದಾಗಿ ಈ ಸಂದರ್ಭದಲ್ಲಿ ಮಾನ್ಯ ಸದಸ್ಯರಿಗೆ ಭರವಸೆ ನೀಡುತ್ತೇನೆ. ಒಟ್ಟಿನಲ್ಲಿ ಆ ಜಮೀನು ಮಾರಾಟವಾಗದಂತೆ ನಾನು ನೋಡಿಕೊಳ್ಳುತ್ತೇನೆ.

ಎಲ್ಲೇ ಆಗಲಿ, ಯಾವುದೇ ಆಗಲಿ ಯಾರಿಗೆ ಜಮೀನು ಮಾರಾಟವಾಗಿದ್ದರೆ ಮತ್ತು ಅಂತಹ ಸ್ಥಳಗಳಲ್ಲಿ ಶ್ರೀಮಂತರು ದೊಡ್ಡ ದೊಡ್ಡ ಭವನಗಳನ್ನು ನಿರ್ಮಿಸುತ್ತಾರೆಂದಾದರೆ ನಾನು ಅದಕ್ಕೆ ಖಂಡಿತವಾಗಿಯೂ ಅವಕಾಶ ನೀಡುವುದಿಲ್ಲ ಎಂದು ನನ್ನ ಸನ್ಮಾನ್ಯ ಮಿತ್ರರಾದ ಶ್ರೀ ಫಿರೋಜ್ ಗಾಂಧಿಯವರಿಗೆ ನಾನು ಭರವಸೆ ನೀಡಬಯಸುತ್ತೇನೇ. ** ಇಂತಹ ಅವಾಂತರಗಳು

---

* ಜನರನ್ನು ನಗರದಿಂದ ಹದಿನೈದು ಮೈಲು ಹೊರಕ್ಕೆ ಕಳುಹಿಸಲಾಗುತ್ತಿದೆ ಎಂಬ ಬಗ್ಗೆ ಶ್ರೀ ಫಿರೋಜ್ ಗಾಂಧಿಯವರು ಎತ್ತಿದ ಪ್ರಶ್ನೆಗೆ ಉತ್ತರಿಸುತ್ತಾ.

** ಈಗ ವಾಸ್ತವ್ಯ ಹೂಡಿರುವ ಸ್ಥಳದಿಂದ ಜನರನ್ನು ಸ್ಥಳಾಂತರಿಸುವುದಾದಲ್ಲಿ ಒಂದು ಅಥವಾ ಎರಡು ಮೈಲುಗಳ ಒಳಗೆ ಮತ್ತು ಎರಡು ಮೈಲು ಮೀರದಂತೆ ವಸತಿಯನ್ನು ಕಲ್ಪಿಸಿಕೊಡುವ ಬಗ್ಗೆ ಆಶ್ವಾಸನೆ ನೀಡಬೇಕೆಂದು ಕೋರಿ ಶ್ರೀ ಫಿರೋಜ್ ಗಾಂಧಿಯವರು ಕೇಳಿದ ಪ್ರಶ್ನೆಗೆ ಉತ್ತರಿಸುತ್ತಾ.

## ಆಡಳಿತ ನಿರ್ವಹಣೆ

# 34. ಆಹಾರ ಕಲಬೆರಕೆ ವಿಧೇಯಕ *

ಈ ಪ್ರಸ್ತಾಪವನ್ನು ಸದನದ ಮುಂದೆ ಮಂಡಿಸುವ ಸಂದರ್ಭದಲ್ಲಿ ಕೆಲವು ಮಾತುಗಳನ್ನು ಆಡಲು ನನಗೆ ಅವಕಾಶ ನೀಡಬೇಕೆಂದು ವಿನಂತಿಸುತ್ತೇನೆ. ಈ ವಿಧೇಯಕದ ಮಂಡನೆಯನ್ನು ಸ್ವಾಗತಿಸದಿರುವ ಸದಸ್ಯರಾರೂ ಈ ಸದನದಲ್ಲಿ ಇಲ್ಲವೆಂದು ನಾನು ನಂಬಿದ್ದೇನೆ. ಈ ವಿಧೇಯಕವನ್ನು ಇದಕ್ಕೆ ಮೊದಲು ಏಕೆ ತರಲಾಗಲಿಲ್ಲ ಎಂದು ಕಳೆದ ಅಧಿವೇಶನದಲ್ಲೂ ಮತ್ತು ಅದಕ್ಕೆ ಮುಂಚೆ ಕೂಡಾ ಹಲವು ಸಲ ನನ್ನನ್ನು ಪ್ರಶ್ನಿಸಲಾಗಿದೆ. ಆಹಾರ ಪದಾರ್ಥಗಳು ಮತ್ತು ಇತರ ವಸ್ತುಗಳ ಕಲಬೆರಕೆ ಉಭಯ ಸಾಮಾನ್ಯ ಯಾದಿಗೆ ಸೇರುವವರೆಗೆ ನಾನು ಅಂತಹ ಕ್ರಮಗಳನ್ನು ಕೈಗೊಳ್ಳುವುದು ಸಾಧ್ಯವಿರಲಿಲ್ಲ. ಆದರೆ ಅಂತಹ ಸಂದರ್ಭ ಒದಗಿಬಂದ ತಕ್ಷಣದಲ್ಲೇ ನಾನು ಇಂತಹ ವಿಧೇಯಕವನ್ನು ಸದನದ ಮುಂದಿಡಲು ಯೋಜಿಸಿ ಅದರ ಕರಡನ್ನು ಎಲ್ಲ ರಾಜ್ಯ ಸರ್ಕಾರಗಳಿಗೂ ರವಾನಿಸಿ, ಅವರ ಅಭಿಪ್ರಾಯ ತಿಳಿಸುವಂತೆ ಸೂಚಿಸಿದೆ. ಆಹಾರ ಕಲಬೆರಕೆ ವಿರುದ್ಧದ ಕಾಯ್ದೆಗಳು ಪಾರ್ಟ್ 'ಎ' ಶ್ರೇಣಿಯಲ್ಲಿ ಬರುವ ಎಲ್ಲ ರಾಜ್ಯಗಳಲ್ಲಿ ಮತ್ತು ಪಾರ್ಟ್ 'ಬಿ' ಶ್ರೇಣಿಗೆ ಸೇರಿದ ಕೆಲವು ರಾಜ್ಯಗಳಲ್ಲಿ ಮತ್ತು ಪಾರ್ಟ್ 'ಸಿ' ಶ್ರೇಣಿಗೆ ಬರುವ ಕೆಲವು ರಾಜ್ಯಗಳಲ್ಲಿ ಅಸ್ತಿತ್ವದಲ್ಲಿವೆ ಎಂಬುದು ಸದನದ ಸದಸ್ಯರೆಲ್ಲರಿಗೂ ಗೊತ್ತಿದೆ. ಆದರೆ ಅವುಗಳಲ್ಲಿ ಏಕರೂಪತೆ ಇಲ್ಲ. ಹೀಗಾಗಿ ಆಹಾರ ಕಲಬೆರಕೆ ತೀರಾ ಅಪಾಯಕಾರಿ ಮಟ್ಟಕ್ಕೆ ಬೆಳೆದಿರುವ ಇಂದಿನ ಸನ್ನಿವೇಶದಲ್ಲಿ ಇದನ್ನು ನಿಯಂತ್ರಿಸಲು ಏನನ್ನಾದರೂ ಮಾಡುವುದು ಅತ್ಯಾವಶ್ಯಕವಾಗಿದೆ ಎಂದು ನಾನು ಭಾವಿಸಿದ್ದೇನೆ. ಹಾಗಾಗಿ ಈ ನಿಟ್ಟಿನಲ್ಲಿ ಶಾಸನವೊಂದನ್ನು ರೂಪಿಸುವುದು ಕೇಂದ್ರ ಸರ್ಕಾರದ ಪಾಲಿಗೂ ಅತ್ಯಾವಶ್ಯಕವಾಗಿ ಪರಿಣಮಿಸಿದೆಯೆಂದೂ ನಾನು ಭಾವಿಸಿದ್ದೇನೆ.

ಈ ಎಲ್ಲ ರಾಜ್ಯಗಳಿಂದಲೂ ಈ ವಿಷಯದಲ್ಲಿ ನಮಗೆ ಅಭಿಪ್ರಾಯಗಳು ಬಂದಿವೆ. ಅವು ನೀಡಿರುವ ಎಲ್ಲ ಉಪಯುಕ್ತ ಸಲಹೆಗಳನ್ನು ಈ ವಿಧೇಯಕದಲ್ಲಿ ಅಳವಡಿಸಿಕೊಳ್ಳಲಾಗಿದೆ. ಆಹಾರ ಕಲಬೆರಕೆ ನಿಯಂತ್ರಣಕ್ಕೆ ಸಂಬಂಧಿಸಿದ ಕಾಯ್ದೆಗಳಿರುವಾಗ ಅದನ್ನು ನಿಯಂತ್ರಿಸಲು ಸಾಧ್ಯವಾಗದಿರುವುದಕ್ಕೆ ಸರ್ಕಾರಿ ಯಂತ್ರದ ಅಸಾಮರ್ಥ್ಯವೂ ಕಾರಣ. ಆಡಳಿತ ಯಂತ್ರ ಅಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿರುವುದೊಂದೇ ಅಲ್ಲ, ಪ್ರಾಮಾಣಿಕತೆ ಮತ್ತು ಸಮನ್ವಯದ ಕೊರತೆಯೂ ಅದಕ್ಕೆ ಕಾರಣವಾಗಿದೆ ಎಂಬುದನ್ನು ನಾನು ಅತ್ಯಂತ ವಿಷಾದದಿಂದ ಹೇಳಬೇಕಾಗುತ್ತದೆ. ಹಾಗಾಗಿ ನಾವು ಯಾವುದೇ ಕಾನೂನನ್ನು ಅಂಗೀಕರಿಸುವುದಕ್ಕೆ ಮೊದಲು ರಾಜ್ಯ ಸರ್ಕಾರಗಳು ತಮ್ಮ ಆಡಳಿತ ಯಂತ್ರದ ಲೋಪ ದೋಷಗಳನ್ನು ಸರಿಪಡಿಸಿಕೊಳ್ಳಬೇಕು. ಆಡಳಿತ ಯಂತ್ರದಲ್ಲಿ ಕ್ಷಮತೆ ಮತ್ತು ಪ್ರಾಮಾಣಿಕತೆಗಳೂ ಅತ್ಯಗತ್ಯ. ನನ್ನ ಕೆಲ ಮಿತ್ರರು ಈ ವಿಧೇಯಕವನ್ನು ಸಾರ್ವಜನಿಕರುಗಳ ಮುಂದಿಟ್ಟು ಅವರ ಅಭಿಪ್ರಾಯವನ್ನು ಪಡೆಯಬೇಕೆಂದು

* ಆಹಾರ ಕಲಬೆರಕೆ ತಡೆಗೆ ಅವಕಾಶ ಕಲ್ಪಿಸುವ ವಿಧೇಯಕವನ್ನು ಆಯ್ಕೆ ಸಮಿತಿಯ ಪರಿಶೀಲನೆಗೆ ಕಳುಹಿಸುವಂತೆ ರಾಷ್ಟ್ರಪತಿಗಳ ಶಿಫಾರಸಿನ ಮೇರೆಗೆ ನಿರ್ಣಯ ಕುರಿತು ಮಾತನಾಡುತ್ತಾ (ಲೋಕಸಭೆ ಚರ್ಚೆ, ನವೆಂಬರ್ 26, 1952, ಸಿಸಿ 1225 - 28 ಮತ್ತು 1292 - 93).

ಸೂಚಿಸಿದ್ದಾರೆ. ಆದರೆ ನಾನು ಈ ವಿಷಯದಲ್ಲಿ ಎಲ್ಲ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿರುವುದರಿಂದ ಮತ್ತು ಈ ಸಮಾಲೋಚನೆ ಬಹಳ ದೀರ್ಘಕಾಲದಿಂದ ನಡೆಯುತ್ತಿರುವುದರಿಂದ ಇನ್ನು ಹೆಚ್ಚಿನ ಚರ್ಚೆ ಅಗತ್ಯವಿಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಈ ವಿಷಯದಲ್ಲಿ ರಾಜ್ಯಗಳ ಅನುಭವವನ್ನು ಪಡೆಯಲು ಮತ್ತು ಅವರಿಂದ ವಿವೇಚನಾ ಪೂರ್ಣವಾದ ಅಭಿಪ್ರಾಯಗಳನ್ನು ಪಡೆಯುವ ಉದ್ದೇಶದಿಂದಲೇ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚನೆ ನಡೆಸಲಾಗಿತ್ತು. ಈ ವಿಧೇಯಕದ ಕರಡನ್ನು ಸಿದ್ಧಪಡಿಸುವ ಹಂತದಲ್ಲೂ ಮತ್ತೊಮ್ಮೆ ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ನಾವು ಅವುಗಳ ಜೊತೆ ಸಮಾಲೋಚಿಸಿದ್ದೇವೆ. ಈ ವಿಧೇಯಕದ ಪ್ರತಿಗಳನ್ನು ರಾಜ್ಯ ಸರ್ಕಾರಗಳಿಗೆ ಕಳುಹಿಸಿ ಡಿಸೆಂಬರ್ 22ರೊಳಗಾಗಿ ತಮ್ಮ ಅಭಿಪ್ರಾಯಗಳನ್ನು ನೀಡುವಂತೆ ಕೇಳಿಕೊಳ್ಳಲಾಗಿದೆ. ಆಯ್ಕೆ ಸಮಿತಿಗೆ ಹೆಚ್ಚಿನ ಕಾಲಾವಕಾಶ ಇರುವಂತೆ ಮತ್ತು ಅದು ಸಮಗ್ರ ಪರಾಮರ್ಶೆ ನಡೆಸಿ ಸಲಹೆ ಸೂಚನೆಗಳನ್ನು ನೀಡುವಂತೆ ಈ ಕ್ರಮ ಕೈಗೊಳ್ಳಲಾಗಿದೆ.

ಈ ಸಂಬಂಧದಲ್ಲಿ ನೀಡಲಾಗಿರುವ ಅ್ಯಂತ ಪ್ರಮುಖ ಸೂಚನೆಗಳಲ್ಲಿ ಮೊತ್ತ ಮೊದಲನೆಯದೆಂದರೆ ಕೇಂದ್ರ ಆಹಾರ ಪ್ರಯೋಗಾಲಯವೊಂದನ್ನು ಸ್ಥಾಪಿಸಬೇಕೆಂಬುದು. ಈ ಕ್ರಮವನ್ನು ಸದನದ ಸದಸ್ಯರೆಲ್ಲರೂ ಸ್ವಾಗತಿಸುವರೆಂದು ನಾನು ನಂಬಿದ್ದೇನೆ. ಈಗಿರುವ ಕಾಯ್ದೆಯಂತೆ ಯಾವುದೇ ರಾಜ್ಯದ ಸಾರ್ವಜನಿಕ ಆಹಾರ ವಿಶ್ಲೇಷಕರು ಕಳುಹಿಸಿರುವ ಆಹಾರ ಪದಾರ್ಥದ ವಿಶ್ಲೇಷಣೆ ವರದಿ, ಆಹಾರ ತಪಾಸಣಾಧಿಕಾರಿ ಅಥವಾ ಮಾರಾಟಗಾರನಿಗೆ ಸಮಾಧಾನಕರವಾಗಿರದಿದ್ದಲ್ಲಿ ಅದನ್ನು ವಿಶ್ಲೇಷಣೆಗಾಗಿ ಮೇಲಾಧಿಕಾರಿಗಳಿಗೆ ಕಳುಹಿಸಲು ಈಗ ಅವಕಾಶವಿಲ್ಲ. ಈ ದೃಷ್ಟಿಯಿಂದ ಈಗ ಉದ್ದೇಶಿಸಿರುವ ಕೇಂದ್ರ ಆಹಾರ ಪ್ರಯೋಗಾಲಯವು ಹೆಚ್ಚಿನ ಮಹತ್ವ ಪಡೆಯಲಿದೆ. ಈ ಪ್ರಯೋಗಾಲಯವು, ಸಮಾಧಾನಕರವಾಗಿ ವಿಶ್ಲೇಷಿಸದಿರುವ ಆಹಾರ ಪದಾರ್ಥಗಳನ್ನು ಮರು ವಿಶ್ಲೇಷಣೆಗೆ ಒಳಪಡಿಸುವುದಷ್ಟೇ ಅಲ್ಲದೆ ಕಸ್ಟಮ್ಸ್ ಕಲೆಕ್ಟರ್‌ಗಳು ಮತ್ತು ಕೇಂದ್ರ ಸರ್ಕಾರದಿಂದ ಮನ್ನಣೆ ಪಡೆದಿರುವ ಇತರ ಅಧಿಕಾರಿಗಳು ಬಂದರುಗಳಿಂದ ಕಳುಹಿಸಿಕೊಡುವ ಆಮದು ಆಹಾರ ಪದಾರ್ಥಗಳ ಮಾದರಿಗಳನ್ನು ವಿಶ್ಲೇಷಿಸಲಿದೆ. ಆಹಾರ ಪದಾರ್ಥಗಳ ಗುಣಮಟ್ಟವನ್ನು ನಿಷ್ಕರ್ಷಿಸುವ ಉದ್ದೇಶದಿಂದ ಆಹಾರ ವಸ್ತುಗಳ ತಪಾಸಣೆಯನ್ನು ಅದು ನಡೆಸುತ್ತದೆ. ಅದು ಅತ್ಯಂತ ಪ್ರಮುಖ ಕಾರ್ಯಭಾರವಾಗಿದೆ. ಅವು ಸಾರ್ವಜನಿಕ ಉದ್ಯಮ ಸಂಸ್ಥೆಗಳ ಪ್ರಯೋಗಾಲಯಗಳೊಂದಿಗೂ ನಿಕಟ ಸಂಯೋಗದೊಂದಿಗೆ ಅನೇಕ ಪರಿಶೋಧನೆಗಳನ್ನು ನಡೆಸುತ್ತದೆ. ಬೇರೆ ಬೇರೆ ಆಹಾರ ಪದಾರ್ಥಗಳ ಗುಣಮಟ್ಟವನ್ನು ನಿಷ್ಕರ್ಷಿಸುವ ಮತ್ತು ಅವುಗಳ ಗುಣಮಟ್ಟವನ್ನು ಕಾಯುವ ಸಲುವಾಗಿ ಆಹಾರ ಪದಾರ್ಥಗಳ ವಿಶ್ಲೇಷಣೆಯಲ್ಲಿ ಏಕರೂಪದ ವಿಧಾನಗಳನ್ನು ಕಾಯ್ದುಕೊಳ್ಳುವ ಹೊಣೆಗಾರಿಕೆಯನ್ನು ಅದು ನಿರ್ವಹಿಸುತ್ತದೆ. ಆಹಾರ ಪದಾರ್ಥಗಳ ವಿಶ್ಲೇಷಣೆಯ ಮಾನದಂಡಗಳನ್ನು ಮತ್ತು ಅವುಗಳಲ್ಲಿ ಇರಬಹುದಾದ ತಾರತಮ್ಯವನ್ನು ಇದೀಗ ನೇಮಕಗೊಳ್ಳಲಿರುವ ಕೇಂದ್ರ ಸಮಿತಿಯು ನಿರ್ಧರಿಸುವುದು. ಅದೇ ರೀತಿ ರಾಜ್ಯ ಸರ್ಕಾರಗಳು ರಾಜ್ಯ ಮಟ್ಟದಲ್ಲಿ ಇಂತಹ ಸಮಿತಿಗಳನ್ನು ರಚಿಸಿಕೊಳ್ಳುವುವು. ಹೀಗೆ ಕೇಂದ್ರ ಆಹಾರ ಪ್ರಯೋಗಾಲಯ, ಕೇಂದ್ರ ಸಮಿತಿ ಮತ್ತು ರಾಜ್ಯ ಸಮಿತಿಗಳ ಮೂಲಕ ಈ ಕ್ಷೇತ್ರದಲ್ಲಿ ಮಹತ್ತರವಾದ ಕಾರ್ಯಕ್ಷಮತೆಯನ್ನು ತರಲು ಸಾಧ್ಯವೆಂದು ನಾನು ಭಾವಿಸಿದ್ದೇನೆ.

ಆಹಾರ ವಸ್ತುಗಳಿಗೆ ಸಂಬಂಧಿಸಿದ ಕಾಯ್ದೆಗಳ ವಿರುದ್ಧ ಯಾವಾಗಲೂ ಕೇಳಿ ಬರುವ ದೂರುಗಳಲ್ಲಿ ಒಂದೆಂದರೆ ಈ ಅಪರಾಧಿಗಳಿಗೆ ನಿಗದಿಪಡಿಸಿರುವ ದಂಡನೆಯು ತೀರಾ ನಗಣ್ಯವಾಗಿದೆ ಎಂಬುದು. ಅಷ್ಟು ಮಾತ್ರವಲ್ಲ ನ್ಯಾಯಾಲಯಗಳು ಅನೇಕ ಸಲ ಈ ಅಲ್ಪಮೊತ್ತದ ದಂಡವನ್ನು ಕೂಡಾ ವಿಧಿಸುವುದಿಲ್ಲ ಎಂಬುದು. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ಇನ್ನಷ್ಟು ಬಿಗಿಯಾದ ವಿಧಿಗಳನ್ನು ಈ ವಿಧೇಯಕದಲ್ಲಿ ಸೇರಿಸಲಾಗಿದೆ. ಹೀಗಾಗಿ ಇದೀಗ ಈ ವಿಧೇಯಕಕ್ಕೆ ಹೊಸ ತಿದ್ದುಪಡಿಗಳನ್ನು ಸೂಚಿಸಿರುವ ಸದಸ್ಯರು ಅವುಗಳನ್ನು ಹಿಂತೆಗುದುಕೊಳ್ಳುವರೆಂದು ನಂಬಿದ್ದೇನೆ. ಈಗಾಗಲೇ ಈ ವಿಧೇಯಕದ ವಿಷಯದಲ್ಲಿ ಸಾರ್ವಜನಿಕರ ಅಭಿಪ್ರಾಯಗಳನ್ನು ಸಂಗ್ರಹಿಸಿರುವುದರಿಂದ ಮತ್ತು ಈ ವಿಧೇಯಕದ ಪ್ರತಿಗಳನ್ನು ರಾಜ್ಯ ಸರ್ಕಾರಗಳಿಗೆ ಕಳುಹಿಸಿಕೊಟ್ಟಿರುವುದರಿಂದ ಮಾನ್ಯ ಸದಸ್ಯರು ಈ ವಿಧೇಯಕಕ್ಕೆ ಸೂಚಿಸಿರುವ ತಮ್ಮ ತಿದ್ದುಪಡಿಗಳನ್ನು ಮಾನ್ಯ ಸದಸ್ಯರು ಹಿಂದಕ್ಕೆ ಪಡೆಯುವರೆಂದು ನಂಬಿದ್ದೇನೆ. ಹಾಗಾಗಿ ಈ ವಿಧೇಯಕದಲ್ಲಿ ಆಸಕ್ತಿ ಹೊಂದಿರುವ ಎಲ್ಲ ಸದಸ್ಯರು ತಾವು ನೀಡಲಿರುವ ಸಲಹೆಗಳನ್ನು ನೇರವಾಗಿ ಆಯ್ಕೆ ಸಮಿತಿಗೆ ಕಳುಹಿಸಿಕೊಡಬೇಕೆಂದು ನಾನು ಭಾವಿಸುತ್ತೇನೆ. ಇಂತಹ ಸಲಹೆಗಳನ್ನು ನೀಡಲು ಸಾಕಷ್ಟು ಕಾಲಾವಕಾಶವೂ ಇದ್ದು, ಸಂಸತ್ತಿನ ಮುಂದಿನ ಅಧಿವೇಶನದಲ್ಲಿ ಈ ವಿಧೇಯಕವು ಅಂಗೀಕಾರ ಪಡೆದು ಕಾಯ್ದೆಗಳ ಸಂಪುಟ ಸೇರುವುದೆಂದು ನಾನು ಅಚಲವಾದ ವಿಶ್ವಾಸವಿರಿಸಿದ್ದೇನೆ.

ಈ ವಿಷಯದಲ್ಲಿ ಇದಕ್ಕಿಂತ ಹೆಚ್ಚಿನದೇನನ್ನು ಹೇಳಲು ಇದೆ ಎಂದು ನಾನು ಭಾವಿಸುವುದಿಲ್ಲ. * ಸದನದಲ್ಲಿ ಈ ವಿಷಯದಲ್ಲಿ ಮಾತನಾಡಿದ ಹಲವಾರು ಮಂದಿ ಸದಸ್ಯರು ಮುಂದಿಟ್ಟ ಎಲ್ಲ ಸಲಹೆಗಳನ್ನು ನಾನು ಗಮನಿಸಿದ್ದೇನೆ ಮತ್ತು ಅವುಗಳೆಲ್ಲವನ್ನು ಆಸಕ್ತಿಯಿಂದ ಆಲಿಸಿದ್ದೇನೆ.

ಈ ವಿಧೇಯಕದ ವಿಷಯದಲ್ಲಿ ಸದಸ್ಯರು ನಡೆಸಿರುವ ಚರ್ಚೆ ಹಾಗೂ ಅವರು ನೀಡಿರುವ ಸಲಹೆ ಸೂಚನೆ ಮತ್ತು ಈ ಕ್ರಮದ ಬಗ್ಗೆ ವ್ಯಕ್ತಪಡಿಸಿರುವ ಸಂತೃಪ್ತಿಯಿಂದಾಗಿ ನಾನೂ ಕೂಡ ಅತ್ಯಂತ ಸಂತುಷ್ಟಳಾಗಿದ್ದೇನೆ. ತಾವು ನೀಡಿರುವ ಎಲ್ಲ ಸಲಹೆಗಳನ್ನು ಅತ್ಯಂತ ಎಚ್ಚರಿಕೆಯಿಂದ ಪರಿಶೀಲಿಸಿ ಅವುಗಳನ್ನು ಆಯ್ಕೆ ಸಮಿತಿಯ ಗಮನಕ್ಕೆ ತರುವುದಾಗಿ ಆಶ್ವಾಸನೆ ನೀಡುತ್ತೇನೆ. ಈ ಕಾಯ್ದೆಯು ಕೇವಲ ಕಾಗದದಲ್ಲಿ ಉಳಿಯದೆ ಕಟ್ಟುನಿಟ್ಟಾಗಿ ಜಾರಿಗೆ ತರುವಲ್ಲಿ ಸದಸ್ಯರಿಗೆ ಎಷ್ಟು ಕಳಕಳಿ ಇದೆಯೋ ಅಷ್ಟೇ ಕಳಕಳಿ ನನಗೂ ಇದೆ. ದಿನದಿಂದ ದಿನಕ್ಕೆ ಮಾರಕ ಹಾವಳಿಯಾಗಿರುವ ಈ ಪಿಡುಗನ್ನು ನಿವಾರಿಸಲು ನಿಮ್ಮಂತೆಯೇ ನಾನು ಆಸಕ್ತಳಾಗಿದ್ದೇನೆ. ಈ ವಿಧೇಯಕವನ್ನು ಆಯ್ಕೆ ಸಮಿತಿಗೆ ಕಳುಹಿಸಿಕೊಡಲು ಸಭೆಯು ತನ್ನ ಅಂಗೀಕಾರ ನೀಡುವುದೆಂದು ಮತ್ತು ಈ ವಿಧೇಯಕವು ಆದಷ್ಟು ತ್ವರಿತವಾಗಿ ಕಾಯ್ದೆಯ ರೂಪದಲ್ಲಿ ಅಸ್ತಿತ್ವಕ್ಕೆ ಬರಬೇಕೆಂದು ನಾನು ಆಶಿಸುತ್ತೇನೆ. *

---

* 1952 ನವೆಂಬರ್ 27ರಂದು ನಡೆದ ಚರ್ಚೆಯಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತ

** ನಂತರ ಉಪ ಸಭಾಪತಿಗಳು ಈ ನಿಲುವಳಿ ಮಂಡಿಸಿದರು. 1952 ನವೆಂಬರ್ 27ರಂದು ಈ ವಿಧೇಯಕವನ್ನು ಜಂಟಿ ಸಮಿತಿಗೆ ಒಪ್ಪಿಸಲಾಯಿತು.

## 35. ಆಹಾರ ಪರಿಸ್ಥಿತಿ *

ನನಗೆ ಸದಾ ತೀವ್ರ ಆತಂಕಕ್ಕೆ ಕಾರಣವಾಗಿರುವ ವಿಷಯವೊಂದರ ಮೇಲೆ ನಾನೀಗ ಕೆಲವು ಮಾತುಗಳನ್ನು ಆಡಲು ಇಲ್ಲಿ ನಿಂತಿದ್ದೇನೆ. ಜಗಳಗಂಟತನದ ಟೀಕೆ ಟಿಪ್ಪಣಿಗಳನ್ನು ಮಾಡಲು ನಾನು ಹೋಗುವುದಿಲ್ಲ. ಸಹಾಯಕ ಸಚಿವರುಗಳು ಮಾಡಿದ ತಪ್ಪು ಒಪ್ಪುಗಳಿಗೆ ಕೇಂದ್ರ ಸಂಪುಟ ಸಚಿವರೊಬ್ಬರನ್ನು ಹೊಣೆಗಾರರನ್ನಾಗಿ ಮಾಡುವುದು ಎಷ್ಟು ಸಮಂಜಸ ಎಂಬುದೂ ನನಗೆ ಗೊತ್ತಿಲ್ಲ. ಆಹಾರ ಮತ್ತು ಕೃಷಿಗೆ ಸಂಬಂಧಿಸಿದ ವಿಷಯದಲ್ಲಿ ಹೇಳುವುದಾದರೆ ಆಹಾರದ ಕೊರತೆಗೆ ಅನೇಕ ಸಂದರ್ಭಗಳಲ್ಲಿ ಫಸಲು ಕಡಿಮೆಯಾಗುವುದು ಮತ್ತು ಮನುಷ್ಯನ ನಿಯಂತ್ರಣಕ್ಕೆ ಮೀರಿದ ಅನೇಕ ಸಂಗತಿಗಳು ಕಾರಣವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ನಿರ್ದಿಷ್ಟ ಖಾತೆಗೆ ಸೇರಿದ ಸಚಿವರೊಬ್ಬರನ್ನು ಹೊಣೆಗಾರರನ್ನಾಗಿ ಮಾಡುವುದು ಮತ್ತು ಅವರಿಗೆ ಕಿರುಕುಳ ನೀಡುವುದು ಎಷ್ಟು ಮಾತ್ರಕ್ಕೂ ಸಮಂಜಸವಲ್ಲ. ಆದರೆ ಆಹಾರ ಪರಿಸ್ಥಿತಿಯು ಜನರ ನಿರೀಕ್ಷೆಗೆ ಸರಿಯಾಗಿ ಸುಧಾರಿಸದಿದ್ದರೆ ಆಗ ಜನರ ಮನಸ್ಸಿನಲ್ಲಿ ಗೊಂದಲ ಮೂಡುವುದು ಸ್ವಾಭಾವಿಕ. ಇಂತಹ ಪರಿಸ್ಥಿತಿಯಲ್ಲಿ ಆಹಾರ ಪದಾರ್ಥಗಳನ್ನು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಆಮದು ಮಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ. ದೇಶದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಆಹಾರ ಧಾನ್ಯಗಳ ದಾಸ್ತಾನು ಇದೆ ಎಂದು ಹೇಳಿದರೂ ಅದರಿಂದ ಜನರಲ್ಲಿ ನಂಬಿಕೆ ಮೂಡುವುದಿಲ್ಲ. ಒಟ್ಟಿನಲ್ಲಿ ಇಂತಹ ಸನ್ನಿವೇಶದಲ್ಲಿ ಗ್ರಾಹಕರಿಗಾಗಲಿ, ಉತ್ಪಾದಕರಿಗಾಗಲಿ ಸಮಾಧಾನ ಇರುವುದಿಲ್ಲ. ಆಹಾರ ಪದಾರ್ಥಗಳಲ್ಲಿ ಸ್ವಾವಲಂಬವೆ ಸಾಧಿಸುವುದು ಒಂದು ಜಟಿಲ ಪ್ರಶ್ನೆಯಾಗಿದೆ.

ದೇಶದಲ್ಲಿ ಆಹಾರ ಧಾನ್ಯಗಳ ಉತ್ಪಾದನೆ ಮತ್ತು ವಿತರಣೆಯಲ್ಲಿ ಸಮತೋಲನ ಇಲ್ಲದಿರುವುದು ಮೇಲ್ನೋಟಕ್ಕೆ ಗೊತ್ತಾಗುತ್ತದೆ. 1956-57ನೇ ವರ್ಷದಲ್ಲಿ ನಮ್ಮ ಆಹಾರ ಉತ್ಪಾದನೆ 68.5 ಮಿಲಿಯನ್ ಟನ್‌ಗಳಾಗಿತ್ತು. ನಮ್ಮ ಆಹಾರದ ಅವಶ್ಯಕತೆಯು ಅಂದಾಜು 55 ಮಿಲಿಯನ್ ಟನ್‌ಗಳಾಗಿತ್ತು. ಒಬ್ಬ ವಯಸ್ಕನಿಗೆ ದಿನವೊಂದಕ್ಕೆ 16 ಔನ್ಸ್ ಮತ್ತು 14 ವರ್ಷದೊಳಗಿನ ಒಂದು ಮಗುವಿಗೆ 12 ಔನ್ಸ್ ಅಂದರೆ ಅಂದಾಜು 60 ಮಿಲಿಯನ್ ಟನ್ ಆಹಾರದ ಅವಶ್ಯಕತೆ ಇತ್ತು. ಉತ್ಪಾದನೆಯ ಸರಾಸರಿ ಪ್ರಮಾಣವು 60 ಮಿಲಿಯನ್ ಟನ್‌ಗಳಷ್ಟಿದ್ದರೆ ಆಮದು ಪ್ರಮಾಣ ಸರಾಸರಿ 3.5 ಮಿಲಿಯನ್ ಟನ್‌ಗಳಷ್ಟಿತ್ತು. ಹೀಗಿದ್ದಾಗ ಬೆಲೆಗಳು ದಿನದಿಂದ ದಿನಕ್ಕೆ ಹೆಚ್ಚುತ್ತಿರುವುದಾದರೂ ಏಕೆ? ಹಾಗಿದ್ದಲ್ಲಿ ಉತ್ಪಾದನೆಗೆ ಸಂಬಂಧಿಸಿದಂತೆ ನೀಡಿರುವ ಅಂಕಿ - ಅಂಶಗಳು ದೋಷಪೂರ್ಣವಾಗಿವೆಯೇ?

ಬೆಳೆಗಳಿಗೆ ತಗಲುವ ಕೀಟಬಾಧೆಯನ್ನು ನಿವಾರಿಸಿ ರಕ್ಷಣೆ ಒದಗಿಸಿದರೆ ನಾವು ಹೆಚ್ಚಿನ ಪ್ರಮಾಣದಲ್ಲಿ ಆಹಾರ ಧಾನ್ಯಗಳನ್ನು ಸಂರಕ್ಷಿಸಿಡಬಹುದು. ಜೊತೆಗೆ ಹೆಚ್ಚಿನ ಲಾಭಗಳಿಸಬಹುದೆಂದು ರೈತರೊಬ್ಬರು ನನಗೆ ಹೇಳಿದರು. ಕೀಟಗಳ ಬಾಧೆಯಿಂದ ಆಗುವ

---

* ಆಹಾರ ಮತ್ತು ಕೃಷಿ ಸಚಿವ ಶ್ರೀ ಎ.ಪಿ.ಜೈನ್ ಅವರು ಆಹಾರ ಪರಿಸ್ಥಿತಿ ಕುರಿತು ನಿರ್ಣಯ ಮಂಡಿಸಿದ ಸಂದರ್ಭದಲ್ಲಿ ಮಧ್ಯ ಪ್ರವೇಶಿಸಿ ಮಾತನಾಡುತ್ತಾ (ರಾಜ್ಯಸಭೆ ಚರ್ಚೆ, ಡಿಸೆಂಬರ್ 18, 1957. ಸಿಸಿ 3011 - 17).

ನಷ್ಟ ಗಣನೀಯ ಮಟ್ಟದ್ದು. ಅಂದರೆ ಶೇ.20ರಷ್ಟು ಆಹಾರ ಧಾನ್ಯಗಳು ಇದರಿಂದ ನಾಶವಾಗುತ್ತದೆ. ಆದರೆ ಮೆಹತಾ ವರದಿಯು ಈ ಅಂಶಕ್ಕೆ ಯಾವುದೇ ರೀತಿಯ ಗಮನ ನೀಡಿಲ್ಲ ಎಂಬುದು ವಿಷಾದದ ಸಂಗತಿ. ಆದರೆ ಕನಿಷ್ಠ ಆಹಾರ ಖಾತೆಯಾದರೂ ಆ ಅಂಶಕ್ಕೆ ಗಮನ ನೀಡುತ್ತದೆಯೇ ಎಂಬುದನ್ನು ನಾನು ಆಹಾರ ಸಚಿವರಿಂದ ತಿಳಿಯಬಯಸುತ್ತೇನೆ. ಕೀಟ ಬಾಧೆಯಿಂದ ಆಗುವ ಆಹಾರ ಧಾನ್ಯಗಳ ನಾಶ ಇದೇ ರೀತಿ ಮುಂದುವರಿಯಬೇಕೇ? ಮೆಹ್ತಾ ಸಮಿತಿಯ ಶಿಫಾರಸುಗಳನ್ನು ಇಲ್ಲಿ ಪ್ರತಿಯೊಬ್ಬರು ಓದಿದ್ದಾರೆ. ಸರ್ಕಾರವು ಈ ಶಿಫಾರಸುಗಳನ್ನು ಅಂಗೀಕರಿಸುವುದು ಮತ್ತು ಅದರಿಂದಾಗಿ ಸರ್ವಾಂಗೀಣ ಸುಧಾರಣೆ ಸಾಧ್ಯವಾಗುವುದೆಂದು ನಾನು ನಂಬಿದ್ದೇನೆ. ಆದರೆ ಆಹಾರ ಸಚಿವರು ಸ್ವತಃ ಈ ವಿಷಯದಲ್ಲಿ ತಮ್ಮ ಅಸಹಾಯಕತೆಯನ್ನು ಒತ್ತಿ ಹೇಳಿದ್ದಾರೆ. ಈ ವರದಿಯ ಶಿಫಾರಸುಗಳಂತೆ ಆಹಾರ ಧಾನ್ಯಗಳ ಕ್ಷೇತ್ರದಲ್ಲಿ ಸ್ವಾವಲಂಬನೆ ಸಾಧಿಸುವ ದಿಕ್ಕಿನಲ್ಲಿ ಎಲ್ಲ ಪ್ರಯತ್ನಗಳನ್ನು ನಡೆಸಲಾಯಿತಾದರೂ ಪರಿಸ್ಥಿತಿಯಲ್ಲಿ ಯಾವುದೇ ಬದಲಾವಣೆ ಸಾಧ್ಯವಾಗಲಿಲ್ಲ. ಏನಿದ್ದರೂ ಮುಂದಿನ ಐದು ವರ್ಷಗಳ ಅವಧಿಯಲ್ಲಿ ವರ್ಷವೊಂದಕ್ಕೆ ಸರಿಯಾಗಿ ಎರಡರಿಂದ ಮೂರು ಟನ್‌ಗಳಷ್ಟು ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳುವ ಅನಿವಾರ್ಯ ಪರಿಸ್ಥಿತಿ ಎದುರಿಸುತ್ತಿದ್ದೇವೆ. ಇದರಿಂದ ವರ್ಷವೊಂದಕ್ಕೆ ನೂರರಿಂದ ನೂರಾ ಐವತ್ತು ಕೋಟಿ ರೂಪಾಯಿ ವೆಚ್ಚ ತಗುಲಲಿದೆ. ಇದು ಸಹಜವಾಗಿಯೇ ನಮ್ಮ ವಿದೇಶ ವಿನಿಮಯ ಸಂಪನ್ಮೂಲಗಳ ಮೇಲೆ ಭಾರಿ ದೊಡ್ಡ ಹೊರೆಯನ್ನು ಹೊರಿಸುವುದು.

ತಾವು ಮೆಹತಾ ಸಮಿತಿಯಂತೆ ನಿರಾಶವಾದಿಗಳಲ್ಲ ಎಂದು ಸಚಿವರು ಹೇಳಿದ್ದಾರೆ. ಈ ಆಶಾವಾದವನ್ನು ಅವರು ಮುಂಬರುವ ವರ್ಷಗಳಲ್ಲಿ ಕಾರ್ಯರೂಪದಲ್ಲಿ ತೋರಿಸುತ್ತಾರೆಂಬ ನಂಬಿಕೆ ನನಗಿದೆ. ಮೆಹತಾ ಸಮಿತಿಯು ಶಿಫಾರಸು ಮಾಡಿರುವ ಬೆಲೆ ಸ್ಥಿರೀಕರಣ ಸಂಸ್ಥೆಯು ಅತ್ಯಂತ ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸಿದರೆ ಮಾತ್ರ ಅದು ಉಪಯುಕ್ತ ಎನಿಸಬಹುದು. ಆದರೆ ಬೇಡಿಕೆ ಸರಬರಾಜಿಗಿಂತ ಬಹಳ ಎತ್ತರದಲ್ಲಿದ್ದರೆ ಬೆಲೆ ನಿಯಂತ್ರಣದಲ್ಲಿಡಲು ಸಾಧ್ಯವೇ ಇಲ್ಲ. ಒಟ್ಟಿನಲ್ಲಿ ಆಹಾರ ಉತ್ಪಾದನೆ ಹೆಚ್ಚಿಸುವ ಕಾರ್ಯಭಾರವೂ ನಿಜಕ್ಕೂ ಈ ಸಮಸ್ಯೆಗೆ ಇರುವ ಏಕೈಕ ಪರಿಹಾರವಾಗಿದೆ. ಈಚಿನ ವರ್ಷಗಳಲ್ಲಿ ಆಹಾರ ಉತ್ಪಾದನೆ ಹೆಚ್ಚಿಸುವ ವಿವಿಧ ಯೋಜನೆಗಳ ಮೇಲೆ ಗಣನೀಯ ಪ್ರಮಾಣದ ಮೊತ್ತವನ್ನು ವ್ಯಯಿಸಲಾಗಿದೆ. ಈ ಎಲ್ಲ ಕಾರ್ಯಕ್ರಮಗಳು ಯಶಸ್ವಿಯಾಗಿವೆಯೇ? ಸಹಕಾರ ವ್ಯವಸಾಯ ಪದ್ಧತಿ ಇಲ್ಲಿ ಅವಶ್ಯಕವಾಗಿದೆ. ಇದರಲ್ಲಿ ಸಂಶಯವಿಲ್ಲ. ಸಹಕಾರಿ ವ್ಯವಸಾಯವು ಹಣಕಾಸಿನ ದೃಷ್ಟಿಯಿಂದ ಒಂದು ಅಗಾಧ ಕಾರ್ಯಭಾರವಾಗಿದೆ. ಆದರೆ ಯಾವುದೇ ಒಂದು ಯೋಜನೆಯನ್ನಾದರೂ ಮೇಲಿನಿಂದ ಹೇರುವುದು ಎಷ್ಟರ ಮಟ್ಟಿಗೆ ಫಲಪ್ರದವಾದೀತು ಎಂದು ಹೇಳುವುದು ಕಷ್ಟ. ನಮ್ಮ ಸಾಮಾಜಿಕ ಮತ್ತು ವ್ಯವಸಾಯ ಪದ್ಧತಿಯು ಎಂದೂ ಸಹಕಾರ ಸಂಘದ ತತ್ವಗಳ ಮೇಲೆ ಅಥವಾ ಸಹಕಾರಿ ವ್ಯವಸಾಯ ತತ್ವಗಳ ಮೇಲೆ ಅವಲಂಬಿಸಿಯೇ ಇಲ್ಲ. ಹಾಗಾಗಿ ಸಹಕಾರಿ ವ್ಯವಸಾಯ ಪದ್ಧತಿಯಲ್ಲಿ ಯಶಸ್ಸು ಕಾಣಬೇಕಾದರೆ ಜನರ ಮನೋವೃತ್ತಿಯಲ್ಲೇ ಬದಲಾವಣೆ ಸಾಧಿಸಬೇಕು. ನಾವು ಯಾವುದೇ ಒಂದು ಹೊಸ ಬದಲಾವಣೆ ತರುವುದಿದ್ದರೂ ಅದು ಜನರ ಆಸಕ್ತಿ ಮತ್ತು ಸಹಭಾಗಿತ್ವದಿಂದ ನಡೆಯಬೇಕು. ಆಧುನಿಕ ಜಗತ್ತಿನಲ್ಲಿ ಎಲ್ಲೆಡೆ

ಜಮೀನ್ದಾರಿ ಪದ್ಧತಿ ಹಿಂದೆ ಸರಿಯುತ್ತಿದೆ. ನಮ್ಮಲ್ಲೂ ಈ ಪದ್ಧತಿ ಇಲ್ಲದಂತಾಗಬೇಕು. ಕೃಷಿ ಕ್ಷೇತ್ರದಲ್ಲಿ ನಿರೀಕ್ಷಿತ ಪರಿಣಾಮಗಳನ್ನು ಸಾಧಿಸಬೇಕಾದರೆ ಇದು ಅತ್ಯವಶ್ಯ. ಈ ಪದ್ಧತಿ ನಮ್ಮ ದೇಶದಿಂದ ತೊಲಗಬೇಕೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ಒಳ್ಳೆಯ ಭೂ ಮಾಲೀಕರು ಒಕ್ಕಲಿನವರ ಪ್ರೀತಿಗೆ ಪಾತ್ರರಾಗಿರುತ್ತಾರೆ. ಸಂಕಷ್ಟ ಕಾಲದಲ್ಲಿ ಸಲಹೆ, ಮಾರ್ಗದರ್ಶನ ಮತ್ತು ಸಹಕಾರವನ್ನು ಪಡೆಯುತ್ತಾರೆ. ಭೂ ಮಾಲೀಕರು ಅವರ ನೆರವಿಗೆ ಬರುತ್ತಾರೆ. ಆದರೆ ಇಂದು ರೈತನಿಗೆ ಇಂತಹ ಮಾನವೀಯ ಸಂಬಂಧದ ಸ್ಪರ್ಶವೇ ಇಲ್ಲ. ಅಂದರೆ ಈಗ ಭೂ ಮಾಲೀಕನ ಸ್ಥಾನದಲ್ಲಿ ನಿಂತಿರುವ ಸರ್ಕಾರ ಸರಿಯಾಗಿ ತನ್ನ ಪಾತ್ರ ನಿರ್ವಹಿಸುತ್ತಿಲ್ಲ. ಇದರಲ್ಲಿ ಇನ್ನೊಂದು ಆತಂಕಕಾರಿ ಅಂಶವೂ ಇದೆ. ಇಂತಹ ವ್ಯವಸ್ಥೆಯಲ್ಲಿ ಸಣ್ಣ ಹಿಡುವಳಿದಾರರು ತಮಗೆ ಬೇಕಾದಷ್ಟು ಮಾತ್ರ ಬೆಳೆಯುವ ಪ್ರವೃತ್ತಿಗೆ ಒಳಗಾಗುತ್ತಾರೆ. ಇದರಿಂದ ಆಹಾರ ಉತ್ಪಾದನೆಯನ್ನು ಹೆಚ್ಚಿಸುವ ಇಂದಿನ ಅಗತ್ಯಕ್ಕೆ ಯಾವುದೇ ರೀತಿಯ ಉತ್ತೇಜನ ಇಲ್ಲದಂತಾಗುತ್ತದೆ.

ಇನ್ನು ಯೋಜನೆಗಳ ವಿಷಯದಲ್ಲಿ ಹೇಳುವುದಾದರೆ ಓರಿಸ್ಸಾ ಸರ್ಕಾರದ ಧನ ವಿನಿಯೋಗ ಕುರಿತು ಈಚಿನ ಪರಿಶೋಧಿತ ವರದಿಯು ಈ ವಿಷಯದಲ್ಲಿ ಒಂದು ಎಚ್ಚರಿಕೆಯಂತಿದೆ. ಹಣಕಾಸು ತೀರಾ ಪರಿಮಿತವಾಗಿರುವಾಗ ಮತ್ತು ಇತರ ಸಂಪನ್ಮೂಲಗಳು ಸೀಮಿತವಾಗಿರುವಾಗ ಯಾವುದೇ ಯೋಜನೆಗಳನ್ನು ಕೈಗೆತ್ತಿಗೊಳ್ಳುವುದು ಸಮಂಜಸವಲ್ಲ.

ಮೆಹತಾ ಸಮಿತಿಯು ಸಣ್ಣ ನೀರಾವರಿ ಯೋಜನೆಗಳನ್ನು ಬೆಂಬಲಿಸಿರುವುದು ಮತ್ತು ನೀರಾವರಿ ಖಾತೆಯು ಈ ಯೋಜನೆಗಳನ್ನು ಅಂಗೀಕರಿಸಿರುವುದು ನನಗೆ ಅತ್ಯಂತ ಸಂತಸದ ವಿಷಯವಾಗಿದೆ. ನೀರಾವರಿ ಯೋಜನೆಗಳಿಗೆ ದೇಣಿಗೆ ನೀಡುವುದು ತಮ್ಮ ಸಾಮರ್ಥ್ಯಕ್ಕೆ ಮೀರಿದ ಸಂಗತಿಯಾಗಿದೆಯೆಂದು ಅನೇಕ ಕೃಷಿಕರು ದೂರಿತ್ತಿದ್ದಾರೆ. ಹಾಗಿದ್ದಲ್ಲಿ ಕೃಷಿಕರು ಆಹಾರ ಉತ್ಪಾದನೆಯನ್ನು ಹೆಚ್ಚಿಸುವುದಾದರೂ ಹೇಗೆ ಸಾಧ್ಯ? ಈ ವಿಷಯದಲ್ಲಿ ನಾನು ಸಚಿವರ ಗಮನ ಸೆಳೆಯ ಬಯಸುತ್ತೇನೆ. ರೈತರಿಗೆ ಉತ್ಪಾದನೆ ಹೆಚ್ಚಿಸಲು ಪ್ರೋತ್ಸಾಹ ನೀಡಬೇಕಾದಲ್ಲಿ ನೀವು ಅವರಿಗೆ ಸಹಾಯಧನ ನೀಡಬೇಕು ಮತ್ತು ಬೇಕಾದ ಸವಲತ್ತುಗಳನ್ನು ಕಲ್ಪಿಸಿಕೊಡಬೇಕು. ಹಾಗಾದಾಗ ಮಾತ್ರ ದೇಶ ತನ್ನಿಂದ ಅಪೇಕ್ಷಿಸುವುದನ್ನು ಕೊಡಲು ರೈತ ಸಮರ್ಥನಾಗುತ್ತಾನೆ.

ಸಾಂದ್ರ ಬೇಸಾಯದ ತಳಹದಿಯಲ್ಲಿ ಉತ್ಪಾದನೆ ಹೆಚ್ಚಿಸಲು ಮುಂದಾಗುವಾಗ ಕೃಷಿಯ ವೆಚ್ಚ ಅಧಿಕವಾಗುವುದು ಸ್ವಾಭಾವಿಕ. ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ನೀರಾವರಿ, ಗೊಬ್ಬರ, ಉತ್ತಮ ಬೀಜಗಳು ಮತ್ತು ಬೆಳೆಗಳ ರಕ್ಷಣೆಗೆ ಹೆಚ್ಚಿನ ಎಚ್ಚರ ವಹಿಸುವುದು ಅಗತ್ಯ. ಆಗ ತಾನಾಗಿಯೇ ಉತ್ಪಾದನೆಯ ವೆಚ್ಚ ಏರುವುದು. ಭತ್ತದ ವ್ಯವಸಾಯದಲ್ಲಿ ನಾವು ಈಗ ಅನುಸರಿಸುತ್ತಿರುವ ಜಪಾನಿ ಪದ್ಧತಿಗೆ ಇದು ಅನ್ವಯವಾಗುತ್ತದೆ. ಪ್ರಮಾಣಾನುಗುಣವಾಗಿ ಹೆಚ್ಚು ಪ್ರತಿಫಲ ಸಿಗುತ್ತದೆಯೆಂದಾಗಲಿ ಮಾತ್ರವೇ ರೈತರು ಇಂತಹ ವಿಧಾನಗಳಿಗೆ ಮುಂದಾಗುತ್ತಾರೆ. ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಪರಿಶೀಲನೆ ಅಗತ್ಯವಾಗಿದೆ. ರೈತನಿಗೆ ಹೊಸ ವಿಧಾನಗಳನ್ನು ಶಿಫಾರಸು ಮಾಡುವುದಕ್ಕೆ ಮೊದಲು ನಮ್ಮ ಇಲಾಖೆಗಳು ಎಂದಾದರೂ ಇಂತಹ ಬೆಳೆಗಳನ್ನು ಉತ್ಪಾದಿಸಿ ನೋಡಿವೆಯೇ? ನಾನು ಮೊದಲೇ ಹೇಳಿರುವಂತೆ ರೈತರು

ಹೆಚ್ಚು ಬೆಳೆಯ ಬೇಕಾದರೆ ಅವರಿಗೆ ಹೆಚ್ಚಿನ ಪ್ರೋತ್ಸಾಹ ನೀಡಲೇಬೇಕು. ಉತ್ಪಾದನಾ ವೆಚ್ಚ ಹೆಚ್ಚಿರುವುದರಿಂದ ಅದು ರೈತರಿಗೆ ಹೊರೆಯಾಗುತ್ತದೆ ಎಂದು ನಾವು ಎಂದಾದರೂ ಯೋಚಿಸಿದ್ದೇವೆಯೇ? ಜಪಾನಿ ಮಾದರಿಯ ಭತ್ತದ ವ್ಯವಸಾಯವನ್ನು ಅನೇಕರು ಬಿಟ್ಟೇ ಬಿಟ್ಟಿದ್ದಾರೆ. ಏಕೆಂದರೆ ಅದರಿಂದ ಅವರಿಗೆ ಏನೂ ಲಾಭವಾಗುವುದಿಲ್ಲ. ಹಾಗಾಗಿ ಹೆಚ್ಚು ಲಾಭದಾಯಕವಾದ ವಿಧಾನಗಳನ್ನು ರೈತರು ಆರಿಸಿಕೊಳ್ಳುತ್ತಾರೆ. ಕಡಿಮೆ ವೆಚ್ಚದಾಯಕ ಕೃಷಿ ವಿಧಾನಗಳನ್ನು ಅನ್ವಯಿಸಿ ಕೃಷಿ ವೆಚ್ಚಗಳನ್ನು ತಗ್ಗಿಸುವ ದಿಸೆಯಲ್ಲಿ ಕೃಷಿ ಇಲಾಖೆ ಯಾವುದಾದರೂ ಪ್ರಯೋಗ ನಡೆಸಿದೆಯೇ? ಅದೇ ರೀತಿ ರಸಗೊಬ್ಬರಗಳ ಬಳಕೆಯನ್ನೇ ನಾವು ಅವಲಂಬಿಸಿರಬಾರದು. ಚೀನಾದಲ್ಲಿ ಈಗ ಕಡಿಮೆ ವೆಚ್ಚದ ಗೊಬ್ಬರಗಳನ್ನೇ ಬಳಸಲು ಯೋಚಿಸುತ್ತಿದ್ದಾರೆಂದು ಸಚಿವರು ಹೇಳಿರುವುದನ್ನು ಕೇಳಿ ನನಗೆ ಹರ್ಷವಾಗಿದೆ. ಅಲ್ಲಿ ರಾಸಾಯನಿಕ ಗೊಬ್ಬರಗಳ ಬಳಕೆ ಕಡಿಮೆ. ಬದಲಾಗಿ ಕಡಿಮೆ ವೆಚ್ಚದ ರೂಢಿಯ ಗೊಬ್ಬರಗಳನ್ನು ಬಳಸುತ್ತಾರೆ. ಇದು ಲಾಭಾದಾಯಕವೂ ಆಗಿದೆ. ಅದೇ ರೀತಿ ನಾವು ಕಡಿಮೆ ವೆಚ್ಚದ ಗೊಬ್ಬರಗಳನ್ನು ಬಳಸಿಕೊಳ್ಳಬೇಕು ಮತ್ತು ಹೊಸ ಬಗೆಯ ಕಡಿಮೆ ಖರ್ಚಿನ ಸಾಧನ, ಸಲಕರಣೆಗಳನ್ನು ಬಳಸಿಕೊಳ್ಳಬೇಕು. ಈ ಮೂಲಕ ವ್ಯವಸಾಯ ವೆಚ್ಚವನ್ನು ಉಳಿಸಬೇಕು. ಮಹಾತ್ಮಾ ಗಾಂಧೀಜಿಯವರು ಯಾವಾಗಲೂ ಒತ್ತಿ ಹೇಳುತ್ತಿದ್ದ ಪ್ರಮುಖ ಅಂಶ ಇದಾಗಿದೆ. ಹೀಗಾಗಿ ಕೃಷಿ ಖಾತೆಯು ಈ ವಿಷಯಕ್ಕೆ ಹೆಚ್ಚಿನ ಗಮನ ನೀಡಬೇಕೆಂದು ನಾನು ಬಯಸುತ್ತೇನೆ. ಈ ವಿಷಯವಾಗಿ ಮಾನ್ಯ ಆಹಾರ ಸಚಿವರು ಗಾಂಧೀ ಸ್ಮಾರಕ ನಿಧಿಯ ಕಾರ್ಯಕ್ಕಾಗಿ ಈಗ ದೆಹಲಿಯಲ್ಲಿರುವ ರಿಚರ್ಡ್ ಹೇಗ್ ಅವರೊಂದಿಗೆ ಮಾತನಾಡಬೇಕೆಂದು ನಾನು ಸಲಹೆ ನೀಡುತ್ತಿದ್ದೇನೆ. ಗೊಬ್ಬರಗಳು, ಕೃಷಿ ಉಪಕರಣಗಳು ಮತ್ತು ಈ ಕ್ಷೇತ್ರಕ್ಕೆ ಸಂಬಂಧಿಸಿದ ಇತರ ಎಲ್ಲ ವಿಷಯಗಳಲ್ಲಿ ಅತ್ಯುಪಯುಕ್ತವಾದ ಮಾಹಿತಿಗಳನ್ನು ಅವರು ನೀಡಬಲ್ಲರು. ಹೇಗ್ ಅವರು ಮಹಾತ್ಮಾ ಗಾಂಧೀಜಿಯವರ ಅತ್ಯಂತ ಪ್ರೀತಿಪಾತ್ರ ಕೃಷಿಕರಲ್ಲಿ ಒಬ್ಬರಾಗಿದ್ದಾರೆ.

ಇದೀಗ ನಾನು ಇನ್ನೊಂದು ಪ್ರಶ್ನೆಯನ್ನು ಎತ್ತಿಕೊಳ್ಳುತ್ತಿದ್ದೇನೆ. ಸಂಪ್ರದಾಯವಾದಿಗಳು ನನ್ನ ಈ ಮಾತುಗಳನ್ನು ಕೇಳಿ ಮುಖ ಸಿಂಡರಿಸಲೂ ಬಹುದು ಎಂಬ ಅರಿವು ನನಗಿದೆ. ದೇಶದ ಏಳು ರಾಜ್ಯಗಳಲ್ಲಿ ಈಗ ಗೋಹತ್ಯೆಯ ಮೇಲೆ ಸಂಪೂರ್ಣ ನಿಷೇಧ ವಿಧಿಸಲಾಗಿದೆ. ಕೆಲ ರಾಜ್ಯಗಳಲ್ಲಿ ಈ ನಿಷೇಧ ಬಹಳ ಹಿಂದಿನಿಂದಲೂ ಇತ್ತು. ಇನ್ನೂ ಕೆಲ ರಾಜ್ಯಗಳಲ್ಲಿ ಉಪಯುಕ್ತ ಜಾನುವಾರುಗಳ ಹತ್ಯೆಯನ್ನು ಮಾತ್ರ ನಿಷೇಧಿಸಲಾಗಿದೆ. ಇನ್ನು ಕೆಲ ರಾಜ್ಯಗಳಲ್ಲಿ ಯಾವ ನಿಷೇಧವೂ ಇಲ್ಲ. ಒರಿಸ್ಸಾ ಅಂತಹ ರಾಜ್ಯವಾಗಿದೆ. ಹಿಂದಿನ ಕಾಲದಲ್ಲಿ ಕೆಲ ನಿರ್ದಿಷ್ಟ ಸ್ಥಳಗಳಲ್ಲಿ ಗೋಹತ್ಯೆಯ ಮೇಲೆ ನಿಷೇಧ ಇರುತ್ತಿತ್ತು. ಆದರೆ ಅದರಿಂದ ಅಂತಹ ಸಮಸ್ಯೆಯೇನೂ ಎದುರಾಗಲಿಲ್ಲ. ಇನ್ನೂ ಕೆಲ ಸಂದರ್ಭಗಳಲ್ಲಿ ಮುದಿ ಮತ್ತು ನಿರುಪಯುಕ್ತ ಜಾನುವಾರುಗಳನ್ನು ಅವುಗಳ ವಿಲೇವಾರಿಗಾಗಿ ಇತರ ರಾಜ್ಯಗಳಿಗೆ ರವಾನಿಸಲಾಗುತ್ತಿತ್ತು. ಈಗ ಬಹುತೇಕ ಎಲ್ಲೆಡೆ ಗೋಹತ್ಯೆ ಮೇಲೆ ನಿಷೇಧ ಹೇರಿರುವುದರಿಂದ ಪರಿಸ್ಥಿತಿ ಸುಧಾರಿಸುವುದಕ್ಕೆ ಬದಲಾಗಿ ಮತ್ತಷ್ಟು ಹದಗೆಟ್ಟಿದೆ. ಮುದಿ ಮತ್ತು ನಿಷ್ಪ್ರಯೋಜಕ ಜಾನುವಾರುಗಳ ಸಂಖ್ಯೆ ಅಗಾಧವಾಗಿ ಬೆಳೆದಿದ್ದು ಅದು ಹೀಗೆ ಮುಂದುವರಿಯಲಿದೆ. ಭಾರತದಲ್ಲಿ ಗೋಹತ್ಯೆಯನ್ನು ಪ್ರತಿಬಂಧಿಸುವ ಸಲುವಾಗಿ 1949ರಲ್ಲಿ ನೇಮಕಗೊಂಡ ತಜ್ಞರ ಸಮಿತಿ ಹೀಗೆ ಹೇಳಿದೆ:

"ಎಲ್ಲ ಜಾತಿಯ ಜಾನುವಾರುಗಳ ಹತ್ಯೆಯ ಮೇಲಿನ ಸಂಪೂರ್ಣ ನಿಷೇಧವು ಅವುಗಳ ಸಂಖ್ಯೆಯನ್ನು ಇನ್ನಷ್ಟು ಹಿಗ್ಗಿಸುವುದಲ್ಲದೆ ಪರಿಮಿತ ಸಂಖ್ಯೆಯಲ್ಲಿರುವ ಉತ್ತಮ ಜಾನುವಾರುಗಳ ಮೇಲೆ ಪ್ರತಿಕೂಲ ಪರಿಣಾಮ ಬೀರಲಿದೆ. ಹೀಗಾಗಿ ಜಾನುವಾರುಗಳ ಹತ್ಯೆಯ ಮೇಲಣ ಸಂಪೂರ್ಣ ನಿಷೇಧವು ಒಂದು ನಕರಾತ್ಮಕ ನಿಲುವಾಗಿದೆಯೇ ಹೊರತು ಅದು ಯಾವ ಕಾರಣಕ್ಕೂ ಒಂದು ವಿಧಾಯಕ ಪರಿಹಾರವಲ್ಲ".

ಇದರಿಂದ ಬೀಡಾಡಿ ಜಾನುವಾರುಗಳ ಸಂಖ್ಯೆ ಹೆಚ್ಚು ಬೆಳೆಗಳಿಗೂ ಅದು ಹಾನಿಕಾರವಾಗಿ ಪರಣಮಿಸುತ್ತದೆ. ಅದನ್ನೇ ಈ ವರದಿಯಲ್ಲಿ ತಜ್ಞರು ಈ ರೀತಿ ಹೇಳಿದ್ದಾರೆ. ಬೀಡಾಡಿ ಜಾನುವಾರುಗಳ ಸಂಖ್ಯೆ ಈ ತಜ್ಞರು ಮುನ್ನೆಚ್ಚರಿಕೆ ನೀಡಿದಂತೆಯೇ ಅಧಿಕವಾಗಿದೆ. ಕೆಲವು ರಾಜ್ಯಗಳಲ್ಲಿ ಅಪಾಯಕಾರಿ ಹಂತಕ್ಕೆ ಬೆಳೆದಿರುವ ಇಂತಹ ಜಾನುವಾರುಗಳನ್ನು ಹಿಡಿಯಲು ವರ್ಷಂಪ್ರತಿ ಭಾರಿ ದೊಡ್ಡ ಮೊತ್ತವನ್ನು ವ್ಯಯಿಸಲಾಗುತ್ತಿದೆ.

-----

1955ರಲ್ಲಿ ಉತ್ತರ ಪ್ರದೇಶದಲ್ಲಿ ಗೋ ಸಂವರ್ಧನ ಸಮಿತಿಯು ಈ ಕೆಳಗಿನಂತೆ ಹೇಳಿದೆ:

"ಸಮಿತಿಗೆ ಬರುತ್ತಿರುವ ಮಾಹಿತಿಗಳ ಪ್ರಕಾರ ಈಚಿನ ದಿನಗಳಲ್ಲಿ ಬೀಡಾಡಿ ಮತ್ತು ಕಾಡು ಪ್ರಾಣಿಗಳ ಸಂಖ್ಯೆ ಅಗಾಧವಾಗಿ ಹೆಚ್ಚಿದೆ. ರಾಜ್ಯದ ಅನೇಕ ಭಾಗಗಳಲ್ಲಿ ಕಾಡು ಪ್ರಾಣಿಗಳ ಹಾವಳಿ ಗಂಭೀರ ಹಂತವನ್ನು ತಲುಪಿದೆ. ಕೆಲವು ಜಿಲ್ಲೆಗಳಿಂದ ಬೆಳೆಗಳಿಗೆ ಅಪಾರ ಹಾನಿ ಉಂಟು ಮಾಡುತ್ತಿರುವ ಬೀಡಾಡಿ ಜಾನುವಾರುಗಳು ಮತ್ತು ಕಾಡು ಪ್ರಾಣಿಗಳನ್ನು ಹಿಡಿಯುವಂತೆ ಪದೇ ಪದೇ ಮನವಿಗಳು ಬರುತ್ತಿವೆ. ಈ ಗಂಭೀರ ಸಮಸ್ಯೆ ಕೃಷಿ ಉತ್ಪಾದನೆಯ ಮೇಲೆ ಮಾರಕ ಪರಿಣಾಮ ಬೀರುತ್ತದೆ ಹಾಗೂ ಅದು ಆತಂಕಕಾರಿಯಾದ ವಾತಾವರಣವನ್ನು ಸೃಷ್ಟಿಸಿದೆ".

ಈ ಸಮಸ್ಯೆಯನ್ನು ನಿವಾರಿಸುವ ದಿಸೆಯಲ್ಲಿ ಯೋಜನೆಗಳನ್ನು ರೂಪಿಸುವಂತೆ ಮತ್ತು ಈ ಯೋಜನೆಗಳನ್ನು ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸುವಂತೆ ಸೂಚಿಸಲಾಗಿದೆ. ಈ ಎಲ್ಲ ಯೋಜನೆಗಳ ಅನುಷ್ಠಾನಕ್ಕೆ ಬಾರಿ ದೊಡ್ಡ ಪ್ರಮಾಣದಲ್ಲಿ ವೆಚ್ಚ ಮಾಡಬೇಕಾಗುತ್ತದೆ. ಈಗ ಬಳಸಿಕೊಳ್ಳತ್ತಿರುವ ವಿಧಾನಗಳಿಗೆ ಬಹಳಷ್ಟು ಹಣ ವೆಚ್ಚವಾಗುತ್ತಿದ್ದರೂ ಅವುಗಳು ಹೇಳಿಕೊಳ್ಳುವಷ್ಟು ಯಶಸ್ವಿಯಾಗಿಲ್ಲ. ಹಾಗಾಗಿ ಈ ವಿಷಯವನ್ನು ಹೆಚ್ಚು ವಾಸ್ತವಿಕ ದೃಷ್ಟಿಯಿಂದ ನೋಡಬೇಕು ಮತ್ತು ಭಾವುಕತೆಗೆ ಎಡೆ ಇಲ್ಲದ ವ್ಯಾವಹಾರಿಕ ದೃಷ್ಟಿಯ ನೆಲೆಯಿಂದ ಪರಿಹರಿಸಬೇಕು. ಸ್ಲೋಗನ್‌ಗಳಿಗೆ ಜೋತು ಬೀಳುವ ನಮ್ಮ ಪರಿಪಾಠವನ್ನು ಬಿಟ್ಟು ಬಿಡಲು ಇದು ಸಕಾಲವಾಗಿದೆ. ನಾವೀಗ ನಮ್ಮ ವಿವೇಕದ ದನಿಗೆ ಓಗೊಡಬೇಕಾಗಿದೆ. ಇಂದಿನ ಅತ್ಯಂತ ಚಲನಶೀಲ ವೈಜ್ಞಾನಿಕ ಯುಗದಲ್ಲಿ ನಾವು ಅವೈಜ್ಞಾನಿಕ ದೃಷ್ಟಿಕೋನದಿಂದ ಮುಂದುವರಿಯುವುದು ಸಾಧ್ಯವಿಲ್ಲ. ದೇಶದಲ್ಲಿ ಅರಣ್ಯಗಳನ್ನು ಬೆಳೆಸುವ ನಿಟ್ಟಿನಲ್ಲಿ ಮತ್ತು ಪರ್ವತ ಪ್ರದೇಶಗಳಲ್ಲಿ ಭೂ ಸವೆತವನ್ನೂ ತಡೆಗಟ್ಟಲು ನಾವು ಸಾಕಷ್ಟು ಗಮನ ಹರಿಸಿದ್ದೇವೆಯೇ? ಪರ್ವತ ಪ್ರಾಂತ್ಯಗಳ ಬಗ್ಗೆ ನನಗೆ ಸಾಕಷ್ಟು ಅರಿವಿದೆ. ಎಲ್ಲ ಕಡೆ ಅರಣ್ಯ ನಾಶ ಮುಂದುವರಿದಿದೆ.

ಅರಪರ್ವತ ಪ್ರಾಂತ್ಯಗಳ ಬಗ್ಗೆ ನನಗೆ ಸಾಕಷ್ಟು ಅರಿವಿದೆ. ಎಲ್ಲ ಕಡೆ ಅರಣ್ಯ ನಾಶ ಮುಂದುವರಿದಿದೆ. ಅರಣ್ಯಗಳನ್ನು ಬೆಳೆಸುವ ನಮ್ಮ ಪ್ರಯತ್ನ ಏನೇನೂ ಸಾಲದು. ವಿನಾಶದ ಗತಿಗೆ ಹೋಲಿಸಿದರೆ ಈ ನಿಟ್ಟಿನಲ್ಲಿ ನಮ್ಮ ಮುನ್ನಡೆ ಏನೇನೂ ಸಾಲದು. ಭೂ ಸವೆತವನ್ನು ತಡೆಗಟ್ಟುವಲ್ಲಿಯೂ ಅಷ್ಟೇ. ಇದರಿಂದಾಗಿ ಅಗಾಧ ಪ್ರಮಾಣದ ಕೃಷಿ ಭೂಮಿ ನಷ್ಟವಾಗುತ್ತಿದೆ.

ಇದೇ ರೀತಿ ಕುಟುಂಬ ಯೋಜನೆಗೆ ಸಂಬಂಧಿಸಿದಂತೆ ಮೆಹತಾ ಸಮಿತಿ ಮಾಡಿರುವ ಶಿಫಾರಸುಗಳನ್ನು ನಾವು ಅಲಕ್ಷಿಸುವಂತಿಲ್ಲ. ಈ ದಿಸೆಯಲ್ಲಿ ಈಗಾಗಲೇ ಮಾಡಿರುವ ಪ್ರಯತ್ನಗಳ ಹೊರತಾಗಿ ಸಾಮಾಜಿಕ ಶಾಸನವೊಂದನ್ನು ತರುವುದು ಅಗತ್ಯವಾಗಿದೆ. ದೇಶದ ಜನಸಂಖ್ಯೆ ನಮ್ಮ ಆಹಾರ ಉತ್ಪಾದನೆಯ ಗತಿಗಿಂತ ಹೆಚ್ಚು ವೇಗವಾಗಿ ಸಾಗಿದೆ. ಇದನ್ನು ತಾಳಿಕೊಳ್ಳುವ ಶಕ್ತಿ ನಮಗಿಲ್ಲ. ಹುಡುಗರು ಮತ್ತು ಹುಡುಗಿಯರ ವಿವಾಹದ ವಯೋಮಾನವನ್ನು ಹೆಚ್ಚಿಸುವುದು ಇದಕ್ಕೊಂದು ಪರಿಹಾರವಾದೀತು. ಇದನ್ನು ಅನುಷ್ಠಾನಗೊಳಿಸುವುದು ಕಷ್ಟವೇನಲ್ಲ. ಚೀನಾದಲ್ಲಿ ಈ ಪ್ರಯತ್ನ ಮಾಡಿದ್ದಾರೆ. ಹಾಗಿದ್ದಲ್ಲಿ ನಮ್ಮಲ್ಲಿ ಮಾತ್ರ ಅದು ಏಕೆ ಸಾಧ್ಯವಿಲ್ಲ. ಮೂರನೇಯ ಮಗುವಿಗೆ - ಎರಡು ಮಕ್ಕಳು ಜೀವಂತವಾಗಿದ್ದಲ್ಲಿ ತೆರಿಗೆ ವಿಧಿಸುವ ಪ್ರಸ್ತಾವವನ್ನು ನಾನು ಬೆಂಬಲಿಸುತ್ತೇನೆ. ಜನನ ನಿಯಂತ್ರಣಕ್ಕೆ ಸಂಬಂಧಿಸಿದಂತೆ ಮೆಹತಾ ಸಮಿತಿ ಹೇಳಿರುವುದನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಅದೇ ರೀತಿ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಬೇಕೆಂಬುದನ್ನು ನಾನು ಸಮರ್ಥಿಸುತ್ತೇನೆ. ಸರ್ಕಾರಿ ನೌಕರರ ವೇತನ ಹೆಚ್ಚಿಸುವುದಕ್ಕೆ ಬದಲಾಗಿ ಎಲ್ಲೆಡೆ ನ್ಯಾಯಬೆಲೆ ಅಂಗಡಿ ತೆರೆಯುವುದಕ್ಕೆ ನಾನು ಆದ್ಯತೆ ನೀಡುತ್ತೇನೆ. ಜನರಿಗೆ ತಮ್ಮ ಅವಶ್ಯಕತೆಗಳನ್ನು ಭರಿಸುವ ಸಾಮರ್ಥ್ಯ ಇಲ್ಲ ಎಂಬ ಕಾರಣಕ್ಕಾಗಿ ನಾವು ಅವರಿಗೆ ಹೆಚ್ಚು ವೇತನ ನೀಡುತ್ತೇವೆ. ಆದರೆ ನ್ಯಾಯಬೆಲೆ ಅಂಗಡಿಗಳನ್ನು ಪ್ರಾಮಾಣಿಕವಾಗಿ ನಡೆಸಿಕೊಂಡು ಹೋಗಬೇಕು ಮತ್ತು ಈ ನ್ಯಾಯಬೆಲೆ ಅಂಗಡಿಗಳನ್ನು ನಡೆಸುವ ಹೊಣೆಗಾರಿಕೆಯನ್ನು ಸ್ವಯಂ ಸೇವಾ ಸಂಸ್ಥೆಗಳಿಗೆ ವಹಿಸಿಕೊಡಬೇಕೆಂದು ನಾನು ಸಚಿವರಲ್ಲಿ ವಿನಂತಿಸುತ್ತೇನೆ. ಈ ನ್ಯಾಯಬೆಲೆ ಅಂಗಡಿಗಳನ್ನು ನಡೆಸಿಕೊಂಡು ಹೋಗುವಲ್ಲಿ ಮಹಿಳೆಯರು ಹೆಚ್ಚಿನ ಸಹಕಾರ ನೀಡಬಹುದೆಂದು ನಾನು ಭಾವಿಸಿದ್ದೇನೆ. ಮಹಿಳೆಯರೇ ನಡೆಸುವುದರಿಂದ ಬಡವರ ಶೋಷಣೆ ತಪ್ಪುತ್ತದೆ ಮತ್ತು ಅವರಿಗೆ ಜೀವನಾವಶ್ಯಕ ಸಾಮಗ್ರಿಗಳು ಸುಲಭವಾಗಿ ದೊರೆಯುತ್ತವೆ. ವೇತನಗಳನ್ನು ಹೆಚ್ಚಿಸುವುದರಿಂದ ದೇಶದ ಖಜಾನೆಗೆ ಅದು ಹೊರೆಯಾಗುವುದೇ ಹೊರತು ಜನ ಸಾಮಾನ್ಯರಿಗೆ ಅದರ ಪ್ರಯೋಜನ ಲಭಿಸುವುದಿಲ್ಲ. ಬದಲಾಗಿ ನ್ಯಾಯಬೆಲೆ ಅಂಗಡಿಗಳಿಗೆ ಹೆಚ್ಚಿನ ಸಹಾಯಧನ ನೀಡುವುದು ಉತ್ತಮ ವಿಧಾನವಾಗಿದೆ. ಇದರಿಂದ ಕೋಟ್ಯಾಂತರ ರೂಪಾಯಿಗಳ ವೆಚ್ಚ ತಗ್ಗುವುದಲ್ಲದೆ ಜೀವನಾವಶ್ಯಕ ಪದಾರ್ಥಗಳ ಪೂರೈಕೆಯಿಂದ ಜನರಲ್ಲಿ ಹೆಚ್ಚಿನ ಸಂತೃಪ್ತಿ ಮೂಡುತ್ತದೆ. ಹೀಗಾಗಿ ಇಂತಹ ಯೋಜನೆಗಳನ್ನು ಜಾರಿಗೊಳಿಸುವಲ್ಲಿ ಪ್ರತಿಯೊಬ್ಬರು ಅದಕ್ಕೆ ಹೆಗಲುಕೊಡಬೇಕು. ಈ ದಿಸೆಯಲ್ಲಿ ಸಾರ್ವಜನಿಕರ ವಿಶ್ವಾಸ ಮತ್ತು ಸಹಕಾರವನ್ನು ಪಡೆದುಕೊಳ್ಳುವುದು ಮುಖ್ಯ - ಅದರಲ್ಲೂ ವಿಶೇಷವಾಗಿ ಮಣ್ಣಿನ ಮಕ್ಕಳ ಸಹಕಾರ ಸರ್ಕಾರದೊಂದಿಗಿರಬೇಕು.

## ಆಹಾರ ಪದಾರ್ಥಗಳ ಕಲಬೆರಕೆಗೆ ಶಿಕ್ಷೆ ವಿಧಿಸುವ ವಿಧೇಯಕ *

ಈ ವಿಷಯ ಕುರಿತಂತೆ ಸದನದ ಮಾನ್ಯ ಸದಸ್ಯರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ನಾನು ಸಂಪೂರ್ಣವಾಗಿ ಸಮರ್ಥಿಸುತ್ತೇನೆ. ಇದು ಜನರ ಆರೋಗ್ಯದ ಮೇಲೆ ಪ್ರತಿಕೂಲ ಪರಿಣಾಮ ಬೀರುವ ಒಂದು ದೊಡ್ಡ ಸಮಸ್ಯೆಯಾಗಿದೆ. ನಮಗೆ ಆರೋಗ್ಯಕರವಾದ ಹಾಗೂ ಶುದ್ಧ ಆಹಾರ ದೊರಕದೆ ಇದ್ದಲ್ಲಿ ನಾವು ಎಷ್ಟೇ ಔಷಧಿಗಳನ್ನು ಸೇವಿಸಿದರೂ ಯಾವುದೇ ಪ್ರಯೋಜನವಾಗುವುದಿಲ್ಲ. ಹಾಗಾಗಿ ಈ ವಿಷಯದಲ್ಲಿ ಸದಸ್ಯರು ವ್ಯಕ್ತಪಡಿಸಿದ ಅಭಿಪ್ರಾಯದಲ್ಲಿ ನನಗೆ ಸಂಪೂರ್ಣ ಸಹಮತವಿದೆ. ಆದರೆ ಈ ಬಗ್ಗೆ ಕಾಯ್ದೆಯೊಂದನ್ನು ತರಲು ನನಗೆ ಅಧಿಕಾರ ಇಲ್ಲದ್ದರಿಂದ ಇಂತಹ ವಿಧೇಯಕವೊಂದನ್ನು ತರಲು ಸಾಧ್ಯವಾಗಲಿಲ್ಲ. ಆದರೆ ಆಹಾರ ಕಲಬೆರಕೆ ತಡೆಹಿಡಿಯಲು ಸೂಕ್ತ ವ್ಯವಸ್ಥೆಯನ್ನು ರೂಪಿಸಬೇಕು ಮತ್ತು ಸಮಾಜಘಾತುಕ ಶಕ್ತಿಗಳು ಈ ದಂಧೆಯಲ್ಲಿ ತೊಡಗುವುದನ್ನು ತಪ್ಪಿಸಲು ಶ್ರಮಿಸಬೇಕೆಂದು ನಾನು ಪ್ರತಿ ಎರಡು - ಮೂರು ತಿಂಗಳಿಗೊಮ್ಮೆ ರಾಜ್ಯಗಳ ಸಚಿವರುಗಳಿಗೆ ಪತ್ರಗಳನ್ನು ಬರೆಯುತ್ತಿದ್ದೆ. ಇದಕ್ಕಿಂತ ಹೆಚ್ಚಿನದೇನನ್ನೂ ಮಾಡಲು ನನಗೆ ಸಾಧ್ಯವಾಗಿಲ್ಲ. ನಾನು ಇಲ್ಲಿಗೆ ಬಂದಾಗ ದೆಹಲಿಯಲ್ಲಿ ಒಬ್ಬನೇ ಒಬ್ಬ ಅಧಿಕಾರಿ ಈ ಕಾರ್ಯಭಾರದಲ್ಲಿ ಆಸಕ್ತಿ ಹೊಂದಿರುವುದನ್ನು ನಾನು ಗಮನಿಸಿದೆ. ಈ ಸಮಸ್ಯೆಯ ಬಗ್ಗೆ ಇನ್ನು ಹೆಚ್ಚಿನ ಗಮನ ನೀಡುವಂತೆ ನಾನು ಅಂತಹ ಅಧಿಕಾರಿಗಳಿಗೆ ಇನ್ನು ಹೆಚ್ಚಿನ ಸಿಬ್ಬಂದಿ ನೀಡಲು ನಿರ್ಧರಿಸಿದೆ. ಈ ವಿಷಯದಲ್ಲಿ ಸಂಬಂಧಪಟ್ಟವರ ಗಮನ ಸೆಳೆಯಲು ಮತ್ತು ನನ್ನ ಅಭಿಪ್ರಾಯಗಳನ್ನು ಅವರಿಗೆ ತಿಳಿಯಹೇಳಿದೆ. ಈ ಸಂಬಂಧದಲ್ಲಿ ಅನೇಕ ಸಭೆಗಳನ್ನು ನಡೆಸಿದೆ. ಆದರೆ ಈ ಅಪ್ರಾಮಾಣಿಕತೆಯನ್ನು ಬೇರು ಸಹಿತ ಕಿತ್ತೊಗೆಯುವುದು ಸುಲಭವಲ್ಲ. ಇದಾದ ನಂತರ ಅಧಿಕಾರ ದೊರೆತ ತಕ್ಷಣದಲ್ಲೇ ನಾನು ಆಹಾರ ಕಲಬೆರಕೆ ವಿಧೇಯಕವನ್ನು ತಂದೆ. ಈ ವಿಧೇಯಕವನ್ನು ಆದಕ್ಕಾಗಿಯೇ ರಚಿತವಾದ ಆಯ್ಕೆ ಸಮಿತಿಯ ಪರಿಶಿಲನೆಗೆ ಒಪ್ಪಿಸಲಾಯಿತು. ಈಗ ಈ ವಿಧೇಯಕ ನಿಮ್ಮ ಮುಂದೆ ಮಂಡಿಸಲಾಗಿದೆ. ಸದನವು ಇತರ ಅನೇಕ ಕೆಲಸ ಕಾರ್ಯಗಳಲ್ಲಿ ಮುಳುಗಿದ್ದರಿಂದ ಇದಕ್ಕೆ ಮುಂಚಿತವಾಗಿ ವಿಧೇಯಕವನ್ನು ಮಂಡಿಸಲು ಸಾಧ್ಯವಾಗಿರಲಿಲ್ಲ. ಈ ವಿಷಯದಲ್ಲಿ ನಾನು ನನ್ನ ಪ್ರಾಮಾಣಿಕ ಪ್ರಯತ್ನಗಳನ್ನು ಸತತವಾಗಿ ಮುಂದುವರಿಸಿದ್ದೇನೆ. ಸಾಧ್ಯವಾದಷ್ಟು ಬೇಗನೆ ಈ ವಿಧೇಯಕ ಅಂಗೀಕಾರ ಪಡೆಯಬೇಕೆಂಬುದು ನನ್ನ ಹಂಬಲವಾಗಿದ್ದು, ಈ ನಿಟ್ಟಿನಲ್ಲಿ ನಿಮ್ಮ ಸಂಪೂರ್ಣ ಸಹಕಾರವನ್ನು ಯಾಚಿಸುತ್ತಿದ್ದೇನೆ. ಆದರೆ ಈ ದಿನದ ತನಕವೂ ಇದನ್ನು ಮಂಡಿಸಲು ಸಾಧ್ಯವಾಗಲಿಲ್ಲ. ಈ ಸಲವೂ ಈ ಉದ್ದೇಶಕ್ಕಾಗಿ ನಾನು ಸಂಸದೀಯ ವ್ಯವಹಾರಗಳ ಸಚಿವರನ್ನು ಭೇಟಿಯಾದಾಗ ಅವರು ಸದನದ ಮುಂದೆ ಬಹುದೊಡ್ಡ ಕಲಾಪ ಪಟ್ಟಿ ಇರುವುದರಿಂದ ಮತ್ತು ಈ ವಿಷಯದ ಬಗ್ಗೆ ಚರ್ಚಿಸಲು ಸದಸ್ಯರಿಗೆ ಮೂರು ದಿನಗಳ ಕಾಲಾವಕಾಶ ಬೇಕಿರುವುದರಿಂದ ವಿಧೇಯಕವನ್ನು ಮುಂಬರುವ ಅಧಿವೇಶನದ ಪ್ರಾರಂಭದಲ್ಲಿ ಮಂಡಿಸಲಾಗುವುದೆಂದು ತಿಳಿಸಿದರು.

---

* ಆಹಾರ ಪದಾರ್ಥಗಳ ಕಲಬೆರಕೆಗೆ ಶಿಕ್ಷೆ ವಿಧಿಸುವ ವಿಧೇಯಕ ಕುರಿತು ಶ್ರೀ ಜಂಜುನ್‌ವಾಲಾ ಅವರು ಮಂಡಿಸಿದ ಖಾಸಗಿ ವಿಧೇಯಕದ ಮೇಲೆ ಸದಸ್ಯರು ಎತ್ತಿದ ಆಕ್ಷೇಪಗಳಿಗೆ ಉತ್ತರಿಸುತ್ತ (ಲೋಕಸಭೆ ಚರ್ಚೆ, ಏಪ್ರಿಲ್ 28, 1954. ಸಿಸಿ 5548 - 5550).

ಇದು ಅತ್ಯವಶ್ಯ ಎಂದು ನಾನು ಭಾವಿಸಿದ್ದೇನೆ. ನಾನು ಐದು ದಿನಗಳನ್ನು ಇದಕ್ಕಾಗಿಯೇ ಮೀಸಲಾಗಿಟ್ಟು ಆಯ್ಕೆ ಸಮಿತಿ ಇದನ್ನು ಅನುಮೋದಿಸುವಂತೆ ಮಾಡಿದೆ. ಒಟ್ಟಿನಲ್ಲಿ ಈ ವಿಧೇಯಕ ಅತಿ ಬೇಗ ಅಂಗೀಕೃತವಾಗಬೇಕು ಎಂಬುದು ನನ್ನ ಇಂಗಿತವಾಗಿದೆ. ಆದರೂ ಇದುವರೆಗೂ ಈ ವಿಧೇಯಕವನ್ನು ಸದನ ಮುಂದೆ ತರಲಾಗಲಿಲ್ಲ. ಆದರೆ ಇದಕ್ಕಾಗಿ ನೀವು ನನ್ನನ್ನು ಹಳಿಯುವ ಹಾಗಿಲ್ಲ. ಈಗ ವಿಷಯ ನಿಮಗೂ ಗೊತ್ತಿದೆ. ನೀವು ಈ ವಿಷಯದಲ್ಲಿ ಹೆಚ್ಚಿನ ಆಸಕ್ತಿ ತೋರಿದ್ದರೆ ಸರಕಾರ ಸಾಧ್ಯವಾದಷ್ಟು ಬೇಗ ಈ ವಿಧೇಯಕವನ್ನು ಸದನದ ಮುಂದೆ ತರಬೇಕೆಂದು ಆಗ್ರಹ ಪಡಿಸಿದ್ದರೆ ಈ ವಿಧೇಯಕ ಈಗಾಗಲೇ ಅಂಗೀಕಾರ ಪಡೆಯುತ್ತಿತ್ತು. ಬದಲಾಗಿ ನೀವು ಈ ಹೊಣೆಯನ್ನು ನನ್ನೊಬ್ಬಳ ಮೇಲೆಯೇ ಹೊರಿಸುತ್ತಿದ್ದೀರಿ. ಆದರೆ ಈ ವಿಷಯದಲ್ಲಿ ನನ್ನ ಮೇಲೆ ತಪ್ಪು ಹೊರಿಸುವುದು ಸರಿಯಲ್ಲ. ಈ ವಿಧೇಯಕವು ಸಿದ್ಧಗೊಂಡು ಕಳೆದ ಒಂದು ವರ್ಷದಿಂದ ನಿಮ್ಮ ಪರಿಶೀಲನೆಗಾಗಿ ಕಾದು ಕೂತಿದೆ.

ಈಗ ಮಾನ್ಯ ಸದಸ್ಯರು ತಂದಿರುವ ವಿಧೇಯಕವು ಸಮಗ್ರ ಸ್ವರೂಪದ್ದಲ್ಲ, ಎಂಬ ಅಂಶವನ್ನು ನಾನಿಲ್ಲಿ ಸ್ಪಷ್ಟಪಡಿಸುತ್ತಿದ್ದೇನೆ. ಇದರಿಂದ ಯಾವುದೇ ಉದ್ದೇಶ ಈಡೇರುವುದಿಲ್ಲ, ಅಥವಾ ನಾನು ಉದ್ದೇಶಿಸಿರುವುದು ಈಡೇರುವುದಿಲ್ಲ. ಆದರೂ ಈ ವಿಷಯದ ಬಗ್ಗೆ ಸದನದ ಗಮನ ಸೆಳೆದ ಸದಸ್ಯರ ಪ್ರಯತ್ನವನ್ನು ಅಭಿನಂದಿಸುತ್ತೇನೆ. ಈ ವಿಷಯದಲ್ಲಿ ಸರ್ಕಾರ ಏನಾದರೂ ಮಾಡಬೇಕೆಂಬ ಅವರ ಒತ್ತಾಯವನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ನನ್ನ ಅಭಿಪ್ರಾಯದಲ್ಲಿ ಈ ವಿಧೇಯಕವು ತೀರಾ ಅಸಮರ್ಪಕವಾಗಿದೆ. ಉದಾಹರಣೆಗೆ ಈ ವಿಧೇಯಕವು ಆಹಾರದ ಗುಣಮಟ್ಟ ನಿಷ್ಕರ್ಷೆಯ ಮಾನದಂಡ ಹೇಗಿರಬೇಕು ಮತ್ತು ಕಲಬೆರಕೆ ಎಂದರೇನು ಎಂಬುದನ್ನು ಸರಿಯಾಗಿ ವಿಶ್ಲೇಷಿಸಿಲ್ಲ. ಆದರೆ ನಾನು ಮಂಡಿಸಿರುವ ವಿಧೇಯಕವು ಹೆಚ್ಚು ವಿವರವಾಗಿ ಮತ್ತು ಉಪಯುಕ್ತವಾಗಿ ಇದೆ. ಈ ವಿಧೇಯಕವು ಈಗಲೇ ಅಂಗೀಕಾರ ಪಡೆಯಬೇಕೆಂದು ನಾನು ಈ ಸಂದರ್ಭದಲ್ಲಿ ಮಾನ್ಯ ಸದಸ್ಯರಲ್ಲಿ ಮನವಿ ಮಾಡಿಕೊಳ್ಳುತ್ತಿದ್ದೇನೆ. ಈ ಸಂಬಂಧದಲ್ಲಿ ರಾಜ್ಯ ಸರ್ಕಾರಗಳು ಮತ್ತು ದೆಹಲಿ ಸರ್ಕಾರಗಳನ್ನು ಪದೇ ಪದೇ ವಿನಂತಿಸುತ್ತಲೇ ಬಂದಿದ್ದೇನೆ. ಮಾನ್ಯ ಸದಸ್ಯರು ಹೇಳಿರುವಂತೆ ಈ ವಿಷಯದಲ್ಲಿ ರಾಜ್ಯ ಸರ್ಕಾರಗಳು ಸಾಕಷ್ಟು ಎಚ್ಚರ ವಹಿಸಬೇಕು, ಮುಂಜಾಗ್ರತೆ ಕ್ರಮ ಕೈಗೊಳ್ಳಬೇಕು ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಆಹಾರದ ಕಲಬೆರಕೆ ತಡೆಗಟ್ಟಲು ಯತ್ನಿಸಬೇಕು. ಹಾಗಾಗಿ ಮಾನ್ಯ ಸದಸ್ಯರು ತಾವು ಮಂಡಿಸಿರುವ ವಿಧೇಯಕವನ್ನು ಹಿಂತೆಗೆದುಕೊಳ್ಳಬೇಕು ಎಂದು ನಾನು ವಿನಂತಿಸುತ್ತೇನೆ. ಇದಕ್ಕೆ ಬದಲಾಗಿ ನಾನು ರೂಪಿಸಿರುವ ವಿಧೇಯಕವನ್ನು ಸಾಧ್ಯವಾದಷ್ಟು ಬೇಗ ಸದನದ ಮುಂದಿರಿಸಲು ಯತ್ನಿಸುತ್ತೇನೆ.

## 37. ಆಹಾರ ಕಲಬೆರಕೆ ತಡೆ ವಿಧೇಯಕ 1954 *

ನಾವು ಎದುರಿಸುತ್ತಿರುವ ಆಹಾರ ಕಲಬೆರಕೆಯ ಭೀಕರ ಹಾವಳಿಯನ್ನು ಪರಿಣಾಮಕಾರಿಯಾಗಿ ತಡೆಗಟ್ಟುವ ತುರ್ತು ಅಗತ್ಯವನ್ನು ಕುರಿತಂತೆ ನಾನು ಇಲ್ಲಿ ವಿವರಿಸಿ ಹೇಳಬೇಕಾದ ಅಗತ್ಯವಿಲ್ಲವೆಂದು ಭಾವಿಸಿದ್ದೇನೆ. ಈ ಪಿಡುಗನ್ನು ಎದುರಿಸಲು ಬಹುತೇಕ ಎಲ್ಲ ರಾಜ್ಯಗಳೂ ಇಂತಹ ಕಾಯ್ದೆಯನ್ನು ಹೊಂದಿವೆ. ಆದರೆ ಅಸ್ತಿತ್ವದಲ್ಲಿರುವ ಈ ಕ್ರಮಗಳಲ್ಲಿ ಏಕರೂಪತೆಯಿಲ್ಲ. ಈ ಸಂಬಂಧದಲ್ಲಿನ ಅಪರಾಧಗಳಿಗೆ ಈಗ ನಾವು ವಿಧಿಸಲು ಅವಕಾಶವಿರುವ ದಂಡನೆ ಸಮರ್ಪಕವಾಗಿಲ್ಲ ಹಾಗೂ ಪ್ರಮಾಣ ಬದ್ಧವಾಗಿಲ್ಲ ಎಂಬುದು ಬಹುತೇಕ ಸಚಿವರ ಅಭಿಮತವಾಗಿದೆ. ಈ ಪ್ರಶ್ನೆಯನ್ನು ಅವರೊಂದಿಗೆ ಚರ್ಚಿಸಿದಾಗ ಅವರೆಲ್ಲರೂ ಈ ಅಭಿಪ್ರಾಯವನ್ನು ನನಗೆ ತಿಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅಖಿಲ ಭಾರತ ಮಟ್ಟದಲ್ಲಿ ಅನ್ವಯಿಸಬಹುದಾದ ಅಪರೂಪದ ವಿಧೇಯಕವೊಂದನ್ನು ನಾನೀಗ ಮಂಡಿಸುತ್ತಿದ್ದೇನೆ. 1952ರ ನವೆಂಬರ್‌ನಲ್ಲಿ ಲೋಕಸಭೆಯಲ್ಲಿ ಈ ಸಂಬಂಧದ ವಿಧೇಯಕವನ್ನು ಮಂಡಿಸಲಾಯಿತು ಮತ್ತು ಪರಿಶೀಲನೆಗಾಗಿ ಅದನ್ನು ಆಯ್ಕೆ ಸಮಿತಿಗೆ ಒಪ್ಪಿಸಲಾಯಿತು. ಆಯ್ಕೆ ಸಮಿತಿ ಸಭೆ ಸೇರಿ 1953ರ ಫೆಬ್ರವರಿಯಲ್ಲೇ ತನ್ನ ಅಭಿಪ್ರಾಯವನ್ನು ನೀಡಿತ್ತು. ಅಂದಿನಿಂದ ಈತನಕವೂ ಈ ವಿಧೇಯಕವು ಲೋಕಸಭೆಯಲ್ಲಿ ಮಂಡನೆಗಾಗಿ ಕಾದು ಕುಳಿತಿತ್ತು. ದುರಾದೃಷ್ಟವಶಾತ್ ಇನ್ನೂ ಹೆಚ್ಚಿನ ಪ್ರಾಮುಖ್ಯದ ಹಲವು ಕಲಾಪಗಳು ಪರಿಶೀಲನೆಗೆ ಬಾಕಿ ಇದ್ದುದ್ದರಿಂದ ಈತನಕವೂ ಈ ವಿಧೇಯಕವನ್ನು ಬದಿಗೆ ಸರಿಸಲಾಗಿತ್ತು. ಆಯ್ಕೆ ಸಮಿತಿ ತಿದ್ದುಪಡಿ ಸೂಚಿಸಿರುವ ಈ ವಿಧೇಯಕವನ್ನು ಈಗ ಲೋಕಸಭೆ ಮತ್ತೆ ಪರಿಶೀಲನೆಗೆ ತೆಗೆದುಕೊಂಡಿದೆ. ಲೋಕಸಭೆಯು ಅನುಮೋದನೆ ನೀಡಿದ ಬಳಿಕ ಇದನ್ನು ಮತ್ತೆ ನಾನು ರಾಜ್ಯಸಭೆಯಲ್ಲಿ ಮಂಡಿಸಬೇಕಾಗಿದೆ. ಈ ಸದನದ ಗೌರವಾನ್ವಿತ ಸದಸ್ಯರೆಲ್ಲರೂ ಈ ವಿಧೇಯಕಕ್ಕೆ ಬೆಂಬಲ ನೀಡುವರೆಂದು ನಾನು ದೃಢವಾಗಿ ನಂಬಿದ್ದೇನೆ. ಒಟ್ಟಿನಲ್ಲಿ ಈ ವಿಧೇಯಕವು ಶೀಘ್ರಾತಿ ಶೀಘ್ರ ಕಾಯಿದೆಗಳ ಸಂಪುಟವನ್ನು ಸೇರಬೇಕೆಂಬುದೇ ನನ್ನ ಕಾಳಜಿಯಾಗಿದೆ.

ಈ ವಿಧೇಯಕವನ್ನು ಅಭ್ಯಸಿಸಿರುವ ಸದಸ್ಯರು ಕಲಬೆರಕೆ ಅಪರಾಧ-ಒಂದು ಶಿಕ್ಷಾರ್ಹ ಅಪರಾಧ ಎಂದು ಗುರುತಿಸುವುದು ಕಠಿಣವಾಗಲಾರದು ಎಂದಿದ್ದಾರೆ. ಎಲ್ಲ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚನೆ ನಡೆಸಿ ಮತ್ತು ಬೇರೆ ಬೇರೆ ರಾಜ್ಯಗಳಲ್ಲಿ ಈಗ ಅಸ್ತಿತ್ವದಲ್ಲಿರುವ ಕ್ರಮಗಳನ್ನು ಸೂಕ್ಷ್ಮವಾಗಿ ಪರಾಮರ್ಶಿಸಿ ಈ ವಿಧೇಯಕಕ್ಕೆ ಹಲವಾರು ಖಂಡಗಳನ್ನು ಸೇರಿಸಿರುವುದನ್ನು ನೀವು ನೋಡಿದ್ದೀರಿ. ಆಹಾರ ಕಲಬೆರಕೆ ಮಾನವ ಸಮುದಾಯದ ವಿರುದ್ಧ ಮಾಡುವ ಒಂದು ಘೋರ ಅಪರಾಧವಾಗಿದ್ದು ಅದಕ್ಕೆ ಮುಂದಾಗುವ ಕಂಪನಿಗಳು ಅಥವಾ ವ್ಯಕ್ತಿಗಳನ್ನು ದಂಡಿಸಲು ರಾಜ್ಯ ಸರ್ಕಾರಗಳಿಗೆ ಅವಕಾಶ ಕಲ್ಪಿಸಿಕೊಡುವುದು ಈ ವಿಧೇಯಕದ ಉದ್ದೇಶವಾಗಿದೆ.

---

* ಲೋಕಸಭೆಯಲ್ಲಿ ಅಂಗೀಕರಿಸಲಾದ 1954ರ ಆಹಾರ ಕಲಬೆರಕೆ ತಡೆ ವಿಧೇಯಕಕ್ಕೆ ತಿದ್ದುಪಡಿ ಸೂಚಿಸಿ ನಿಲುವಳಿ ಮಂಡಿಸುತ್ತಾ (ರಾಜ್ಯ ಸಭೆ ಚರ್ಚೆ, ಸೆಪ್ಟೆಂಬರ್ 1, 1954, ಸಿಸಿ-1 008-1010, 2134-2135 ಮತ್ತು 2182-2193).

ಆಯ್ಕೆ ಸಮಿತಿಯು ಮಾಡಿರುವ ತಿದ್ದುಪಡಿಗಳು ಹಾಗೂ ಈ ನಿಟ್ಟಿನಲ್ಲಿ ಲೋಕಸಭೆಯಲ್ಲಿ ಸೂಚಿಸಲಾಗಿರುವ ತಿದ್ದುಪಡಿಗಳೊಂದಿಗೆ ಈ ವಿಧೇಯಕವು ಈ ಪಿಡುಗನ್ನು ತಡೆಹಿಡಿಯುವಲ್ಲಿ ಮಹತ್ವದ ಪರಿಣಾಮ ಬೀರಲಿದೆ ಎಂಬುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ. ಈ ವಿಧೇಯಕದಿಂದ ರಾಜ್ಯ ಸರ್ಕಾರಗಳಿಗೂ ಹೆಚ್ಚಿನ ಅನುಕೂಲವಾಗುವುದು ಎಂದು ನಾನು ಭಾವಿಸಿದ್ದೇನೆ. ಆದರೆ ಕಾಯ್ದೆಯೊಂದರಿಂದಲೇ ಅಪ್ರಾಮಾಣಿಕತೆಯನ್ನು ನಿವಾರಿಸುವುದು ಸಾಧ್ಯವಿಲ್ಲ. ಆದರೆ ಪ್ರತಿಬಂಧಕ ಕ್ರಮಗಳು ಸ್ವಲ್ಪಮಟ್ಟಿಗೆ ಪರಿಣಾಮ ಬೀರುತ್ತವೆಂಬುದೂ ವಾಸ್ತವವೇ ಆಗಿದೆ. ಒಟ್ಟಿನಲ್ಲಿ ಈ ವಿಧೇಯಕ ಅಂಗೀಕಾರ ಪಡೆದಾಗ ಈ ನಿಟ್ಟಿನಲ್ಲಿ ನಾವು ಗಮನಾರ್ಹ ಸಾಧನೆಯನ್ನು ಮಾಡಿದಂತಾಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

* * * * * *

ಅಪರಾಧ ಎಸಗಿದ ಯಾವನೇ ವ್ಯಕ್ತಿಯನ್ನು ವಿಚಾರಣೆಗೆ ಗುರಿಪಡಿಸುವುದನ್ನು ಯಾವ ಶಕ್ತಿಯೂ ತಡೆಯಲಾರದು. ಸರ್ಕಾರಿ ನೌಕರರಾಗಲಿ ಅಥವಾ ಇತರರಾಗಲಿ ಅಪರಾಧ ಎಸಗಿದಲ್ಲಿ ಅಂಥವರು ದಂಡನೆಗೆ ಒಳಗಾಗಿಯೇ ತೀರಬೇಕು. *

ಯಾವನೇ ಓರ್ವ ವ್ಯಕ್ತಿ ತಪ್ಪಿತಸ್ಥ ಎಂದು ಕಂಡು ಬಂದಲ್ಲಿ ಆತ ಸರ್ಕಾರಿ ನೌಕರನಾಗಿರಲಿ ಅಥವಾ ಅಲ್ಲದಿರಲಿ ಅಂತಹವರ ವಿರುದ್ಧ ಕಾನೂನು ಕ್ರಮ ಅನಿವಾರ್ಯ.

ಮಾನ್ಯ ಸಭಾಧ್ಯಕ್ಷರೇ ಕಾಯ್ದೆಗೆ ಸಂಬಂಧಿಸಿದಂತೆ ಸೂಕ್ತ ವಿಧಿಗಳನ್ನು ರೂಪಿಸಲಾಗುವುದು ಮತ್ತು ಸೂಕ್ತ ಖಂಡಗಳನ್ನು ಸೇರಿಸಲಾಗುವುದು. ಒಟ್ಟಾರೆಯಾಗಿ ಈ ಕಾಯ್ದೆಯ ನಿಯಂತ್ರಣವು ರಾಜ್ಯ ಸರ್ಕಾರದ ಕೈಯಲ್ಲಿ ಇರುವುದು. ಸಂವಿಧಾನದಲ್ಲಿ ನಿರ್ದಿಷ್ಟಪಡಿಸಿದ ಹೊರತಾಗಿ, ಕಾಯ್ದೆಯನ್ನು ರೂಪಿಸುವ ಹೊರತಾಗಿ ಉಭಯ ಸಾಮಾನ್ಯ ಯಾದಿಯಲ್ಲಿ ಬರುವ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಕಾರ್ಯ ನಿರ್ವಹಣೆಯ ಅಧಿಕಾರವು ರಾಜ್ಯ ಸರ್ಕಾರಗಳ ಕೈಯಲ್ಲಿ ಇರುತ್ತದೆ ಎಂಬ ಅಂಶವನ್ನು ಸಂವಿಧಾನದ 73ನೇ ವಿಧಿ ನಿಖರವಾಗಿ ಹೇಳುತ್ತದೆ. ಪ್ರಸಕ್ತ ವಿಧೇಯಕದಲ್ಲೂ ಸಾಕಷ್ಟು ಅಧಿಕಾರಗಳನ್ನು ಕೇಂದ್ರ ಸರ್ಕಾರಕ್ಕೆ ಮೀಸಲಿಡಲಾಗಿದೆ. ಇದನ್ನು ನೀವು 23, 3,4 ಮತ್ತಿತರ ಖಂಡಗಳಲ್ಲಿ ನೋಡಬಹುದು. **

ಮಾನ್ಯ ಉಪಸಭಾಪತಿಗಳೇ, ಮೊಟ್ಟ ಮೊದಲಲ್ಲಿ ಈ ವಿಧೇಯಕಕ್ಕೆ ಬೆಂಬಲ ನೀಡಿದ ಎಲ್ಲ ಸದಸ್ಯರಿಗೂ ಕೃತಜ್ಞತೆ ಸೂಚಿಸಲು ಬಯಸುತ್ತೇನೆ. ಆಹಾರದ ಕಲಬೆರಕೆಯಿಂದ ಸಾರ್ವಜನಿಕರ ಆರೋಗ್ಯಕ್ಕೆ ಎಂತಹ ಮಾರಕ ಪರಿಣಾಮ ಉಂಟಾಗುತ್ತದೆ ಎಂಬುದು ಈ ಸದನದಲ್ಲಿ ನನ್ನನ್ನು ಬಿಟ್ಟರೆ ಬೇರಾರಿಗೂ ತಿಳಿದಿರಲಾರದು ಎಂದು ನಾನು ಭಾವಿಸುತ್ತೇನೆ. ಹಾಗಾಗಿ ನನ್ನ ಕೈಗೆ ಅಧಿಕಾರ ಬಂದ ತಕ್ಷಣದಲ್ಲೇ ಅಖಿಲ ಭಾರತ ಮಟ್ಟದಲ್ಲಿ ಅನ್ವಯವಾಗುವ

* ಆಹಾರ ಕಲಬೆರಕೆಗೆ ಸಂಬಂಧಿಸಿದಂತೆ ದೇಶದಲ್ಲಿ ಏಕರೂಪದ ಕಾಯ್ದೆ ಇರಬೇಕು ಮತ್ತು ಕಂಪನಿಗಳು ಎಸಗುವ ಅಪರಾಧಗಳಿಗೆ ನಿರ್ದಿಷ್ಟ ವಿಧಿಗಳಿರಬೇಕು ಎಂದು ಶ್ರೀ ರಾಜಗೋಪಾಲನಾಯ್ಡು ಅವರು ಎತ್ತಿದ ಪ್ರಸ್ತಾಪಕ್ಕೆ ಸೆಪ್ಟೆಂಬರ್ 14, 1954 ರಂದು ನಡೆದ ಚರ್ಚೆಯಲ್ಲಿ ಮಧ್ಯಪ್ರವೇಶಿಸಿ ಮಾತನಾಡುತ್ತಾ.

** ಸರ್ಕಾರಿ ನೌಕರರು ಎಸಗುವ ಅಪರಾಧಗಳಿಗೆ ಸಂಬಂಧಿಸಿದಂತೆ ಶ್ರೀ ರಾಜಗೋಪಾಲ ನಾಯ್ಡು ಅವರು ಮಾಡಿದ ಪ್ರಸ್ತಾಪಗಳಿಗೆ ಉತ್ತರ ನೀಡುತ್ತಾ.

ಏಕರೂಪದ ಕಾಯ್ದೆಯೊಂದನ್ನು ತರಲು ನಾನು ಈ ವಿಧೇಯಕವನ್ನು ಮಂಡಿಸಿದ್ದೇನೆ. ಭಾರತವು ಗಣರಾಜ್ಯವಾಗಿ ಪರಿವರ್ತನೆಗೊಂಡ ತಕ್ಷಣದಲ್ಲೇ ಕಾಲ ವಿಳಂಬ ಮಾಡದೇ ವಿಧೇಯಕವೊಂದನ್ನು ಮಂಡಿಸಲು ನಾನು ಮುಂದಾಗಿದ್ದೇನೆ. ನಾನು ಈ ವಿಷಯದಲ್ಲಿ ಎಲ್ಲ ರಾಜ್ಯಗಳೊಂದಿಗೆ ಸಮಾಲೋಚಿಸಿದ್ದೇನೆ. ಆಹಾರ ಕಲಬೆರಕೆ ಮತ್ತು ತತ್ಸಂಬಂಧಿ ಅಪರಾಧಗಳನ್ನು ನಿಯಂತ್ರಿಸುವಲ್ಲಿ ವಿವಿಧ ರಾಜ್ಯಗಳಲ್ಲಿ ಈಗ ಅಸ್ತಿತ್ವದಲ್ಲಿರುವ ಕ್ರಮಗಳನ್ನು ವಿವರವಾಗಿ ಪರಿಶೀಲಿಸಿದ್ದೇನೆ. ಹೀಗೆ ರಾಜ್ಯ ಸರ್ಕಾರಗಳ ಒಪ್ಪಿಗೆಯ ಮೇರೆಗೆ ಮತ್ತು ಈಗಿರುವ ಕಾಯ್ದೆಗಳ ಸಾರವನ್ನು ಗ್ರಹಿಸಿಕೊಂಡು ನಾನು ಈ ವಿಧೇಯಕವನ್ನು ತಂದಿದ್ದೇನೆ. ಈ ವಿಧೇಯಕವು 1952ರ ನವೆಂಬರ್ ತಿಂಗಳಲ್ಲಿ ಲೋಕಸಭೆಯಲ್ಲಿ ಮಂಡಿಸಲ್ಪಟ್ಟಿತು ಮತ್ತು 1953 ರಲ್ಲಿ ಅದು ಆಯ್ಕೆ ಸಮಿತಿಯ ಮುಂದೆ ಬಂದಿತು. ಆಯ್ಕೆ ಸಮಿತಿಯು ಭಾರೀ ಪರಿಶ್ರಮ ವಹಿಸಿ ಈ ವಿಧೇಯಕದ ಎಲ್ಲ ಅಂಶಗಳನ್ನು ಪರಿಶೀಲಿಸಿ 1953ರ ಏಪ್ರಿಲ್ ತಿಂಗಳಲ್ಲಿ ತಿದ್ದುಪಡಿಗಳನ್ನು ಸೂಚಿಸಿತು. ಅನಂತರ ಮತ್ತೆ ಅದನ್ನು ಸದನದಲ್ಲಿ ಮಂಡಿಸಲಾಯಿತು. ಲೋಕಸಭೆಯಲ್ಲಿ ಅದು ಅಷ್ಟು ದೀರ್ಘಕಾಲ ಹಾಗೆಯೇ ಉಳಿದುಕೊಂಡು ಬರಲು ನಾನೇ ಕಾರಣ ಎಂದು ಹಲವರು ದೂರಿದ್ದಾರೆ. ಆದರೆ ಪ್ರತಿ ಅಧಿವೇಶನದಲ್ಲಿ ಈ ವಿಧೇಯಕ ಮಂಡನೆಯಾಗಬೇಕೆಂದು ನಾನು ನನ್ನಿಂದಾದ ಎಲ್ಲ ಪ್ರಯತ್ನಗಳನ್ನು ಮಾಡುತ್ತಲೇ ಬಂದಿದ್ದೇನೆ. ಆದರೆ ಕಾರಣಾಂತರಗಳಿಂದ ಮಾನ್ಯ ಸದಸ್ಯರು ಇತರ ವಿಧೇಯಕಗಳಿಗೆ ಆದ್ಯತೆ ನೀಡಿದರು. ಹಾಗಾಗಿ ಅದನ್ನು ಮಂಡಿಸಲು ಇಷ್ಟು ವಿಳಂಬವಾಯಿತು. ನಾನು ನೇರವಾಗಿ ಪ್ರಧಾನಮಂತ್ರಿಗಳ ಬಳಿಗೆ ಹೋಗಿ ಈ ವಿಧೇಯಕಕ್ಕೆ ಇದೇ ಅಧಿವೇಶನದಲ್ಲಿ ಪ್ರಥಮ ಆದ್ಯತೆ ನೀಡುವಂತೆ ಕೇಳಿಕೊಂಡೆ. ಅದನ್ನು ಅವರು ಒಪ್ಪಿಕೊಂಡರು. ಹಾಗಾಗಿ ಈ ವಿಧೇಯಕ ಆಯ್ಕೆ ಸಮಿತಿಯ ಮುಂದೆ ಹೋಯಿತು. ಅನಂತರ ಅದು ಲೋಕಸಭೆಯಲ್ಲಿ ಪರಿಶೀಲಿಸಲ್ಪಟ್ಟಿತು. ಈಗ ಅದು ಈ ಸದನದ ಮುಂದಿದ್ದು ಪ್ರಸಕ್ತ ಅಧಿವೇಶನ ಮುಗಿಯುವುದರೊಳಗೆ ಭಾರತದ ಕಾನೂನು ಸಂಪುಟವನ್ನು ಸೇರುವುದೆಂದು ನಾನು ನಂಬಿದ್ದೇನೆ. ಇದು ತೀರಾ ಅತ್ಯಗತ್ಯ ಎಂದು ನಾನು ಪರಿಗಣಿಸಿದ್ದೇನೆ. ಕಲಬೆರಕೆಯನ್ನು ತಡೆಯಲು ತಕ್ಕ ಪ್ರತಿಬಂಧಕ ಕ್ರಮಗಳನ್ನು ಹೊಂದಿರುವುದು ಅತ್ಯಾವಶ್ಯಕವಾಗಿದೆ ಎಂದು ಪ್ರತಿಯೊಬ್ಬರೂ ಹೇಳಿದ್ದಾರೆ. ಅದೇ ವೇಳೆಗೆ ಅನೇಕ ಸದಸ್ಯರು ಈ ವಿಷಯಕ್ಕೆ ಸಂಬಂಧಿಸಿದಂತೆ ಹಲವೊಂದು ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ಅವರು ಪ್ರತಿಕ್ರಿಯೆಗಳನ್ನು ಆಲಿಸುವುದು ನನಗೆ ಅತ್ಯಂತ ಸಂತಸದ ವಿಷಯವಾಗಿದೆ. ಆದರೆ ಇದೇ ವೇಳೆಗೆ ಇಂತಹ ಒಂದು ಕ್ರಮ ಯಶಸ್ಸು ಕಂಡಿತೇ ಎಂಬ ಸಂದೇಹವನ್ನು ಅವರು ವ್ಯಕ್ತಪಡಿಸಿದ್ದಾರೆ. ಇದು ನನಗೆ ಎಲ್ಲಕ್ಕಿಂತ ಹೆಚ್ಚಿನ ನೋವುಂಟು ಮಾಡಿದ ಸಂಗತಿಯಾಗಿದೆ. ಯಾವುದೇ ಶಾಸನದಿಂದ ಸಮಾಜದಲ್ಲಿ ಸ್ಥಾಯಿಯಾಗಿರುವ ಯಾವುದೇ ಒಂದು ಪಿಡುಗನ್ನು ಸಂಪೂರ್ಣವಾಗಿ ನಿವಾರಿಸುವುದು ಅಸಾಧ್ಯ ಎಂಬುದು ನನಗೆ ಗೊತ್ತಿದೆ. ಆದರೆ ಕಾಯ್ದೆಯು ಸಮಾಜಕ್ಕೆ ತಿಳುವಳಿಕೆ ನೀಡುವ ಒಂದು ಸಾಧನವಾಗಿದೆ. ಸಮಾಜದ ಯಾವನೇ ಓರ್ವ ಸದಸ್ಯ ಅಪರಾಧ ಎಸಗಿದರೆ-ಆಹಾರದ ಕಲಬೆರಕೆ ಮಾನವ ಸಮುದಾಯದ ಮೇಲೆ ಎಸಗುವ ಒಂದು ಘೋರ ಅಪರಾಧವಾಗಿದೆ. ಅದರಲ್ಲೂ ಪೋಷಣೆ ಇಲ್ಲದೆ ಬಳಲುತ್ತಿರುವ ಮತ್ತು ಪೌಷ್ಟಿಕಾಂಶದ ಕೊರತೆಯಿಂದ ಬಳಲುತ್ತಿರುವ ಬಡದೇಶವೊಂದರಲ್ಲಿ ಅದೊಂದು ಘೋರ ಘಾತಕವಾಗಿದೆ. ಅಂಥವರನ್ನು ದಂಡನೆಗೆ ಗುರಿಪಡಿಸಲಾಗುವುದು. ಆಹಾರ ದುರ್ಮಿಶ್ರಣ ಮಾಡುವುದು ನಿಜಕ್ಕೂ ಘೋರ ಕೃತ್ಯವಾಗಿದೆ.

ಹಾಗಾಗಿ ಕಾಯ್ದೆ ಕೂಡಾ ಅವಶ್ಯವೇ ಆಗಿದೆ. ಆದರೆ ಕಾಯ್ದೆಯೊಂದರಿಂದಲೇ ಈ ಪಿಡುಗನ್ನು ನಿರ್ಮೂಲನಗೊಳಿಸುವುದು ಸಾಧ್ಯವಿಲ್ಲ ಎಂಬುದೂ ಅಷ್ಟೇ ವಾಸ್ತವವಾಗಿದೆ. ಈ ವಿಷಯದಲ್ಲಿ ಸಂಸತ್ತಿನ ಉಭಯ ಸದನಗಳ ಪ್ರತಿಯೊಬ್ಬ ಸದಸ್ಯರ ಸಹಾನುಭೂತಿ ಹಾಗೂ ಸಕ್ರಿಯ ಬೆಂಬಲ ನಮಗೆ ಬೇಕಾಗಿದೆ. ಈ ಪಿಡುಗನ್ನು ನಿರ್ಮೂಲನೆಗೊಳಿಸುವ ಕಾರ್ಯಭಾರದಲ್ಲಿ ದೇಶದ ಪ್ರತಿಯೊಬ್ಬ ಪ್ರಜೆಯ ಸಹಾಯ, ಸಹಕಾರಗಳೂ ನಮಗೆ ಅಗತ್ಯವಾಗಿವೆ. ನಮ್ಮಲ್ಲಿ ಪ್ರತಿಯೊಬ್ಬರೂ ಅಪ್ರಾಮಾಣಿಕರು ಎಂದು ಹೇಳುವವರ ಸಾಲಿಗೆ ನಾನು ಸೇರಿಲ್ಲ. ಜನಸಮುದಾಯದ ಬಹು ಸಂಖ್ಯಾತರು ಪ್ರಾಮಾಣಿಕರೇ ಆಗಿದ್ದಾರೆ. ಆದರೆ ಕೆಲವೇ ಮಂದಿ ಅಪ್ರಾಮಾಣಿಕರು ಸೇರಿ ದೇಶದಲ್ಲಿ ದಾಂಧಲೆ ಎಬ್ಬಿಸುತ್ತಿದ್ದಾರೆ. ಅಂಥವರನ್ನು ದಂಡಿಸಲೇಬೇಕು. ಹಾಗಾಗಿ ಈ ಕಾಯ್ದೆ ಮತ್ತು ಈ ಕಾಯ್ದೆಯನ್ನು ಜಾರಿಗೊಳಿಸುವ ಅಧಿಕಾರ ಹೊಂದಿರುವವರು-ವ್ಯಕ್ತಿಗಳು, ರಾಜ್ಯ ಸರ್ಕಾರಗಳು ಈ ದಿಸೆಯಲ್ಲಿ ಬಹಳಷ್ಟು ಸಾಧಿಸಬಹುದೆಂದು ನಾನು ನಂಬಿದ್ದೇನೆ. ಸಾಮಾಜಿಕ ಕಾರ್ಯಕರ್ತರು ಈ ಕ್ರಮವನ್ನು ಸ್ವಾಗತಿಸಲೇಬೇಕು ಮತ್ತು ಅಪರಾಧಿಗಳನ್ನು ದಂಡನೆಗೆ ಗುರಿಪಡಿಸುವ ನಿಟ್ಟಿನಲ್ಲಿ ಶಕ್ತಿಮೀರಿ ಶ್ರಮಿಸಬೇಕು ಎಂಬುದು ನನ್ನ ಅಗ್ರಹಪೂರ್ವಕ ಮನವಿ.

ಆಹಾರ ತಪಾಸಣಾ ಅಧಿಕಾರಿಗಳಿಗೆ ನೀಡಿರುವ ಅಧಿಕಾರ ಅತಿಯಾಯಿತು ಎಂದು ಕೆಲವು ಮಂದಿ ಸದಸ್ಯರು ಆಕ್ಷೇಪಿಸಿದ್ದರೆ, ಇನ್ನು ಕೆಲವರು ಈಗ ನೀಡಿರುವ ಅಧಿಕಾರ ಸಾಲದು ಎಂದಿದ್ದಾರೆ. ಈ ವಿಧೇಯಕವು ಆಹಾರ ತಪಾಸಣಾಧಿಕಾರಿಗಳಿಗೆ ನೀಡಬೇಕಾಗಿದ್ದ ಅಧಿಕಾರವನ್ನು ಸರಿಯಾದ ಪ್ರಮಾಣದಲ್ಲಿ ನೀಡಿದೆ ಎಂಬ ಅಂಶವನ್ನು ನಾನು ಹಿಂದೆಂದಿಗಿಂತಲೂ ಹೆಚ್ಚು ಖಚಿತವಾಗಿ ಈಗ ಹೇಳಬಲ್ಲೆ. ಆಹಾರ ತಪಾಸಣಾಧಿಕಾರಿಗಳಿಗೆ ಅಧಿಕಾರಗಳನ್ನು ನೀಡಲೇಬೇಕು. ಅವರಿಗೆ ಸಾಕಷ್ಟು ಅಧಿಕಾರ ಇರುವುದು ಅಗತ್ಯ. ಆದರೆ ಈ ಅಧಿಕಾರ ದುರುಪಯೋಗವಾಗದಂತೆ ವ್ಯಾಪಾರಿಗಳ ಹಿತರಕ್ಷಣೆ ಮಾಡುವುದು ಕೂಡಾ ಅಗತ್ಯವಾಗಿದ್ದು ಅದು ಸರ್ಕಾರದ ಕರ್ತವ್ಯವಾಗಿದೆ. ಈ ಸಂಬಂಧದಲ್ಲಿ ಕಾಯ್ದೆಯ ಹತ್ತನೇ ಖಂಡವನ್ನು ಕೆಲವರು ಟೀಕಿಸಿರುವುದರಿಂದ ಉಪಖಂಡ (9) ವನ್ನು ಸೇರಿಸಲಾಗಿದೆ. ಇದು ಆಹಾರ ತಪಾಸಣಾಧಿಕಾರಿಗಳು ಯಾರಿಗೇ ಆದರೂ ಕಿರುಕುಳ ನೀಡದಂತೆ ತಡೆಹಿಡಿಯುವ ಒಂದು ಪ್ರತಿಬಂಧಕ ಕ್ರಮವಾಗಿ ಒದಗಬಲ್ಲದು. ಹಾಗಾಗಿ ಇದು ಒಂದು ಅತ್ಯವಶ್ಯಕವಾದ ಕ್ರಮವಾಗಿದೆ. ಮಾನ್ಯ ಉಪಸಭಾಪತಿಗಳು, ಸದನದ ಅನೇಕ ಸದಸ್ಯರು, "ಈ ಕ್ರಮದಿಂದ ನಾವು ಇನ್ನಷ್ಟು ಮಂದಿ ಇನ್‌ಸ್ಪೆಕ್ಟರ್‌ಗಳನ್ನು ಮಾರುಕಟ್ಟೆಗೆ ಕಳುಹಿಸಲು ಮಾತ್ರ ಸಮರ್ಥರಾಗುತ್ತೇವೆ. ಅವರು ಅಲ್ಲಿಗೆ ಹೋಗಿ ಅಪ್ರಾಮಾಣಿಕ ವ್ಯಕ್ತಿಗಳೊಂದಿಗೆ ಕೈಜೋಡಿಸುತ್ತಾರೆ" ಎಂದು ಹೇಳಿರುವುದೂ ಸರಿ. ಆದರೆ ನಾವು ಇಂತಹ ವಿಷಯಗಳಲ್ಲಿ ಎಲ್ಲರನ್ನು ಎಲ್ಲ ರೀತಿಯಲ್ಲಿ ಸಮಾಧಾನಪಡಿಸಲಾರೆವು. ಯಾವುದೇ ಒಂದು ಕಾಯ್ದೆ ಎಷ್ಟೇ ಪರಿಪೂರ್ಣ ಎಂದು ಭಾವಿಸಿದರೂ ನ್ಯೂನತೆಗಳಿದ್ದೇ ಇರುತ್ತದೆ ಮತ್ತು ಯಾವನೇ ಒಬ್ಬ ವ್ಯಕ್ತಿ ಅಪರಾಧ ಮಾಡುವ ಮನೋವೃತ್ತಿ ಹೊಂದಿದ್ದರೆ ಅದಕ್ಕೆ ಒಂದಲ್ಲ ಒಂದು ದಾರಿ ಇದ್ದೇ ಇರುತ್ತದೆ. ಆದರೆ ಈ ಖಂಡವು ಆಹಾರ ತಪಾಸಣಾಧಿಕಾರಿಗೆ ಅಗತ್ಯವಿರುವ ಅಧಿಕಾರಗಳನ್ನು ಕೊಡುವುದರ ಜೊತೆಗೆ ನೀಡಲಾಗಿರುವ ಅಧಿಕಾರ ದುರುಪಯೋಗಪಡಿಸಿಕೊಳ್ಳುವುದಕ್ಕೆ ನಿರ್ಬಂಧವನ್ನು ವಿಧಿಸುವುದೂ ಅತ್ಯವಶ್ಯವಾಗಿದೆ. 22ನೇ ಖಂಡವು ತಪಾಸಣಾ ಅಧಿಕಾರಿಗೆ ಪೂರ್ಣ ರಕ್ಷಣೆ ನೀಡುತ್ತದೆ. ಅದೇ ರೀತಿ ಈ ವಿಷಯದಲ್ಲಿ ಪ್ರಾಮಾಣಿಕತೆಯಿಂದ ನಡೆದುಕೊಳ್ಳುವ

ಇತರರಿಗೆ ಅದು ಪೂರ್ಣ ರಕ್ಷಣೆ ನೀಡುತ್ತದೆ. ಕಲಬೆರಕೆಯನ್ನು ಮೂಲದಲ್ಲೇ ಪತ್ತೆ ಹಚ್ಚುವುದು ಅತ್ಯವಶ್ಯವಾಗಿದೆ ಎಂದು ಕೆಲ ಸದಸ್ಯರು ಹೇಳಿದ್ದಾರೆ. ಇದನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ ಮತ್ತು ಮೂಲದಲ್ಲೇ ತಪಾಸಣೆ ನಡೆಸುವುದಕ್ಕೆ ಈ ವಿಧೇಯಕವು ಯಾವುದೇ ರೀತಿಯಲ್ಲಿ ಅಡ್ಡಿ ಆಗುವುದಿಲ್ಲ. ಆಹಾರಕ್ಕೆ ಸಂಬಂಧಿಸಿದ ಯಾವುದೇ ವಸ್ತುವನ್ನಾದರೂ ತಪಾಸಣಾಧಿಕಾರಿಗಳು ಏಕೆ ತಪಾಸಿಸಬಾರದು? ಆಹಾರ ಪರಿಶುದ್ಧವಾಗಿರುವಂತೆ ಖಾತ್ರಿಪಡಿಸುವುದು ಅವರ ಕರ್ತವ್ಯವಾಗಿದೆ. ಆಹಾರ ಅಶುದ್ಧವಾಗಿದ್ದಾಗ ಅದಕ್ಕೆ ಬಾಧ್ಯರಾದವರನ್ನು ಹಿಡಿಯಲೇಬೇಕು. ಆಹಾರ ಬೆಳೆಯುವ ಮತ್ತು ತಯಾರಿಸುವ ಎಲ್ಲ ಕಡೆಗಳಲ್ಲೂ ಮತ್ತು ಮೂಲದಲ್ಲಿ ಅದರ ತಪಾಸಣೆ ಸೂಕ್ತವಾಗಿದೆ.

ಪಟ್ಟಣವಾಸಿಗಳಿಗಿಂತ ಗ್ರಾಮಸ್ಥರು ಹೆಚ್ಚು ಪ್ರಾಮಾಣಿಕರು ಎಂದು ನಾನು ಹೇಳುವುದಿಲ್ಲ. ಇತ್ತೀಚೆಗೆ ದೆಹಲಿಗೆ ಹಾಲನ್ನು ತರುತ್ತಿದ್ದ ಕೆಲ ಗ್ರಾಮಸ್ಥರನ್ನು ತಡೆದು ವಿಚಾರಿಸಿದಾಗ ಈ ಅಂಶ ನನ್ನ ಗಮನಕ್ಕೆ ಬಂದಿತು. ಹಾಲಿನ ಪೀಪಾಯಿಗಳೊಂದಿಗೆ ಬರುತ್ತಿದ್ದಾಗ ನಾನು ಅವರನ್ನು ನಿಲ್ಲಿಸಿದೆ. ನಾನು ಯಾರೆಂದು ಅವರಿಗೆ ಗೊತ್ತಿರಲಿಲ್ಲ. ಅವರು ಒಯ್ಯುತ್ತಿದ್ದ ಹಾಲನ್ನು ತೋರಿಸಲು ಹೇಳಿದೆ. ಆಗ ಹಾಲಿಗೆ ಕೊಳಕು ನೀರನ್ನು ಬೆರೆಸಿದ್ದು ಕಂಡುಬಂದಿತು. ನಿಮಗೆ ಇದನ್ನು ಮಾಡುವುದು ಹೇಗೆ ಸಾಧ್ಯವಾಯಿತು? ಆಹಾರ ತಪಾಸಣಾಧಿಕಾರಿಗಳು ಕಾರ್ಯನಿರ್ವಹಿಸುತ್ತಿಲ್ಲವೇ? ಎಂದು ನಾನು ಅವರನ್ನು ಕೇಳಿದೆ. ಆಹಾರ ತಪಾಸಣಾಧಿಕಾರಿಗಳ ಸಂಖ್ಯೆ ಹೆಚ್ಚಿದಷ್ಟು ಹಾಲಿನ ಕಲಬೆರಕೆಯೂ ಹೆಚ್ಚುತ್ತಿದೆ ಎಂದು ಅತ್ಯಂತ ಸರಳವಾಗಿ ಉತ್ತರಿಸಿದರು. ಅಂದರೆ ಅಪ್ರಾಮಾಣಿಕತೆ ಪ್ರತಿಯೊಬ್ಬರಲ್ಲೂ ಇದೆ ಎಂದಾಯಿತು. ಇದಕ್ಕೆ ಜನರ ಆರ್ಥಿಕ ಪರಿಸ್ಥಿತಿಗಳು ಕಾರಣ ಎಂಬುದೂ ನನಗೆ ಗೊತ್ತಿದೆ. ಇದು ಸಾಧ್ಯವಿರುವ ಮೂಲದಿಂದ ಒಂದಿಷ್ಟು ಹಣ ಸಂಪಾದಿಸುವ ತಂತ್ರ ಇದಾಗಿದೆ. ಮಾನ್ಯ ಸದಸ್ಯರು ಇದನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಕಲಬೆರಕೆಯಂತಹ ಸಮಸ್ಯೆಯನ್ನು ನಿವಾರಿಸುವಲ್ಲಿ ಶಿಕ್ಷಣ ಮಹತ್ವದ ಪಾತ್ರ ವಹಿಸುತ್ತದೆ. ಹೀಗಾಗಿ ಇಂತಹ ವಿಷಯಗಳಲ್ಲಿ ಸಾರ್ವಜನಿಕರು ಸಹಭಾಗಿಗಳಾಗಬೇಕು. ಇಂತಹ ಸಹಯೋಗ ದೊರೆತಲ್ಲಿ ಈ ಸಮಸ್ಯೆಯನ್ನು ನಿವಾರಿಸುವುದರಲ್ಲಿ ನಮಗೆ ಯಾವ ಸಂಶಯವೂ ಇಲ್ಲ. ಆರೋಗ್ಯ ಖಾತೆಯ ವತಿಯಿಂದ ನಾವು ಸಾಧ್ಯವಾದಷ್ಟು ಮಟ್ಟಿಗೆ ಜನರಲ್ಲಿ ತಿಳುವಳಿಕೆ ಮೂಡಿಸುವ ಕೆಲಸವನ್ನು ಮಾಡುತ್ತಿದ್ದೇವೆ. ಆದರೆ ಶಿಕ್ಷಣವೇ ಬೇರೆ ಬದುಕೇ ಬೇರೆ. ಮನುಷ್ಯ ತನ್ನ ಕಿಸೆ ತುಂಬಿಸಿಕೊಳ್ಳಲು ಇಂತಹ ದಾರಿಗಳನ್ನು ಹಿಡಿಯುತ್ತಾರೆ. ಆದರೆ ಆರ್ಥಿಕ ಮಟ್ಟ ಸುಧಾರಿಸಿದಂತೆಲ್ಲ ಈ ದಿಸೆಯಲ್ಲಿ ನಾವು ಪ್ರಗತಿ ಸಾಧಿಸುತ್ತೇವೆ ಎಂಬ ನಂಬಿಕೆಯೂ ನನಗಿದೆ. ಬಡತನ ನಿವಾರಣೆಯಾದಂತೆಲ್ಲ ನಮ್ಮ ಪರಿಸ್ಥಿತಿ ಖಂಡಿತಾ ಸುಧಾರಿಸುವುದು. ಇಂತಹ ಕಾಯ್ದೆಗಳಿಂದ ಈ ನಿಟ್ಟಿನಲ್ಲಿ ಸಮಾಜ ಸೇವಾ ಸಂಘಟನೆಗಳು, ಸಾರ್ವಜನಿಕರು ನಡೆಸುವ ಪ್ರಯತ್ನಗಳಿಂದ ಪರಿಸ್ಥಿತಿ ಕ್ರಮೇಣ ಸುಧಾರಿಸುತ್ತಾ ಹೋಗುವುದು.

ಈ ವಿಷಯದಲ್ಲಿ ಆಹಾರ ಪದಾರ್ಥಗಳ ಮಾರಾಟಗಾರರಿಗೆ ಅತಿ ಹೆಚ್ಚಿನ ರಕ್ಷಣೆ ನೀಡಲಾಗಿದೆ ಎಂದು ಕೆಲ ಸದಸ್ಯರು ಹೇಳಿದ್ದಾರೆ. ಇನ್ನು ಕೆಲವರು ಮಾರಾಟಗಾರರನ್ನು ಜೈಲಿಗೆ ಕಳುಹಿಸಿ ನಿಜವಾದ ಅಪರಾಧಿಗಳು ಪಾರಾಗುತ್ತಾರೆ ಎಂದಿದ್ದಾರೆ. ಆದರೆ ನಿಜವಾದ ಅಪರಾಧಿಗಳು ಪಾರಾಗುತ್ತಾರೆ ಎಂದು ಭಯಪಡಲು ಯಾವ ಕಾರಣಗಳು ಇಲ್ಲ. ಎಲ್ಲರೂ

ಈ ಸಂಬಂಧದ ಕಾಯ್ದೆಯನ್ನು ಎಷ್ಟರಮಟ್ಟಿನ ಪ್ರಾಮಾಣಿಕತೆಯಿಂದ ಮತ್ತು ಎಷ್ಟರಮಟ್ಟಿನ ಕಾರ್ಯಕ್ಷಮತೆಯಿಂದ ಜಾರಿಗೆ ತರಲಾಗುತ್ತದೆ ಎಂಬುದರ ಮೇಲೆ ಅವಲಂಬಿಸಿದೆ. ಈ ಕಾಯ್ದೆಯ ಜಾರಿಗೆ ಕೇಂದ್ರ ಸರ್ಕಾರವು ಯಾವ ರೀತಿಯಿಂದಲೂ ಹೊಣೆಯಾಗುವುದಿಲ್ಲ ಎಂಬ ಅಂಶವನ್ನು ನಾನು ಈ ಸಂದರ್ಭದಲ್ಲಿ ಸ್ಪಷ್ಟಪಡಿಸಬಯಸುತ್ತೇನೆ. ಈ ಕಾಯ್ದೆಯ ಜಾರಿ ರಾಜ್ಯ ಸರ್ಕಾರಗಳ ಹೊಣೆಗಾರಿಕೆಯಾಗಿದ್ದು, ಈ ಸಂಬಂಧದಲ್ಲಿ ಕಾನೂನು ಕಾಯ್ದೆಗಳನ್ನು ರೂಪಿಸಲು ನನ್ನ ಅಧಿಕಾರ ವ್ಯಾಪ್ತಿಯಲ್ಲಿ ಸಾಧ್ಯವಿರುವುದೆಲ್ಲವನ್ನು ನಾನು ಮಾಡುತ್ತೇನೆ. ಅದೇ ರೀತಿ ಈ ಪಿಡುಗಿನ ನಿವಾರಣೆಗೆ ಸೂಕ್ತವಾದ ನಿಯಮ, ನಿರ್ಬಂಧಗಳನ್ನು ರೂಪಿಸುವಂತೆಯೂ ನಾನು ಅವರನ್ನು ಕೇಳಿಕೊಳ್ಳುತ್ತೇನೆ ಈ ಕಾಯ್ದೆಗಳು ಸಣ್ಣ ಮಾರಾಟಗಾರರನ್ನು ಹಿಡಿದು ಅವರಿಗೆ ದಂಡನೆ ವಿಧಿಸುವುದಕ್ಕೆ ಮಾತ್ರವೇ ಸೀಮಿತವಾಗಿರದೆ ಸಮಸ್ಯೆಯ ಮೂಲಕ್ಕೆ ಹೋಗಿ ಈ ದಂಧೆಯಲ್ಲಿ ನಿರತರಾಗಿರುವ ದೊಡ್ಡ ವಾಣಿಜ್ಯೋದ್ಯಮಿಗಳನ್ನು ದಂಡಿಸುವ ರೀತಿಯಲ್ಲಿ ಇರಬೇಕು. ಆಹಾರ ಕಲಬೆರಕೆ ನಿಯಂತ್ರಣಕ್ಕೆ ನಾವು ಇಂದು ಹೊಂದಿರುವ ವ್ಯವಸ್ಥೆ ಸಮರ್ಪಕವಾಗಿಲ್ಲ. ಸಂಸತ್ತಿನ ಉಭಯ ಸದನಗಳ ಸದಸ್ಯರು ಈ ಅಂಶವನ್ನು ಸರಿಯಾಗಿ ಹೇಳಿದ್ದಾರೆ. ನಾವು ಪ್ರಥಮ ದರ್ಜೆಯ ಆಹಾರ ತಪಾಸಣಾಧಿಕಾರಿಗಳನ್ನು ಹೊಂದದ ಹೊರತು ಈ ದಿಸೆಯಲ್ಲಿ ಏನನ್ನೂ ಸಾಧಿಸಲಾರೆವು ಎಂದು ಅವರು ಹೇಳಿದ್ದಾರೆ. ಆಹಾರ ತಪಾಸಣಾಧಿಕಾರಿಗಳ ಸಂಬಳವನ್ನು ಹೆಚ್ಚಿಸಬೇಕೆಂದು ಅನೇಕ ಮಂದಿ ಸದಸ್ಯರು ಶಿಫಾರಸು ಮಾಡಿದ್ದಾರೆ. ನನಗೂ ಈ ವಿಷಯದಲ್ಲಿ ಸಂಪೂರ್ಣ ಸಹಮತ ಇದೆ. ನಾನು ರಾಜ್ಯ ಸರ್ಕಾರಗಳಿಗೆ ನೀಡಲಿರುವ ಸಲಹೆಗಳಲ್ಲಿ ಇದೂ ಒಂದಾಗಲಿದೆ. ನ್ಯಾಯನಿಷ್ಠೂರವಾಗಿ ಕಾರ್ಯ ನಿರ್ವಹಿಸುವ ಆಹಾರ ತಪಾಸಣಾಧಿಕಾರಿಗಳನ್ನು ನಂಬದ ಹೊರತು ರಾಜ್ಯ ಸರ್ಕಾರಗಳಿಗೆ ಈ ವಿಷಯದಲ್ಲಿ ಏನನ್ನೂ ಮಾಡಲು ಸಾಧ್ಯವಾಗದು. ಈ ವಿಷಯದಲ್ಲಿ ಕೇಂದ್ರದ ನಿಯಂತ್ರಣವೇ ಇಲ್ಲ ಎಂದು ಕೆಲ ಸದಸ್ಯರು ಆಪಾದಿಸಿದ್ದಾರೆ. ಕೇಂದ್ರ ಸಮಿತಿಯ ವಿಷಯದಲ್ಲೂ ಕೆಲವರು ಟೀಕಿಸಿದ್ದಾರೆ. ಕಲಬೆರಕೆ ನಿಯಂತ್ರಣಕ್ಕೆ ಸಂಬಂಧಿಸಿದ ಕ್ರಮಗಳ ಉಸ್ತುವಾರಿ ಸಂಪೂರ್ಣವಾಗಿ ರಾಜ್ಯ ಸರ್ಕಾರಗಳ ಕೈಯಲ್ಲಿದೆ. ಕೇಂದ್ರ ಸಮಿತಿಯಲ್ಲಿ ಗ್ರಾಹಕರ ಪ್ರತಿನಿಧಿಗಳೇ ಇಲ್ಲ ಎಂದು ಸದಸ್ಯರು ಟೀಕಿಸಿದ್ದಾರೆ. ಈ ಸಮಸ್ಯೆ ನೇರವಾಗಿ ಗ್ರಾಹಕರಿಗೆ ಸಂಬಂಧಿಸಿದ್ದಾಗಿದ್ದು ಈ ವಿಷಯದಲ್ಲಿ ಸಲಹೆಗಳನ್ನು ನೀಡುವುದು ಗ್ರಾಹಕರಿಗೆ ಮಾತ್ರ ಸಾಧ್ಯ ಎಂಬುದು ಅವರ ವಾದವಾಗಿದೆ. ಈ ಸಮಿತಿಯನ್ನು ನೇಮಿಸುವ ಕಾಯ್ದೆಯ ನಿರ್ದಿಷ್ಟ ಖಂಡವನ್ನು ಪರಾಮರ್ಶಿಸಿದರೆ ಕೇಂದ್ರ ಸಮಿತಿಯೂ ಒಂದು ತಾಂತ್ರಿಕ ಸಮಿತಿ ಎಂಬುದು ನಿಮಗೆ ಅರಿವಾಗುವುದು. ಈ ಸಮಿತಿ ತಜ್ಞರು, ಅನುಭವಿ ಆಡಳಿತಗಾರರನ್ನು ಒಳಗೊಂಡಿರುತ್ತದೆ. ಗ್ರಾಹಕರನ್ನು ರಾಜ್ಯ ಸರ್ಕಾರಗಳ ಮೂಲಕ ನಾಮಕರಣ ಮಾಡಲಾಗುವುದು. ಕೇಂದ್ರ ಸರ್ಕಾರ ನಾಮಕರಣ ಮಾಡುವ ತಜ್ಞರು ತಾಂತ್ರಿಕ ಸಿಬ್ಬಂದಿಯೇ ಆಗಬೇಕಾಗಿಲ್ಲ. ಕಾಯ್ದೆಯ ಮೂರನೇ ಖಂಡದ ಐದನೇ ಉಪಖಂಡವನ್ನು ಗಮನಿಸಿದರೆ ಸಮಿತಿಯು ತನಗೆ ಸೂಕ್ತವೆಂದು ಕಂಡ ಇಂತಹ ಮತ್ತು ಇಂತಹ ಅನೇಕ ಉಪಸಮಿತಿಗಳನ್ನು ನೇಮಿಸಬಹುದಾಗಿದೆ ಎಂಬುದು ತಿಳಿಯುತ್ತದೆ ಮತ್ತು ಕಾಲಕಾಲಕ್ಕೆ ಸಮಿತಿಯು ಅಪೇಕ್ಷಿಸಿದಂತೆ ಕಾರ್ಯನಿರ್ವಹಿಸಲು ಇತರ ವ್ಯಕ್ತಿಗಳನ್ನು ನೇಮಿಸಿಕೊಳ್ಳಬಹುದಾಗಿದೆ. ಈ ಉಪಸಮಿತಿಗಳಿಗೆ ರಾಜ್ಯಗಳು ಮತ್ತು ಕೇಂದ್ರ ಸರ್ಕಾರ ಅಧಿಕಾರೇತರ ಮತ್ತು ಗ್ರಾಹಕ ಪ್ರತಿನಿಧಿಗಳನ್ನು ನೇಮಿಸಬಹುದಾಗಿದೆ.

ಇನ್ನು ಕಲಬೆರಕೆ ಅಪರಾಧಕ್ಕೆ ನೀಡುವ ದಂಡನೆಗೆ ಸಂಬಂಧಿಸಿದಂತೆ ಬೇರೆ ಬೇರೆ ಅಭಿಪ್ರಾಯಗಳು ವ್ಯಕ್ತವಾಗಿವೆ. ಕೆಲವರು ಈ ದಂಡನೆ ಅತಿಯಾಯಿತು ಎಂದು ಹೇಳಿದ್ದರೆ, ಇನ್ನು ಕೆಲವರು ಇದು ಏನೇನೂ ಸಾಲದು ಎಂದಿದ್ದಾರೆ. ಇಂತಹ ಘೋರ ಅಪರಾಧಗಳನ್ನು ಎಸಗುವ ಮಂದಿಗೆ ಯಾವ ರೀತಿಯ ದಂಡನೆಯೂ ಹೆಚ್ಚಲ್ಲ ಎಂದು ನಂಬಿದವರಲ್ಲಿ ನಾನೂ ಒಬ್ಬಳಾಗಿದ್ದೇನೆ. ಕಲಬೆರಕೆ ಅಪರಾಧದಲ್ಲಿ ಯಾರನ್ನಾದರೂ ಹಿಡಿದಾಗ ದಂಡ ಎಂಬುದು ಇರಲೇಬಾರದು. ಅವರಿಗೆ ಶಿಕ್ಷೆಯನ್ನೇ ವಿಧಿಸಬೇಕು ಎಂಬುದು ನನ್ನ ಖಚಿತ ಅಭಿಪ್ರಾಯವಾಗಿದೆ. ಈ ವಿಷಯವನ್ನು ನಾನು ರಾಜ್ಯ ಸರ್ಕಾರಗಳಿಗೆ ಹೇಳಿಯೂ ಇದ್ದೇನೆ. ಇಂತಹ ದಂಧೆಗಳಲ್ಲಿ ನಿರತರಾದವರು ಹಣವನ್ನು ಕೊಳ್ಳೆ ಹೊಡೆಯುತ್ತಾರೆ. ದಂಡ ತೆರಲು ಅವರು ಹಿಂದೆ ಮುಂದೆ ನೋಡುವುದಿಲ್ಲ ಮತ್ತು ಅದನ್ನು ಶಿಕ್ಷೆ ಎಂದು ಪರಿಗಣಿಸುವುದೂ ಇಲ್ಲ. ಹೀಗಾಗಿ ಅಂಥವರಿಗೆ ಸೆರೆಮನೆ ಶಿಕ್ಷೆಯನ್ನೇ ವಿಧಿಸಬೇಕು. ಪ್ರತಿಯೊಂದು ರಾಜ್ಯದಲ್ಲೂ ನಿರ್ದಿಷ್ಟ ಸಂಖ್ಯೆಯಲ್ಲಿ ಇಂತಹ ಅಪರಾಧಿಗಳನ್ನು ಸೆರೆಮನೆ ಶಿಕ್ಷೆಗೆ ಗುರಿಪಡಿಸಿದರೆ ಖಂಡಿತವಾಗಿ ಅದರಿಂದ ಪರಿಣಾಮವಾಗುವುದು. ಕಲಬೆರಕೆ ಆಹಾರ ವಸ್ತುಗಳ ಮಾರಾಟಗಾರರಿಗೆ ತಾವು ಮಾಡುತ್ತಿರುವುದು ನ್ಯಾಯಬಾಹಿರ ನಡವಳಿಕೆ ಎಂಬುದು ಗೊತ್ತೇ ಇರುತ್ತದೆ. ಹಾಲಿಗೆ ನೀರು ಬೆರೆಸಿದಾಗ ಅಥವಾ ಕಲಬೆರಕೆ ತುಪ್ಪವನ್ನು ಮಾರಾಟ ಮಾಡುವಾಗ ತಾವು ಜನ ಸಮುದಾಯದ ವಿರುದ್ಧ ಒಂದು ಘೋರವಾದ ಅಪರಾಧ ಎಸಗುತ್ತಿದ್ದೇನೆ ಎಂಬ ಅರಿವು ಅವರಲ್ಲಿ ಇದ್ದೇ ಇರುತ್ತದೆ. ಈ ಮಾರಾಟಗಾರರು ದೊಡ್ಡ ವ್ಯಾಪಾರೋದ್ಯಮಿಗಳ ನೌಕರರಾಗಿದ್ದರೆ ಕಲಬೆರಕೆಯ ಮೂಲವನ್ನು ಪತ್ತೆ ಹಚ್ಚುವುದು ಕಷ್ಟವಲ್ಲ. ಅಂತಹ ನ್ಯಾಯಬಾಹಿರ ಚಟುವಟಿಕೆಯಲ್ಲಿ ತೊಡಗಿರುವ ವಾಣಿಜ್ಯೋದ್ಯಮಿಗಳನ್ನು ಗುರುತಿಸಿ ಅವರನ್ನು ದಂಡನೆಗೆ ಗುರಿಪಡಿಸುವುದೂ ಅಸಾಧ್ಯವೇನಲ್ಲ. ಎರಡನೇ ಆರೋಪಿಗೆ ರಿಯಾಯ್ತಿ ಎಂಬುದು ಇರಲೇಕೂಡದು. ಅಂತಹ ಸಂದರ್ಭಗಳಲ್ಲಿ ದಂಡ ಮತ್ತು ಸೆರೆಮನೆ ವಾಸದ ಶಿಕ್ಷೆ ಆಗಲೇಬೇಕು. ಇಂತಹ ಪ್ರಕರಣಗಳಲ್ಲಿ ಪ್ರಥಮ ಆರೋಪಿಗಳು ಹೆಚ್ಚಿನ ದಂಡನೆ ಇಲ್ಲದೆ ಸುಲಭವಾಗಿ ಪಾರಾಗುತ್ತಾರೆಯೆಂಬುದು ನಮಗೆಲ್ಲರಿಗೂ ಗೊತ್ತಿರುವ ಸಂಗತಿಯೇ ಆಗಿದೆ.

ಒಂದಿಬ್ಬರು ಸದಸ್ಯರು ಕಲಬೆರಕೆ ಅಪರಾಧಿಗಳಿಗೆ ಛಡಿಯೇಟಿನ ಶಿಕ್ಷೆಯನ್ನು ವಿಧಿಸಬೇಕೆಂದು ಸಲಹೆ ನೀಡಿದ್ದಾರೆ. ಯಾವುದೇ ಪ್ರಜ್ಞಾವಂತ ಸರ್ಕಾರ ಇಂತಹ ದೈಹಿಕ ದಂಡನೆಯ ಶಿಕ್ಷೆಯನ್ನು ಅನುಮೋದಿಸುವುದು ಎಂದಿಗೂ ಸಾಧ್ಯವಿಲ್ಲದ ವಿಷಯವಾಗಿದೆ. ಜಗತ್ತಿನ ಎಲ್ಲ ಪ್ರಜ್ಞಾವಂತ ಸರ್ಕಾರಗಳು ಇಂತಹ ದಂಡನೆಯನ್ನು ಕೈಬಿಡುತ್ತಿವೆ. ಅದೂ ಅಲ್ಲದೆ ದೈಹಿಕ ದಂಡನೆ ಇಂತಹ ಅಪರಾಧಗಳಿಗೆ ಒಂದು ಪರಿಣಾಮಕಾರಿ ಪ್ರತಿಬಂಧಕ ಕ್ರಮವಾದೀತೆಂದು ನಂಬಿದವಳು ನಾನಲ್ಲ; ಒಂದು ವೇಳೆ ಅದು ಪರಿಣಾಮಕಾರಿಯೇ ಆಗಿದ್ದರೂ ಸಮಾಜದ ಘನತೆಗೆ ಅದು ಹೇಳಿಸಿದ್ದಲ್ಲ. ಔಷಧಗಳು ಮತ್ತು ಆಹಾರ ಕಲಬೆರಕೆ ನಿಯಂತ್ರಣ ಜೊತೆ ಜೊತೆಯಾಗಿ ಸಾಗಬೇಕೆಂದು ಹೇಳುವವರೂ ಇದ್ದಾರೆ. ನಾನು ಇತ್ತೀಚಿಗೆ ಔಷಧಗಳ ನಿಯಂತ್ರಣದ ಮೇಲಿನ ವಿಧೇಯಕವನ್ನು ಸದನದ ಮುಂದೆ ಮಂಡಿಸಿರುವುದು ತಮಗೆ ತಿಳಿದೇ ಇದೆ. ಔಷಧ ಮತ್ತು ಆಹಾರ ಕಲಬೆರಕೆ ನಿಯಂತ್ರಣ ಜೊತೆ ಜೊತೆಯಾಗಿ ಹೋಗುವುದು ಕಷ್ಟ. ಔಷಧ ಕಲಬೆರಕೆ ತಪಾಸಣೆ ಮಾಡುವವರು ತರಬೇತಿ ಹೊಂದಿದ ಔಷಧ

ತಜ್ಞರಾಗಿರಬೇಕು. ಅದೂ ಅಲ್ಲದೆ ಇವುಗಳ ನಿಯಂತ್ರಣಕ್ಕೆ ಔಷಧ ಕಾಯ್ದೆಗಳು ಮತ್ತು ಆಹಾರ ಕಾಯ್ದೆಗಳು ಇರುವುದರಿಂದ ಅದು ಪ್ರಪ್ರತ್ಯೇಕವಾಗಿಯೇ ನಡೆಯಬೇಕಾಗಿದೆ.

ಆಹಾರ ಕಲಬೆರಕೆ ತಡೆ ಕಾಯ್ದೆ ಬ್ರಿಟೀಷ್ ಕಾಯ್ದೆಯ ತದ್ರೂಪವೆಂದು ಕೆಲವರು ಹೇಳಿದ್ದಾರೆ. ಆದರೆ ಇದು ಸತ್ಯವಲ್ಲ ಎಂದು ನಾನು ಈ ಆರೋಪ ಮಾಡಿರುವ ಮಾನ್ಯ ಸದಸ್ಯರಿಗೆ ಹೇಳಬಯಸುತ್ತೇನೆ. ನಾವು ಈ ಸಂಬಂಧದಲ್ಲಿ ಅಂತಹ ಕಾಯ್ದೆಗಳನ್ನು ಹೊಂದಿರುವ ಪ್ರತಿಯೊಂದು ರಾಷ್ಟ್ರದೊಂದಿಗೂ ಸಮಾಲೋಚನೆ ನಡೆಸಿದ್ದೇವೆ ಮತ್ತು ಆ ರಾಷ್ಟ್ರಗಳಿಂದ ಕಾಯ್ದೆಗಳ ಪ್ರತಿಗಳನ್ನು ತರಿಸಿಕೊಂಡಿದ್ದೇವೆ. ಬ್ರಿಟನ್‌ನಲ್ಲಿ ಮಾತ್ರವಲ್ಲ, ಅಮೆರಿಕ, ಕೆನಡಾ, ನ್ಯೂಜಿಲ್ಯಾಂಡ್, ಆಸ್ಟ್ರೇಲಿಯಾ ಮತ್ತು ಇತರ ಕೆಲ ರಾಷ್ಟ್ರಗಳಲ್ಲೂ ಇದೇ ರೀತಿಯ ಕಾಯ್ದೆಗಳಿವೆ. ಈ ಎಲ್ಲ ಕಾಯ್ದೆಗಳನ್ನು ನಾವು ಪರಿಶೀಲಿಸಿದ್ದೇವೆ. ಹಾಗಾಗಿ ಈ ಕಾಯ್ದೆಯನ್ನು ಯಾವುದೇ ಒಂದು ದೇಶದ ಕಾಯ್ದೆಯನ್ನು ಮಾದರಿಯಾಗಿಟ್ಟುಕೊಂಡು ಈ ವಿಧೇಯಕವನ್ನು ರೂಪಿಸಿಲ್ಲ ಎಂಬುದನ್ನು ಈ ಸಂದರ್ಭದಲ್ಲಿ ಸ್ಪಷ್ಟಪಡಿಸಬಯಸುತ್ತೇನೆ.

ಇನ್ನು ಕೆಲವರು ಇನ್ನು ಗಹನವಾದ ಕೆಲವು ಪ್ರಶ್ನೆಗಳನ್ನು ಎತ್ತಿದ್ದಾರೆ. ಆಹಾರ ಕಲಬೆರಕೆಯ ತಪಾಸಣೆಗೆ ನಮ್ಮಲ್ಲಿ ಸಾಕಷ್ಟು ಪ್ರಮಾಣದ ಸಿಬ್ಬಂದಿ ಇದೆಯೇ? ಸಾಕಷ್ಟು ಸಂಖ್ಯೆಯಲ್ಲಿ ವಿಶ್ಲೇಷಕರು ಇದ್ದಾರೆಯೇ? ಎಂದು ಮುಂತಾಗಿ ಕೇಳಿದ್ದಾರೆ. ಆಹಾರ ವಿಶ್ಲೇಷಣೆಗೆ ನಮ್ಮಲ್ಲಿ ಸಾಕಷ್ಟು ಸಂಖ್ಯೆಯ ಪ್ರಯೋಗಾಲಯಗಳಿವೆ. ಆಹಾರ ಪದಾರ್ಥಗಳ ವಿಶ್ಲೇಷಕರ ತರಬೇತಿಗೆ ನಮ್ಮಲ್ಲಿ ಕಲ್ಕತ್ತಾ, ಮದ್ರಾಸ್ ಮತ್ತು ಮುಂಬೈಯಂತಹ ಕಡೆಗಳಲ್ಲಿ ಸೌಕರ್ಯ ಇದೆ. ಹೀಗಾಗಿ ಆಹಾರ ಪದಾರ್ಥಗಳ ಗುಣಮಟ್ಟ ವಿಶ್ಲೇಷಕರನ್ನು ತರಬೇತಿಗೊಳಿಸುವುದು ಒಂದು ಸಮಸ್ಯೆಯಾಗಲಾರದು.ಈ ದಿಸೆಯಲ್ಲಿ ರಾಜ್ಯ ಸರ್ಕಾರಗಳು ಸೂಕ್ತ ಸೌಕರ್ಯ ಕಲ್ಪಿಸಲು ಶಕ್ತವಾಗಿದೆ ಎಂದು ನಾನು ಭಾವಿಸಿದ್ದೇನೆ. ಪ್ರಾರಂಭದಲ್ಲಿ ಪ್ರತಿಯೊಂದು ವಿಭಾಗ ಮಟ್ಟದಲ್ಲಿ ಮತ್ತು ಸಾಧ್ಯವಾದಷ್ಟು ಬೇಗ ಪ್ರತಿಯೊಂದು ಜಿಲ್ಲೆಯಲ್ಲಿಯೂ ಪ್ರಯೋಗಾಲಯಗಳನ್ನು ಸ್ಥಾಪಿಸುವುದು ಅವುಗಳಿಗೆ ಕಷ್ಟವಾಗಲಾರದು. ಪ್ರಯೋಗಾಲಯಗಳ ಜಾಲ ವಿಸ್ತೃತವಾಗಿದ್ದರೆ ವಶಪಡಿಸಿಕೊಂಡ ಆಹಾರ ಪದಾರ್ಥಗಳನ್ನು ವಿಶ್ಲೇಷಣೆಗಾಗಿ ಪ್ರಯೋಗಾಲಯಗಳಿಗೆ ರವಾನಿಸುವುದು ತ್ರಾಸದಾಯಕವೆನಿಸದು. ಕೆಲ ಸದಸ್ಯರು ಕೇಂದ್ರೀಯ ಪ್ರಯೋಗಾಲಯ ಈ ಕಾರ್ಯವನ್ನು ನಿರ್ವಹಿಸಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಕೇಂದ್ರೀಯ ಪ್ರಯೋಗಾಲಯವು ಮೇಲ್ಮನವಿ ಪ್ರಾಧಿಕಾರವಾಗಿದೆ. ರಾಜ್ಯಗಳಲ್ಲಿನ ಪ್ರಯೋಗಾಲಯಗಳಿಂದ ಈ ಸಂಬಂಧದಲ್ಲಿ ದೂರುಗಳು ಬಂದಲ್ಲಿ, ಮೇಲ್ಮನವಿಗಳು ಬಂದಲ್ಲಿ ಮಾತ್ರವೇ ಅದು ಕಾರ್ಯ ನಿರ್ವಹಿಸುವುದು.

ಇನ್ನು ಈ ಸಂಬಂಧದಲ್ಲಿ ಪಂಚಾಯ್ತಿಗಳನ್ನು ರಚಿಸುವ ಬಗ್ಗೆ ಕೆಲವರು ಪ್ರಸ್ತಾಪಿಸಿದ್ದಾರೆ. ಈ ವಿಷಯವನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಆಹಾರ ಕಲಬೆರಕೆ ನಿಯಂತ್ರಣಕ್ಕೆ ಪಂಚಾಯ್ತಿಗಳು ಬರಬೇಕು. ಮಾನ್ಯ ಸದಸ್ಯರು ಸ್ಥಳೀಯ ಪ್ರಾಧಿಕಾರ ರಚನೆಯ ಪ್ರಸ್ತಾಪ ಹೊಂದಿರುವ ವಿಧೇಯಕದ ಖಂಡಗಳನ್ನು ಗಮನಿಸಬೇಕು. ಅಲ್ಲಿ ಪುಟ ಮೂರರಲ್ಲಿ ಖಂಡ 2 ಮತ್ತು ಉಪಖಂಡ (8) (2) ರಲ್ಲಿ "ಈ ಕಾಯ್ದೆಯನ್ವಯ ರಾಜ್ಯ ಸರ್ಕಾರವು ಸೂಚಿಸುವ ಇತರ ಯಾವುದೇ ಸ್ಥಳ ಮತ್ತು ಪ್ರಾಧಿಕಾರ" ಎಂದು ಹೇಳಿರುವುದನ್ನು ಗಮನಿಸಬಹುದು. ಇದು ಪಂಚಾಯ್ತಿ ಮತ್ತು ಜಿಲ್ಲಾ ಮಂಡಲಿಗಳನ್ನು ಒಳಗೊಂಡಿರುತ್ತದೆ. ಏಕೆಂದರೆ ಪ್ರತಿಯೊಂದು

ರಾಜ್ಯವೂ ಒಂದೇ ರೂಪದ ಸ್ಥಳೀಯ ಆಡಳಿತ ವ್ಯವಸ್ಥೆಯನ್ನು ಹೊಂದಿರುತ್ತದೆ ಮತ್ತು ರಾಜ್ಯ ಸರ್ಕಾರಗಳು ಸೂಕ್ತವೆಂದು ಪರಿಗಣಿಸಿದ ಸ್ಥಳಗಳಲ್ಲಿ ಇಂತಹ ಪಂಚಾಯಿತ್ಗಳನ್ನು ರಚಿಸುವಂತೆ ನಾನೇ ಸ್ವತಃ ನಿರ್ದೇಶನ ನೀಡಲಿದ್ದೇನೆ. ಆಹಾರ ಕಲಬೆರಕೆ ತಡೆಗೆ ಸ್ಥಳೀಯ ಮಟ್ಟದಲ್ಲಿ ಪಂಚಾಯಿತ್ಗಳು ಇರಬೇಕೆಂಬುದರಲ್ಲಿ ನನಗೆ ಯಾವ ಸಂದೇಹವೂ ಇಲ್ಲ.

ಸರ್ಕಾರಿ ನೌಕರರನ್ನು ಈ ಕಾಯ್ದೆ ವ್ಯಾಪ್ತಿಗೆ ಒಳಪಡಿಸಿಲ್ಲ. ಆದರೆ ಕಂಪನಿಗಳನ್ನು ಅದರ ವ್ಯಾಪ್ತಿಗೆ ತರಲಾಗಿದೆ. ಹೀಗೇಕೆ? ಎಂದು ಕೆಲವರು ಪ್ರಶ್ನಿಸಿದ್ದಾರೆ. ಕಾಯ್ದೆಯ ಬೇರೆ ಬೇರೆ ವಿಧಿಗಳನ್ವಯ ಬೇರೆ ಬೇರೆ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಾರೆ. ಒಟ್ಟಿನಲ್ಲಿ ರಾಜ್ಯಸರ್ಕಾರಗಳೇ ಇಲ್ಲಿ ನಿರ್ಣಾಯಕವಾದ ಪಾತ್ರ ವಹಿಸುತ್ತವೆ. ಸಂವಿಧಾನದ ಪ್ರಕಾರ ಉಭಯ ಸಾಮಾನ್ಯ ಯಾದಿಯಲ್ಲಿ ಬರುವ ಸಾಮಾನ್ಯ ವಿಷಯಗಳಿಗೆ ಸಂಬಂಧಿಸಿದ ಕಾರ್ಯ ನಿರ್ವಹಣೆಯ ಕಾರ್ಯಾಂಗದ ಅಧಿಕಾರವು ರಾಜ್ಯ ಸರ್ಕಾರಗಳ ಕೈಯಲ್ಲೇ ಇರುತ್ತದೆ. ಸಂವಿಧಾನ ಪ್ರತ್ಯೇಕವಾಗಿ ಅವಕಾಶ ಕಲ್ಪಿಸದ ಹೊರತು ಇದನ್ನು ಬದಲಿಸಲು ಆಗುವುದಿಲ್ಲ. ಪ್ರಸಕ್ತ ವಿಧೇಯಕದಲ್ಲಿ ಬಹಳಷ್ಟು ಅಧಿಕಾರಗಳನ್ನು ಕೇಂದ್ರ ಸರ್ಕಾರಕ್ಕೆ ಮೀಸಲಿರಿಸಲಾಗಿದೆ. ವಿಧೇಯಕದ 23, 3, 4 ಮತ್ತು ಇತರ ಖಂಡಗಳಲ್ಲಿ ಇವುಗಳನ್ನು ಗಮನಿಸಬಹುದು. ಯಾರೇ ಅಪರಾಧ ಎಸಗಿದರೂ ಅಂಥವರು ದಂಡನೆಗೆ ಬಾಧ್ಯರಾಗುತ್ತಾರೆ. ಇದು ಕ್ರಿಮಿನಲ್ ಕಾಯ್ದೆಯ ತತ್ವವಾಗಿದೆ. ಬದಲಿ ಹೊಣೆ ಸಿದ್ಧಾಂತವು ಕ್ರಿಮಿನಲ್ ಕಾಯ್ದೆಯಲ್ಲಿ ಅನ್ವಯವಾಗುವುದಿಲ್ಲ ಎಂದು ನಮ್ಮ ಕಾನೂನು ತಜ್ಞರು ಅಭಿಪ್ರಾಯಪಡುತ್ತಾರೆ. ಹಾಗಾಗಿ ಕಾಯ್ದೆಯ ದೃಷ್ಟಿಯಲ್ಲಿ 'ಕಂಪನಿ' ಕೂಡಾ ಹಕ್ಕುಗಳು ಮತ್ತು ಬಾಧ್ಯತೆಗಳಿರುವ ಓರ್ವ ವ್ಯಕ್ತಿಗೆ ಸರಿಸಮಾನವಾಗಿರುತ್ತದೆ. ಆದರೆ ಕಂಪನಿಗೆ ಮನುಷ್ಯನಂತೆ ಒಂದು ಮನಸ್ಸಿರುವುದಿಲ್ಲ. ಅಪರಾಧ ಪ್ರವೃತ್ತಿ ಇರುವುದಿಲ್ಲ. ಹೀಗಾಗಿ ಸೆರೆಮನೆ ವಾಸದಂತಹ ದೈಹಿಕ ದಂಡನೆಯನ್ನು ಕಂಪನಿಗೆ ವಿಧಿಸುವುದು ಅಸಾಧ್ಯ ಕಷ್ಟವಾಗುತ್ತದೆ. ಹಾಗಾಗಿ ಕಂಪನಿಗೆ ದಂಡವನ್ನಷ್ಟೇ ವಿಧಿಸಬಹುದು. ಆದರೆ ಈ ಕಾಯ್ದೆಯ ಅನ್ವಯ ಕಂಪನಿಯ ವ್ಯವಸ್ಥಾಪಕನೋ ಅಥವಾ ನಿರ್ದೇಶಕನೋ ಅಪರಾಧಿ ಎಂದು ಸಾಬೀತಾದಲ್ಲಿ ಆತನನ್ನು ಶಿಕ್ಷೆಗೆ ಗುರಿಪಡಿಸಲೇಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಬೃಹತ್ ಉದ್ಯಮಗಳನ್ನು ಕಾಯ್ದೆಯ ವ್ಯಾಪ್ತಿಗೆ ತರುವ ವಿಧಿಗಳನ್ನು ಈ ವಿಧೇಯಕದಲ್ಲಿ ಸೇರಿಸಲಾಗಿದೆ. ಇನ್ನು ಸರ್ಕಾರದ ವಿಷಯವಾಗಿ ಹೇಳುವುದಾದರೆ, ಅದು ಕಾನೂನು ರೀತ್ಯಾ ಒಂದು ವ್ಯಕ್ತಿಯಲ್ಲ. ಹಾಗಾಗಿ ಸರಕಾರದ ನೌಕರನೊಬ್ಬ ಅಪರಾಧವನ್ನು ಎಸಗುವಾಗ ಅಂತಹ ಅಪರಾಧವನ್ನು ಸರ್ಕಾರದ ಪರವಾಗಿ ಆತ ಮಾಡುವುದಿಲ್ಲ ಮತ್ತ ಆತ ಮಾಡಲಾರ. ಏಕೆಂದರೆ ಸರ್ಕಾರವು ಎಂದೂ ತನ್ನ ನೌಕರರಿಗೆ ಅಪರಾಧ ಕೃತ್ಯವೊಂದನ್ನು ಎಸಗುವಂತೆ ನಿರ್ದೇಶಿಸದು ಹಾಗೂ ನಿರ್ದೇಶಿಸಲಾರದು. ಹೀಗಾಗಿ ಅಂತಹ ಅಪರಾಧಗಳನ್ನು ಎಸಗುವ ಸರ್ಕಾರಿ ನೌಕರರೇ ವ್ಯಕ್ತಿಗತವಾಗಿ ಅವುಗಳಿಗೆ ಬಾಧ್ಯರಾಗಿರುತ್ತಾರೆ. ಅಂದರೆ ಅಂತಹ ಕೃತ್ಯಗಳಿಗೆ ಸರ್ಕಾರವು ಎಂದೂ ಬಾಧ್ಯವಾಗಲಾರದು. ಈ ಅಂಶವನ್ನು ಹಿಂದೆಯೂ ಅನೇಕ ಸಂದರ್ಭಗಳಲ್ಲಿ ಹೇಳಿದ್ದೇನೆ.

ಈ ವಿಧೇಯಕದ 10(9) ನೇ ಖಂಡದ ವಿಷಯವಾಗಿ ಹೇಳುವುದಿದ್ದರೆ ಇಂತಹ ವಿಧಿಗಳು ಬೇರಾವ ಕಾಯ್ದೆಯಲ್ಲೂ ಇಲ್ಲ ಎಂದು ಹೇಳಲಾಗಿದೆ. ಆದರೆ 1930ರ ಅಪಾಯಕಾರಿ ಔಷಧಗಳ ಕಾಯ್ದೆ, ಕೇಂದ್ರ ಅಬಕಾರಿ ಕಾಯ್ದೆ ಮತ್ತು ಉಪ್ಪಿನ ಕಾಯ್ದೆಯಲ್ಲಿ ಇದೇ ರೀತಿಯ ವಿಧಿಗಳು

ಇವೆ ಎಂಬ ಅಂಶವನ್ನು ನಾನು ಜ್ಞಾಪಿಸಬಯಸುತ್ತೇನೆ. ಮಿತಿಮೀರಿ ವರ್ತಿಸುವ ತಪಾಸಣಾ ಅಧಿಕಾರಿಗಳ ಚಟುವಟಿಕೆಗಳನ್ನು ನಿಯಂತ್ರಿಸಲು ಇಂತಹ ವಿಧಿಗಳು ಅತ್ಯಾವಶ್ಯವಾಗಿದೆ.

ವಿಧೇಯಕದ 8ನೇ ಖಂಡದಲ್ಲಿ 'ಬಹುದು' ಎಂಬ ಪದಕ್ಕೆ ಬದಲಾಗಿ 'ಮಾಡತಕ್ಕದ್ದು' ಎಂದು ಕಡ್ಡಾಯ ಪಡಿಸಬೇಕೆಂದು ಕೆಲವರು ನನಗೆ ಸಲಹೆ ಮಾಡಿದ್ದಾರೆ. ಆದರೆ ಇದು ರಾಜ್ಯ ಸರ್ಕಾರಗಳಿಗೆ ಇರುವ ಅಧಿಕಾರ. ನೇಮಕಾತಿಯ ಅಧಿಕಾರ ಇದ್ದಲ್ಲಿ ಮಾತ್ರವೇ ಅಂತಹ ಭಾಷೆಯನ್ನು ಬಳಸಬಹುದಾಗಿದೆ. ಇಂತಹ ಸಂದರ್ಭಗಳಲ್ಲಿ ಪರಿಮಿತ ಅರ್ಥದಲ್ಲಿ ಭಾಷೆಯನ್ನು ಬಳಸಬೇಕು. ಸಾಮಾನ್ಯವಾಗಿ ಇಂತಹ ಪ್ರಕರಣಗಳಲ್ಲಿ ನೇಮಕಾತಿ ಇರುವ ಅಧಿಕಾರದೊಂದಿಗೆ ಇತರ ಅಂಶಗಳು ಸೇರಿರುತ್ತವೆ. ಹಾಗಾಗಿ ಈಗ ಬಳಸಿರುವ ಪರಿಭಾಷೆಗಳು ಸಮರ್ಪಕವಾಗಿಯೇ ಇವೆ. ವಿಧೇಯಕದಲ್ಲಿ 'ಕಲಬೆರಕೆ' ಪದದ ವ್ಯಾಖ್ಯೆ ಅಸ್ಪಷ್ಟವಾಗಿದೆಯೆಂಬುದು ಕೆಲ ಸದಸ್ಯರ ಆಕ್ಷೇಪವಾಗಿದೆ. 2(1) ಖಂಡದಿಂದ (1) ಖಂಡದವರೆಗೆ ಈ ವಿಧೇಯಕವನ್ನು ಅತ್ಯಂತ ಎಚ್ಚರಿಕೆಯಿಂದ ಅಭ್ಯಸಿಸಿದಲ್ಲಿ ಅಲ್ಲಿ ಎಲ್ಲ ಅಂಶಗಳು ಒಳಗೊಂಡಿರುವುದು ನಮ್ಮ ಗಮನಕ್ಕೆ ಬರುತ್ತದೆ.

ಹಾಲು ಕಲಬೆರಕೆ ಆಗಿದ್ದರೆ ಅದನ್ನು ಯಾರೂ ಖರೀದಿಸಲು ಹೋಗುವುದಿಲ್ಲ. ಅದು ಶುದ್ಧವಾಗಿದೆ ಎಂಬ ನಂಬಿಕೆಯಿಂದಲೇ ಅದನ್ನು ಖರೀದಿಸುತ್ತಾರೆ. ಹಾಗೂ ಒಂದು ವೇಳೆ ಕಲಬೆರಕೆ ಆಗಿದ್ದಲ್ಲಿ ಮತ್ತು ಈ ಹಾಲು ಕಲಬೆರಕೆ ಆಗಿದೆ ಎಂದು ರುಜುವಾತಾದಲ್ಲಿ ಅಂತಹ ವ್ಯಕ್ತಿಯನ್ನು ಶಿಕ್ಷೆಗೆ ಗುರಿಪಡಿಸಬಹುದು. ಹಾಲಿಗೆ ನೀರನ್ನು ಮಾತ್ರವೇ ಬೆರೆಸಲಾಗುತ್ತದೆ ಮತ್ತು ಅದು ಆರೋಗ್ಯಕ್ಕೆ ಹಾನಿಕಾರಕವಾಗಲಾರದು ಎಂಬುದರಿಂದ ಅದು ಈ ವಿಧೇಯಕದ ವ್ಯಾಪ್ತಿಗೆ ಬರುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಅದು ಕಲಬೆರಕೆಯ ವ್ಯಾಪ್ತಿಯಲ್ಲೇ ಬರುತ್ತದೆ. ಹಾಲಿನ 'ಗುಣಲಕ್ಷಣಗಳು ಮತ್ತು ಅದರಲ್ಲಿ ಇರಬೇಕಾದ ಸತ್ವ ಹಾಗೂ ಗುಣಮಟ್ಟ ಮತ್ತು ಅದರ ಎಲ್ಲ ಗುಣಧರ್ಮಗಳನ್ನು ವಿಧೇಯಕವು ಸ್ಪಷ್ಟವಾಗಿ ಉಲ್ಲೇಖಿಸಿದೆ. "ಯಾವುದೇ ಒಂದು ಪದಾರ್ಥದ ಗುಣಮಟ್ಟ ಅಥವಾ ಪರಿಶುದ್ಧತೆ ನಿಗದಿಪಡಿಸಿದ ಮಾನಗಳಿಗಿಂತ ಕಡಿಮೆಯಾಗಿದ್ದಲ್ಲಿ, ಅದೇ ರೀತಿ ಅದರಲ್ಲಿರುವ ಘಟಕಗಳು ಪ್ರಮಾಣಾನುಗುಣವಾಗಿ ಇರದಿದ್ದಲ್ಲಿ ಆಗಲೂ ಅದು ಕಲಬೆರಕೆಯ ವ್ಯಾಪ್ತಿಯಲ್ಲೇ ಬರುತ್ತದೆ" ಎಂಬುದನ್ನು ವಿಧೇಯಕದ 2 (1) (1) ಉಪ ಖಂಡವು ಸ್ಪಷ್ಟಪಡಿಸುತ್ತದೆ. ಹಾಗಾಗಿ ಈ ನಿರ್ದಿಷ್ಟ ವ್ಯಾಖ್ಯೆಯ ಬಗ್ಗೆ ನಾವು ಯಾವುದೇ ಕಾರಣಕ್ಕೆ ಭಯಪಡಬೇಕಾದ ಅಗತ್ಯವಿಲ್ಲ.

ಇನ್ನು ಆಹಾರ ತಪಾಸಣೆಯಲ್ಲಿ 'ಪಂಚರ' ವಿಷಯದಲ್ಲಿ ಹೇಳುವುದಾದರೆ ಲೋಕಸಭೆಯಲ್ಲಿ ಈ ವಿಷಯದಲ್ಲಿ ಸಾಕಷ್ಟು ಚರ್ಚೆ ನಡೆಸಿಯೇ ಈ ನಿರ್ಧಾರಕ್ಕೆ ಬಂದಿದ್ದೇವೆ. ಆಹಾರ ಪದಾರ್ಥಗಳ ತಪಾಸಣಾಧಿಕಾರಿಗಳಿಗೆ-ಸ್ವಯಂ ರಕ್ಷಣೆಗೆ ಮತ್ತು ಅಪರಾಧಿಯ ರಕ್ಷಣೆಗೆ ಮಹಜರಿನ ವೇಳೆ ಇಬ್ಬರು ಸಾಕ್ಷಿಗಳನ್ನು ಹೊಂದಿರಬೇಕೆಂದು ನಿರ್ಧರಿಸಲಾಗಿದೆ. ಇದು ನಿಜಕ್ಕೂ ಅತ್ಯಂತ ಆರೋಗ್ಯಪೂರ್ಣವಾದ ವಿಚಾರವಾಗಿದೆ. ಈ ತಿದ್ದುಪಡಿಯು ಒಂದು ಸ್ವೀಕಾರಾರ್ಹವಾದ ಸಲಹೆ ಎಂದು ನಾನು ತೀರ್ಮಾನಿಸಿ ಅದನ್ನು ಅಂಗೀಕರಿಸಿದ್ದೇನೆ.

ಮಾನ್ಯ ಸದಸ್ಯರೊಬ್ಬರು ಆಹಾರ ಪದಾರ್ಥಗಳ ವಶಪಡಿಸಿಕೊಳ್ಳುವ ಸಂಬಂಧದಲ್ಲಿ ಕೆಲವೊಂದು ಆಕ್ಷೇಪಗಳನ್ನು ಎತ್ತಿದ್ದಾರೆ. ಮಾನ್ಯ ಸದಸ್ಯರು ವಿಧೇಯಕದ 11 (4) ಖಂಡದ ಕಡೆ ಗಮನಹರಿಸಬೇಕೆಂದು ನಾನು ಅವರನ್ನು ಕೇಳಿಕೊಳ್ಳುತ್ತೇನೆ. ಈ ಖಂಡದಲ್ಲಿ ಅದರ ಪೂರ್ಣ ವಿವರಣೆಯನ್ನು ನೀಡಲಾಗಿದೆ.

"ಕಾಯ್ದೆಯ 10ನೇ ಕಲಮಿನ 4ನೇ ಉಪ ಕಲಮಿನ ಅನ್ವಯ ವಶಪಡಿಸಿಕೊಳ್ಳಲಾದ ಆಹಾರ ಪದಾರ್ಥಗಳನ್ನು ಸಾಧ್ಯವಾದಷ್ಟು ಬೇಗ ದಂಡಾಧಿಕಾರಿಗಳ ಮುಂದೆ ಹಾಜರುಪಡಿಸಬೇಕು" ಎಂದು ಸ್ಪಷ್ಟವಾಗಿ ನಿರ್ದೇಶಿಸಲಾಗಿದೆ.

ಆಹಾರದ ವಿಷಯದಲ್ಲಿ ಯಾವಾಗಲೂ ವಿಳಂಬ ಎಂದು ಸರಿಯಲ್ಲ. ಆಹಾರಕ್ಕೆ ಸಂಬಂಧಿಸಿದ ಪ್ರಕರಣಗಳಲ್ಲಿ ಯಾವಾಗಲೂ ಅತ್ಯಂತ ತ್ವರಿತಗತಿಯಿಂದ ಕ್ರಮ ಕೈಗೊಳ್ಳಬೇಕು.

ವಿಧೇಯಕದ 12ನೇ ಖಂಡವು ಖರೀದುಗಾರರಿಗೆ ಮಾದರಿಗಳನ್ನು ಪಡೆಯುವ ಅಧಿಕಾರವನ್ನು ನೀಡಿದೆ. ಆಹಾರ ಕಲಬೆರಕೆ ಪ್ರಕರಣಗಳಲ್ಲಿ ಕ್ರಮ ಜರುಗಿಸಲು ಆಹಾರ ತಪಾಸಣಾಧಿಕಾರಿಗಳಿಗೆ ಮಾತ್ರವೇ ಅಧಿಕಾರವಿದೆ ಎಂದು ಕೆಲವರು ಹೇಳಿದ್ದಾರೆ. ಇಲ್ಲ. ಇದು ಹಾಗಲ್ಲ. ಖರೀದಿದಾರರಿಗೂ ಈ ಅಧಿಕಾರವನ್ನು ನೀಡಲಾಗಿದೆ. ಹಾಗಾಗಿ ಅಧಿಕಾರಿಗಳೊಂದಿಗೆ ಸಹಕರಿಸಲು ಸಾರ್ವಜನಿಕರಿಗೂ ಸಂಪೂರ್ಣ ಅವಕಾಶ ಕಲ್ಪಿಸಲಾಗಿದೆ. ಆಹಾರ ಕಲಬೆರಕೆ ಪ್ರಕರಣಗಳಲ್ಲಿ ಕ್ರಮ ಜರುಗಿಸಲು ಒಪ್ಪಿಗೆ ನೀಡುವಲ್ಲಿ ರಾಜ್ಯ ಸರ್ಕಾರಗಳು ವಿಳಂಬ ನೀತಿ ಅನುಸರಿಸುವುದಿಲ್ಲ. ದಾಖಲಾಗಿರುವ ಪ್ರಕರಣವು ಪ್ರಾಮಾಣಿಕವಾಗಿದೆ ಮತ್ತು ಅದು ವಿಶ್ವಾಸಾರ್ಹವಾಗಿದೆ ಎಂಬುದು ಖಾತ್ರಿಯಾದರೆ ಅವು ಕಾನೂನು ಕ್ರಮಕ್ಕೆ ಅಡ್ಡಿಪಡಿಸುವುದಿಲ್ಲ. ಏಕೆಂದರೆ ಆಹಾರ ಕಲಬೆರಕೆಯು ಒಂದು ಸಾಮಾಜಿಕ ಪಿಡುಗಾಗಿದೆ.

ಪರಿಪೂರ್ಣ ಪೋಷಕಾಂಶಗಳನ್ನು ಹೊಂದಿದ ಸಮಗ್ರ ಆಹಾರವನ್ನು ಉತ್ಪಾದಿಸಲು ಮತ್ತು ಅದನ್ನು ಸಾರ್ವಜನಿಕರಿಗೆ ವಿತರಣೆ ಮಾಡಲು ಸರ್ಕಾರಕ್ಕೆ ಸಮಯ ಬೇಕಾಗುತ್ತದೆ ಎಂಬ ಪ್ರಶ್ನೆಯನ್ನು ಕೆಲವರು ಮುಂದಿಟ್ಟಿದ್ದಾರೆ. ಈ ವಿಷಯದಲ್ಲಿ ಯಾವುದೇ ಸರ್ಕಾರ ಖಾತ್ರಿ ನೀಡುವುದು ಸಾಧ್ಯವಿದೆಯೇ? ಆಹಾರದ ಕಲಬೆರಕೆಯನ್ನು ತಡೆಯುವಲ್ಲಿ ನಾವು ಯಶಸ್ವಿಯಾದರೆ ನಾವು ಸಾರ್ವಜನಿಕರಿಗೆ ಪರಿಪೂರ್ಣವಾದ ಆಹಾರವನ್ನು ಒದಗಿಸುವುದು ಸಾಧ್ಯ. ಈ ಪಿಡುಗಿಗೆ ಪರಿಹಾರ ಕಂಡು ಹಿಡಿಯುವುದು ಕಷ್ಟ ಎಂಬ ಕಾರಣದಿಂದಲೇ, ರಾಜ್ಯ ಸರ್ಕಾರ ತಾನೇ ಸ್ವತಃ ಮಳಿಗೆಗಳನ್ನು ಹೊಂದಿರಲು ಬಯಸಿರಬೇಕು. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರಗಳು ಸಹಕಾರಿ ಪ್ರಯತ್ನಗಳಿಗೆ ಉತ್ತೇಜನ ನೀಡಬೇಕು. ಈ ವಿಷಯದಲ್ಲಿ ನನಗೆ ಯಾವ ಸಂದೇಹವೂ ಇಲ್ಲ. ಈ ದಿಸೆಯಲ್ಲಿ ಪ್ರಾಮಾಣಿಕವಾದ ಸಹಕಾರಿ ಪ್ರಯತ್ನ ನಡೆಸಿದಲ್ಲಿ ಅದು ಈ ಭಯಾನಕ ಪಿಡುಗನ್ನು ನಿವಾರಿಸುವಲ್ಲಿ ಒಂದು ಅತ್ಯಂತ ಪರಿಣಾಮಕಾರಿ ಮಾರ್ಗ ತೆಗೆಯಬಲ್ಲದೆಂದು ನಾನು ಭಾವಿಸಿದ್ದೇನೆ. ಅದಲ್ಲದೆ ರಾಜ್ಯ ಸರ್ಕಾರಗಳು ತಮ್ಮದೇ ಆದ ಮಳಿಗೆಗಳನ್ನು ಹೊಂದಿದ್ದಲ್ಲಿ ಸಾರ್ವಜನಿಕರಿಗೆ ಅಗತ್ಯವಾಗಿರುವ ಆಹಾರ ವಸ್ತುಗಳನ್ನು ಪೂರೈಸಲು ಅದೊಂದು ಉತ್ತಮ ಮಾರ್ಗವಾಗಲಿದೆ.

ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ಸದಸ್ಯರು ಎತ್ತಿರುವ ಬಹುತೇಕ ಎಲ್ಲ ಪ್ರಶ್ನೆಗಳಿಗೂ, ಆಕ್ಷೇಪಗಳಿಗೂ ನಾನು ಉತ್ತರಿಸಿದ್ದೇನೆ ಎಂದು ಭಾವಿಸಿದ್ದೇನೆ. ಈ ವಿಧೇಯಕದ 22ನೇ ಖಂಡವು 12ನೇ ಖಂಡವನ್ನು ನಿಷ್ಪಯೋಜಕಗೊಳಿಸುತ್ತದೆ ಎಂದು ಭಾವಿಸಿದ್ದಾರೆ. ಆದರೆ ಅದಕ್ಕೆ ಎಡೆಯೇ ಇಲ್ಲ. 22ನೇ ಖಂಡವು ಜನಸಾಮಾನ್ಯರ ಹಿತವನ್ನು ರಕ್ಷಿಸಲು ರೂಪಿಸಿರುವ ಕಾಯ್ದೆಗಳಿಗೆ ಸೂಕ್ತ ರಕ್ಷಣೆ ನೀಡುತ್ತದೆ. 10 (9) ಖಂಡವು ಆಹಾರ ತಪಾಸಣಾಧಿಕಾರಿಗಳಿಗೆ ದಂಡನೆ ವಿಧಿಸಲು ಅವಕಾಶ ತದ್ವಿರುದ್ಧವಾಗಿದೆ ಎಂಬುದು ಸರಿಯಲ್ಲ.

ಇಷ್ಟೆಲ್ಲವನ್ನು ಹೇಳಿದ ಬಳಿಕವೂ ಯಾವ ರೀತಿಯ ಶಾಸನಗಳಿಂದಲೂ ಇಂತಹ ಪಿಡುಗನ್ನು ನಿವಾರಿಸುವುದು ಕಷ್ಟಸಾಧ್ಯ ಎಂಬುದನ್ನು ನಾನು ಮತ್ತೊಮ್ಮೆ ಸ್ಪಷ್ಟಪಡಿಸಬಯಸುತ್ತೇನೆ. ಆದರೆ ಇಂತಹ ಕಾಯ್ದೆಯಿಂದ ಈ ಪಿಡುಗಿಗೆ ತಡೆ ಹಿಡಿಯುವಲ್ಲಿ ಅದು ಸಹಾಯಕವಾಗುವುದು ಮತ್ತು ಕ್ರಮೇಣ ಅದನ್ನು ನಿರ್ಮೂಲನೆಗೊಳಿಸುವಲ್ಲಿ ಅದು ಸಹಕಾರಿಯಾದೀತು ಎಂದು ನಾನು ನಂಬಿದ್ದೇನೆ. ಈ ವಿಧೇಯಕಕ್ಕೆ ಕೆಲವೇ ಕೆಲವು ತಿದ್ದುಪಡಿಗಳನ್ನು ಈಗ ಸೇರಿಸಲಾಗುತ್ತಿದೆ. ಅವುಗಳಲ್ಲೂ ಹೆಚ್ಚಿನವು ಈಗಾಗಲೇ ಲೋಕಸಭೆಯಲ್ಲಿ ಅಂಗೀಕೃತವಾಗಿರುವ ತಿದ್ದುಪಡಿಗಳ ರೀತಿಯಲ್ಲೇ ಇದೆ. ಅವುಗಳ ಬಗ್ಗೆ ಸದನದಲ್ಲಿ ಸಾಕಷ್ಟು ಚರ್ಚೆಯು ನಡೆದಿದೆ. ಆದರೆ ಅವುಗಳಲ್ಲಿ ಯಾವುದನ್ನೂ ಅಂಗೀಕರಿಸುವುದು ನನಗೆ ಸಾಧ್ಯವಾಗಿಲ್ಲ.

ಆಯ್ಕೆ ಸಮಿತಿಯಲ್ಲಿ ಸಂಪೂರ್ಣವಾಗಿ ಚರ್ಚಿತವಾಗಿರುವ ಮತ್ತು ಅನಂತರದಲ್ಲಿ ಲೋಕಸಭೆಯಲ್ಲಿ ಹಾಗೂ ಈಗ ರಾಜ್ಯ ಸಭೆಯಲ್ಲಿ ಸಮಗ್ರವಾಗಿ ಚರ್ಚಿತವಾಗಿರುವ ಈ ವಿಧೇಯಕವು ಈಗಿರುವ ರೂಪದಲ್ಲೇ ಅಂಗೀಕೃತವಾಗಿ ಸಾಧ್ಯವಾದಷ್ಟು ಬೇಗ ಕಾಯ್ದೆಯ ಸಂಪುಟದಲ್ಲಿ ಸೇರಬೇಕು ಎಂದು ನಾನು ಅತ್ಯಂತ ಕಾತರಳಾಗಿದ್ದೇನೆ. *

---

* 1954ರ ಸೆಪ್ಟೆಂಬರ್ 14ರಂದು ಆಹಾರ ಕಲಬೆರಕೆ ತಡೆ ವಿಧೇಯಕ 1954ನ್ನು ಅಂಗೀಕರಿಸುವ ನಿರ್ಣಯ ಅನುಮೋದಿಸಲ್ಪಟ್ಟಿತು.

# ಪ್ರಾಣಿಗಳ ಯೋಗಕ್ಷೇಮ

## 38. ಪ್ರಾಣಿಗಳ ಮೇಲಿನ ಕ್ರೌರ್ಯ ತಡೆ ವಿಧೇಯಕ 1959 *

ಮಾನ್ಯ ಉಪಸಭಾಪತಿಗಳೇ, ವರದಿಯ ನಾಲ್ಕನೇ ಅಧ್ಯಾಯಕ್ಕೆ ಸಂಬಂಧಿಸಿದಂತೆ ಮೂರು ನಾಲ್ಕು ನಿಮಿಷಗಳ ಕಾಲ ಮಾತನಾಡಲು ಅವಕಾಶ ಕೊಟ್ಟ ತಮಗೆ ಕೃತಜ್ಞತೆ ಸೂಚಿಸುವುದರೊಂದಿಗೆ ಕೆಲವೊಂದು ಅಭಿಪ್ರಾಯಗಳನ್ನು ಸದನದ ಮುಂದಿಡುತ್ತೇನೆ. ಜೀವನದುದ್ದಕ್ಕೂ ನಾನು ಪ್ರಾಣಿ ದಯೆ ರೂಢಿಸಿಕೊಂಡು ಬಂದವಳು ಮತ್ತು ಪ್ರತಿದಿನವು ಎಂಬಂತೆ ದೆಹಲಿ ಮಹಾನಗರದಲ್ಲಿ ಪ್ರಾಣಿಗಳ ಮೇಲೆ ನಡೆಯುತ್ತಿರುವ ಕ್ರೌರ್ಯವನ್ನು ತಡೆಗಟ್ಟುವ ನಿಟ್ಟಿನಲ್ಲಿ ಏನನ್ನಾದರೂ ಮಾಡಬೇಕೆಂದು ಈ ದಿಸೆಯಲ್ಲಿ ಪ್ರಯತ್ನಿಸುತ್ತಲೇ ಬಂದವಳು. ಆದರೆ ಇಂತಹ ಎಲ್ಲ ಬಗೆಯ ಕಡಕುಗಳಿಗೂ ಸರ್ಕಾರ ಶಾಸನಗಳನ್ನು ತರಲು ಯೋಚಿಸುತ್ತಿರುವುದು ನಿಜಕ್ಕೂ ನನಗೆ ಗಾಬರಿಯನ್ನು ಉಂಟು ಮಾಡುತ್ತಿದೆ. ಅದರಲ್ಲೂ ಅಂತಹ ಕಾಯ್ದೆಗಳ ಸಾಧಕ-ಬಾಧಕಗಳು ಪರಾಮರ್ಶೆ ಮಾಡದೇ ಮತ್ತು ಅಂತಹ ಕ್ರಮಗಳಿಂದ ಜನರಿಗೆ ಕಿರುಕುಳ ಆಗುತ್ತದೆ ಎಂಬುದನ್ನು ಯೋಚಿಸದೆ ಅದಕ್ಕೆ ಮುಂದಾಗುತ್ತಿರುವುದು ಆತಂಕ ಉಂಟು ಮಾಡಿದೆ.

ನಾವು ಸಮಾಜ ಸುಧಾರಣೆಯನ್ನು ಬಯಸುತ್ತೇನೆ. ನಮ್ಮ ವಿಚಾರಧಾರೆಗೆ ತಕ್ಕಂತೆ ಜನರನ್ನು ಪರಿವರ್ತಿಸಲು ಯೋಚಿಸುತ್ತೇನೆ. ಆದರೆ ನಮ್ಮಲ್ಲಿ ಎಷ್ಟು ಜನ ನಮ್ಮ ದೈನಂದಿನ ಜೀವನದಲ್ಲಿ ಪ್ರಾಣಿಗಳನ್ನು ಯಾವ ರೀತಿ ಹಿಂಸಿಸಲಾಗುತ್ತಿದೆ ಎಂಬುದನ್ನು ಗಮನಿಸಿದ್ದಾರೆ? ನಾವು ಈ ಪ್ರಾಣಿಗಳನ್ನು ಯಾವ ರೀತಿಯಲ್ಲಿ ಕಡೆಗಣಿಸುತ್ತಿದ್ದೇವೆ. ಅವುಗಳ ಮೇಲೆ ಭಾರ ಹಾಕಿ ಎಷ್ಟು ನಿರ್ದಯವಾಗಿ ರಸ್ತೆಗಳ ಮೇಲೆ ಓಡಿಸುತ್ತಿದ್ದೇವೆ. ಇವುಗಳನ್ನು ನಿಲ್ಲಿಸಲು ನಾವು ಎಂದಾದರೂ ಪ್ರಯತ್ನಿಸಿದ್ದೇವೆಯೇ? ನಮ್ಮ ಮಾನ್ಯ ಸಂಸತ್ ಸದಸ್ಯರಂತೂ ಇಂತಹ ಕಾರ್ಯದಲ್ಲಿ ತೊಡಗಿದ್ದನ್ನು ನಾನೆಂದೂ ನೋಡಿಲ್ಲ.

ಇಂದು ಪ್ರಾಣಿಗಳ ಮೇಲೆ ನಡೆಯುತ್ತಿರುವ ಪ್ರಯೋಗಗಳ ಬಗ್ಗೆ ಕೆಲವೊಂದು ವಿಷಯಗಳನ್ನು ನಾನು ಹೇಳಬಯಸುತ್ತೇನೆ. ಈ ಸಂಬಂಧದಲ್ಲಿ ಡಾ।। ಗೌರ್ ಅವರ ಬಾಯಿಯಿಂದ ಬಂದಿರುವ ಒಂದೊಂದು ಶಬ್ದವನ್ನು ನಾನು ಬೆಂಬಲಿಸುತ್ತೇನೆ.

ಈ ವಿಷಯದಲ್ಲಿ ಭಾವುಕತೆ ನಮ್ಮ ವೈಚಾರಿಕತೆಯನ್ನು ಮೀರಿ ನಿಲ್ಲಬೇಕೆಂದು ನಾನು ಬಯಸುವುದಿಲ್ಲ. ಪ್ರಾಣಿಗಳ ಮೇಲೆ ನಡೆಸಿರುವ ವೈಜ್ಞಾನಿಕ ಪ್ರಯೋಗಗಳಿಂದಾಗಿ ಮಾನವ ಸಮುದಾಯಕ್ಕೆ ಬಹಳಷ್ಟು ಒಳಿತಾಗಿದೆ ಎಂಬ ಅಂಶವೂ ನಮಗೆ ಗೊತ್ತಿದೆ. ಪ್ರಾಣಿಗಳ ಅಂಗಛೇಧನ ಮಾಡುವುದನ್ನು ನಾನು ಇಷ್ಟಪಡುವುದಿಲ್ಲ ಮತ್ತು ಅದನ್ನು ನನ್ನಿಂದ ಮಾಡುವುದೂ ಸಾಧ್ಯವಿಲ್ಲ. ಆದರೆ ಅದರಿಂದಾಗುವ ಒಳಿತನ್ನು ನಾನು ಮಾನ್ಯ ಮಾಡಲೇಬೇಕು. ನಾನು 15ನೇ ಖಂಡವನ್ನು ಓದಿದಾಗ ತುಸು ಗಾಬರಿಗೊಂಡೆ ಮತ್ತು ಈ ಸಮಿತಿಯನ್ನು ನೇರವಾಗಿ ನೇಮಕ ಮಾಡಲಾಗುವುದು ಎಂದು ಸಚಿವರು ಹೇಳಿದ್ದನ್ನು ಕೇಳಿ ಇನ್ನಷ್ಟು ಬೆರಗಾದೆ. ಇದರ ಅರ್ಥವೇನು?

---

* ಪ್ರಾಣಿಗಳ ಮೇಲಿನ ಕ್ರೌರ್ಯ ತಡೆ ವಿಧೇಯಕ 1959 ಕುರಿತು ಮಾತನಾಡುತ್ತಾ (ರಾಜ್ಯಸಭೆ ಚರ್ಚೆ, ಮಾರ್ಚ್ 1, 1960, ಸಿಸಿ 2301-4).

ಅಂದರೆ ನಿಮ್ಮ ಕಾಲೇಜುಗಳಲ್ಲಿ ವೈದ್ಯಕೀಯ ಸಿಬ್ಬಂದಿ ಪ್ರಾಣಿಗಳ ವಿಷಯದಲ್ಲಿ ದಯಾಪರರಾಗಿದ್ದಾರೆಂದು ನಿಮಗೆ ವಿಶ್ವಾಸವಿಲ್ಲವೆಂದಾಯಿತು. ವಾಸ್ತವವಾಗಿ ಅವರು ಇತರ ಎಲ್ಲರಿಗಿಂತ ಹೆಚ್ಚು ದಯಾಪರರಾಗಿದ್ದಾರೆ ಎಂದು ನಾನು ಹೇಳಬಯಸುತ್ತೇನೆ.

ನಾನು ಹತ್ತು ವರ್ಷಗಳ ಕಾಲ ಆರೋಗ್ಯ ಸಚಿವೆಯಾಗಿದ್ದೆ. ನಾನು ದೇಶಾದ್ಯಂತ ಭೇಟಿ ನೀಡಿದ ವೈದ್ಯಕೀಯ ಕಾಲೇಜುಗಳಲ್ಲಿ ಒಂದೇ ಒಂದು ಸಂಸ್ಥೆಯಲ್ಲಿ ಪ್ರಾಣಿಗಳ ಮೇಲೆ ಕ್ರೌರ್ಯ ನಡೆದ ಅಥವಾ ಅವುಗಳನ್ನು ಸರಿಯಾಗಿ ನೋಡಿಕೊಳ್ಳದೆ ಇದ್ದ ಒಂದೇ ಒಂದು ಪ್ರಕರಣವೂ ನನ್ನ ನೆನಪಿನಲ್ಲಿಲ್ಲ. ಅದೇ ರೀತಿ ವೈಜ್ಞಾನಿಕ ಪ್ರಯೋಗಗಳಿಗಾಗಿ ಇರಿಸಿಕೊಂಡ ಪ್ರಾಣಿಗಳಿಗೆ ಸರಿಯಾದ ಸೌಕರ್ಯಗಳಿಲ್ಲ ಎಂಬ ದೂರನ್ನು ನಾನು ಕೇಳಿಲ್ಲ. ನಮ್ಮ ವಿದ್ಯಾರ್ಥಿಗಳನ್ನು ಈ ವಿಧೇಯಕದ ಯಾವುದೇ ಖಂಡಗಳಿಂದ ಬಿಗಿ ಹಿಡಿಯುವುದನ್ನು ನಾನು ಒಪ್ಪಲಾರೆ. ಹಾಗಾಗಿ ಈ ಸಮಿತಿಯನ್ನು ರಚಿಸುವುದಕ್ಕೆ ನಾನು ವಿರೋಧಿಯಾಗಿದ್ದೇನೆ.

ಪ್ರಯೋಗ ಶಾಲೆಗಳನ್ನು ಪ್ರಾಣಿಗಳನ್ನು ನೋಡಿಕೊಳ್ಳುವ ರೀತಿ ನಿಮಗೆ ಸಮಾಧಾನ ತಾರದೆ ಇದ್ದಲ್ಲಿ ನೀವು ಈ ವಿಷಯವನ್ನು ಸಂಬಂಧಪಟ್ಟವರ ಗಮನಕ್ಕೆ ತರಬಹುದಾಗಿದೆ ಮತ್ತು ಪ್ರಾಣಿಗಳನ್ನು ಇಟ್ಟಿರುವ ಗೂಡುಗಳ ಪರಿಸ್ಥಿತಿಯನ್ನು ಸುಧಾರಿಸುವಂತೆ ನೀವು ಒತ್ತಾಯಿಸಬಹುದು.* ಕೆಲವು ಸಂದರ್ಭಗಳಲ್ಲಿ ಅಲ್ಲಿ ಹವಾನಿಯಂತ್ರಿತ ವ್ಯವಸ್ಥೆ ಇರುವುದಿಲ್ಲ. ಇನ್ನು ಕೆಲವು ಕಡೆಗಳಲ್ಲಿ ಇತರ ವ್ಯವಸ್ಥೆಗಳಿರುವುದಿಲ್ಲ ಎಂಬುದು ನಿಜವೇ ?ಆದರೆ ಪ್ರಯೋಗಗಳನ್ನು ನಿಯಂತ್ರಿಸುವ ಸಲುವಾಗಿ ಸಮಿತಿಯೊಂದು ಇದ್ದೇ ತೀರಬೇಕೆಂಬ ನಿರ್ಧಾರ ಸರಿಯಲ್ಲ. 'ಈ ನಿಯಂತ್ರಣ' ಎಂಬ ಶಬ್ದವೇ ನನಗೆ ಭಯವನ್ನು ಹುಟ್ಟಿಸುತ್ತದೆ. ವಿಧೇಯಕದ 5ನೇ ಖಂಡದಿಂದ ಈ ಪದವನ್ನು ತೆಗೆದು ಹಾಕುವಂತೆ ನಾನು ಮಾನ್ಯ ಸಚಿವರನ್ನು ವಿನಯಪೂರ್ವಕವಾಗಿ ಕೇಳಿಕೊಳ್ಳುತ್ತೇನೆ. ನಾವು ಪ್ರಾಣಿಗಳ ಯೋಗಕ್ಷೇಮಕ್ಕಾಗಿ ಸಾಕಷ್ಟು ಗಮನ ನೀಡುವ ಜನರಿಗೆ ವೃಥಾ ಕಿರುಕುಳ ನೀಡುವುದು ಸರಿಯಲ್ಲ ಎಂದು ನನ್ನ ಭಾವನೆ. ನೀವು ಯಾರೊಡನೆ ಸಮಾಲೋಚನೆ ನಡೆಸಿದ್ದರೂ ಕೂಡಾ ನನ್ನ ಅಭಿಪ್ರಾಯಗಳನ್ನು ಮುಂದಿಡುವುದು ನನ್ನ ಹಕ್ಕಾಗಿದೆ. ಡಾ|| ಗಿಲ್ಡರ್ ಅಥವಾ ಆರೋಗ್ಯ ಖಾತೆಯ ಯಾರೇ ಅಧಿಕಾರಿ ಒಪ್ಪಿರಲಿ, ಒಪ್ಪದೆ ಇರಲಿ ಈ ಬಗ್ಗೆ ಹೇಳುವುದೇನೂ ಇಲ್ಲ. ಈ ವಿಷಯದಲ್ಲಿ 17ನೇ ಖಂಡದ 2(ಇ) ಉಪಖಂಡದ ಹೀಗೆ ಹೇಳುತ್ತದೆ:-

"ಪ್ರಯೋಗಾಲಯಗಳಲ್ಲಿ ಸಸ್ತನಿಗಳು, ಮೊಲಗಳು ಮತ್ತು ಇಲಿಗಳಂತಹ ಸಣ್ಣ ಪ್ರಾಣಿಗಳನ್ನು ಪ್ರಯೋಗಕ್ಕೆ ಒಳಪಡಿಸಿ ಫಲಿತಾಂಶವನ್ನು ಪಡೆಯಲು ಸಾಧ್ಯವಿದ್ದಲ್ಲಿ ದೊಡ್ಡ ಪ್ರಾಣಿಗಳ ಮೇಲಣ ಪ್ರಯೋಗಾಲಯಗಳನ್ನು ತಪ್ಪಿಸಬಹುದಾಗಿದೆ". *

---

* ಪ್ರಯೋಗಾಲಯಗಳಲ್ಲಿರುವ ಪ್ರಾಣಿಗಳ ಗೂಡುಗಳ ಪರಿಸ್ಥತಿ ಸಮಾಧಾನಕರವಾಗಿಲ್ಲ ಎಂದು ಶ್ರೀ ಎನ್.ಆರ್.ಮಲ್ಕಾನಿ ವ್ಯಕ್ತಪಡಿಸಿದ ಆತಂಕಕ್ಕೆ ಸ್ಪಷ್ಟನೆ ನೀಡುತ್ತಾ

* ಸಮಿತಿಯ ರಚನೆ ಬಗ್ಗೆ ಆರೋಗ್ಯ ಸಚಿವ ಖಾತೆಯ ಪ್ರತಿನಿಧಿಯೊಂದಿಗೆ ಸಮಾಲೋಚನೆ ನಡೆಸಲಾಗಿದೆಯೇ ಮತ್ತು ಡಾ:ಗಿಲ್ಡರ್ ಅವರಿಂದ ಪಡೆದುಕೊಂಡಿರುವ ವರದಿಗೆ ಅನುಮೋದನೆ ದೊರೆತಿದೆಯೇ ಎಂಬ ಶ್ರೀಮತಿ ರುಕ್ಮಿಣಿ ದೇವಿ ಅರುಂಡೇಲ್ ಅವರು ಎತ್ತಿದ ಪ್ರಶ್ನೆಗಳಿಗೆ ಉತ್ತರ ನೀಡುತ್ತಾ

ಈ ಉಪಖಂಡದ ಸಾಧಕ ಬಾಧಕಗಳ ಬಗ್ಗೆ ವಿಶ್ಲೇಷಣೆ ನಡೆಸುವುದು ಅತ್ಯಂತ ಕಠಿಣವಾಗಿದೆ. ಆದರೆ ಪ್ರಯೋಗಾಲಯಗಳಲ್ಲಿ ದೊಡ್ಡ ಪ್ರಾಣಿಗಳನ್ನು ಹೊಂದಿರಬೇಕು ಎಂಬುದರಲ್ಲಿ ಎರಡು ಮಾತಿಲ್ಲ. ಪ್ರಾಣಿಗಳ ಮೇಲೆ ಪ್ರಯೋಗಗಳನ್ನು ನಡೆಸುವುದು ಬೇಡ ಎನ್ನುವ ಮಂದಿ ನಾಯಿಯೊಂದರ ಮೇಲೆ ಮಾಡುವ ಪ್ರಯೋಗಕ್ಕಿಂತ ಬಲಿ ಪಶುವೊಂದರ ಮೇಲೆ ಮಾಡುವ ಪ್ರಯೋಗ ಕಡಿಮೆ ಕ್ರೌರ್ಯದ್ದು ಎಂದು ಪರಿಗಣಿಸುವುದು ಹೇಗೆ? ವಿಧೇಯಕದಲ್ಲಿನ ಈ ಖಂಡದ ತರ್ಕ ಏನೆಂಬುದು ನನಗೆ ಅರ್ಥವಾಗುತ್ತಿಲ್ಲ. ಮೊಲಗಳು, ಇಲಿ ಮತ್ತಿತರ ಸಸ್ತನಿಗಳ ಮೇಲೆ ಪ್ರಯೋಗಗಳನ್ನು ನಡೆಸುವುದು ಸರಿ ಎಂದಾದಲ್ಲಿ ಇತರ ಪ್ರಾಣಿಗಳ ಮೇಲೆ ಏಕೆ ಪ್ರಯೋಗಗಳನ್ನು ನಡೆಸಬಾರದು. ಇತರ ಪ್ರಾಣಿಗಳಿಗೆ ಮಾತ್ರವೇ ಈ ವಿನಾಯ್ತಿ ಏಕೆ? ಪ್ರಾಣಿಗಳ ಮೇಲಿನ ಪ್ರಯೋಗಗಳ ಬಗ್ಗೆ ಹೇಳುವುದಾದರೆ ಇದರಿಂದ ವೈದ್ಯಕೀಯ ಅಥವಾ ವೈಜ್ಞಾನಿಕ ಸಿಬ್ಬಂದಿಯ ಮೇಲೆ ಕಿರುಕುಳ ನಡೆಯಬಾರದು. ನಾನು ಅದಕ್ಕೆ ಸಂಪೂರ್ಣ ವಿರೋಧವಾಗಿದ್ದೇನೆ. ನನ್ನ ಭೀತಿಗೆ ಅದೇ ಕಾರಣವೂ ಆಗಿದೆ.

ಡಾ|| ಗೌರ್ ಅವರು ವಿಧೇಯಕದ ನಾಲ್ಕನೇ ಅಧ್ಯಾಯದಲ್ಲಿ ಮತ್ತು ಇತರ ಒಂದೆರಡು ಖಂಡಗಳಲ್ಲಿ ಹೇಳಿರುವುದನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಪ್ರಾಣಿಗಳ ಮೇಲೆ ನಡೆಸಲಾದ ಪ್ರಯೋಗಗಳಿಂದ ಮಾನವ ಸಮುದಾಯಕ್ಕೆ ಬಹಳಷ್ಟು ಒಳಿತಾಗಿದೆ. ಹಾಗಾಗಿ ಮಾನ್ಯ ಸಚಿವರು ಈ ಕುರಿತು ಸಮಿತಿಯ ನೇಮಕದಲ್ಲಿ ನಿಧಾನವಾಗಿ ಯೋಚಿಸಿ ನಿರ್ಧಾರ ಕೈಗೊಳ್ಳಬೇಕು ಮತ್ತು 11ನೇ ಖಂಡದ (ಇ) ಮತ್ತು (ಎಫ್) ಉಪ ಖಂಡಗಳನ್ನು ಅದರಿಂದ ತೆಗೆದುಹಾಕಬೇಕು. ಉಳಿದಂತೆ ಪ್ರಾಣಿಗಳ ಕೊಠಡಿಗಳಿಗೆ ಹವಾ ನಿಯಂತ್ರಣದ ವ್ಯವಸ್ಥೆ ಕಲ್ಪಿಸಬೇಕು ಮತ್ತು ಅವುಗಳನ್ನು ಚೆನ್ನಾಗಿ ನೋಡಿಕೊಳ್ಳಬೇಕು ಎಂದು ಹೇಳುವ ಹಕ್ಕು ನಿಮಗಿದ್ದೇ ಇದೆ. ಪ್ರಾಣಿಗಳ ಮೇಲಿನ ಪ್ರಯೋಗಗಳ ವಿಷಯದಲ್ಲಿ ಹೇಳುವುದಾದರೆ ಅದನ್ನು ಅತ್ಯಂತ ಮಾನವೀಯ ರೀತಿಯಲ್ಲಿ ನಡೆಸಲಾಗುತ್ತಿದೆ ಎಂಬ ವಿಷಯದಲ್ಲಿ ನನ್ನ ಮನಸ್ಸಿನಲ್ಲಿ ಯಾವ ಸಂದೇಹವೂ ಇಲ್ಲ. ಈ ವಿಷಯದಲ್ಲಿ ಪ್ರಾಣಿಗಳ ಬಗ್ಗೆ ಬಹಳಷ್ಟು ಕಾಳಜಿ ವಹಿಸುವ, ಅವುಗಳನ್ನು ನಮಗಿಂತಲೂ ಹೆಚ್ಚು ಚೆನ್ನಾಗಿ ನೋಡಿಕೊಳ್ಳುವ ಮತ್ತು ನಮಗಿಂತಲೂ ಬಹಳ ಕಡಿಮೆ ಕ್ರೌರ್ಯ ತೋರಿಸುವ ಇತರ ದೇಶಗಳಿಗಿಂತ ನಾವು ಮುಂದುವರಿಯುವ ಅಗತ್ಯವೇನು? ಪ್ರಾಣದಯೆ ವಿಷಯದಲ್ಲಿ ನಮ್ಮ ದೇಶ ಇತರ ದೇಶಗಳಿಗೆ ಹೋಲಿಸಿದರೆ ಕೆಟ್ಟ ರೀತಿಯಲ್ಲಿ ವರ್ತಿಸುತ್ತದೆ ಎಂಬುದು ನನಗೆ ಗೊತ್ತಿದೆ. ಆದರೆ ಅದು ಇತರ ಪ್ರಾಣಿಗಳ ವಿಷಯದಲ್ಲಿ ಕೆಟ್ಟ ರೀತಿಯಲ್ಲಿ ವರ್ತಿಸುತ್ತಿದೆಯೇ ಹೊರತು ಪ್ರಯೋಗಾಲಯಗಳಲ್ಲಿರುವ ಪ್ರಾಣಿಗಳ ವಿಷಯದಲ್ಲಿ ಅಲ್ಲ.

ಹಾಗಾಗಿ ಈ ವಿಷಯದಲ್ಲಿ ಯಾವುದೇ ತೀರ್ಮಾನ ತೆಗೆದುಕೊಳ್ಳುವ ಮುನ್ನ ಈ ವಿಧೇಯಕದ ನಾಲ್ಕನೇ ಅಧ್ಯಾಯವನ್ನು ಅತ್ಯಂತ ಎಚ್ಚರಿಕೆಯಿಂದ ಪರಿಶೀಲಿಸಬೇಕೆಂದು ಮಾನ್ಯ ಸಚಿವರಲ್ಲಿ ವಿನಂತಿಸುತ್ತೇನೆ.

ಈ ಸಂಬಂಧದ ಎಲ್ಲ ಅಡೆತಡೆಗಳು ನಿವಾರಣೆಯಾಗುವುದು ಮುಖ್ಯ. ವೈಜ್ಞಾನಿಕ ಪ್ರಯೋಗಗಳನ್ನು ಪರಿಶೀಲಿಸಲು, ನಿಯಂತ್ರಿಸಲು ಮತ್ತು ಉಸ್ತುವಾರಿ ನಡೆಸಲು ರಚಿತವಾಗುವ ಸಮಿತಿಯಲ್ಲಿ ನನಗೆ ನಂಬಿಕೆ ಇಲ್ಲ. * ಅದೇ ರೀತಿ ವೈಜ್ಞಾನಿಕ ಉದ್ದೇಶಗಳಿಗಾಗಿ ನಡೆಸುವ ಪ್ರಯೋಗಗಳ ವಿರುದ್ಧ ಕಾನೂನುಗಳನ್ನು ರಚಿಸುವುದರಲ್ಲೂ ನನಗೆ ವಿಶ್ವಾಸವಿಲ್ಲ. ನಾನಿದನ್ನು ಪ್ರಬಲವಾಗಿ ಆಕ್ಷೇಪಿಸುತ್ತೇನೆ.

---

* ಪ್ರಯೋಗಗಳನ್ನು ನೈಪುಣ್ಯ ಗಳಿಸುವ ಸಲುವಾಗಿ ಮಾತ್ರವೇ ಮಾಡುವುದಿಲ್ಲವೆಂಬ ಡಾ|. ಆರ್.ಬಿ.ಗೌರ್ ಅವರ ಪ್ರಸ್ತಾಪಕ್ಕೆ ಉತ್ತರ ನೀಡುತ್ತಾ.

